# ಗದಗ ಜಿಲ್ಲೆಯ ಕೆರೆ-ಬಾವಿಗಳು: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾ

ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂ



ಸಂಶೋಧಕರು

ಶಂಕ್ರಪ್ಪ ಮೌನೇಶ್ವರ. ಬಡಿಗೇರ

ಮಾರ್ಗದರ್ಶಕರು

ಡಾ. ಎಸ್.ವೈ. ಸೋಮಶೇಖರ್

ಸಹಾಯಕ ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೪

# ಗದಗ ಜಿಲ್ಲೆಯ ಕೆರೆ-ಬಾವಿಗಳು: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂಧ)


ಸಂಶೋಧಕರು

**ಶಂಕ್ರಪ್ಪ. ಮೌನೇಶ್ವರ. ಬಡಿಗೇರ**

ಮಾರ್ಗದರ್ಶಕರು

**ಡಾ. ಎಸ್.ವೈ. ಸೋಮಶೇಖರ್**
**ಸಹಾಯಕ ಪ್ರಾಧ್ಯಾಪಕರು**





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ-೫೮೩೨೭೬
೨೦೧೪

# ಮಾರ್ಗದರ್ಶಕರ ಪ್ರಮಾಣ ಪತ್ರ

ಶಂಕ್ರಪ್ಪ ಎಂ.ಬಡಿಗೇರ ಇವರು **'ಗದಗ ಜಿಲ್ಲೆಯ ಕೆರೆ-ಬಾವಿಗಳು; ಚಾರಿತ್ರಿಕ ಅಧ್ಯಯನ'** ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪಿಎಚ್.ಡಿ ಪದವಿಯ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಯಾವುದೇ ಬಗೆಯ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ : ವಿದ್ಯಾರಣ್ಯ.

28/04/2008

(ಡಾ. ಎಸ್. ವೈ. ಸೋಮಶೇಖರ್)
ಸಹಾಯಕ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ.
ವಿದ್ಯಾರಣ್ಯ.

## ಸಂಶೋಧಕರ ಪ್ರಮಾಣ ಪತ್ರ

**ಗದಗ ಜಿಲ್ಲೆಯ ಕೆರೆ–ಬಾವಿಗಳು: ಚಾರಿತ್ರಿಕ ಅಧ್ಯಯನ** ಎಂಬ ಶಿರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಎಸ್. ವೈ. ಸೋಮಶೇಖರ್ ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ ಪದವಿಯ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗಕ್ಕೆ ಸಲ್ಲಿಸಿರುತ್ತೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೂದಲು ಯಾವುದೇ ಬಗೆಯ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೧೮-೦೫-೨೦೧೮

ಸ್ಥಳ: ವಿದ್ಯಾರಣ್ಯ.

**(ಶಂಕ್ರಪ್ಪ ಎಂ. ಬಡಿಗೇರ)**
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ.

# ಗದಗ ಜಿಲ್ಲೆಯ ಕೆರೆ-ಬಾವಿಗಳು: ಚಾರಿತ್ರಿಕ ಅಧ್ಯಯನ

## ಪರಿವಿಡಿ

೩. ಸಂಕ್ಷೇಪ ಸೂಚಿ
೪. ಮಾಹಿತಿದಾರರ ವಿವರ
೫. ಗದಗ ಜಿಲ್ಲೆಯ ಪ್ರಮುಖ ಕೆರೆಗಳ ಪಟ್ಟಿ
೬. ನೀರಾವರಿಗೆ ಒಳಪಟ್ಟ ಕೆರೆಗಳು
೭. ಗದಗ ಜಿಲ್ಲೆಯ ಪ್ರಮುಖ ಬಾವಿಗಳ ಪಟ್ಟಿ
೮. ಶಾಸನೋಕ್ತ ಕೆರೆ-ಬಾವಿಗಳ ಪಟ್ಟಿ
೯. ಗದಗ ಜಿಲ್ಲೆಯ ಕೆರೆಗಳ ಪ್ರಸರಣ ನಕ್ಷೆ.
೧೦. ಗದಗ ಜಿಲ್ಲೆಯ ಭೌಗೋಳಿಕ ನಕ್ಷೆ.
೧೧. ಛಾಯಾಚಿತ್ರಗಳು

ಅಧ್ಯಾಯ ಒಂದು

# ಪ್ರಸ್ತಾವನೆ

೧

# ಪ್ರಸ್ತಾವನೆ

ಭೂಮಿಯ ಮೇಲಿರುವ ಸಕಲ ಜೀವರಾಶಿಗಳಿಗೆ ಅತ್ಯಗತ್ಯವಾದ ಮೂಲ ವಸ್ತುಗಳಲ್ಲಿ ಗಾಳಿಯ ನಂತರದ ಸ್ಥಾನ ನೀರಿನದು. ಇಡೀ ಜೀವ ಜಗತ್ತಿನ ಅಸ್ತಿತ್ವವು ನೀರಿನಿಂದ ನಿರ್ದೇಶಿಸಲ್ಪಡುತ್ತದೆ. ನೀರಿಲ್ಲದ ಮಾನವನ ಬದುಕನ್ನು ಊಹಿಸುವುದೂ ಅಸಾಧ್ಯ. ಮಾನವನ ಇಡೀ ಬದುಕು ನೀರಿನಿಂದ ಸುತ್ತುವರಿದಿದೆ. ಮಾನವ ಸಂಸ್ಕೃತಿಯ ವಿಕಾಸದಲ್ಲಿ **'ನೀರು'** ಅತ್ಯಮೂಲ್ಯವಾಗಿದ್ದು, ಇದು ಜೀವಜಲವೂ ಹೌದು. ಈ ಹಿನ್ನೆಲೆಯಲ್ಲಿಯೇ ನೀರನ್ನು ಪಂಚಭೂತಗಳಲ್ಲಿ ಒಂದೆಂದು ಕರೆದಿರುವುದು. ಪ್ರಪಂಚದ ನಾಗರಿಕತೆಗಳು ಬೆಳೆದುದು ನೀರಿನ ತಾಣಗಳ ಆಸುಪಾಸಿನಲ್ಲಿ ಎಂಬುದು ತಿಳಿದ ಸಂಗತಿ. ಹೀಗಾಗಿಯೇ ಪ್ರಾಗೈತಿಹಾಸಿಕ ಕಾಲದ ಮಾನವನ ವಾಸದ ನೆಲೆಗಳು ನೀರಿರುವ ನೈಸರ್ಗಿಕ ತಾಣಗಳೇ ಆಗಿವೆ. ಅವು ನದಿ, ಸರೋವರ, ಹಳ್ಳ-ಕೊಳ್ಳಗಳಾಗಿವೆ. ಈ ದಿಸೆಯಲ್ಲಿ ಮುನ್ನಡೆದು ಕೃತಕವಾಗಿ ನೀರನ್ನು ಸಂಗ್ರಹಿಸಿ ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲು ನಡೆಸಿದ ಪ್ರಯತ್ನಗಳ ಫಲಗಳೇ ಕೆರೆ-ಕಟ್ಟೆ, ಕುಂಟೆ, ಬಾವಿಗಳಾಗಿ ರೂಪತಾಳಿದವು.

ಇಂತಹ ಪ್ರಯತ್ನಗಳು ನೂತನ ಶಿಲಾಯುಗದ ಅಂತಿಮ ಕಾಲಕ್ಕಾಗಲೇ ವ್ಯಾಪಕವಾಗಿ ಬೆಳೆದು, ಮಾನವ ಒಂದೆಡೆ ನೆಲೆ ನಿಂತು ತನ್ನ ಜೀವನ ಸಾಗಿಸಲು ಪ್ರಯತ್ನಿಸಿದ. ಅರಸರು, ಅಧಿಕಾರಿಗಳು, ಸ್ಥಳೀಯರು ತಮ್ಮ ರಾಜ್ಯ, ಪ್ರದೇಶ, ಊರಿನ ಅಭಿವೃದ್ಧಿಯ ದೃಷ್ಟಿಯಿಂದ ಅಗತ್ಯ ನೀರಿನ ತಾಣಗಳಾದ ಕೆರೆ-ಬಾವಿ, ಕಟ್ಟೆ-ಕುಂಟೆಗಳನ್ನು ಅವಿಭಾಜ್ಯ ಅಂಗಗಳಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ಅಂತೆಯೇ ಕೆರೆ, ಏರಿ, ಕಟ್ಟೆ, ಕೊಳ, ಕುಂಟೆ, ತೀರ್ಥ, ದೋಣಿ ಇತ್ಯಾದಿ ಜಲಾಶಯ ಸೂಚಿ ಪದಗಳು ಪ್ರತ್ಯಯಗಳಾಗಿ ಕಂಡುಬರುತ್ತವೆ.

ವೇದಗಳಲ್ಲಿ ನೀರಾವರಿಗೆ ಸಂಬಂಧಿಸಿದ ಅನೇಕ ಶಬ್ದಗಳಿವೆ. ಉದಾ; 'ಬಾವಿ' (ಕೂಪ), 'ಕಾಲುವೆ' (ಕುಲ್ಯ), 'ಸರೋವರ' (ಸರಸಿ) ಎಂಬ ಪದಗಳು. ಮಹಾಭಾರತದ ಅನುಶಾಸನಿಕ ಪರ್ವದಲ್ಲಿ ರಾಜನು ಮಾಡಬೇಕಾದ ಕರ್ತವ್ಯಗಳ ಬಗೆಗೆ ವಿವರವಿದೆ. ಅದರಲ್ಲಿ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸುವಂತೆ ಹೇಳಲಾಗಿದೆ. ಅನೇಕ ಸಾಹಿತ್ಯ, ಪುರಾಣ, ಪ್ರಾಯೋಗಿಕ ಶಾಸ್ತ್ರ,

ಕೃತಿಗಳು ರಚಿತವಾಗಿವೆ. ಅವು ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಚಿತ್ರಣವನ್ನು ತಿಳಿಸುತ್ತವೆ. ಈ ಕೃತಿಗಳಲ್ಲದೇ ವಿದೇಶಿ ಪ್ರವಾಸಿಗರ ಬರಹಗಳು (ಫ್ರಾನ್ಸಿಸ್ ಬುಕಾನನ್ ವರದಿ ಇತ್ಯಾದಿ) ಪ್ರಮುಖವಾಗಿವೆ. ಇವು ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದ ವ್ಯವಸಾಯ ಪದ್ಧತಿ, ನೀರಾವರಿ ವ್ಯವಸ್ಥೆ ಮುಂತಾದವುಗಳ ಬಗ್ಗೆ ಪ್ರಸ್ತಾಪಿಸುತ್ತ ಕೆರೆಗಳ ನಿರ್ಮಾಣ, ಅವುಗಳ ಬಳಕೆ, ರಕ್ಷಣೆ, ಪೋಷಣೆಯ ಕುರಿತು ತಿಳಿಸಿವೆ. ಭಾರತದ ಅತ್ಯಂತ ಪ್ರಾಚೀನ ಸಾಹಿತ್ಯವಾದ ವೇದಗಳು, ಮನುಧರ್ಮಶಾಸ್ತ್ರಗಳಲ್ಲಿ ಕೆರೆ, ಬೇಸಾಯ ಪದ್ಧತಿ ನಾಲೆಗಳ ವಿವರವಿದೆ.

ಬಹು ಹಿಂದಿನಿಂದಲೂ ಕೆರೆ ನಿರ್ಮಿಸಿದವರಿಗೆ ಅದೇ ಪ್ರದೇಶದಲ್ಲಿ ಭೂದಾನ ನೀಡುವ ಪದ್ಧತಿಯಿತ್ತು. ಈ ರೀತಿ ನೀಡಿದ ಭೂದಾನಗಳು ಆ ಕೆರೆಯನ್ನು ಕಟ್ಟುವುದಕ್ಕೆ ತಗುಲಿದ ವೆಚ್ಚಕ್ಕೆ ಸಮವಾಗಿ ಕಂಡುಬರುತ್ತಿದ್ದವು. ಅಂದು ಕೆರೆ, ಬಾವಿ ಕಟ್ಟಿಸುವುದು ಪುಣ್ಯದ ಕೆಲಸವೆಂಬ ಭಾವನೆ ಜನರಲ್ಲಿತ್ತು. ಕ್ರಿ.ಶ. ೧೪೧೧ರ ಹಂಪಿಯ ಶಾಸನದಲ್ಲಿ[೧]

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಮಂ ಮಾಡಿಸ
ಜ್ಜೆರೆಯೋಳ್ಸಿ ಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ
ರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಯಂತೆಲ್ಲವಂ ಪಿಂದೆ ತಾ
ಯೆರೆದಳ್ವಲೆರೆವೆಂದು ತೊಟ್ಟು ಕಿವಿಯೋಳಂ ಲಕ್ಷ್ಮೀಧರಮಾತ್ಯನಾ॥

ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಲನ್ನು ಕುಡಿಸುವಾಗ ಮಗುವಿನ ಕಿವಿಯಲ್ಲಿ ಅತ್ಯಂತ ಮಹತ್ವದ ಸಾಮಾಜಿಕ ಹಿತವುಳ್ಳ ಮಹೋನ್ನತ ಕ್ರಿಯೆಗಳನ್ನು ಮಾಡು ಎಂದು ಸೂಚಿಸುತ್ತಾಳೆ. ಅದುವೇ ಕೆರೆ, ಬಾವಿ, ದೇವಾಗಾರವನ್ನು ಮಾಡಿಸು ಎಂಬುದು, ಅಲ್ಲದೆ ಸಂಕಟದಲ್ಲಿ ಸಿಲುಕಿದ ಅನಾಥರನ್ನು ಬಿಡಿಸು, ಗೆಳೆಯರಿಗೆ ಉತ್ತಮವಾದುದನ್ನು ಮಾಡು, ನಂಬಿದವರಿಗೆ ನೆರವಾಗು, ಒಳ್ಳೆಯವರನ್ನು ರಕ್ಷಿಸು ಎಂದು ಹೇಳಿದೆ. ಇಲ್ಲಿ ತಾಯಿಯು ದಾನ ಮಾಡು ಎಂದು ಮಗುವಿಗೆ ಸೂಚಿಸುವುದು ಮಹತ್ವದ ವಿಷಯ. ಇಂತಹ ಮಾನವೀಯ ಮೌಲ್ಯಗಳು ಗದಗ ಜಿಲ್ಲೆಯ ಶಾಸನಗಳಲ್ಲೂ ಕಂಡುಬರುತ್ತವೆ.

ತೋಡದ ಬಾವಿಯಿಲ್ಲ ಮರಕಟ್ಟದ ಪೇರ್ಗ್ಗೆರೆಯಿಲ್ಲ ಲೀಲೆಯಂ
ಮಾಡದ ದೇವತಾಭವನ ಮಿಲ್ಲೋಲವಿಂ ಬಿಡದಗ್ರಹಾರಮಿ
ಲ್ಲಾಡಲದೇನೂ ಭುವನ ಬುಬುಕಮಾದುದು ಕೀರ್ತಿಂಬಾಸು ನಾ
ಪಾಡಿಯೆ ಸೈಪು ಮಾದರಸ ಸಾಯಣರೆಂಬ ಮಹಾಪ್ರಧಾನರಾ ॥[೨]

ಈ ಎರಡೂ ಪದ್ಯಗಳಿಂದ ಕರ್ನಾಟಕದಲ್ಲಿ ಕೆರೆಯನ್ನು ಕಟ್ಟಿಸುವುದು ಮತ್ತು ಬಾವಿಗಳನ್ನು ತೋಡಿಸುವ ಕಾರ್ಯಗಳು ಅತೀ ಮುಖ್ಯವೆಂಬುದು ಸ್ಪಷ್ಟವಾಗುತ್ತದೆ.

ಅಂದಿನ ಆಳರಸರಾದಿ ಅಧಿಕಾರಿಗಳು ಸಮಾಜದ ಬೆನ್ನೆಲುಬಾಗಿದ್ದ ರೈತರಿಗೆ ನೀರಾವರಿ ಸೌಕರ್ಯ ಒದಗಿಸುವುದು ಪಾರಮಾರ್ಥಿಕ ಕಾರ್ಯವೆಂದು ಪರಿಗಣಿಸಿದ್ದರು. ಅಂದರೆ ಕೆರೆಯ ನಿರ್ಮಾಣ ಚಟುವಟಿಕೆಯು ಬಹುಮುಖ್ಯವಾಗಿ ದೇವಾಲಯದೊಂದಿಗೆ ಅಂಟಿಕೊಂಡಿರುವುದು ಕಂಡುಬರುತ್ತದೆ. ದೇವಾಲಯ ಕಟ್ಟಿದ ಮೇಲೆ ಅದರ ನಿರ್ವಹಣೆಗಾಗಿ ಸಂಬಂಧಿತರಿಗೆ ಜವಾಬ್ದಾರಿ ಒದಗಿಸುವುದು, ದೇವಾಲಯವೇ ತಮ್ಮ ಜೀವನಾಧಾರ ಎಂದು ತಿಳಿದವರಿಗೆ ಅದರ ನಿರ್ವಹಣೆಗೆ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಆ ಭೂಮಿಗೆ ನೀರಾವರಿ ಒದಗಿಸುವ ಸಲುವಾಗಿ ಕೆರೆ-ಬಾವಿಗಳು ನಿರ್ಮಾಣವಾಗುತ್ತಿದ್ದವು.

ಶಾಸನಗಳಲ್ಲಿ ಕಂಡುಬರುವಂತೆ ತೂಬು, ಕೋಡಿ ಮತ್ತು ಕಾಲುವೆಗಳ ಉಲ್ಲೇಖಗಳು ಕೆರೆ ನೀರಾವರಿಗೆ ಸಂಬಂಧಿಸಿದ್ದರಿಂದ ಕೆರೆ ನಿರ್ಮಾಣದ ಉದ್ದೇಶ ವ್ಯವಸಾಯ ಸಂಬಂಧಿಯಾಗಿತ್ತು. ಕೆರೆಯನ್ನು ನಿರ್ಮಾಣ ಮಾಡಬೇಕಾದರೆ ಕೆಲವೊಂದು ತಂತ್ರಗಳನ್ನು ಉಪಯೋಗಿಸುತ್ತಿದ್ದರು. ಅದರ ಪ್ರಮುಖ ಅಂಶಗಳೆಂದರೆ ಸ್ಥಳ ಗಟ್ಟಿತಯಾಗಿರಬೇಕು, ಮಳೆ ನೀರು ಇಳಿಜಾರಿನಲ್ಲಿ ಇಳಿದು ಬರುವ ಪ್ರದೇಶವಾಗಿರಬೇಕು. ಅದಕ್ಕೆ ಹೊಂದಿಕೊಂಡಂತೆ ನೀರನ್ನು ಉಪಯೋಗಿಸಲು ಕೃಷಿ ಭೂಮಿ ಇರಬೇಕಾಗಿತ್ತು. ಇವು ಜನವಸತಿಯಿಂದ ದೂರವಿದ್ದರೂ ಸುತ್ತಮುತ್ತಲಿನ ಸ್ವಾಭಾವಿಕ ಸವಲತ್ತುಗಳನ್ನು ಬಳಸಿಕೊಂಡು ಮತ್ತು ನೀರನ್ನು ಬಳಸಲು ಬರುವಂತೆ ಕೆರೆ ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಸಾರ್ವಜನಿಕ ಉಪಯೋಗಕ್ಕಾಗಿ ಬಳಸಲ್ಪಡುವ ಕೆರೆಗಳು, ಕುಡಿಯಲು ಉಪಯೋಗಿಸಲ್ಪಡುವ ಕುಡಿಯುವ ನೀರಿನ ಕೆರೆಗಳು ಪ್ರತ್ಯೇಕವಾಗಿ ಶಾಸನಗಳಲ್ಲಿ ಉಲ್ಲೇಖವಾಗಿವೆ. ಆದರೆ ಪ್ರಾಚೀನ ಕಾಲದಲ್ಲಿ ಕೆರೆಗಳು ಕುಡಿಯುವ ನೀರಿನ ಮೂಲಗಳಾಗಿದ್ದವು. ಗದಗ ಜಿಲ್ಲೆಯು ಬಹುಪಾಲು ಬೆಟ್ಟಗಳಿಂದ ಮತ್ತು ಏರು ತಗ್ಗುಗಳಿಂದ ಕೂಡಿದ ಸಂಪದ್ಭರಿತ ನಾಡಾಗಿದ್ದು, ಜಿಲ್ಲೆಯಾದ್ಯಂತ ಕೃಷಿಗೆ ಅನುಕೂಲವಾಗುವಂತೆ ಸಾವಿರಾರು ಕೆರೆ, ಬಾವಿ, ಕಾಲುವೆಗಳು ನಿರ್ಮಾಣಗೊಂಡಿವೆ.

ಗದಗ ಜಿಲ್ಲೆಯು ಪ್ರಾಚೀನ ಕಾಲದಲ್ಲಿ ಬೆಳ್ವೊಲ-೩೦೦, ಪುಲಿಗೆರೆ-೩೦೦, ಮಾಸವಾಡಿ-೧೪೦ ಆಡಳಿತ ವಿಭಾಗಗಳಲ್ಲಿ ಸಮಾವೇಶವಾಗಿತ್ತು. ಇದು ಭೌಗೋಳಿಕ ಹಾಗೂ ಚಾರಿತ್ರಿಕವಾಗಿ ಬಹಳ ಪ್ರಸಿದ್ಧವಾದ ಜಿಲ್ಲೆ. ಪ್ರಾಚೀನ ಕಾಲದಿಂದಲೂ ವಿಶಿಷ್ಟವಾದ ಸ್ಥಾನ ಪಡೆದುಕೊಂಡ ಈ ಜಿಲ್ಲೆ ಸಾಮ್ರಾಜ್ಯಗಳ ತಿರುಳುನಾಡಾಗಿ ರಾಜಕೀಯ, ಧಾರ್ಮಿಕ ಕೇಂದ್ರವಾಗಿ ಚರಿತ್ರೆಯಲ್ಲಿ ವಿಜೃಂಭಿಸಿದೆ. ಇಲ್ಲಿ ಅನೇಕ ದೇವಾಲಯ, ಅಗ್ರಹಾರ ಮತ್ತು ಕೆರೆ-ಬಾವಿಗಳು ನಿರ್ಮಾಣಗೊಂಡಿವೆ. ಶಿಲಾಯುಗ ಮಾನವನ ಅಲೆಮಾರಿ ಜೀವನ ಕೊನೆಗೊಂಡು ಪಶುಪಾಲನೆ, ಕೃಷಿ ಆರಂಭಿಸಿದಾಗ ಅವನು ಬಳಸುತ್ತಿದ್ದ ಕಪ್ಪು, ಬಿಳಿ, ಕೆಂಪು ಅಥವಾ ಬೂದು ಬಣ್ಣದ ಮಡಿಕೆ, ಕುಡಿಕೆಗಳನ್ನು ಒಳಗೊಂಡ ಆ ಕಾಲದ ನಿವೇಶನಗಳು ನರಗುಂದ ಮತ್ತು ರೋಣ ತಾಲೂಕುಗಳಲ್ಲಿ ದೊರೆತಿವೆ. ಮುಂಡರಗಿ,

ರೋಣ ಮತ್ತು ಶಿರಹಟ್ಟಿ ತಾಲ್ಲೂಕುಗಳಲ್ಲಿ ಹಳೆಯ ಶಿಲಾಯುಗದ ಸಂಸ್ಕೃತಿಯ ನೆಲೆಗಳು ಕಂಡುಬರುತ್ತವೆ.

ಗದಗ ಮತ್ತು ಬೆಟಗೇರಿ ಎಂಬೆರಡು ಊರುಗಳು ಸಂಯುಕ್ತವಾಗಿ ಅಸ್ತಿತ್ವಕ್ಕೆ ಬಂದಿರುವ ಈ ಜಿಲ್ಲೆಯ ಕೇಂದ್ರಸ್ಥಾನ ಅತ್ಯಂತ ಪುರಾತನ ಸ್ಥಳವಾಗಿದೆ. ಹಲವು ಶಾಸನಗಳಲ್ಲಿ ಇದನ್ನು 'ಗಲದುರ್ಗ', 'ಕಲ್‌ದುರ್ಗ', 'ಗರದುರ್ಗ', 'ಕರ್ತಕ', 'ಕೃತಪುರ' ಹಾಗೂ ಗದಗು ಎಂದು ವಿಧವಿಧವಾಗಿ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೦೦೨ರ ಶಾಸನದಲ್ಲಿ 'ಕದ್ದುರ್ಗಿಗೆ' ಎಂಬ ಉಲ್ಲೇಖವಿದೆ. ಗದುಗಿನ ಭಾಗವಾಗಿರುವ ಬೆಟಗೇರಿಯಲ್ಲಿ ರಾಷ್ಟ್ರಕೂಟರ ಇಂದ್ರನ ಕ್ರಿ.ಶ. ೯೧೮ರ ಶಾಸನದಲ್ಲಿ ಬೆಟಗೇರಿಯನ್ನು 'ಬೆಟ್ಟಗೆರೆ' ಎಂದು ಉಲ್ಲೇಖವಾಗಿದೆ. ಈ ಶಾಸನಕಲ್ಲು ಗದುಗಿನ ವೀರನಾರಾಯಣ ದೇವಾಲಯದ ಉತ್ತರ ಗೋಡೆಯಲ್ಲಿರುವುದು ವಿಶೇಷ ಸಂಗತಿ.

ಗದಗ ಜಿಲ್ಲೆಯಲ್ಲಿ ಅನೇಕ ಅರಸು ಮನೆತನಗಳು ಆಳ್ವಿಕೆ ಮಾಡಿದ ಶಾಸನ ದಾಖಲೆಗಳು ದೊರೆತಿವೆ. ಪ್ರಮುಖವಾಗಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಯಾದವರು, ವಿಜಯನಗರ ಅರಸರು ಈ ಪ್ರದೇಶದಲ್ಲಿ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣ ಕೊಡುಗೆಗಳನ್ನು ನೀಡಿದ್ದಾರೆ. ಕ್ರಿ.ಶ. ೧೦೨೭ರ ಶಾಸನವು ಮುಳಗುಂದದಲ್ಲಿ ಕಲ್ಯಾಣದ ಚಾಲುಕ್ಯರ ಇಮ್ಮಡಿ ಸೋಮೇಶ್ವರನು ಮತ್ತು ಅವನ ರಾಣಿ ಶಾಂತಲಾದೇವಿ ಆಡಳಿತ ನಿರ್ವಹಣೆ ಮಾಡಿದ್ದರ ಬಗ್ಗೆ ಮಾಹಿತಿ ನೀಡುತ್ತದೆ. ಕೃಷ್ಣದೇವರಾಯನ ಕ್ರಿ.ಶ. ೧೬೧೫ರ ಶಾಸನದಲ್ಲಿ ವೀರನಾರಾಯಣದೇವನಿಗೆ ನೀಡಿದ ಹಲವಾರು ದಾನ-ದತ್ತಿಗಳ ಬಗ್ಗೆ ಉಲ್ಲೇಖವಿದೆ. ಇಲ್ಲಿನ ಮತ್ತೊಂದು ಶಾಸನದಲ್ಲಿ ವೀರನಾರಾಯಣ ದೇವರು ಕುಮಾರವ್ಯಾಸನಿಗೆ ಒಲಿದನೆಂದು ತಿಳಿಸುತ್ತದೆ. ಕ್ರಿ.ಶ.೧೭೬೩ರಲ್ಲಿ ಗದಗ ಪ್ರದೇಶವು ಬಿಜಾಪುರದ ವಶವಾಯಿತು. ವೆಲ್ಲೆಸ್ಲಿ ಕ್ರಿ.ಶ. ೧೭೯೯ರಲ್ಲಿ ಡಂಬಳ ಕೋಟೆಯನ್ನು ವಶಪಡಿಸಿಕೊಂಡನು. ಕೊನೆಗೆ ಕ್ರಿ.ಶ. ೧೮೧೮ರಲ್ಲಿ ಮರಾಠ ಯುದ್ಧದಲ್ಲಿ ಸರ್ ಥಾಮಸ್‌ಮನ್ರೋ ಗದುಗಿನ ಮೇಲೆ ದಾಳಿ ಮಾಡಿದಾಗ ಇಲ್ಲಿನ ಕೋಟೆಯು ಅವನ ವಶವಾಯಿತು. ಆ ಮೂಲಕ ಜಿಲ್ಲೆಯು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು.

ಗದಗ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೪,೬೫೭ ಚ.ಕಿ.ಮೀ ಆಗಿದ್ದು, ಜಿಲ್ಲೆಯ ಒಟ್ಟು ದುಡಿಮೆ ವರ್ಗದಲ್ಲಿ ಶೇ ೭೨.೧೬ರಷ್ಟು ಕೃಷಿಯನ್ನು ಅವಲಂಬಿಸಿದೆ. ವೈವಿಧ್ಯಮಯವಾದ ಭೌಗೋಳಿಕತೆಯನ್ನು ಹೊಂದಿರುವ ಗದಗ ಜಿಲ್ಲೆಯ ಎಲ್ಲಾ ತಾಲೂಕುಗಳು ಫಲವತ್ತಾದ ಎರೆಮಣ್ಣಿನಿಂದ ಕೂಡಿವೆ.

ಈ ಜಿಲ್ಲೆಯಲ್ಲಿ ನೀರಾವರಿ ಪ್ರದೇಶದ ಒಟ್ಟು ವಿಸ್ತೀರ್ಣ ೫೬,೪೪೦ ಹೆಕ್ಟೇರ್ (ಶೇ.೧೯.೫೮). ೧೯೯೦-೯೧ರಲ್ಲಿ ಬಿತ್ತನೆಯಾದ ನಿವ್ವಳ ಪ್ರದೇಶ ೮೮,೨೫೪ ಹೆಕ್ಟೇರುಗಳು. ಗೋಧಿ. ಜೋಳ.

ಶೇಂಗಾ, ಹೆಸರು, ಕಬ್ಬು, ತೊಗರಿ, ಕುಸಬಿ, ಗೋವಿನಜೋಳ, ಹತ್ತಿ ಮುಖ್ಯ ಬೆಳೆಗಳಾಗಿವೆ. ಇಡೀ ಕರ್ನಾಟಕ ರಾಜ್ಯದಲ್ಲಿ ಅತೀ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿರುವ ಗದಗ ಜಿಲ್ಲೆಯ ತಾಲೂಕು ನರಗುಂದ. ಈ ತಾಲೂಕಿನ ನೀರಾವರಿ ಪ್ರದೇಶ ಪ್ರಮಾಣ ಶೇ ೮೯.೯೮. ಗದಗ ತಾಲೂಕಿನ ನೀರಾವರಿ ಪ್ರದೇಶ ಪ್ರಮಾಣ ಶೇ ೨.೦೩, ಮುಂಡರಗಿ ತಾಲೂಕಿನ ನೀರಾವರಿ ಪ್ರದೇಶ ಪ್ರಮಾಣ ಶೇ ೧೫.೧೫, ಶಿರಹಟ್ಟಿ ತಾಲೂಕಿನ ನೀರಾವರಿ ಪ್ರದೇಶ ಪ್ರಮಾಣ ಶೇ ೬.೫೬, ರೋಣ ತಾಲೂಕಿನ ನೀರಾವರಿ ಪ್ರದೇಶ ಪ್ರಮಾಣ ಶೇ ೧೬.೧೧ ರಷ್ಟಿದೆ. ಗದಗ, ನರಗುಂದ, ಸೂಡಿ, ಜಕ್ಕಲಿ, ಜಂತ್ಲಿಶಿರೂರ, ವೆಂಕಟಾಪೂರ, ಹಳ್ಳಿಕೇರಿ, ಮಾಗಡಿ, ಇಟಗಿ, ಕೊರ್ಲಹಳ್ಳಿ, ಶಿರಹಟ್ಟಿ, ಹೊಂಬಳ, ತಾಮ್ರಗುಂಡಿ, ಲಕ್ಕುಂಡಿ ಕೆರೆ-ಬಾವಿ, ಕುಂಟೆ ಕಾಲುವೆಗಳುಳ್ಳ ಪ್ರಮುಖ ಸ್ಥಳಗಳಾಗಿವೆ.

ಗದಗ ಜಿಲ್ಲೆಯ ನೀರಾವರಿ ವ್ಯವಸ್ಥೆಗೆ ಸಂಬಂಧಿಸಿದಂತೆ ಚೌಕಟ್ಟಿನಲ್ಲಿ ಕೆರೆ, ಕಟ್ಟೆ, ಕೊಳ, ಬಾವಿ, ದೋಣಿ, ಪುಷ್ಕರಣಿಗಳು ಪ್ರಮುಖವಾಗಿದ್ದು, ಇವುಗಳ ಕುರಿತಂತೆ ಈ ಜಿಲ್ಲೆಯಲ್ಲಿ ಕ್ರಿ.ಶ. ೮ನೇ ಶತಮಾನದಿಂದ ೧೭ನೇ ಶತಮಾನದವರೆಗಿನ ಕಾಲದ ಶಾಸನ, ಸಾಹಿತ್ಯಗಳು ಬೆಳಕು ಚೆಲ್ಲುತ್ತವೆ.

ಚಾರಿತ್ರಿಕ ಕಾಲದ ನೀರಾವರಿ ವ್ಯವಸ್ಥೆ ಕುರಿತಂತೆ ದಕ್ಷಿಣ ಭಾರತ ಹಾಗೂ ಕರ್ನಾಟಕದಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಜೊತೆಗೆ ಹಲವು ಸಾಮ್ರಾಜ್ಯಗಳ ಚೌಕಟ್ಟಿನಲ್ಲಿ ಅಧ್ಯಯನಗಳು ನಡೆದಿವೆ. ಆದರೆ ಒಂದು ಜಿಲ್ಲೆಯ ಆಡಳಿತಾತ್ಮಕ ವ್ಯಾಪ್ತಿಯಲ್ಲಿ ನೀರಾವರಿ ವ್ಯವಸ್ಥೆಯನ್ನು ಅರ್ಥೈಸುವ ಪ್ರಕ್ರಿಯೆ ಇಲ್ಲಿಯವರೆಗೆ ನಡೆದ ಅಧ್ಯಯನಗಳಲ್ಲಿ ತೃಪ್ತಿಕರವಾಗಿ ನಡೆದಿಲ್ಲ. ಕೆರೆ, ಬಾವಿ, ಹಳ್ಳ, ಕಾಲುವೆ ಇತ್ಯಾದಿ ನೀರಿನ ಆಸರೆಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನಗಳು ಅತ್ಯಂತ ವಿರಳವಾಗಿವೆ. ಈ ನಿಟ್ಟಿನಲ್ಲಿ **ಗದಗ ಜಿಲ್ಲೆಯ ಕೆರೆ-ಬಾವಿಗಳು; ಚಾರಿತ್ರಿಕ ಅಧ್ಯಯನ** ಎಂಬ ಶೀರ್ಷಿಕೆಯಡಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ವಿಷಯ **ಗದಗ ಜಿಲ್ಲೆಯ ಕೆರೆ-ಬಾವಿಗಳು; ಚಾರಿತ್ರಿಕ ಅಧ್ಯಯನ**. ಇದರಲ್ಲಿ ಕೆರೆ-ಬಾವಿಗಳ ಪ್ರಾಮುಖ್ಯತೆಯನ್ನು ತಿಳಿಯಲು ಹಲವಾರು ಶಾಸನಗಳನ್ನು ಬಳಸಿಕೊಳ್ಳಲಾಗಿದೆ. ಶಾಸನಗಳ ಆಧಾರದ ಮೇಲೆ ಕೆರೆಗಳ ಕುರಿತ ಚಾರಿತ್ರಿಕವಾದ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಮಾಡಲಾಗಿದೆ.

ಗದಗ ಜಿಲ್ಲೆಯಲ್ಲಿ ಸಣ್ಣ ಮತ್ತು ದೊಡ್ಡ ಪ್ರಮಾಣದ ಕೆರೆ-ಬಾವಿಗಳು ಸಾಕಷ್ಟು ಇದ್ದು, ಅವು ಮೇಲುಸ್ತುವಾರಿ ರಹಿತವಾಗಿವೆ. ಸಂಪ್ರದಾಯ-ಆಚರಣೆಗಳು ಕಣ್ಮರೆಯಾಗಿರುವುದರಿಂದ ಇವುಗಳ

ಸಂರಕ್ಷಣೆಯಲ್ಲಿ ಕುಂಠಿತವಾಗಿದೆ. ಇತ್ತೀಚೆಗೆ ಸರ್ಕಾರ ಹಳೆಯ ಕೆರೆಗಳನ್ನು ಜೀರ್ಣೋದ್ಧಾರ ಮಾಡಲು ಯೋಜನೆ ರೂಪಿಸಿದೆ. ಆದರೆ ಈ ಪ್ರಯತ್ನಗಳು ಸಾಕಷ್ಟು ಪರಿಣಾಮಕಾರಿಯಾಗಿ ಆಗುತ್ತಿಲ್ಲ. ಹಿಂದೆ ಕೆರೆ ನಿರ್ಮಾಣ, ಕೆರೆಗಳ ಮೇಲುಸ್ತುವಾರಿ ಗ್ರಾಮ ಸಮಿತಿಯದಾಗಿತ್ತು. ಕೆರೆಯನ್ನು ನಿರ್ಮಿಸಿದವರಿಗೆ ಕೆರೆಯ ಆಯಕಟ್ಟಿನಲ್ಲಿ ಭೂಮಿ ಪ್ರತಿಫಲವಾಗಿ ಸಿಗುತ್ತಿತ್ತು. ಕೃಷಿ ಕಾರ್ಮಿಕರಿಗೆ ತೃಪ್ತಿಕರವಾಗುವಂತೆ ಗ್ರಾಮ ಸಮುದಾಯ ತನ್ನ ಅಧಿಕಾರಿಗಳ ಮೂಲಕ ನೀರನ್ನು ಸಮರ್ಪಕವಾಗಿ ಹಂಚುತ್ತಿತ್ತು. ಜಿಲ್ಲೆಯ ಕೆರೆ-ಬಾವಿಗಳ ನೀರಾವರಿ ವ್ಯವಸ್ಥೆ, ಅವುಗಳ ಸ್ಥಿತಿಗತಿ, ಕೆರೆಗಳ ರಚನೆ, ಜೀರ್ಣೋದ್ಧಾರ, ಕೆರೆ ನಿರ್ವಹಣೆ ಮುಂತಾದವುಗಳನ್ನು ತಿಳಿಯುವುದು ಮುಖ್ಯವಾಗಿದೆ.

ಕೆರೆಗೆ ಸಂಬಂಧಿಸಿದ ಕೆಲವು ಮುಖ್ಯ ಭಾಗಗಳಾದ ಏರಿ ನಿರ್ಮಾಣ, ತೂಬುಗಳ ರಚನೆ, ಕಾಲುವೆ ಮತ್ತು ಕೋಡಿಗಳ ರಚಿಸುವಲ್ಲಿ ಅಳವಡಿಸಿಕೊಂಡ ತಾಂತ್ರಿಕತೆ ಗುರುತಿಸುವುದು, ಹಾಗೆಯೇ ಯಾವುದೇ ಒಂದು ಉದ್ದೇಶದಿಂದ ನಿರ್ಮಾಣವಾದ ಕೆರೆ ಆ ಪ್ರದೇಶದ ಸ್ಥಳನಾಮವನ್ನು ನಿರ್ದೇಶಿಸುವಲ್ಲಿ ಬೀರಿದ ಪ್ರಭಾವವನ್ನು ಗುರುತಿಸುವುದು. ಕೆರೆ-ಬಾವಿಗಳ ಜೊತೆಗೆ ಹೊಂದಿಕೊಂಡಿದ್ದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳು ಯಾವುವು? ಹಾಗೆಯೇ ಕೆರೆಗಳನ್ನು ನಿರ್ಮಾಣ ಮಾಡಿದ ನಂತರ ಅದರ ಉದ್ದೇಶ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ತಿಳಿಯುವುದು ಮುಖ್ಯ.

ಗದಗ ಜಿಲ್ಲೆಯ ಕೆರೆ-ಬಾವಿಗಳು ಕೇವಲ ಅವಶೇಷವಾಗಿ ಉಳಿಯದೇ ವಿಶೇಷವಾಗಿ ಮುಂದಿನ ಪೀಳಿಗೆಗೂ ಸದುಪಯೋಗವಾಗಲಿ ಎಂಬುದೇ ಈ ಅಧ್ಯಯನದ ಉದ್ದೇಶ. ಹಿಂದೆ ಜನರು ಕೆರೆಗಳ ನೀರನ್ನು ಉಪಯೋಗ ಪಡೆದುಕೊಳ್ಳುತ್ತಿದ್ದರು ಆದರೆ ಇತ್ತೀಚಿಗೆ ಅವುಗಳು ಕಣ್ಮರೆಯಾಗಲು ಕಾರಣಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಜಿಲ್ಲೆಯ ಕೆರೆಗಳು ಪ್ರಮುಖವಾಗಿ ಜಕ್ಕಲಿಯ ಕೆರೆ, ಗೋಸಾಸಿ ಕೆರೆ, ಮುತ್ತಲಗೆರೆ ಕೆರೆ, ಶೆಟ್ಟಿ ಕೆರೆ ಎಂಬ ಹೆಸರುಗಳಿಂದ ಕೂಡಿವೆ. ಈ ಹಿನ್ನೆಲೆಯಲ್ಲಿ ಗದಗ ಜಿಲ್ಲೆಯಲ್ಲಿ ಕಂಡುಬರುವ ನೀರಾವರಿ ಮೂಲಗಳಾದ ಕೆರೆ-ಕಟ್ಟೆ, ಬಾವಿ, ಕಾಲುವೆಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಗದಗ ಜಿಲ್ಲೆಯ ಕೆರೆ-ಬಾವಿಗಳು ಕೇವಲ ಅವಶೇಷವಾಗಿ ಉಳಿಯದೇ ವಿಶೇಷವಾಗಿ ಮುಂದಿನ ಪೀಳಿಗೆಗೂ ಸದುಪಯೋಗವಾಗಲಿ ಎಂಬುದೇ ಈ ಅಧ್ಯಯನದ ಉದ್ದೇಶ. ದಕ್ಷಿಣ ಭಾರತದಲ್ಲಿ ಒಣ ಪ್ರದೇಶವೇ ಹೆಚ್ಚಾಗಿದ್ದು ನೀರಿನ ಸಂಗ್ರಹ ಅವಶ್ಯಕತೆ ಹೆಚ್ಚಾಗಿರುವುದರಿಂದ ಇಲ್ಲಿ ಕೆರೆ-ಬಾವಿಗಳು ಹೆಚ್ಚಾಗಿ ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಕೆರೆಗಳು ರಕ್ಷಣೆ ಇಲ್ಲದೆ ಶಿಥಿಲವಾಗುತ್ತಿರುವುದಕ್ಕೆ ಕಾರಣಗಳನ್ನು ತಿಳಿಯುವುದು; ಕೆರೆಗಳಿಂದ ನೀರಾವರಿ ಬೆಳವಣಿಗೆ ಹಾಗೂ ಅವನತಿಯನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಕೆರೆ-ಬಾವಿಗಳ ಇತಿಹಾಸ ಅಧ್ಯಯನಕ್ಕೆ ಹಾಗೂ ಕೆರೆ-ಬಾವಿಗಳ ಪ್ರಾಮುಖ್ಯತೆಯನ್ನು ತಿಳಿಯಲು ನಮಗೆ ಹಲವಾರು ಶಾಸನ, ಸಾಹಿತ್ಯ, ಮೌಖಿಕ ಪರಂಪರೆ, ಐತಿಹ್ಯಗಳು ಸಹಾಯಕವಾಗಿವೆ. ಈ ಆಕರಗಳ ಮೂಲಕ ಕೆರೆಗಳ ಕುರಿತಾದ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನ ಪ್ರಸ್ತುತ ಅಧ್ಯಯನದ್ದು.

## ೧.೨. ಅಧ್ಯಯನಗಳ ಸಮೀಕ್ಷೆ

ಇದುವರೆಗೆ ಹಲವು ವಿದ್ವಾಂಸರು ಮತ್ತು ಸಂಶೋಧಕರು ತಮ್ಮ ಅಧ್ಯಯನದ ಪರಿಮಿತಿಯಲ್ಲಿ ಗದಗ ಜಿಲ್ಲೆಯನ್ನೊಳಗೊಂಡಂತೆ ಗ್ರಂಥ, ಪ್ರಬಂಧ, ಲೇಖನಗಳನ್ನು ಬರೆದಿದ್ದಾರೆ. ಕೆರೆ-ಬಾವಿಗಳ ಕುರಿತು ಇಡೀ ಕರ್ನಾಟಕವನ್ನೊಳಗೊಂಡಂತೆ ಅಧ್ಯಯನಗಳು ನಡೆದಿವೆ. ಆದರೆ ಗದಗ ಜಿಲ್ಲೆಯ ಕೆರೆ-ಬಾವಿಗಳ ಚಾರಿತ್ರಿಕವಾದ ಅಧ್ಯಯನಗಳು ನಡೆದಿರುವುದಿಲ್ಲ.

ಕಲೆ, ಸಾಹಿತ್ಯ, ಸಂಸ್ಕೃತಿಯ ನೆಲೆವೀಡಾದ, ವಾಸ್ತು-ಶಿಲ್ಪ ತಾಣವಾದ, ಸರಸ್ವತಿಯ ನೆಲೆವೀಡಾದ ಗದಗ ಜಿಲ್ಲೆ ಕರ್ನಾಟಕದ ಸಾಂಸ್ಕೃತಿಕ ರಂಗದಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ಗದಗ ಹೊಸ ಜಿಲ್ಲೆಯಾಗಿರುವುದರಿಂದ, ಜಿಲ್ಲೆಯ ಸಮಗ್ರ ಇತಿಹಾಸ ಕುರಿತು ಯಾವುದೇ ಗ್ರಂಥಗಳು ಹೊರಬಂದಿರುವುದಿಲ್ಲ. ಆದರೆ ಧಾರವಾಡ ಜಿಲ್ಲೆಯ ಭಾಗವಾಗಿ ಪಾಶ್ಚಾತ್ಯ ವಿದ್ವಾಂಸರಿಂದ ಆರಂಭಗೊಂಡು ಇತ್ತೀಚಿನ ಸಂಶೋಧಕರು ಗದಗ ಜಿಲ್ಲೆಯ ಕುರಿತು ವಿವಿಧ ಆಯಾಮಗಳಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಈ ಅಧ್ಯಯನಗಳ ಸಮೀಕ್ಷೆ ಇಲ್ಲಿದೆ.

ವೆಂಕಟರಂಗೋ ಕಟ್ಟಿಯವರು ಸಂಪಾದಿಸಿರುವ **ಧಾರವಾಡ ಜಿಲ್ಲೆ ಗ್ಯಾಜೆಟಿಯರ್**ನಲ್ಲಿ ಗದಗ ಜಿಲ್ಲೆಯ ಭೌಗೋಳಿಕ, ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ, ಶೈಕ್ಷಣಿಕ ಹಿನ್ನೆಲೆಯ ಕುರಿತಾದ ಸಂಕ್ಷಿಪ್ತವಾದ ವಿವರಗಳಿವೆ. ಸೂರ್ಯನಾಥ ಕಾಮತ್ ಅವರ **ಧಾರವಾಡ ಜಿಲ್ಲೆಯ ಗ್ಯಾಜಿಟಿಯರ್**ನಲ್ಲಿ ಗದಗ ಜಿಲ್ಲೆಯ ಕೃಷಿ ಪದ್ಧತಿ ನೀರಾವರಿ ವ್ಯವಸ್ಥೆಯ ಬಗ್ಗೆ ಮಾಹಿತಿಯನ್ನು ಒದಗಿಸಿಕೊಟ್ಟಿದೆ. ಅಲ್ಲಿನ ರಾಜಕೀಯ ಇತಿಹಾಸ, ಭೌಗೋಳಿಕ ಪರಿಸರ, ಜನಸಂಖ್ಯೆ, ಆರ್ಥಿಕತೆ ಬಗ್ಗೆ ಉಲ್ಲೇಖಗಳಿವೆ. **ಎನ್ಯೂವಲ್ ರಿಪೋರ್ಟ್ ಆನ್ ಸೌತ್ ಇಂಡಿಯನ್ ಎಫಿಗ್ರಫಿ** ೧೯೨೧-೨೨, ೧೯೪೧-೪೨, ೧೯೫೩-೫೪ ವಾರ್ಷಿಕ ವರದಿಯಲ್ಲಿ ಗದಗ ಜಿಲ್ಲೆಯ ಪ್ರಾಚೀನ ಕೆರೆ-ಬಾವಿಗಳ ಉಲ್ಲೇಖಗಳಿವೆ. **ಎಫಿಗ್ರಫಿ ಇಂಡಿಕಾ ಸಂಪುಟ-೪** ರಲ್ಲಿ ಗದಗ ಜಿಲ್ಲೆಯ ಕೆಲವು ಪ್ರಮುಖ ಶಾಸನಗಳು ಪ್ರಕಟವಾಗಿವೆ. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿರುವ **'ಧಾರವಾಡ ಜಿಲ್ಲೆಯ ಶಾಸನ ಸೂಚಿ'**ಯಲ್ಲಿ ಗದಗ ಜಿಲ್ಲೆಯಲ್ಲಿ ದೊರೆತ ಪ್ರಮುಖ ಶಾಸನಗಳನ್ನು ಈಗಾಗಲೇ ಪ್ರಕಟವಾಗಿರುವ ಶಾಸನಗಳನ್ನು ಒಂದೆಡೆ ಕಲೆಹಾಕಿ ವರದಿ ಮಾಡಿದ್ದಾರೆ. S.I.I. Vol-XI, XII, XV, XVIII, XX, & K.I Vol- XV ಇವುಗಳಲ್ಲಿ ಕೆಲವು ಶಾಸನಗಳು ಪ್ರಕಟವಾಗಿವೆ.

ಕುಪ್ಪುಸ್ವಾಮಿಯವರ **ಟ್ಯಾಂಕ್ ಇರಿಗೇಶನ್ ಇನ್ ಕರ್ನಾಟಕ ಹಿಸ್ಟಾರಿಕಲ್ ಸರ್ವೆ** ಎಂಬ ಕೃತಿಯಲ್ಲಿ ಕರ್ನಾಟಕದ ಪ್ರಮುಖ ಕೆರೆಗಳನ್ನು ಮಾತ್ರ ಉಲ್ಲೇಖಿಸಿದ್ದು, ಗದಗ ಜಿಲ್ಲೆಯ ೨ ಕೆರೆಗಳನ್ನು ಗಮನಿಸಿದ್ದಾರೆ. ಸಿ.ಟಿ.ಎಂ. ಕೊಟ್ರಯ್ಯನವರು (ಮೂಲ) ಧ್ರುವನಾರಾಯಣ ಎಂ. (ಕನ್ನಡ ಅನು) **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ** ಎಂಬ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿನ ಕೆರೆ-ಬಾವಿ, ಕಾಲುವೆಗಳನ್ನು ಉಲ್ಲೇಖಿಸುತ್ತ, ಕೆರೆಗಳನ್ನು ಕಟ್ಟುವ ಉದ್ದೇಶ, ಭೌಗೋಳಿಕ ಪರಿಸರದ ಹಿನ್ನೆಲೆ, ಕೆರೆಗಳನ್ನು ಕಟ್ಟುವಲ್ಲಿ ಮುಂದಾದ ರಾಜರು, ಗ್ರಾಮಗಳ ಸ್ಥಾನಿಕ ಅಧಿಕಾರಿಗಳು, ದಂಡನಾಯಕರ ಬಗ್ಗೆ ಶಾಸನಾಧಾರಗಳ ಮೂಲಕ ಪರಿಚಯಿಸಿದ್ದಾರೆ.

ಜಿ.ಎಸ್.ದೀಕ್ಷಿತ್, ಜಿ.ಆರ್.ಕುಪ್ಪುಸ್ವಾಮಿ, ಎಸ್.ಕೆ.ಮೋಹನ (ಮೂಲ) ಕಸ್ತೂರಿ ನೀಲತ್ತಳ್ಳಿ (ಕನ್ನಡ ಅನು)**ಕರ್ನಾಟಕದಲ್ಲಿ ಕೆರೆ ನೀರಾವರಿ** ಎಂಬ ಗ್ರಂಥದಲ್ಲಿ ಪ್ರಾಚೀನ ಕಾಲದಿಂದ ಬ್ರಿಟಿಷರ ಆಡಳಿತದವರೆಗಿನ ಕೆರೆಗಳ ಸಂರಕ್ಷಣೆ, ಜಲ ನಿರ್ವಹಣೆ ಮತ್ತು ಹಣಕಾಸು ಎಂಬಿತ್ಯಾದಿ ಮಹತ್ವದ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ.

ರಾಜಾರಾಮ ಹೆಗಡೆಯವರ ಸಂಪಾದಿಸಿರುವ **ಕೆರೆ ನೀರಾವರಿಯ ಚಾರಿತ್ರಿಕ ಅಧ್ಯಯನ** ಎಂಬ ಕೃತಿಯಲ್ಲಿ ಪ್ರಾಚೀನ, ಮಧ್ಯಕಾಲೀನ ಕರ್ನಾಟಕದಲ್ಲಿ ಕೆರೆಗಳ ಚಾರಿತ್ರಿಕ ಅಂಶಗಳು, ತಾಂತ್ರಿಕತೆ ಮತ್ತು ಮಿತಿಗಳು ಹಾಗೂ ಕೆರೆಗಳ ನಿರ್ವಹಣೆ ಹಾಗೂ ಜಲ ನಿರ್ವಹಣೆಯಲ್ಲಿ ಜನಸಾಮಾನ್ಯರ ಪಾತ್ರಗಳ ಕುರಿತಾದ ಲೇಖನಗಳಿವೆ.

ಮುನಿರಾಜಪ್ಪನವರು ಸಂಪಾದಿಸಿರುವ **ಕರ್ನಾಟಕದ ಕೆರೆ ನೀರಾವರಿ ಅಧ್ಯಯನ** ಎಂಬ ಕೃತಿಯಲ್ಲಿ ಕರ್ನಾಟಕದಲ್ಲಿ ಕಂಡುಬರುವ ಪ್ರಮುಖವಾದ ಕೆರೆಗಳ ಚಿತ್ರಣವನ್ನು ನೀಡಿದ್ದಾರೆ.

ಸಿ.ಎಸ್.ವಾಸುದೇವನ್‌ರವರ **ಹಂಪಿ ಪರಿಸರದ ಕೆರೆಗಳು** ಪ್ರಾಚೀನ ಭಾರತದಲ್ಲಿದ್ದ ಕೆರೆ ನೀರಾವರಿ ಪದ್ಧತಿಯೊಂದಿಗೆ ವಿಜಯನಗರ ಕಾಲದಲ್ಲಿದ್ದ ಕೆರೆ ನೀರಾವರಿ ಪದ್ಧತಿ, ಹೊಸಪೇಟೆ ತಾಲೂಕಿನ ವಿಜಯನಗರ ಕಾಲದ ಕೆರೆಗಳು, ವಿಜಯನಗರ ಕಾಲದ ತೆರಿಗೆ ಪದ್ಧತಿ, ಕೆರೆ ಕಟ್ಟಲು ಇದ್ದ ನಂಬಿಕೆ-ಆಚರಣೆಗಳನ್ನು ಕುರಿತು ಚರ್ಚಿಸಿತ್ತಾ ಬಳ್ಳಾರಿ ಜಿಲ್ಲೆಯಲ್ಲಿ ಕೆರೆಯ ಅಧಿದೇವತೆಯಾಗಿ ಪೂಜೆಗೊಳ್ಳುವ ಕನ್ನೀರಮ್ಮನ ಬಗ್ಗೆ ಸಂಕ್ಷಿಪ್ತವಾಗಿ ಬರೆದಿದ್ದಾರೆ.

ಈ ಮೇಲಿನ ಅಧ್ಯಯನಗಳು ಕರ್ನಾಟಕವನ್ನು ಪ್ರತಿನಿಧಿಸಿದರೆ ಗದಗ ಜಿಲ್ಲೆ ಕುರಿತು ಟಿ.ಆರ್. ಚಂದ್ರಶೇಖರ್ ಅವರ ಸಂಯೋಜಕತ್ವದಲ್ಲಿ **ಜಿಲ್ಲಾ ಅಭಿವೃದ್ಧಿ ಅಧ್ಯಯನ ಗದಗ** ಎಂಬ ಕೃತಿಯಲ್ಲಿ ಗದಗ ಜಿಲ್ಲೆಯ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ ಮತ್ತು ಜಿಲ್ಲೆಯ ಆರ್ಥಿಕ ರಚನೆ ಹಾಗೂ ಕೃಷಿ ವ್ಯವಸ್ಥೆ ಮುಂತಾದ ವಿಷಯಗಳ ಬಗ್ಗೆ ಸಂಕ್ಷಿಪ್ತವಾಗಿ ಬರೆದಿದ್ದಾರೆ. ಬಾಲಸುಬ್ರಮಣ್ಯ, ಸಿ.ಎಸ್. ವಾಸುದೇವನ್, ರಮೇಶ ನಾಯಕ ಅವರ **ಕರ್ನಾಟಕ ದೇವಾಲಯ**

**ಕೋಶ: ಗದಗ ಜಿಲ್ಲೆ** ಎಂಬ ಕೃತಿಯಲ್ಲಿ ಗದಗ ಜಿಲ್ಲೆಯಲ್ಲಿ ಕಂಡುಬರುವ ದೇವಾಲಯ, ಮೂರ್ತಿಶಿಲ್ಪ, ಕೋಟೆ–ಕೊತ್ತಲಗಳು, ಬುರುಜು–ಹುಡೇವುಗಳು, ಕೆರೆ–ಕಟ್ಟೆಗಳು ಹಾಗೂ ಅಪ್ರಕಟಿತ ಶಾಸನಗಳ ನಮೂದು ಹಾಗೂ ಸ್ಥಳೀಯವಾಗಿ ಲಭ್ಯವಾಗುವ ಐತಿಹ್ಯಗಳ ಬಗೆಗಿನ ಪರಿಚಯಗಳನ್ನು ನೀಡಿದ್ದಾರೆ.

ಚಂದ್ರಶೇಖರ ವಸ್ತ್ರದ, ಅರ್ಜುನ ಗೊಳಸಂಗಿ ಅವರು ಸಂಪಾದಿಸಿರುವ **ಕೃತಪುರ** ಎಂಬ ಕೃತಿ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಆಕರವಾಗಿದೆ.

ಗದುಗಿನ ಬಗೆಗೆ ಪ್ರಕಟಗೊಂಡಿರುವ ಪ್ರಥಮ ಪುಸ್ತಕವೆಂದರೆ ಸಿಂಡಿಕೇಟ್ ಬ್ಯಾಂಕಿನವರು ೧೯೬೧ರಲ್ಲಿ ಪ್ರಕಟಿಸಿದ ಚಿಕ್ಕ ಪುಸ್ತಕ **ಗದಗ**. ಇದು ಆಂಗ್ಲ ಭಾಷೆಯಲ್ಲಿದ್ದು, ಅನೇಕ ಮಾಹಿತಿಗಳನ್ನು ಒದಗಿಸಿದ ಪ್ರಥಮ ಪುಸ್ತಕವಾಗಿದೆ. ಬಿ.ಮಹಾಬಲರಾವ್ ಮೊಟ್ಟಮೊದಲ ಬಾರಿಗೆ ಕನ್ನಡದಲ್ಲಿ ಗದುಗಿನ ಬಗೆಗೆ **ನಮ್ಮ ಗದಗ–ಬೆಟಗೇರಿ** ಎಂಬ ಗ್ರಂಥವನ್ನು ರಚಿಸಿದರು. ಇದು ಗದುಗಿನ ಬಗೆಗೆ ಮಾಹಿತಿಯನ್ನು ಒದಗಿಸುತ್ತಾದರೂ ಇತಿಹಾಸ ನಿಟ್ಟಿನಲ್ಲಿ ಪ್ರಥಮ ಪ್ರಯತ್ನ ಎನ್ನಬಹುದು. ಆ.ದ. ಕಟ್ಟಿಮನಿಯವರು ಗದುಗಿನ ಇತಿಹಾಸ ಹಾಗೂ ಅವಶೇಷಗಳ ಅಧ್ಯಯನ ಹಾಗೂ ಸಂಗ್ರಹಣೆಗಾಗಿ ತಮ್ಮ ಜೀವನವನ್ನೇ ಮುಡುಪಾಗಿಸಿದ್ದಾರೆ. ಅವರ **ಗದಗು ದೇಶ ಗತವೈಭವ** ಎಂಬ ಪುಸ್ತಕ ವಿಜಯನಗರ ಕಾಲದ ಗದುಗಿನ ಇತಿಹಾಸವನ್ನು ವಿವರಿಸುತ್ತದೆ. ಹನುಮಾಕ್ಷಿ ಗೋಗಿಯವರು ಗದುಗಿನ ಅನೇಕ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿ, ಗದಗ ಭಾಗದ ಇತಿಹಾಸ ಕುರಿತಾದ ಹಲವು ಅಂಶಗಳು ಬೆಳಕಿಗೆ ಬರುವಂತೆ ಮಾಡಿದ್ದಾರೆ. ಎಸ್.ಎಚ್. ರಿತ್ತಿಯವರ **ಮುಳಗುಂದನಾಡು** ಎಂಬ ಚಿಕ್ಕ ಪುಸ್ತಕ ಈ ಪ್ರದೇಶದ ವಿಷಯ ಕುರಿತಾದ ಮಹತ್ವದ ಐತಿಹಾಸಿಕ ಮಾಹಿತಿಗಳನ್ನು ಒದಗಿಸಿ ಮುಳಗುಂದದ ಬಗೆಗೆ ಅಧ್ಯಯನ ಕೈಗೊಳ್ಳುವವರಿಗೆ ಮಾಹಿತಿಯ ಪುಸ್ತಕವಾಗಿದೆ. ಎಂ.ಎಚ್. ಹರಿದಾಸ್ ಅವರ **ಲಕ್ಕುಂಡಿ ಕಲೆಯ ಬಲೆ** ಎಂಬ ಗ್ರಂಥವು ಲಕ್ಕುಂಡಿಯ ದೇವಾಲಯಗಳ ಕಲಾ ಸೊಬಗನ್ನು ವರ್ಣಿಸುತ್ತದೆ. ಅವರದೇ ಆದ ಮತ್ತೊಂದು ಕೃತಿಯಾದ **ಗದುಗಿನ ವೀರನಾರಾಯಣ ಹಾಗೂ ಕುಮಾರವ್ಯಾಸ** ಮತ್ತು **ತ್ರಿಕೂಟೇಶ್ವರ** ಎಂಬ ಎರಡು ಪ್ರಮುಖ ಕೃತಿಗಳು ದೇವಾಲಯ ಬಗೆಗಿನ ಪೌರಾಣಿಕ ಕಥೆಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪ ಹಾಗೂ ಕೆಲವು ಶಾಸನಗಳ ಪಾಠ, ಕೋನೇರಿ ತೀರ್ಥದ ಛಾಯಾಚಿತ್ರ, ನಕ್ಷೆಗಳಿಂದ ಕೂಡಿದ್ದು, ಉತ್ತಮ ಮಾಹಿತಿಯ ಆಕರ ಗ್ರಂಥಗಳಾಗಿವೆ.

೧೯೯೭ರ ಲಕ್ಕುಂಡಿ ಉತ್ಸವದ ಸ್ಮರಣ ಸಂಚಿಕೆ ಚಂದ್ರಶೇಖರ ವಸ್ತ್ರದ ಅವರ ಸಂಪಾದಕತ್ವದ **ಲೊಕ್ಕಿಗುಂಡಿ**, ೧೯೯೯ರ ಉತ್ಸವದ ಸ್ಮರಣ ಸಂಚಿಕೆ ಸಿ. ಜಿ. ಬೆಟಸೂರಮಠರ ಸಂಪಾದಕತ್ವದ **ಅತ್ತಿಮಬ್ಬೆ**, ೨೦೦೨ರ ಉತ್ಸವದಲ್ಲಿ ಅವರದೇ ಸಂಪಾದಕತ್ವದ **ಕೀರ್ತಿಮುಖ**, ಅತ್ತಿಮಬ್ಬೆ

ಸಹಸ್ರಮಾನೋತ್ಸವ ಹಾಗೂ ರಾಜ್ಯಮಟ್ಟದ ಮಹಿಳಾ ಸಾಹಿತ್ಯದ ಸ್ಮರಣ ಸಂಚಿಕೆ ಸ್ತ್ರೀ **ಸಾಹಿತ್ಯ ಸೌರಭ** ಲೇಖನಗಳು ಲಕ್ಕುಂಡಿಯ ಬಗೆಗೆ ಮಾಹಿತಿಯನ್ನು ನೀಡುತ್ತವೆ. ಈ ಪುಸ್ತಕಗಳೊಂದಿಗೆ ಅನೇಕ ಮಹತ್ವಪೂರ್ಣ ಸ್ಮರಣ ಸಂಚಿಕೆಗಳು, ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡ ವಿವಿಧ ಲೇಖನಗಳು ಗದಗ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯ ಬಗೆಗೆ ವೈಶಿಷ್ಟ್ಯಪೂರ್ಣವಾದ ವಿಚಾರಗಳನ್ನು ವ್ಯಕ್ತಪಡಿಸುತ್ತವೆ.

ರೋಣದ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಅನೇಕ ಗ್ರಂಥಗಳು ಹೊರಬಂದಿವೆ. ಆ.ದ. ಕಟ್ಟಿಮನಿಯವರ **ಕಿಸುಕಾಡು ಗತವೈಭವ** ಎಂಬ ಗ್ರಂಥ ಶಾಸನಗಳ ಆಧಾರದ ಮೇಲೆ ರೋಣ ಪ್ರದೇಶದ ಗತವೈಭವವನ್ನು ವಿವರಿಸುತ್ತದೆ. ಸದಾನಂದ ಕನವಳ್ಳಿಯವರ **ಪುಲಿಗೆರೆ** ಎಂಬ ಪುಸ್ತಕ ಲಕ್ಷ್ಮೇಶ್ವರದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ವಿವರಿಸುತ್ತದೆ. ಸಿ.ವ್ಹಿ. ಕೆರಮನಿಯವರ **ಲಕ್ಷ್ಮೇಶ್ವರ** ಎಂಬ ಗ್ರಂಥ ಈ ಊರಿನ ಬಗೆಗೆ ಮಾಹಿತಿಯನ್ನು ನೀಡುತ್ತದೆ.

ನರಗುಂದ ಇತಿಹಾಸ ಮತ್ತು ಸಂಸ್ಕೃತಿಯ ಕುರಿತು ಅನೇಕ ಗ್ರಂಥಗಳು ಪ್ರಕಟಗೊಂಡಿವೆ. ಎಸ್.ಎನ್. ಶಾಂತಕುಮಾರಿಯವರ **ನರಗುಂದದ ಇತಿಹಾಸ** ಎಂಬ ಪುಸ್ತಕ ನರಗುಂದದ ಕುರಿತು ಪ್ರಾಥಮಿಕ ಸ್ಥಿತಿಯನ್ನು ನೀಡುತ್ತದೆ. ಪಿ.ವ್ಹಿ. ಹೂಗಾರ ಅವರ **ನರಗುಂದ** ಇದು ನರಗುಂದದ ಕಲೆ, ವಾಸ್ತು, ಇತಿಹಾಸವನ್ನು ಕುರಿತು ಮಾಹಿತಿ ನೀಡುತ್ತದೆ.

ಆರ್. ಗೋಪಾಲರವರು ಸಂಪಾದಿಸಿದ **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ** ಎಂಬ ಕೃತಿಯಲ್ಲಿ ಗದಗ ಜಿಲ್ಲೆಯ ನೀರಾವರಿ ಪದ್ಧತಿ, ಪ್ರಾಚೀನ ಕಾಲದ ಕೆರೆ-ಬಾವಿಗಳು ಮತ್ತು ಕೃಷಿ ಪದ್ಧತಿ ಕುರಿತು ಮಾಹಿತಿ ನೀಡುತ್ತದೆ. ಗದಗ ಜಿಲ್ಲೆಯ ೭೬ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆಯಲ್ಲಿ ಅರಸನಾಳ ಮತ್ತು ಸಾಲೋಟಗಿಮಠರವರ **ಗದಗ ಜಿಲ್ಲೆಯ ನೀರಾವರಿ ಯೋಜನೆಗಳು** ಲೇಖನ ಮಹತ್ವದ್ದಾಗಿದೆ. ಹೀಗೆ ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ ಸಾಕಷ್ಟು ಕೃತಿಗಳು ರಚನೆಯಾಗಿದ್ದು, ಪ್ರಾದೇಶಿಕ ನೆಲೆಯಲ್ಲಿ ಆಗಿರುವ ಕೆಲಸ ತೃಪ್ತಿಕರವಾಗಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಶಾಸನಗಳು ಮಹತ್ವದ ಆಕರಗಳಾಗದೇ ಮೌಖಿಕ ಪರಂಪರೆ ಮತ್ತು ಐತಿಹ್ಯಗಳನ್ನು ಅಧ್ಯಯನದ ಚೌಕಟ್ಟಿನಲ್ಲಿ ಒಳಪಡಿಸುವ ಪ್ರಯತ್ನ ಮಾಡಲಾಗಿದೆ. ಇವೆಲ್ಲಾ ಚಾರಿತ್ರಿಕ ಅಧ್ಯಯನದ ಹೊಸದೃಷ್ಟಿಗೆ ಸಾಕ್ಷಿಯಾಗಿ ಪ್ರಾದೇಶಿಕ ಇತಿಹಾಸ ರಚನೆಯ ಆಯಾಮಗಳನ್ನು ವಿಸ್ತರಿಸಿವೆ. ಈ ನಿಟ್ಟಿನಲ್ಲಿ ಗದಗ ಜಿಲ್ಲೆಯ ಕೆರೆ-ಬಾವಿಗಳ ಚಾರಿತ್ರಿಕ ಅಧ್ಯಯನದಲ್ಲಿ ಈವರೆಗಿನ ಅಧ್ಯಯನಗಳಲ್ಲಿ ಕಂಡು ಬರುವ ಕೊರತೆಯನ್ನು ತುಂಬಿಕೊಡುವ ಪ್ರಯತ್ನ ಮಾಡಲಾಗಿದೆ.

ನೇರವಾಗಿ ಅಲ್ಲದಿದ್ದರೂ ಕರ್ನಾಟಕದ ಬೇರೆ ಬೇರೆ ಐತಿಹಾಸಿಕ, ಸಾಂಸ್ಕೃತಿಕ ಪರಿವೇಷಗಳನ್ನು ಅಧ್ಯಯನ ಮಾಡುವಾಗ ಬ್ರಿಟಿಷ್ ವಿದ್ವಾಂಸರು ಗದುಗಿನ ದೇವಾಲಯ ಮತ್ತು ಶಾಸನಗಳನ್ನು

ಅಭ್ಯಸಿಸಿದ್ದಾರೆ. ರಾಬರ್ಟ್ ಬ್ರೂಸ್ ಫೂಟ್, ಬುಕಾನನ್, ಹೆನ್ರಿ ಕಝಿನ್ಸ್, ಜೇಮ್ಸ್ ಬರ್ಗಸ್, ಬಿ.ಎಲ್.ರೈಸ್, ಕಿಟಲ್ ಮುಂತಾದವರು ಗದುಗಿನ ಪುರಾತತ್ವ ಅವಶೇಷಗಳ ಕುರಿತು ಅಧ್ಯಯನ ಕೈಗೊಂಡಿದ್ದಾರೆ.

೧೯೫೯ರ ಜಗದ್ಗುರು ತೋಂಟದಾರ್ಯ ಮಹಾವಿದ್ಯಾಲಯದ ವಾರ್ಷಿಕ ಪತ್ರಿಕೆಯಲ್ಲಿ ಎಸ್. ಎಚ್. ರಿತ್ತಿಯವರ **ಬೆಳ್ವಲನಾಡು** ಲೇಖನ ಪ್ರಕಟವಾಗಿದೆ.

೧೯೬೧ರಲ್ಲಿ ಗದುಗಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ **ಪ್ರಸಾದ** ದಲ್ಲಿ ಪಿ.ಬಿ.ದೇಸಾಯಿ ಹಾಗೂ ಕೆ.ಎಂ. ಕುಲಕರ್ಣಿ ಗದಗ ಜಿಲ್ಲೆಯ ಇತಿಹಾಸ ಕುರಿತಾದ ಲೇಖನಗಳನ್ನು ಬರೆದಿದ್ದಾರೆ. ೨೦೧೦ರಲ್ಲಿ ಗದುಗಿನಲ್ಲಿ ನಡೆದ ೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ ಟಿ.ಎನ್ ಗೊರವರ ಹಾಗೂ ಇತರರು ಸಂಪಾದಿಸಿರುವ **ಬೆಳ್ವಲದ ಬೆಳಕು** ಇದರಲ್ಲಿ ಗದಗ ಜಿಲ್ಲೆಯ ಇತಿಹಾಸ ಕುರಿತಾದ ಲೇಖನಗಳನ್ನು ಬರೆದಿದ್ದಾರೆ.

೧೯೫೯ರಲ್ಲಿ ಗದಗ-ಬೆಟಗೇರಿ ನಗರಸಭೆಯ ಶತಮಾನೋತ್ಸವದ ಸ್ಮರಣ ಸಂಚಿಕೆಯಲ್ಲಿ ಅಪಾರ ಮಾಹಿತಿಗಳು ದೊರೆಯುತ್ತವೆ. ಇತಿಹಾಸ ದರ್ಶನದ ವಿವಿಧ ಸಂಪುಟಗಳು ಹಾಗೂ ಸಂಚಿಕೆಗಳಲ್ಲಿ ಪ್ರಕಟವಾದ ಅನೇಕ ಲೇಖನಗಳು ಗದುಗಿನ ಇತಿಹಾಸ ಮತ್ತು ಪುರಾತತ್ವಗಳ ಮೇಲೆ ಬೆಳಕು ಚೆಲ್ಲುತ್ತವೆ.

ಕನ್ನಡ ಸಾಹಿತ್ಯ ಪರಿಷತ್ತಿನ ಪತ್ರಿಕೆಯಾದ **'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ'** ಯಲ್ಲಿ ಗದಗ ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿ ಕುರಿತು ಹಲವು ಲೇಖನಗಳು ಪ್ರಕಟಗೊಂಡಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ,

೧೯೭೬ರ ಸಂಪುಟ ೬೧, ಸಂಚಿಕೆ ೦೧ರಲ್ಲಿ **ಮುಂಡರಗಿ ತಹಸೀಲನ ಪ್ರಾಚೀನ ಚರಿತ್ರೆ** ಹಾಗೂ ಸಂಪುಟ ೨೭, ಸಂಚಿಕೆ ೦೨ರಲ್ಲಿ **ಕುಮಾರವ್ಯಾಸ** ಲೇಖನಗಳು ಪ್ರಮುಖವಾಗಿವೆ.

ಮುಂಡರಗಿ ಎಸ್.ಜೆ.ಜೆ.ವ್ಹಿ ಮಹಾವಿದ್ಯಾಲಯ ಸ್ಮರಣ ಸಂಚಿಕೆ **ಮೃಡದೀಪ್ತಿ** ಯಲ್ಲಿ ಮಹಾಲಿಂಗ ಯಾಳಗಿಯವರ **ಶಾಸನಗಳ ಇಣುಕು ನೋಟದಲ್ಲಿ ಮುಂಡರಗಿ** ಲೇಖನ ಮುಂಡರಗಿ ಶಾಸನಗಳ ಕುರಿತು ಮಾಹಿತಿಯನ್ನು ನೀಡುತ್ತದೆ. ಇದೇ ಲೇಖಕರ ಮತ್ತೊಂದು **ಮುಂಡರಗಿ ಭೀಮರಾವ್** ಎಂಬ ಮತ್ತೊಂದು ಲೇಖನ ಸ್ವಾತಂತ್ರ್ಯ ಹೋರಾಟಗಾರ ಭೀಮರಾಯರ ಕುರಿತು ವಿವರಿಸುತ್ತದೆ. ಬಿ.ಎಸ್.ಪಾಟೀಲ ಅವರ **ಸ್ವಾತಂತ್ರ್ಯ ಆಂದೋಲನದಲ್ಲಿ ಮುಂಡರಗಿಯ ಪಾತ್ರ** ಲೇಖನ ಮುಂಡರಗಿಯಲ್ಲಿ ನಡೆದ ಸ್ವಾತಂತ್ರ್ಯ ಆಂದೋಲನದ ಕುರಿತು ವಿವರಿಸುತ್ತದೆ. ಅನ್ನದಾನೇಶ್ವರ ಮಠದಿಂದ ಪ್ರಕಟಣೆಗೊಂಡ ಸ್ಮರಣ ಸಂಚಿಕೆ **ಕಪೋತಗಿರಿ**. ಇದು ಮುಂಡರಗಿಯ ಇತಿಹಾಸ ಮತ್ತು ಸಂಸ್ಕೃತಿಯ ಕುರಿತು ಮಾಹಿತಿಯನ್ನು ನೀಡುತ್ತದೆ.

ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಗದಗ ಜಿಲ್ಲೆಯ ರಾಜಕೀಯ ಚರಿತ್ರೆ, ಜನಪದ ಸಾಹಿತ್ಯ, ಐತಿಹಾಸಿಕ ಸ್ಥಳಗಳ ಪರಿಚಯಾತ್ಮಕ ಅಧ್ಯಯನಗಳು ನಡೆದಿವೆಯೇ ಹೊರತು ಇಡೀ ಗದಗ ಜಿಲ್ಲೆಯನ್ನೇ ವ್ಯವಸ್ಥಿತ ಮತ್ತು ಸಮಗ್ರವಾದ ಹಾಗೂ ಕೆರೆ-ಬಾವಿಗಳಿಗೆ ಸಂಬಂಧಿಸಿದ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಆದುದರಿಂದ ಪ್ರಸ್ತುತ ಅಧ್ಯಯನವು ಗದಗ ಜಿಲ್ಲೆಯ ಕೆರೆ-ಬಾವಿಗಳನ್ನು ಚಾರಿತ್ರಿಕವಾಗಿ ಕಟ್ಟಿಕೊಡುವ ಉದ್ದೇಶವನ್ನು ಹೊಂದಿದೆ.

**೧.೩. ವ್ಯಾಪ್ತಿ**

ಯಾವುದೇ ಒಂದು ಅಧ್ಯಯನ ಮಾಡಬೇಕಾದರೆ ವ್ಯಾಪ್ತಿ ತುಂಬಾ ಮುಖ್ಯ. ಪ್ರಸ್ತುತ ಅಧ್ಯಯನ ಗದಗ ಜಿಲ್ಲೆಯ ಕೆರೆ-ಬಾವಿಗಳನ್ನು ಕುರಿತದ್ದು. ಭೌಗೋಳಿಕತೆಗೆ ಅನುಗುಣವಾಗಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ಗದಗ ಜಿಲ್ಲೆಯ ಪ್ರತಿಯೊಂದು ತಾಲೂಕಿನ ಗ್ರಾಮಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಈ ಪ್ರದೇಶವು ನೀರಾವರಿಗಾಗಿ ಬಹಳ ಹಿಂದಿನಿಂದಲೂ ಕೆರೆ, ಬಾವಿ, ಕಾಲುವೆ, ಬೆಣ್ಣೆಹಳ್ಳ, ಹಿರೇಹಳ್ಳಗಳನ್ನು ಅವಲಂಬಿಸಿತ್ತು. ಇದರ ವ್ಯಾಪ್ತಿಯಲ್ಲಿ ೧೮೦ಕ್ಕೂ ಹೆಚ್ಚು ಕೆರೆಗಳು ಹಾಗೂ ೮೦ಕ್ಕೂ ಹೆಚ್ಚು ಬಾವಿಗಳು ಕಂಡುಬರುತ್ತವೆ. ತಲಸ್ಪರ್ಶಿ ಅಧ್ಯಯನದ ದೃಷ್ಟಿಯಿಂದ ಜಿಲ್ಲೆಯಾದ್ಯಂತ ಹರಡಿರುವ ಪ್ರಮುಖ ಕೆರೆ ಬಾವಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನದ ವ್ಯಾಪ್ತಿ ಕೇವಲ ಕೆರೆ-ಬಾವಿ, ಕಾಲುವೆಗಳ ನಿರ್ಮಾಣ, ನಿರ್ವಹಣೆಗೆ ಮಾತ್ರ ಸೀಮಿತವಾಗಿರದೇ, ಕೃಷಿ ನೀರಿನ ಬಳಕೆ, ಬೆಳೆಗಳು ಹಾಗೂ ಸಾಂಸ್ಕೃತಿಕ ನಂಬಿಕೆ-ಆಚರಣೆಗಳನ್ನು ತಿಳಿಯುವ ಪ್ರಯತ್ನವನ್ನು ಹೊಂದಿದೆ.

**೧.೪. ವಿಧಾನ**

ಪ್ರಸ್ತುತ ಅಧ್ಯಯನವು ಬಹುತೇಕ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಸಂಶೋಧನೆಗಾಗಿ ಗದಗ ಜಿಲ್ಲೆಯನ್ನು ಆಯ್ದು ಕೊಂಡಾಗ ಗದಗ ಜಿಲ್ಲೆ, ತಾಲೂಕು ಮತ್ತು ಗ್ರಾಮ ಪಂಚಾಯತಿ ಕಛೇರಿಗಳಲ್ಲಿ ಗ್ರಾಮಗಳ ಪಟ್ಟಿ ಪಡೆದುಕೊಂಡು ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ಗದಗ ಜಿಲ್ಲೆಯ ೧೧ ಹೋಬಳಿಗಳು, ೩೩೫ ಗ್ರಾಮಗಳು, ಇವುಗಳಲ್ಲಿ ೩೨೫ ಜನವಸತಿ ಮತ್ತು ಉಳಿದವು ಜನವಸತಿ ಇಲ್ಲದ ಗ್ರಾಮಗಳು ಆಗಿವೆ. ಜಿಲ್ಲೆಯ ಪ್ರತಿಯೊಂದು ಗ್ರಾಮಗಳಿಗೂ ಭೇಟಿ ನೀಡಿ ಪ್ರಾಚೀನ ದೇವಾಲಯ, ಶಾಸನ, ವೀರಗಲ್ಲು, ಸತಿಗಲ್ಲು, ನಿಸಿದಿಗಲ್ಲು, ಕೆರೆ-ಬಾವಿಗಳು, ಪುಷ್ಕರಣಿಗಳು, ಕೋಟೆ, ಮುಂತಾದವುಗಳನ್ನು ಕುರಿತು ಛಾಯಾಚಿತ್ರ ಹಾಗೂ ಅಗತ್ಯ ನಕ್ಷೆಗಳ ಮೂಲಕ ದಾಖಲಿಸಿಕೊಳ್ಳಲಾಯಿತು.

ಕೆರೆಗಳ ಬಗ್ಗೆ ಸಣ್ಣ ನೀರಾವರಿ ಇಲಾಖೆ, ದೊಡ್ಡ ನೀರಾವರಿ ಇಲಾಖೆ, ಜಿಲ್ಲಾ, ತಾಲೂಕು ಹಾಗೂ ಗ್ರಾಮ ಪಂಚಾಯತಿಗಳು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ

ಸಂಬಂಧಿಸಿದ ವರದಿಗಳನ್ನು ಸಂಗ್ರಹಿಸಿ ಹಾಗೂ ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದಲೂ ಮಾಹಿತಿ ಪಡೆದು, ಕೆರೆಗಳ ಏರಿ, ತೂಬು, ಕೋಡಿ ಮತ್ತು ಅದರ ಪೂರ್ಣ ಚಿತ್ರಣವನ್ನು ಛಾಯಾಚಿತ್ರಗಳ ಮೂಲಕ ಸಂಗ್ರಹಿಸಲಾಗಿದೆ. ಮೌಖಿಕ ಪರಂಪರೆ, ಜನಪದ ನಂಬಿಕೆ, ಐತಿಹ್ಯಗಳು ಮುಂತಾದ ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಿ ಆನುಷಂಗಿಕ ಆಕರಗಳ ಮೂಲಕ ಮಾಹಿತಿಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪುರಾತತ್ವೀಯ ನೆಲೆಗಟ್ಟಿನ ಮೇಲೆ ಪ್ರಬಂಧವನ್ನು ರಚಿಸಲಾಗಿದೆ. ಗ್ರಂಥಾಲಯಗಳಲ್ಲಿ ಅಗತ್ಯವಾದ ಮಾಹಿತಿಗಳನ್ನು ಪಡೆದು, ಈ ಮಾಹಿತಿಗಳನ್ನು ಪ್ರತ್ಯೇಕವಾಗಿ ಪಟ್ಟಿಕೆಗಳಲ್ಲಿ ದಾಖಲಿಸಿಕೊಂಡು ನಂತರ ವರ್ಗೀಕರಿಸಿ ವಿಷಯಗಳನ್ನು ವಿಶ್ಲೇಷಿಸಿ ಮಹಾಪ್ರಬಂಧವನ್ನು ರಚಿಸಲಾಗಿದೆ.

### ೧.೫. ಸ್ವರೂಪ

ಈ ಮೇಲಿನ ಅಧ್ಯಯನದ ವಿಧಾನದಲ್ಲಿ ಗಮನಿಸಿದಂತೆ ಹಲವು ವಿಧಾನಗಳನ್ನು ಅನುಸರಿಸಿ ಪ್ರತ್ಯೇಕಿಸಲಾದ ವಸ್ತು ವಿಷಯಗಳನ್ನು ವ್ಯವಸ್ಥಿತವಾದ ನಿರೂಪಣೆ ಮತ್ತು ವಿಶ್ಲೇಷಣೆಯ ದೃಷ್ಟಿಯಿಂದ ಪ್ರಸ್ತುತ ಸಂಶೋಧನ ಪ್ರಬಂಧವನ್ನು ಏಳು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

ಮೊದಲನೆಯ ಅಧ್ಯಾಯ **ಪ್ರಸ್ತಾವನೆ**. ಅಧ್ಯಯನದ ಉದ್ದೇಶ, ಸಮೀಕ್ಷೆ, ವಿಧಾನ, ವ್ಯಾಪ್ತಿ ಮತ್ತು ಸ್ವರೂಪಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯ **ಗದಗ ಜಿಲ್ಲೆಯ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ**. ಯಾಗಿದ್ದು, ಇದರಲ್ಲಿ ಗದಗ ಜಿಲ್ಲೆಯ ಮೇರೆ, ವಿಸ್ತೀರ್ಣ, ಜನಸಂಖ್ಯೆ, ಹವಾಮಾನ, ಮಳೆ, ಮಣ್ಣಿನ ಫಲವತ್ತತೆ, ವ್ಯವಸಾಯ, ಬೆಳೆಗಳು, ಜಲಸಂಪನ್ಮೂಲಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ಈ ಜಿಲ್ಲೆಯಲ್ಲಿ ಕಂಡುಬಂದಿರುವ ಮೌರ್ಯ, ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ಹೊಯ್ಸಳರು, ವಿಜಯನಗರ ಅರಸರು, ಅದಿಲ್‌ಶಾಹಿಗಳು, ಮರಾಠರು ಹಾಗೂ ಬ್ರಿಟಿಷರನ್ನು ಒಳಗೊಂಡಂತೆ ಚಾರಿತ್ರಿಕ ಹಿನ್ನೆಲೆ ಎಂಬ ಉಪಶೀರ್ಷಿಕೆ ಅಡಿಯಲ್ಲಿ ಚರ್ಚಿಸಲಾಗಿದೆ. ಪ್ರಾಗಿತಿಹಾಸಿಕ ನೆಲೆಗಳು, ಈ ನೆಲೆಗಳಲ್ಲಿ ದೊರೆತಿರುವ ಅವಶೇಷಗಳು, ಅವುಗಳ ಪ್ರಕಾರ, ವಿಸ್ತಾರ ಹೀಗೆ ಹತ್ತು ಹಲವು ವಿಚಾರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಚಾರಿತ್ರಿಕ ಅಧ್ಯಯನಕ್ಕೆ ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ, ಚಾರಿತ್ರಿಕ ದಾಖಲೆ, ಶಾಸನ, ಹಾಗೂ ಸಮಕಾಲೀನ ಸಾಹಿತ್ಯಿಕ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ.

ಮೂರನೆಯ ಅಧ್ಯಾಯ **ಕೆರೆಗಳು**. ಕೆರೆಗಳ ಉಗಮ, ಪ್ರಾಚೀನತೆ, ಕೆರೆ ನೀರಾವರಿ ಪರಂಪರೆ, ಮತ್ತು ಪ್ರಾಮುಖ್ಯತೆ ಬಗ್ಗೆ ತಿಳಿಸುವುದು. ಕೆರೆಗಳ ನಾಮಾವಳಿಗಳು, ಕೆರೆಗಳ ವರ್ಗೀಕರಣ, ವಿವಿಧ ಆಯಾಮಗಳು, ಶಾಸನೋಕ್ತ ಕೆರೆಗಳು ಮತ್ತು ಇಂದಿನ ಸ್ಥಿತಿಗತಿಗಳು ಎಂಬ ಉಪಶೀರ್ಷಿಕೆ

ಅಡಿಯಲ್ಲಿ ಚರ್ಚಿಸಿ, ಇದಕ್ಕೆ ಸಂಬಂಧಿಸಿದ ಕೆಲವು ಮುಖ್ಯ ಭಾಗಗಳಾದ ಕೆರೆಯ ಏರಿಯ ನಿರ್ಮಾಣ, ತೂಬುಗಳ ರಚನೆ, ಕಾಲುವೆ, ಕೋಡಿಗಳ ಬಗ್ಗೆ ವಿವರಿಸುವುದು. ಇವುಗಳ ಮಧ್ಯೆ ಇರುವ ಚಾರಿತ್ರಿಕವಾದ ನೆಲೆಗಟ್ಟಿನ ಮೇಲೆ ಆದ ಪ್ರಭಾವವನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯ **ಬಾವಿಗಳು**. ಇದರಲ್ಲಿ ಗದಗ ಜಿಲ್ಲೆಯಲ್ಲಿ ಬರುವ ಪ್ರಮುಖ ಬಾವಿಗಳನ್ನು ಅಧ್ಯಯನಕ್ಕೆ ಒಳಪಡಿಸಿ ಪ್ರಾಚೀನತೆ, ನಾಮಾವಳಿಗಳು, ರಚನೆ, ನೀರಿನ ಉಪಯೋಗದ ಕ್ರಮಗಳು, ಬಾವಿಗಳ ನಿರ್ಮಾಣದ ಉದ್ದೇಶ ಮತ್ತು ಕಾರ್ಯಗಳು, ಮತ್ತು ಪ್ರಮುಖವಾದ ಶಾಸನೋಕ್ತ ಬಾವಿಗಳು ಹಾಗೂ ಸ್ಥಿತಿ-ಗತಿಗಳು ಎಂಬ ಉಪಶೀರ್ಷಿಕೆ ಅಡಿಯಲ್ಲಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯ **ಕೆರೆ ಮತ್ತು ಬಾವಿಗಳ ನಿರ್ಮಾಣ ಮತ್ತು ನಿರ್ವಹಣೆ**. ಇದರಲ್ಲಿ ಕೆರೆ ಮತ್ತು ಬಾವಿಗಳನ್ನು ಪ್ರಾಚೀನ ಕಾಲದಲ್ಲಿ ಯಾವ ರೀತಿ ನಿರ್ಮಾಣ ಮಾಡುತ್ತಿದ್ದರು? ನೀರಾವರಿಗೆ ಯಾವ ರೀತಿ ಉಪಯೋಗಿಸುತ್ತಿದ್ದರು? ಮತ್ತು ಸಂರಕ್ಷಣೆಗೆ ಯಾವ ಕ್ರಮಗಳನ್ನು ಅನುಸರಿಸುತ್ತಿದ್ದರು? ಎನ್ನುವುದರ ಬಗ್ಗೆ ತಿಳಿಸಲಾಗಿದೆ. ಕೆರೆಗಳನ್ನು ನಿರ್ಮಿಸಿಸಲು ಅಗತ್ಯವಾದ ಅಂಶಗಳು, ತಾಂತ್ರಿಕತೆ, ಕೆರೆ-ಕಟ್ಟೆಗಳ ರಚನೆ, ಇವುಗಳ ರಚನೆಗೆ ಭೌಗೋಳಿಕ ಅಂಶಗಳ ಪ್ರಭಾವ, ದುರಸ್ಥಿ ಮತ್ತು ನಿರ್ವಹಣೆ, ನೀರಿನ ಹಂಚಿಕೆ ಮತ್ತು ಬಳಕೆ, ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯ **ನಂಬಿಕೆ ಮತ್ತು ಆಚರಣೆಗಳು**. ಇದರಲ್ಲಿ ಕೆರೆ-ಬಾವಿಗಳಿಗೆ ಸಂಬಂಧಿಸಿದ ನಂಬಿಕೆ ಆಚರಣೆ ಮತ್ತು ಸಂಪ್ರದಾಯಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಐತಿಹ್ಯಗಳು, ಜಾತ್ರೆ, ಉತ್ಸವ, ಜನಪದರ ನಂಬಿಕೆ, ಹಾಡುಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯ **ಸಮಾರೋಪ**. ಇದು ಇಡೀ ಅಧ್ಯಯನದಲ್ಲಿ ಕಂಡುಕೊಂಡ ಸಂಶೋಧನೆಯ ಫಲಿತವಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ ಸಂಪುಟ, ಅಪ್ರಕಟಿತ ಸಂಶೋಧನ ಪ್ರೌಢ ಪ್ರಬಂಧ ಮತ್ತು ಮಹಾಪ್ರಬಂಧಗಳ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದ ಪಾರಿಭಾಷಿಕ ಪದ ಕೋಶ, ಜಿಲ್ಲೆಯ ಕೆರೆ-ಬಾವಿಗಳ ಪಟ್ಟಿ, ಭೌಗೋಳಿಕ ನಕ್ಷೆ, ಕೆರೆಗಳ ನಕ್ಷೆಗಳು, ಸಂಕ್ಷೇಪಗಳು ಮತ್ತು ಛಾಯಾಚಿತ್ರಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದೆ.

**ಟಿಪ್ಪಣಿಗಳು:**

೧) SII. Vol-IV, No-267, ಕ್ರಿ.ಶ. ೧೪೧೧

೨) SII. Vol-IV, No-267, ಕ್ರಿ.ಶ. ೧೪೧೧

# ಅಧ್ಯಾಯ ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

# ೨

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕರ್ನಾಟಕವು ವಿಭಿನ್ನ ರೀತಿಯ ಭೌಗೋಳಿಕ ಲಕ್ಷಣಗಳನ್ನು ಒಳಗೊಂಡ ಪ್ರದೇಶ, ಇದು ನಿಸರ್ಗದ ವಿಶೇಷ ಭೌತಿಕ ಲಕ್ಷಣಗಳನ್ನು ಪಡೆದ, ಧಾರವಾಡದಿಂದ ೭೬ ಕಿ.ಮೀ ದೂರದಲ್ಲಿರುವ ಗದಗ ಜಿಲ್ಲೆ. ಈ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಾಗಿತಿಹಾಸಕ ಕಾಲದಿಂದಲೇ ಜನವಸತಿ ಬೆಳೆದು, ನಂತರ ವಿವಿಧ ರಾಜ ಮನೆತನಗಳ ಆಳ್ವಿಕೆಯಿಂದ ಸಾಂಸ್ಕೃತಿಕ ಕೇಂದ್ರವಾಗಿ ನೆಲೆಗೊಳ್ಳಲು ಇಲ್ಲಿಯ ಭೌಗೋಳಿಕ ಪರಿಸರವೇ ಪೂರಕ ಅಂಶವಾಗಿ ಕಾಣುತ್ತದೆ.[೧] ಮಾನವನ ಉಗಮ, ವಿಕಾಸ ಹಾಗೂ ಅಭಿವೃದ್ಧಿಯಲ್ಲಿ ಭೌಗೋಳಿಕ ಪರಿಸರ ಗಮನಾರ್ಹ ಪಾತ್ರವಹಿಸುತ್ತದೆ. ಅಷ್ಟೇ ಅಲ್ಲದೇ ಜೀವ ಸಂಕುಲದ ಉಳಿವು ಅಲ್ಲಿನ ಪರಿಸರವನ್ನೇ ಅವಲಂಬಿಸಿರುತ್ತದೆ ಎಂಬುವುದನ್ನು ನಾವು ಅಲ್ಲಗಳೆಯುವಂತಿಲ್ಲ. ರಾಜ ಮಹಾರಾಜರ ಕೀರ್ತಿ ಪತಾಕೆ, ರಾಜ್ಯಗಳ ಅಳಿವು–ಉಳಿವು ಸಹ ಅಲ್ಲಿನ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ ಎಂಬುದು ಅದರ ಮಹತ್ವವನ್ನೇ ಎತ್ತಿ ತೋರಿಸುತ್ತದೆ.[೨] ಹೀಗೆ ಗದಗ ಜಿಲ್ಲಾ ಪರಿಸರದ ಮಾನವ ಆದಿಕಾಲದಿಂದ ಅನೇಕ ಬದಲಾವಣೆಗಳೊಂದಿಗೆ ನಾಗರಿಕತೆಯತ್ತ ಸಾಗಲು ಇಲ್ಲಿಯ ಭೌಗೋಳಿಕ ಪರಿಸರವೇ ಕಾರಣ. ಈ ಪರಿಸರ ಮಾನವನ ಸರ್ವಾಂಗೀಣ ಅಭಿವೃದ್ಧಿಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಆದಿಮಾನವ ಇಲ್ಲಿನ ನಿಸರ್ಗದತ್ತವಾದ ಸಂಪತ್ತನ್ನು ತನ್ನ ನಿತ್ಯ ಬಳಕೆಗಾಗಿ ಬಳಸಿಕೊಂಡು ತಾನು ಬೆಳವಣಿಗೆ ಹೊಂದಿದ್ದುದನ್ನು ಕಾಣಬಹುದು.

## ೨.೧. ಭೌಗೋಳಿಕ ಹಿನ್ನೆಲೆ

ಒಂದು ದೇಶದ ಸರ್ವತೋಮುಖ ಬೆಳವಣಿಗೆಗೆ ಇಲ್ಲಿಯ ಭೌಗೋಳಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಇತಿಹಾಸಕ್ಕೆ ಭೂಗೋಳವೇ ನೆಲೆ ಆದ್ದರಿಂದ ಗದಗ ಜಿಲ್ಲೆಯ ಭೌಗೋಳಿಕ ಪರಿಸರವನ್ನು ಮೊದಲು ಗಮನಿಸೋಣ. ಯಾವ ದೇಶ ಅಥವಾ ರಾಜ್ಯಕ್ಕೆ ಹೆಚ್ಚು ಪ್ರಕೃತಿಯ ಸಹಾಯವಿರುತ್ತದೆಯೋ ಆ ದೇಶ ಬಹುಬೇಗ ಅಭಿವೃದ್ಧಿಯನ್ನು ಕಾಣುತ್ತದೆ. ಆ ಪ್ರದೇಶ ತನ್ನದೇ ಆದ ಇತಿಹಾಸ ಮತ್ತು ಸಂಸ್ಕೃತಿಯನ್ನು ಹೊಂದಲು ಭೌಗೋಳಿಕ ಪರಿಸರ ಸಹಾಯಕ. ಒಂದು ಪ್ರದೇಶದ ಮಣ್ಣಿನ ರಚನೆ, ಹವಾಮಾನ, ಉಷ್ಣಾಂಶ, ರೇಖಾಂಶ ಮುಂತಾದ ಭೌಗೋಳಿಕ

ಅಂಶಗಳು ಮಾನವನನ್ನು ಆ ಪ್ರದೇಶದಲ್ಲಿ ವಾಸಿಸಲು ಪ್ರೇರಣೆ ನೀಡುತ್ತವೆ. ಉತ್ತಮ ಪರಿಸರ ಆ ದೇಶದ ನೈಸರ್ಗಿಕ ಸಂಪತ್ತನ್ನು ಹೆಚ್ಚಿಸಿ ಜನ ಜೀವನ ನಾಗರಿಕತೆ, ಸಂಸ್ಕೃತಿ, ಕಲೆ ಮತ್ತು ಸಾಹಿತ್ಯದ ಅಭಿವೃದ್ಧಿಗೆ ಸಹಕಾರಿಯಾಗುತ್ತವೆ.

ಗದಗ ಜಿಲ್ಲೆಯು ಕಪ್ಪು ಎರೆನಾಡು, ಗಿರಿ ಕಂದರಗಳಿಂದ ಕೂಡಿದ ಸಮತಟ್ಟಾದ ಪ್ರದೇಶವನ್ನು ಒಳಗೊಂಡಿದೆ. ಇಲ್ಲಿ ದೇವಾಲಯ, ಪುಷ್ಕರಣಿ, ಕೆರೆ, ಬಾವಿ, ಗುಡ್ಡ, ಕೋಟೆ, ಕೊತ್ತಲ ಇತ್ಯಾದಿ ವಾಸ್ತು ವೈಭವಗಳು ಜಿಲ್ಲೆಯಲ್ಲಿ ಹರಡಿಕೊಂಡಿವೆ. ಬಹು ಪ್ರಾಚೀನ ಕಾಲದಿಂದಲೂ ಜನವಸತಿಯನ್ನು ಹೊಂದಿದ ಗದಗ ಜಿಲ್ಲೆಯಲ್ಲಿ ತುಂಗಭದ್ರ ಮತ್ತು ಮಲಪ್ರಭಾ ನದಿಗಳು ಪ್ರಾಗೈತಿಹಾಸಿಕ ಕಾಲದಿಂದಲೂ ಪ್ರೇರಣೆ ನೀಡಿವೆ. ಇಲ್ಲಿ ಆಳಿದ ಅರಸು ಮನೆತನಗಳು ಐತಿಹಾಸಿಕ ಕಾಲದ ಬೆಳ್ವೊಲ-೩೦೦ ಮತ್ತು ಪುಲಿಗೇರಿ ೩೦೦ ಪ್ರಾಂತ್ಯಗಳಾಗಿ ಜಿಲ್ಲೆಯಲ್ಲಿ ಬಹುಮಟ್ಟಿಗೆ ಹರಡಿಕೊಂಡಿವೆ.

### ೨.೧.೧. ಭೂಪ್ರದೇಶ

ಪ್ರಾಕೃತಿಕ ಸಂಪನ್ಮೂಲಗಳು ಹಾಗೂ ಉತ್ತಮ ಹವಾಮಾನವನ್ನು ಒಳಗೊಂಡ ಗದಗ ಜಿಲ್ಲೆಯಲ್ಲಿ ಪ್ರಮುಖವಾಗಿ ಎರೆಮಣ್ಣು ಇದ್ದು ಕೃಷಿಗೆ ಸಹಕಾರಿಯಾಗಿದೆ. ಜಿಲ್ಲೆಯ ಈಶಾನ್ಯಕ್ಕೆ ಮತ್ತು ಪಕ್ಕದ ಧಾರವಾಡ ಜಿಲ್ಲೆಯಲ್ಲಿ ಕಲಾದಗಿ ಶಿಲಾಶ್ರೇಣಿಗೆ ಸೇರಿದ ಮರಳುಗಲ್ಲು ಹರಡಿಕೊಂಡಿವೆ. ಈ ಶಿಲಾ ಶ್ರೇಣಿಯು ಹೆಚ್ಚಾಗಿ ಜಿಲ್ಲೆಯ ನರಗುಂದ ತಾಲೂಕಿನಲ್ಲಿ ಕಾಣುತ್ತೇವೆ. ಈ ಶಿಲಾವರ್ಗದ ಬೆಣಚುಕಲ್ಲು, ಸುಣ್ಣದ ಕಲ್ಲು ಮತ್ತು ಜೇಡಿಯ ಚಿಪ್ಪುಕಲ್ಲುಗಳನ್ನು ಗಮನಿಸಬಹುದು. ಕಲಾದಗಿ ಶಿಲಾ ಶ್ರೇಣಿಯೊಂದಿಗೆ ನೆರೆಯ ಧಾರವಾಡ ಜಿಲ್ಲೆಯಲ್ಲಿ ವಿಶೇಷವಾಗಿ ಕ್ರಿಸ್ಟಲೈನ್ ಸಿಸ್ಟ್ ಅಥವಾ ಧಾರವಾಡ ಸಿಸ್ಟ್‌ನ (ಧಾರವಾಡ ಶಿಲೆ) ಸ್ವಾಭಾವಿಕ ಶಿಲಾಪದರುಗಳ ರಚನೆಯ ಅನೇಕ ಬಗೆಯ ಕಲ್ಲುಗಳು ಅಲ್ಲಲ್ಲಿ ಕಂಡುಬರುತ್ತವೆ.[೩] ಶಿಲಾ ಶ್ರೇಣಿಯೊಂದಿಗೆ ಅನೇಕ ಅಮೂಲ್ಯ ಖನಿಜ ಸಂಪತ್ತುಗಳು ಸಹ ಇಲ್ಲಿವೆ. ಜಿಲ್ಲೆಯ ಮುಂಡರಗಿ ತಾಲೂಕಿನ ಕಪ್ಪತ್ತಗುಡ್ಡಗಳ ಶ್ರೇಣಿಯಲ್ಲಿ ಕಬ್ಬಿಣದ ಅದಿರು ದೊರಕುತ್ತದೆ. ಇದೇ ಗುಡ್ಡಗಳ ಶ್ರೇಣಿಯಲ್ಲಿ ಚಿನ್ನದ ಅದಿರು ಅಲ್ಪ ಪ್ರಮಾಣದಲ್ಲಿದ್ದು ವಾಣಿಜ್ಯ ಬಳಕೆಗೆ ಉತ್ಪಾದನೆಯಾಗುವಷ್ಟು ಹೆಚ್ಚಿನ ಪ್ರಮಾಣದಲ್ಲಿ ದೊರಕುವುದಿಲ್ಲ. ಸ್ವಲ್ಪ ಪ್ರಮಾಣದಲ್ಲಿ ಹೆಮಟೈಟ್, ಕಬ್ಬಿಣ, ಬೆಣಚುಮಿಶ್ರಿತ ಶಿಲಾಪದರು ನಿಕ್ಷೇಪಗಳು, ಡೋಣಿ ಹಳ್ಳದ ಪರಿಸರದಲ್ಲಿ ತಾಮ್ರದ ಅದಿರಿನ ಚೂರುಗಳು ಕಂಡುಬಂದಿವೆ.[೪] ಮುಂಡರಗಿ ತಾಲೂಕಿನಲ್ಲಿ ಕಣಶಿಲೆಯನ್ನು ಗಣಿಗಾರಿಕೆ ಮೂಲಕ ತೆಗೆದು ಬಳಸಿಕೊಳ್ಳಲಾಗುತ್ತಿದೆ. ಇದೇ ಪ್ರದೇಶದಲ್ಲಿ ವರ್ಗಗಳಿಂದ ಕೂಡಿದ ಸುಣ್ಣ ಶಿಲೆಯ ನಿಕ್ಷೇಪವು ಸಾಕಷ್ಟು ಪ್ರಮಾಣದಲ್ಲಿ ದೊರಕಿವೆ.

### ೨.೧.೨. ಭೌಗೋಳಿಕ ವಿಸ್ತೀರ್ಣ:

ಗದಗ ಧಾರವಾಡ ಜಿಲ್ಲೆಯಿಂದ ಬೇರ್ಪಟ್ಟು ಕರ್ನಾಟಕ ರಾಜ್ಯದ ೨೭ನೇ ಜಿಲ್ಲೆಯಾಗಿ

ರಚನೆಗೊಂಡಿದೆ. ಭವ್ಯ ಇತಿಹಾಸವನ್ನು ಹೊಂದಿರುವ ಈ ಜಿಲ್ಲೆಯು ಮಹಾನ್ ವೀರರ ನಾಡಾಗಿದ್ದು, ಸಾಹಿತ್ಯ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಪರಿಮಿತ ಕೊಡುಗೆ ನೀಡಿದೆ. ಭೌಗೋಳಿಕವಾಗಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ.

ಗದಗ ಜಿಲ್ಲೆಯು ಕರ್ನಾಟಕ ರಾಜ್ಯದ ನಕ್ಷೆಯಲ್ಲಿ ಉತ್ತರಕ್ಕಿದ್ದು ೧೪.೫೭' ರಿಂದ ೧೫.೫೨' ಉತ್ತರ ಅಕ್ಷಾಂಶದವರೆಗೆ ಹಾಗೂ ೭೫.೧೬' ರಿಂದ ೭೬.೦೨' ಪೂರ್ವ ರೇಖಾಂಶಗಳ ಮಧ್ಯದ ಪ್ರದೇಶದವರೆಗೂ ಹರಡಿಕೊಂಡಿದ್ದು, ಪೂರ್ವ ಪಶ್ಚಿಮವಾಗಿ ೮೪ ಕಿ.ಮೀ ಅಗಲ ಹಾಗೂ ದಕ್ಷಿಣೋತ್ತರವಾಗಿ ೧೦೪ ಕಿಮೀ ಉದ್ದವಾಗಿರುತ್ತದೆ.[೫] ಈ ಜಿಲ್ಲೆಯು ಪಶ್ಚಿಮಕ್ಕೆ ಧಾರವಾಡ, ವ್ಯಾಯವ್ಯಕ್ಕೆ ಬೆಳಗಾವಿ, ಉತ್ತರಕ್ಕೆ ಬಾಗಲಕೋಟೆ, ಪೂರ್ವಕ್ಕೆ ಕೊಪ್ಪಳ, ಆಗ್ನೇಯಕ್ಕೆ ಬಳ್ಳಾರಿ, ನೈರುತ್ಯಕ್ಕೆ ಹಾವೇರಿ ಹೀಗೆ ಆರು ಜಿಲ್ಲೆಗಳಿಂದ ಸುತ್ತುವರಿಯಲ್ಪಟ್ಟಿದೆ. ಕೂಡಿದೆ. ಜಿಲ್ಲೆಯ ಉತ್ತರಕ್ಕೆ ಮಲಪ್ರಭಾ ನದಿ ಮತ್ತು ದಕ್ಷಿಣಕ್ಕೆ ತುಂಗಭದ್ರಾ ನದಿಗಳು ನೈಸರ್ಗಿಕ ಮೇರೆಗಳಾಗಿವೆ.

ಗದಗ ಜಿಲ್ಲೆಯು ೪೬೫೬ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದ್ದು, (೪೬,೫೭೫ ಹೆಕ್ಟೇರುಗಳಲ್ಲಿ) ರಾಜ್ಯದ ಒಟ್ಟು ವಿಸ್ತೀರ್ಣದ ಶೇಕಡಾ ೨.೪೩ ರಷ್ಟನ್ನು ಹೊಂದಿದೆ.[೬] ಕರ್ನಾಟಕದ ನಾಲ್ಕು ಕಂದಾಯ ವಿಭಾಗಗಳಲ್ಲಿ (ಬೆಂಗಳೂರು, ಮೈಸೂರು, ಬೆಳಗಾವಿ, ಗುಲ್ಬರ್ಗಾ) ಗದಗ ಜಿಲ್ಲೆಯು ಬೆಳಗಾವಿ ವಿಭಾಗದಲ್ಲಿದ್ದು, ೫ ತಾಲೂಕುಗಳನ್ನು (ಗದಗ, ಮುಂಡರಗಿ, ರೋಣ, ಶಿರಹಟ್ಟಿ, ನರಗುಂದ) ೧೧ ಹೋಬಳಿಗಳನ್ನು (ಗದಗ, ಬೆಟಗೇರಿ, ಮುಂಡರಗಿ, ಡಂಬಳ, ನರಗುಂದ, ಕೊಣ್ಣೂರು, ರೋಣ, ನರೇಗಲ್ಲ, ಹೊಳೆಆಲೂರು, ಶಿರಹಟ್ಟಿ, ಮತ್ತು ಲಕ್ಷ್ಮೇಶ್ವರ), ೩೨೫ ಗ್ರಾಮಗಳು ಜನವಸತಿ ಇರುವ ಮತ್ತು ೧೨ ಗ್ರಾಮಗಳು ಜನವಸತಿ ಇಲ್ಲದ ಸ್ಥಳಗಳಾಗಿವೆ. ಒಂದು ನಗರಸಭೆ (ಗದಗ–ಬೆಟಗೇರಿ), ೫ ಪುರಸಭೆಗಳು (ನರಗುಂದ, ಮುಂಡರಗಿ, ರೋಣ, ಲಕ್ಷ್ಮೇಶ್ವರ, ಗಜೇಂದ್ರಗಡ), ೩ ಪಟ್ಟಣ ಪಂಚಾಯತಿಗಳು (ಶಿರಹಟ್ಟಿ, ಮುಳಗುಂದ, ನರೇಗಲ್ಲ)ಗಳನ್ನು ಹೊಂದಿದೆ. ಗದಗ ಜಿಲ್ಲೆಯು ಒಟ್ಟು ೫ ತಾಲೂಕುಗಳನ್ನು ಅಂದರೆ ಗದಗ, ರೋಣ, ನರಗುಂದ, ಮುಂಡರಗಿ ಮತ್ತು ಶಿರಹಟ್ಟಿಗಳನ್ನು ಹೊಂದಿದೆ. ೫ ತಾಲೂಕುಗಳ ಪೈಕಿ ರೋಣ ವಿಸ್ತೀರ್ಣದಲ್ಲಿ ಮೊದಲ ಸ್ಥಾನವನ್ನು ಹೊಂದಿದ್ದು, (ಶೇ ೨೭.೭೨ ರಷ್ಟು) ಜಿಲ್ಲೆಯ ನರಗುಂದ ತಾಲೂಕು (ಶೇ ೯.೩೫ ರಷ್ಟು) ಆತೀ ಚಿಕ್ಕ ತಾಲೂಕಾಗಿದೆ. ಗದಗ ಜಿಲ್ಲೆಯ ಆಡಳಿತ ಕೇಂದ್ರವಾಗಿದ್ದು ಜಿಲ್ಲೆಯ ಬಹುತೇಕ ಮಧ್ಯದಲ್ಲಿದೆ.

೨೦೧೧ರ ಜನಗಣತಿಯ ಪ್ರಕಾರ **೧೦,೬೫,೨೩೫** ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು,[೭] (೨೦೦೧ರ ಜನಗಣತಿಯ ಪ್ರಕಾರ ೯,೨೭,೦೦೦ ಲಕ್ಷ ಜನಸಂಖ್ಯೆಯನ್ನು ಹೊಂದಿದೆ). ಇದರಲ್ಲಿ ೫,೩೮.೪೭೭ ಲಕ್ಷ ಪುರುಷರು ಮತ್ತು ೫,೨೬,೭೫೮ ಲಕ್ಷ ಮಹಿಳೆಯರು ಇರುತ್ತಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆ **೧೦,೬೫,೨೩೫** ಲಕ್ಷ ಅಂದರೆ ೬೪.೩೫% ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿ,

ಉಳಿದ ಶೇ. ೩೫.೬೫%ರಷ್ಟು ಜನರು ನಗರ ಪ್ರದೇಶದಲ್ಲಿ ವಾಸಿಸುತ್ತಾರೆ. ಜಿಲ್ಲೆಯ ಒಟ್ಟು ಸಾಕ್ಷರತಾ ಪ್ರಮಾಣ ೭೧.೮೯%ರಷ್ಟಿದೆ.[೮]

| ವಿವರಣೆ | ೨೦೧೧ | ೨೦೦೧ |
|---|---|---|
| ಜನಸಂಖ್ಯೆ | ೧,೦೬೫,೨೩೫ | ೯೭೧,೮೩೫ |
| ಗಂಡು | ೫೩೮,೪೭೭ | ೪೯೩,೫೩೩ |
| ಹೆಣ್ಣು | ೫೨೬,೭೫೮ | ೪೭೮,೩೦೨ |
| ಜನಸಂಖ್ಯೆ ಬೆಳವಣಿಗೆ | ೯.೬೧% | ೧೩.೧೩% |
| ವಿಸ್ತೀರ್ಣ (ಪ್ರತಿ ಚ.ಕಿ.ಮೀ.) | ೪,೬೫೧ | ೪,೬೫೧ |
| ಜನಸಾಂದ್ರತೆ ಪ್ರತಿ ಕಿ.ಮೀ. | ೨೨೯ | ೨೦೯ |
| ಅನುಪಾತ | ೧.೭೪% | ೧.೮೪% |

### ೨.೧.೪. ಮಣ್ಣುಗಳು

ಗದಗ ಜಿಲ್ಲೆಯಲ್ಲಿ ಕಂಡು ಬರುವ ಮಣ್ಣನ್ನು ಕಪ್ಪು ಮತ್ತು ಕೆಂಪ್ಪು ಮಣ್ಣು ಎಂದು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು.

**ಕಪ್ಪು ಮಣ್ಣು**

ಜಿಲ್ಲೆಯ ಬಹಳಷ್ಟು ಪ್ರದೇಶವು ಕಪ್ಪು ಮಣ್ಣಿನಿಂದ ಕೂಡಿದ್ದು, ಮೈದಾನದಿಂದ ಕೂಡಿದ ಗದಗ, ನರಗುಂದ, ರೋಣದ ಪೂರ್ವಭಾಗ, ಶಿರಹಟ್ಟಿ ತಾಲೂಕಿನ ಪಶ್ಚಿಮ ಭಾಗ, ಮುಂಡರಗಿ ತಾಲೂಕಿನ ಉತ್ತರಭಾಗದಲ್ಲಿ ಕಂಡುಬರುತ್ತದೆ. ಜೋಳ, ಗೋಧಿ, ಹತ್ತಿ, ಮೆಣಸಿನಕಾಯಿ, ಕುಸಬೆ, ಕಡಲೆ ಮತ್ತು ಎಳ್ಳು ಬೆಳೆಗಳನ್ನು ಬೆಳೆಯುತ್ತಾರೆ.

**ಕೆಂಪುಮಣ್ಣು**

ಮರಳು ಮಿಶ್ರಿತ ಕೆಂಪು ಮಣ್ಣು ಜಿಲ್ಲೆಯ ಶಿರಹಟ್ಟಿ ಹಾಗೂ ಮುಂಡರಗಿಯ ದಕ್ಷಿಣ ಭಾಗದಲ್ಲಿ ಹೆಚ್ಚಾಗಿದ್ದು, ನೈಸ್‌ಶಿಲೆ ಮತ್ತು ಗ್ರಾನೈಟ್ ಶಿಲೆಗಳಿಂದ ರೂಪುಗೊಂಡಿದೆ. ಖುಷ್ಕಿಯಲ್ಲಿ ಜೋಳ, ಹತ್ತಿ, ಶೇಂಗಾ, ದ್ವಿದಳ ಧಾನ್ಯಗಳು, ಮತ್ತು ಎಣ್ಣೆಕಾಳು ಬೆಳೆಗಳನ್ನು ಬೆಳೆದರೆ ನೀರಾವರಿಯಲ್ಲಿ ಹತ್ತಿ, ಶೇಂಗಾ, ಮೆಣಸಿನಕಾಯಿ ಮತ್ತು ತರಕಾರಿಗಳನ್ನು ಬೆಳೆಯಲಾಗುತ್ತದೆ. ಮಣ್ಣು ಆರೋಗ್ಯ ಕೇಂದ್ರ ಜಿಲ್ಲೆಯ ಕೇಂದ್ರ ಸ್ಥಳವಾದ ಗದಗದಲ್ಲಿದ್ದು, ಮಣ್ಣಿನ ಮಾದರಿಗಳನ್ನು ವಿಶ್ಲೇಷಿಸಿ ಬೆಳೆಗಳಿಗೆ

ಅವಶ್ಯಕವಾದ ರಸಗೊಬ್ಬರದ ಪ್ರಮಾಣ, ಮಣ್ಣಿನ ಲವಣಾಂಶ, ಬೆಳೆಗಳ ಮಾದರಿ ಇತ್ಯಾದಿ ತಾಂತ್ರಿಕ ಸಲಹೆ-ಸೂಚನೆಗಳನ್ನು ನೀಡುತ್ತದೆ.

**೨.೧.೫. ವಾಯುಗುಣ**

ಮನುಷ್ಯನ ಪ್ರತಿಯೊಂದು ಚಟುವಟಿಕೆಗಳು ಜೀವನಕ್ರಮ ಉಡುಪು, ಆಹಾರ ಮತ್ತು ವಾಸಸ್ಥಳಗಳು ವಾಯುಗುಣದಿಂದ ನಿರ್ಧರಿಸಲ್ಪಡುತ್ತದೆ. ಒಂದು ಪ್ರದೇಶದ ವಾಯುಗುಣವು ಅಲ್ಲಿನ ಉಷ್ಣಾಂಶ, ಮಳೆ ಮತ್ತು ಗಾಳಿಯನ್ನು ಅವಲಂಬಿಸಿರುತ್ತದೆ. ಕರ್ನಾಟಕವು ೩ ವಿಧವಾದ ವಾಯುಗುಣವನ್ನು ಹೊಂದಿದೆ.

ಗದಗ ಉತ್ತರ ಕರ್ನಾಟಕದ ಒಳನಾಡು ಜಿಲ್ಲೆಯಾಗಿದ್ದು ಕರ್ನಾಟಕದ ಒಳಭಾಗವು ಅತಿಶುಷ್ಕ ಉಷ್ಣವಲಯದ ವಾಯಗುಣ. ಹೀಗೆ ವಾಯುಗುಣವು ವೈವಿಧ್ಯತೆಯಿಂದ ಕೂಡಿದ್ದು, ಉಷ್ಣವಲಯದ ಮಾನ್ಸೂನ್ ವಾಯುಗುಣವನ್ನು ಹೊಂದಿದೆ. ಗದಗ ಜಿಲ್ಲೆ ಹಿತಕರ ಮತ್ತು ಆರೋಗ್ಯಕರವಾದ ವಾಯುಗುಣವನ್ನು ಹೊಂದಿದೆ.

ಜಿಲ್ಲೆಯಲ್ಲಿ ಕಂಡುಬರುವ ವಾಯುಗುಣ ಲಕ್ಷಣಗಳನ್ನು ಆಧರಿಸಿ ೪ ವಿಭಾಗಗಳಾಗಿ ವಿಂಗಡಿಸಲಾಗಿದೆ. ಅವು ಮುಂಗಾರು ಮಳೆಗಾಲ ಅಥವಾ ನೈರುತ್ಯ ಮಾನ್ಸೂನ್, ಜೂನ್‌ನಿಂದ ಸೆಪ್ಟಂಬರ್‌ವರೆಗಿನ ಅವಧಿಯ ಮುಂಗಾರು ಮಳೆಗಾಲವಾಗಿದ್ದು ಜಿಲ್ಲೆಯಲ್ಲಿ ತಂಪಾದ ಮತ್ತು ಆದ್ರತೆಯಿಂದ ಕೂಡಿದ ವಾಯುಗುಣವಿದ್ದು ವಾರ್ಷಿಕ ಶೇಕಡಾ ೫೬ರಷ್ಟು ಮಳೆ ಬೀಳುತ್ತದೆ.[೯] ಜೂನ್, ಜುಲೈ ಮತ್ತು ಸಪ್ಟಂಬರ್ ತಿಂಗಳಿನಲ್ಲಿ ಹೆಚ್ಚು ಮಳೆ ಬಿಳುವ ತಿಂಗಳುಗಳಾಗಿದ್ದು, ಇವುಗಳಲ್ಲಿ ಸೆಪ್ಟಂಬರ್ ಅತೀ ಹೆಚ್ಚು ವಾಡಿಕೆಯ ಮಳೆ ಬಿಳುವ ತಿಂಗಳಾಗಿದೆ. ಶೇಂಗಾ, ಕೆಂಜೋಳ, ಮೆಣಸಿನಕಾಯಿ, ಗೋವಿನಜೋಳ, ಈರುಳ್ಳಿ, ಹೆಸರು, ತೊಗರಿ ಪ್ರಮುಖ ಮುಂಗಾರು ಬೆಳೆಗಳಾಗಿವೆ.

**ಹಿಂಗಾರು ಮಳೆಗಳು**

ಜಿಲ್ಲೆಯಾದ್ಯಂತ ಅಕ್ಟೋಬರ್ ಮತ್ತು ನವ್ಹೆಂಬರ್ ತಿಂಗಳುಗಳು ಹಿಂಗಾರು ಮಳೆಗಾಲದಿಂದ ಕೂಡಿದ್ದು, ಈಶಾನ್ಯ ಗಾಳಿಯಿಂದ ಮಳೆ ಪಡೆಯುತ್ತದೆ. ಈ ಮಳೆ ಹಿಂಗಾರು ಬೆಳೆಗಳಾದ ಗೋದಿ, ಹತ್ತಿ, ಬಿಳಿಜೋಳ, ಕಡಲೆ, ಕುಸಬಿ ಬೆಳೆಗಳಿಗೆ ಹೆಚ್ಚು ಅನುಕೂಲಕರವಾಗಿರುತ್ತವೆ. ಕೆಲವೊಂದು ಅವಧಿಯಲ್ಲಿ ಪ್ರತಿಕೂಲ ವಾಯುಗುಣದಿಂದಾಗಿ (ಆವರ್ತ ಗಾಳಿಯಿಂದಾಗಿ) ಸುರಿಮಳೆ ಬೀಳುವುದುಂಟು. ವಾರ್ಷಿಕ ಶೇಕಡಾ ೨೫ರಷ್ಟು ಮಳೆ ಈ ಅವಧಿಯಲ್ಲಿ ಬೀಳುತ್ತದೆ.

ಜಿಲ್ಲೆಯ ವಾಡಿಕೆ ಮಳೆಯ ಪ್ರಮಾಣ ೬೩೧ ಮಿ.ಮೀ ಗಳಾಗಿದ್ದು ೨೦೦೭ ರಲ್ಲಿ ವಾಸ್ತವಿಕ ಮಳೆ ಸರಾಸರಿ ೮೫೯ ಮಿ.ಮೀ ಗಳಾಗಿದ್ದು, ವಾಡಿಕೆ ಮಳೆ ಪ್ರಮಾಣಕ್ಕಿಂತ ಶೇ.೧೭ರಷ್ಟು

ಹೆಚ್ಚಾಗಿರುತ್ತದೆ. ಗದಗ ತಾಲೂಕಿನಲ್ಲಿ ೭೭೫.೫, ಮುಂಡರಗಿ ತಾಲೂಕಿನಲ್ಲಿ ೫೫೨.೮, ನರಗುಂದ ತಾಲೂಕಿನಲ್ಲಿ ೬೬೨.೪, ರೋಣ ತಾಲೂಕಿನಲ್ಲಿ ೯೧೪.೦, ಶಿರಹಟ್ಟಿ ತಾಲೂಕಿನಲ್ಲಿ ೫೭೧.೭ ಮಿ.ಮೀ ಮಳೆ ದಾಖಲಾಗಿರುತ್ತದೆ.[೧೦] ಮಳೆಯ ಹಂಚಿಕೆಯ ಸರಾಸರಿ ದಿನಗಳು ಪಶ್ಚಿಮದಿಂದ ಪೂರ್ವಕ್ಕೆ ಕಡಿಮೆಯಾಗಿರುತ್ತವೆ. ಜಿಲ್ಲೆಯಲ್ಲಿ ಒಟ್ಟು ೧೬ ವೃಷ್ಟಿ ಮಾಪಕ ಕೇಂದ್ರಗಳಿವೆ.

**ಚಳಿಗಾಲ**

ಡಿಸೆಂಬರ್ ಮತ್ತು ಫೆಬ್ರವರಿ ಮಧ್ಯಭಾಗದ ಅವಧಿಯು ಚಳಿಗಾಲದಿಂದ ಕೂಡಿದ್ದು, ಹೆಚ್ಚು ಚಳಿ ಮತ್ತು ಅತಿ ಉಷ್ಣಾಂಶದಿಂದ ಕೂಡಿದರೆ ಮಧ್ಯಮ ವಾಯುಸ್ಥಿತಿಯನ್ನು ಹೊಂದಿ ಹಿತಕರವಾಗಿರುವುದು. ಕೆಲವೊಂದು ಅವಧಿಯಲ್ಲಿ ತುಂತುರು ಮಳೆ ಬೀಳುವುದುಂಟು, ಜಿಲ್ಲೆಯ ಬಹುಭಾಗಗಳಲ್ಲಿ ಬೆಳಗಿನ ಜಾವ ಇಬ್ಬನಿ ಬೀಳುತ್ತದೆ. ಹಿಂಗಾರು ಬೆಳೆಗಳಾದ ಬಿಳಿಜೋಳ, ಹತ್ತಿ, ಕಡಲೆ ಮತ್ತು ಗೋದಿಗೆ ಇಬ್ಬನಿ ಹೆಚ್ಚು ಅನುಕೂಲಕರವಾಗಿದ್ದು ಶೇಕಡಾ ೨ರಷ್ಟು ಮಳೆ ಈ ಅವಧಿಯಲ್ಲಿ ಜಿಲ್ಲೆಯಾದ್ಯಂತ ಬೀಳುತ್ತದೆ.

**ಬೇಸಿಗೆ**

ಫೆಬ್ರುವರಿ ಮಧ್ಯಭಾಗದಿಂದ ಮೇ ಅವಧಿಯು ಬೇಸಿಗೆಯಿಂದ ಕೂಡಿದ್ದು, ಮಾರ್ಚ್ ಆರಂಭದಿಂದ ಉಷ್ಣಾಂಶವು ಗರಿಷ್ಟ ಮಟ್ಟವನ್ನು ತಲುಪುವುದು. ಏಪ್ರಿಲ್ ಮತ್ತು ಮೇ ಹೆಚ್ಚು ಉಷ್ಣಾಂಶದಿಂದ ಕೂಡಿದ ತಿಂಗಳುಗಳಾಗಿದ್ದು ಗರಿಷ್ಠ ಉಷ್ಣಾಂಶ ೩೬.೫° ಸೆಲ್ಸಿಯಸ್‌ಗಳಷ್ಟಿದ್ದರೆ[೧೧] ಕನಿಷ್ಠ ಉಷ್ಣಾಂಶ ೨೨.೫° ಸೆಲ್ಸಿಯಸ್‌ನಿಂದ ೨೭.೬° ಸೆಲ್ಸಿಯಸ್‌ಗಳಷ್ಟಿರುತ್ತದೆ. ಸರಾಸರಿ ಹೆಚ್ಚು ಉಷ್ಣಾಂಶ (೩೭.೧ ಸೆಲ್ಸಿಯಸ್) ಏಪ್ರಿಲ್‌ನಲ್ಲಿ ಕಂಡುಬಂದರೆ, ಕಡಿಮೆ ಉಷ್ಣಾಂಶ (೧೬.೫° ಸೆಲ್ಸಿಯಸ್) ಡಿಸೆಂಬರ್‌ನಲ್ಲಿ ಕಂಡುಬರುತ್ತದೆ. ವಾರ್ಷಿಕ ಮಳೆಯ ಶೇಕಡಾ ೧೭ರಷ್ಟು ಈ ಅವಧಿಯಲ್ಲಿ ಬೀಳುತ್ತದೆ.

**೨.೧.೬. ಜಲಸಂಪತ್ತು**

ಪ್ರಕೃತಿಯ ಎದೆಯಿಂದಿಕ್ಕಿ ಜೀವ ಸೆಲೆಯಂತೆ ಹರಿಯುವ ನದಿ-ಹಳ್ಳ, ಕೊಳ್ಳಗಳು ಮಾನವನ ನಾಗರಿಕತೆಗೆ ನಾಂದಿ ಹಾಡುವಲ್ಲಿ ಪ್ರಮುಖವಾಗಿವೆ. ಗದಗ ಜಿಲ್ಲೆಯು ರಾಜ್ಯದ ಉತ್ತರ ಭಾಗಕ್ಕೆ ಇದ್ದು, ಮೈದಾನ ಪ್ರದೇಶದಿಂದ ಕೂಡಿದೆ. ಇದು ಸಮಭಾಜಕ ವೃತ್ತಕ್ಕೆ ಹತ್ತಿರದಲ್ಲಿರುವುದರಿಂದ ಅಧಿಕ ಉಷ್ಣತೆಯ ವಾಯುಗುಣವನ್ನು ಹೊಂದಿದೆ. ಜಿಲ್ಲೆಯಲ್ಲಿ ಕಡಿಮೆ ಪ್ರಮಾಣದ ಮಳೆ ಬಿದ್ದರೂ ಪಶ್ಚಿಮಘಟ್ಟಗಳಲ್ಲಿ ಹುಟ್ಟುವ ನದಿಗಳು ಇಲ್ಲಿ ಹರಿದು ಬರುತ್ತಿರುವುದರಿಂದ ಜಲಸಂಪತ್ತು ಹೆಚ್ಚಿದೆ. ಇಲ್ಲಿ ಮಳೆ ಅನಿಯಮಿತವಾಗಿ ಮತ್ತು ಅನಿಶ್ಚಿತತೆಯಿಂದ ಕೂಡಿದೆ. ತುಂಗಭದ್ರಾ, ಮಲಪ್ರಭಾ ಮತ್ತು ಬೆಣ್ಣೆಹಳ್ಳ ನದಿಗಳು ಗದಗ ಜಿಲ್ಲೆಯಲ್ಲಿ ಹರಿಯುತ್ತವೆ. ಈ ನದಿಗಳ ಮೂಲದಿಂದ ಅನೇಕ ಕೆರೆ-ಬಾವಿಗಳು ಜನ್ಮತಾಳಿವೆ. ಇವುಗಳಿಂದ ಇಂದು ಕೃಷಿಯಲ್ಲಿ ಮುನ್ನಡೆ ಸಾಧಿಸಿದೆ.

**ತುಂಗಭದ್ರಾ**

ತುಂಗಭದ್ರಾ ನದಿಯು ಕರ್ನಾಟಕದ ಮಧ್ಯಭಾಗದ ಪ್ರಮುಖ ನದಿಯಾಗಿದೆ. ಮೂಲತಃ ತುಂಗಾ ಮತ್ತು ಭದ್ರಾ ಎಂಬ ಎರಡು ಪ್ರಮುಖ ನದಿಗಳಾಗಿ ಪಶ್ಚಿಮಘಟ್ಟಗಳ ವರಹಾ (ಗಂಗಾ ಮೂಲ) ಬೆಟ್ಟದಲ್ಲಿ ೧೧೯೮ ಮೀಟರ್ ಎತ್ತರದಲ್ಲಿ ಹುಟ್ಟಿ ಈಶಾನ್ಯ ಅಭಿಮುಖವಾಗಿ ಪ್ರತ್ಯೇಕವಾಗಿ ಹರಿಯುವ ತುಂಗಾ ಮತ್ತು ಭದ್ರಾ ನದಿಗಳು ಶಿವಮೊಗ್ಗ ಜಿಲ್ಲೆಯ 'ಕೂಡಲಿ' ಎಂಬಲ್ಲಿ ಸಂಗಮಗೊಂಡು ತುಂಗಭದ್ರಾ ನದಿಯಾಗಿ ಶಿವಮೊಗ್ಗ ಜಿಲ್ಲೆಯನ್ನು ಬಿಡುವವರೆಗೂ ಉತ್ತರಗಾಮಿನಿಯಾಗಿದೆ. ಕರ್ನಾಟಕ ರಾಜ್ಯವನ್ನು ಬಿಡುವವರೆಗೂ ಎಡಭಾಗದಲ್ಲಿ ಹಾವೇರಿ, ಗದಗ, ಕೊಪ್ಪಳ, ರಾಯಚೂರು ಜಿಲ್ಲೆಗಳಿಗೂ ಬಲಭಾಗದಲ್ಲಿ ದಾವಣಗೆರೆ, ಬಳ್ಳಾರಿ ಜಿಲ್ಲೆಗಳ ಗಡಿರೇಖೆಯಾಗಿ ಹರಿದು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಆಲಂಪುರ ಎಂಬಲ್ಲಿ ಕೃಷ್ಣಾ ನದಿಯನ್ನು ಸೇರುತ್ತದೆ.

ತುಂಗಭದ್ರಾ ನದಿಯಿಂದ ಶಿರಹಟ್ಟಿ ಮತ್ತು ಮುಂಡರಗಿ ತಾಲೂಕುಗಳ ರೈತರಿಗೆ ವ್ಯವಸಾಯಕ್ಕೆ ಸಹಕಾರಿಯಾಗಿದೆ. ಕರ್ನಾಟಕದಲ್ಲಿ ತುಂಗಭದ್ರಾ ನದಿಯು ಹರಿವಿನ ಒಟ್ಟು ಉದ್ದ ೪೦೩ ಕಿ.ಮೀ. ಕೂಡಲಿಯಿಂದ ಬಳ್ಳಾರಿ ಜಿಲ್ಲೆಯನ್ನು ತಲುಪುವವರೆಗೂ ಕಡಿದಾದ ಎತ್ತರ ದಂಡೆಗಳ ಮಧ್ಯೆ ಹರಿದು ಬರುತ್ತದೆ. ನದಿಯ ಪಾತ್ರ ಸುಮಾರು ೧೦೦ ರಿಂದ ೨೦೦ ಮೀಗಳಷ್ಟು ಅಗಲವಾಗಿದ್ದು ಬಹುತೇಕ ಬಂಡೆಗಳಿಂದ ಕೂಡಿದೆ.

**ಮಲಪ್ರಭಾ**

ಮಲಪ್ರಭಾ ನದಿಯು ಉತ್ತರ ದಿಕ್ಕಿಗೆ ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳನ್ನು ಸುಮಾರು ೩೨ ಕಿಮೀ ದೂರದವರೆಗೆ ವಿಂಗಡಿಸಲು ಗಡಿಯಾಗಿ ಪೂರ್ವಾಭಿಮುಖವಾಗಿ ಹರಿಯುವುದು. ಮಲಪ್ರಭಾ ನದಿಯು ಕೃಷ್ಣಾ ನದಿಯ ಉಪನದಿ. ಈ ನದಿಗೆ ಮಲಪಹಾರಿಣಿ, ಮಾಲಿನಿ ಎಂಬ ಹೆಸರುಗಳು ಇವೆ. ಬೆಳಗಾವಿ ಜಿಲ್ಲೆಯ ಸಹ್ಯಾದ್ರಿಯ ಶಿಖರದ ಕಣಕುಂಬಿಯಲ್ಲಿ ಉಗಮಿಸುವ ಈ ನದಿಯು ಬೆಳಗಾವಿ ಜಿಲ್ಲೆಯಲ್ಲಿ ಹರಿದು, ನಂತರ ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳ ಎಲ್ಲೆಯಾಗಿ ಪ್ರವಹಿಸಿ ನಂತರ ಬಿಜಾಪುರ ಜಿಲ್ಲೆಯ ಕೂಡಲಸಂಗಮದ ಬಳಿ ಕೃಷ್ಣಾ ನದಿಯನ್ನು ಸೇರುತ್ತದೆ. ನರಗುಂದ ತಾಲೂಕಿನ ಹಡಗಲಿ ಗ್ರಾಮದ ಹತ್ತಿರ ಈಶಾನ್ಯಾಭಿಮುಖವಾಗಿ ಬಿಜಾಪುರ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಈ ನದಿಗೆ ಹೊಳೆಆಲೂರು ಬಳಿ ಸೇರುವ ಬೆಣ್ಣೆಹಳ್ಳವು ಶಿಗ್ಗಾಂವ ತಾಲೂಕಿನ ಧುಂಡಶಿ ಗ್ರಾಮದ ಹತ್ತಿರ ಹುಟ್ಟಿ ಹುಬ್ಬಳ್ಳಿ, ನವಲಗುಂದ ಮತ್ತು ರೋಣ ತಾಲೂಕುಗಳಲ್ಲಿ ಉತ್ತರಾಭಿಮುಖವಾಗಿ ಒಟ್ಟು ೧೯೨ ಕಿಮೀ. ದೂರ ಹರಿದು, ಮೆಣಸಗಿ ಹತ್ತಿರ ಮಲಪ್ರಭಾ ನದಿಯನ್ನು ಸೇರುತ್ತದೆ. ಹಿರೇಹಳ್ಳವು

ಉತ್ತರಾಭಿಮುಖವಾಗಿ ಗದಗ ಹಾಗೂ ರೋಣ ತಾಲೂಕುಗಳಲ್ಲಿ ಹರಿದು ಬೇಲೇರಿಯ ಹತ್ತಿರ ಮಲಪ್ರಭಾ ನದಿಯನ್ನು ಸೇರುತ್ತದೆ. ಮಲಪ್ರಭಾ ನದಿಯ ಒಟ್ಟು ಉದ್ದ ಸುಮಾರು ೩೩೦ ಕಿ.ಮೀ. ಸವದತ್ತಿ ಬಳಿಯ ನವಿಲುತೀರ್ಥ ಜಲಾಶಯದಿಂದ ನವಲಗುಂದ, ನರಗುಂದ, ರೋಣ, ತಾಲೂಕುಗಳಿಗೆ ವ್ಯವಸಾಯಕ್ಕಾಗಿ ನೀರನ್ನು ಬಳಸುತ್ತಾರೆ.

ಈ ಭಾಗದಲ್ಲಿ ಮಳೆ ಬೀಳದೇ ಬರಗಾಲದಿಂದ ತತ್ತರಿಸಿರುವ ಜನತೆಗೆ ಮಲಪ್ರಭಾ ಯೋಜನೆಯ ವರಪ್ರಧಾನವಾಗಿ, ಪರಿಣಮಿಸುವದರಲ್ಲಿ ಎರಡು ಮಾತಿಲ್ಲ. ಇದಲ್ಲದೆ ಈ ಜಿಲ್ಲೆಯಲ್ಲಿ ಅನೇಕ ಕೆರೆ-ಬಾವಿಗಳು ಕಂಡುಬರುತ್ತವೆ. ಇವುಗಳಿಂದ ೭೬೬೧ ಎಕರೆ ಭೂಮಿ ನೀರಾವರಿಗೆ ಒಳಪಡುತ್ತದೆ.

**೨.೧.೭. ಖನಿಜ ಸಂಪತ್ತು**

ಗದಗ ಜಿಲ್ಲೆಯಲ್ಲಿ ಐದು ತಾಲೂಕುಗಳಿವೆ. ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ತಾಲೂಕಿನ ಪ್ರತಿಶತ ಕ್ಷೇತ್ರ ಹೀಗಿದೆ. ೧) ಶಿರಹಟ್ಟಿ ೧೨೯೪೩ (ಹೆ) (೧೧.೨೪%), ೨) ಗದಗ ೧೭೪೯ (ಹೆ) (೧.೫೨%), ೩) ಮುಂಡರಗಿ ೧೭೬೪೬ (ಹೆ) (೧೫.೩೨%), ೪) ರೋಣ ೨೭೬ (ಹೆ) (೦.೨೪%), ೫) ನರಗುಂದ ವಿರಳವಾಗಿದೆ. ಕರ್ನಾಟಕದ ೨೭ ಜಿಲ್ಲೆಗಳ ಒಟ್ಟು ವಿಸ್ತೀರ್ಣದಲ್ಲಿ ೨೩ನೇ ಸ್ಥಾನವನ್ನು ಪಡೆದಿದೆ. ಹೀಗಾಗಿ ಜಿಲ್ಲೆಯ ಖನಿಜಗಳು ಮತ್ತು ವಾರ್ಷಿಕ ಉತ್ಪನ್ನ ಬಹಳ ಕಡಿಮೆಯಾಗಿದೆ. ಆದಾಗ್ಯೂ ಜಿಲ್ಲೆಯ ಮುಖ್ಯ ಖನಿಜಗಳೆಂದರೆ, ಕಬ್ಬಿಣ, ಮ್ಯಾಂಗನೀಸ್, ಚಿನ್ನ. ಇತರೆ ಖನಿಜಗಳೆಂದರೆ ಜೇಡಿಮಣ್ಣು (ಬಿಳಿ), ಬಳಪದಕಲ್ಲು, ಸುಣ್ಣದಕಲ್ಲು, ಮತ್ತು ಬೆಣಚುಕಲ್ಲು, ಹಾಗೂ ಫೌಂಡ್ರಿ ಮರಳು ಮುಖ್ಯವಾಗಿವೆ. ಜಿಲ್ಲೆಯಲ್ಲಿ ಕೇವಲ ಮೂರು ಗಣಿಗಳು ಮಾತ್ರ ಪರವಾನಗಿ ಹೊಂದಿದ್ದು, ಎರಡು ಗಣಿಗಳು ಕಬ್ಬಿಣದ ಅದಿರಿಗಾಗಿ ಮತ್ತು ಒಂದು ಬೆಣಚುಕಲ್ಲಿಗಾಗಿ ಇವೆ. ಆದರೆ ಇವುಗಳು ಸರಿಯಾಗಿ ನಡೆಯುತ್ತಿಲ್ಲ. ಕಾರಣವೆಂದರೆ ಇಲ್ಲಿಯ ಅದಿರಿನಲ್ಲಿ ಕಬ್ಬಿಣದ ಅಂಶ ಕಡಿಮೆ ಇದೆ. ಸುಮಾರು ೪೨ ರಿಂದ ೫೨% ಇದ್ದು ಅದಿರಿಗೆ ಬೇಡಿಕೆ ಇಲ್ಲ. ಇವುಗಳಲ್ಲಿ ಒಂದು ಗಣಿ ಶಿರಹಟ್ಟಿ ತಾಲೂಕಿನ ಪೂರ್ವದ ಕಪ್ಪತಗುಡ್ಡದಲ್ಲಿದೆ. ಮೊತ್ತೊಂದು ಮುಂಡರಗಿ ತಾಲೂಕಿನಲ್ಲಿದೆ. ಮ್ಯಾಂಗನೀಸ್ ಅದಿರು ಕಬ್ಬಿಣ ಅದಿರಿನ ಕಲ್ಲಿನಿಂದಾದ ಕಪ್ಪತಗುಡ್ಡದ ಮೇಲೆ ಚಿಕ್ಕ ಚಿಕ್ಕ ನಿಕ್ಷೇಪಗಳಿವೆ. ಶಿರಹಟ್ಟಿ ತಾಲೂಕಿನ ದಕ್ಷಿಣ ಗಡಿಯಲ್ಲಿ ತುಂಗಭದ್ರಾ ನದಿ, ಎಡದಂಡೆ ಪ್ರದೇಶದಲ್ಲಿ ವಡವಿ, ತಂಗೋಡ, ಬಾಲೇಹೋಸೂರ ಗ್ರಾಮಗಳ ಪ್ರದೇಶದಲ್ಲಿ ಚಿಕ್ಕ ಚಿಕ್ಕ ಸಾಧಾರಣ ಗುಣಮಟ್ಟದ ಸುಣ್ಣದ ಕಲ್ಲಿನ ನಿಕ್ಷೇಪಗಳಿವೆ.

ಈ ಸುಣ್ಣದ ಹರಳುಗಳು ಹೇರಳವಾಗಿವೆ. ಹರಳುಗಳು ಪೆಂಟೆ(ಶಂಕರ)ಗಳನ್ನು ಸುಟ್ಟು ಸುಣ್ಣ ಮಾಡುವ ಭಟ್ಟಿಗಳು ಈ ಪ್ರದೇಶದಲ್ಲಿವೆ. ಸುಣ್ಣ ತಯಾರಿಸಿ ಮಾರಾಟ ಮಾಡಿ ಜನರು ಜೀವನ

ಸಾಗಿಸುತ್ತಾರೆ. ಜಿಲ್ಲೆಯ ಗದಗ ಮತ್ತು ಶಿರಹಟ್ಟಿ ತಾಲೂಕಿನಲ್ಲಿಯ ಕ್ಲೋರೈಟ್ 'ಶಿಷ್ಟ ಮತ್ತು ಶಿಲೆಗಳನ್ನು' ಗುಡಿಗಳು, ಕೆರೆ ಕಟ್ಟಲು, ಮನೆ ಕಟ್ಟಲು ಉಪಯೋಗಿಸುತ್ತಾರೆ. ಅಲ್ಲದೇ ಶಿರಹಟ್ಟಿ ತಾಲೂಕಿನ ಬೆಳ್ಳಟ್ಟಿ ಸುತ್ತಲಿನ ಗ್ರಾಮಗಳಲ್ಲಿ ಉತ್ತಮ ಬೂದಿ ಬಣ್ಣದ, ಚಿಕ್ಕ ಚಿಕ್ಕ ಹರಳಿನ ಗ್ರಾನೈಟ್ ಶಿಲೆಗಳ ಸಂಕೀರ್ಣಗಳು ಹೇರಳವಾಗಿವೆ. ಲಕ್ಷ್ಮೇಶ್ವರ ಪಟ್ಟಣದ ಸಮೀಪದಲ್ಲಿ ಹಲವಾರು ಗ್ರಾನೈಟ್ ಖಣಿಗಳಿವೆ.

ಜಿಲ್ಲೆಯಾದ್ಯಂತ ಚಿನ್ನದ ನಿಕ್ಷೇಪವು ಬಹಳ ವಿಸ್ತಾರವಾಗಿದೆ. ಬೆಳದಡಿಯಿಂದ ಹಿಡಿದು ಕಡಕೋಳದವರೆಗೆ ಸುಮಾರು ೭೦ ಕಿಲೋಮೀಟರ್ ಮತ್ತು ಸೊರಟೂರನಿಂದ ಜಾಲಿಕಟ್ಟಿಯವರೆಗೆ ಸುಮಾರು ೧೨೦ ಚದರ ಮೀಟರ್ ಪ್ರದೇಶದಲ್ಲಿರುವ ವಿವಿಧ ಬಗೆಯ ಶಿಲೆಗಳಲ್ಲಿ ಧಾರವಾಡ ಸಿಸ್ಟ್‌ಗಳೆಂದು ಕರೆಯುವ 'ಕ್ಲೋರೈಟ್ ಸಿಸ್ಟ್' ಪಟ್ಟಿಗಳು ಬಹಳ ಮುಖ್ಯ. ಈ ಪ್ರದೇಶವನ್ನು ಗುರುತಿಸಿ ಗಣಿಗಾರಿಕೆ ನಡೆದದ್ದು ಇಲ್ಲಿ ಕಾಣುತ್ತೇವೆ. ಈ ಪ್ರದೇಶದಲ್ಲಿ ೧೩ ಬ್ರಿಟಿಷ್ ಕಂಪನಿಗಳು ನಿಗದಿತವಾಗಿ ಸರಕಾರದಿಂದ ಪರವಾನಗಿ ಪಡೆದು ಚಿನ್ನದ ಗಣಿಗಾರಿಕೆ ನಡೆಸಿದ್ದು ಕಾಣುತ್ತೇವೆ.

### ೨.೧.೮. ಕೈಗಾರಿಕೆಗಳು

ಗದಗ ಜಿಲ್ಲೆಯು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದು ಹಳೆಯ ಧಾರವಾಡ ಜಿಲ್ಲೆಯ ಒಂದು ಭಾಗವಾಗಿದ್ದು ಕೈಗಾರಿಕೆ ಉದ್ದಿಮೆಗಳ ದೃಷ್ಟಿಯಲ್ಲಿ ಹಿಂದುಳಿದ ಪ್ರದೇಶವಾಗಿದೆ. ಗದಗವು ಸಾಂಸ್ಕೃತಿಕ ರಂಗದಲ್ಲಿ ಹೆಸರು ಪಡೆದಿದ್ದು, ವ್ಯಾಪಾರ, ಶಿಕ್ಷಣ ಹಾಗೂ ಕಲೆಗಳ ಕೇಂದ್ರವಾಗಿದೆ. ಕವಿ ಶ್ರೀ ಪುಟ್ಟರಾಜ ಗವಾಯಿಗಳ ಸಂಗೀತ ಸೌರಭ, ಶ್ರೀ ತೋಂಟದಾರ್ಯ ಮಠ ಹಾಗೂ ಶ್ರೀ ವೀರನಾರಾಯಣ ಮಂದಿರಗಳು ಗದುಗಿನ ಆಕರ್ಷಣೀಯ ಸ್ಥಳಗಳಾಗಿವೆ. ಗದಗ ಭಾಗದ ಉತ್ಪನ್ನಗಳಾದ ಕೈಮಗ್ಗದ ಸೀರೆ ಹಾಗೂ ಸೀರೆ ಖಣಗಳು ನಾಡಿನಾದ್ಯಂತ ಹೆಸರುವಾಸಿಯಾಗಿವೆ.

ದೇಶದಲ್ಲಿಯೇ ಪ್ರಥಮ ಬಾರಿಗೆ ಸಹಕಾರಿ ಚಳವಳಿಯನ್ನು ಆರಂಭಿಸಿದ್ದುದು ಈ ಜಿಲ್ಲೆಯಲ್ಲಿಯೇ. ಏಷ್ಯಾ ಖಂಡದಲ್ಲಿಯೇ ಪ್ರಪ್ರಥಮ ಸಹಕಾರಿ ಸಂಘವು ಜನ್ಮತಾಳಿರುವುದು ಗದುಗಿನ ಕಣಗಿನಹಾಳ ಗ್ರಾಮದಲ್ಲಿ. ಈ ಜಿಲ್ಲೆಯು ರಾಜ್ಯದ ವಿದ್ಯುತ್ ಉತ್ಪಾದನೆಯಲ್ಲಿ ನವೀನ ಮಾರ್ಗವನ್ನು ತನ್ನದಾಗಿಸಿಕೊಂಡು ಗಾಳಿ ಯಂತ್ರಗಳ ತವರು ಮನೆಯಾಗಿದೆ. ಹಾಗೆಯೇ ಚಿನ್ನದ ಗಣಿಗಾರಿಕೆಗೂ ಅಣಿಯಾಗಿದೆ.

ಜಿಲ್ಲೆಯಲ್ಲಿ ಗದಗ, ಲಕ್ಷ್ಮೇಶ್ವರ, ನರಗುಂದ ಹಾಗೂ ಗಜೇಂದ್ರಗಡ ಭೌದ್ಧಿಕ ಕೇಂದ್ರಗಳಾಗಿ ಬೆಳೆಯುತ್ತಿವೆ. ಜಿಲ್ಲೆಯಾದ್ಯಂತ ಕೃಷಿ ಆಧಾರಿತ ಕೈಗಾರಿಕೆಗಳು ಹೆಚ್ಚಾಗಿ ಸ್ಥಾಪನೆಯಾಗಿದ್ದು, ಹತ್ತಿ, ಎಣ್ಣೆ ಬೀಜಗಳಿಂದ ತೈಲ ಸಂಸ್ಕರಣಾ ಘಟಕಗಳು ಮತ್ತು ಜಿಲ್ಲೆಯ ಮುಂಡರಗಿ ತಾಲೂಕಿನಲ್ಲಿ ಮೃಡಗಿರಿ ಸಹಕಾರಿ ಸಕ್ಕರೆ ಕಾರ್ಖಾನೆಯೊಂದು ಸ್ಥಾಪಿಸಲ್ಪಟ್ಟಿವೆ. ಆ ಭಾಗದ ಕೈಗಾರಿಕಾ ಅಭಿವೃದ್ಧಿಗೆ ಪೂರಕವಾಗುವುದರೊಂದಿಗೆ ಜನರಿಗೆ ಉದ್ಯೋಗಾವಕಾಶ ಕಲ್ಪಿಸಿಕೊಡುವತ್ತ ದಾಪುಗಾಲು

ಹಾಕಿದೆ. ಶಿರಹಟ್ಟಿ, ಮಾಗಡಿ, ಹೆಬ್ಬಾಳ, ಬೆಳ್ಳಟ್ಟಿಯಲ್ಲಿ ಎಣ್ಣೆಯ ಗಿರಣಿಗಳಿವೆ. ನೇಕಾರಿಕೆಯು ಪ್ರಮುಖ ಉದ್ಯೋಗ ಶಿಗ್ಲಿ, ಲಕ್ಷ್ಮೇಶ್ವರಗಳಲ್ಲಿ ನಡೆಯುತ್ತದೆ. ಜಿಲ್ಲೆಯ ಲಕ್ಷ್ಮೇಶ್ವರ ಪಟ್ಟಣವು ಚಾಲುಕ್ಯರ ಕಾಲದಲ್ಲಿ ರೇಷ್ಮೆ ಬಟ್ಟೆಗಳ ನೇಯ್ಗೆಗಾಗಿ ಹೆಸರುವಾಸಿಯಾಗಿತ್ತು. ಹಾಗೆಯೇ ಗದಗ, ನರೇಗಲ್ಲ, ಅಬ್ಬಿಗೇರಿ, ಕೊಂಡಿಕೊಪ್ಪ, ಲಕ್ಷ್ಮೇಶ್ವರ, ಡಂಬಳ, ಲಕ್ಕುಂಡಿ ಪ್ರದೇಶಗಳು ತೈಲ ಉದ್ದಿಮೆಯಲ್ಲಿ ನಿರತರಾಗಿರುತ್ತಾರೆ.

ಲಕ್ಕುಂಡಿ ಗ್ರಾಮವು ಜಿಲ್ಲೆಯ ಪ್ರಮುಖ ಐತಿಹಾಸಿಕ ಸ್ಥಳವಾಗಿದೆ. ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ನಾಣ್ಯ ತಯಾರಿಸುವ ಟಂಕಸಾಲೆಯೊಂದು ಇಲ್ಲಿ ಇತ್ತೆಂದೂ ತಿಳಿದುಬರುತ್ತದೆ. ರೇಷ್ಮೆ ಬಟ್ಟೆಗೆ ಬಣ್ಣ ಹಾಕುವ ವೃತ್ತಿಯಲ್ಲಿ ತೊಡಗಿ ಶ್ರೀಮಂತರಾಗಿದ್ದರೆಂಬುದು, ಕಂಚು, ತಾಮ್ರ, ಹಿತ್ತಾಳಿಯ ಕೆಲಸದ ಕಸುಬುದಾರರು ಹೆಸರುವಾಸಿಯಾಗಿದ್ದರೆಂದು ಇತಿಹಾಸದಲ್ಲಿ ಉಲ್ಲೇಖಗಳಿವೆ. ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ ಹಾಗೂ ಬೆಳಗಟ್ಟಿಯಲ್ಲಿ ಕಲ್ಲಿನ ಹಾಗೂ ಮೃದು ಕಲ್ಲಿನ ಪಾತ್ರೆಗಳ ತಯಾರಿಕೆ ನಡೆಯುತ್ತಿತ್ತು. ಹಾಗೆಯೇ ಬೀಡಿ ಸುತ್ತುವ ಉದ್ಯಮವು ಪ್ರಮುಖ ಗೃಹಕೈಗಾರಿಕೆಯಾಗಿದೆ. ರೋಣ ಹಾಗೂ ಬೆಟಗೇರಿಯ ಖಾದಿ ಗ್ರಾಮೋದ್ಯೋಗ ಕೇಂದ್ರವು ನೂರಾರು ಜನರಿಗೆ ಉದ್ಯೋಗ ನೀಡಿದೆ. ಮುದ್ರಣಾಲಯಗಳಿಗೆ ಗದಗ ರಾಜ್ಯದಲ್ಲಿ ಪ್ರಖ್ಯಾತಿ ಪಡೆದಿದೆ.

### ೨.೧.೯. ಅರಣ್ಯ

ಸಸ್ಯವರ್ಗಗಳು ಅಥವಾ ಅರಣ್ಯಗಳು ಪರಿಸರದ ಒಂದು ಅವಿಭಾಜ್ಯ ಅಂಗಗಳಾಗಿದ್ದು, ಪ್ರಾಕೃತಿಕ ಪರಿಸರವನ್ನು ನಿರ್ಮಾಣ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅನಾದಿ ಕಾಲದಿಂದಲೂ ಮಾನವರ ಬದುಕಿನಲ್ಲಿ ಸಸ್ಯವರ್ಗಗಳು ಮಹತ್ವವುಳ್ಳದ್ದಾಗಿದೆ. ಎಲ್ಲಿ ಗಿಡಮರಗಳು ಸಮೃದ್ಧವಾಗಿದೆಯೇ ಅಲ್ಲಿ ಮಾನವರ ಸಂಸ್ಕೃತಿ, ನಾಗರಿಕತೆಗಳ ಉದ್ಭವ, ಉದ್ದೀಪನ ಹಾಗೂ ಪುರೋಭಿವೃದ್ಧಿಯಾಗಿದೆ. ಜಿಲ್ಲೆಯಲ್ಲಿ ೩೨೬೧೪ ಹೆಕ್ಟೇರ್ ಪ್ರದೇಶವು ಅರಣ್ಯದಿಂದ ಆವೃತವಾಗಿದ್ದು, ಇದು ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶದ ಶೇಕಡಾ ೭ರಷ್ಟು ಆಗಿರುತ್ತದೆ. ಜಿಲ್ಲೆಯಲ್ಲಿ ಮುಂಡರಗಿ ಅತಿಹೆಚ್ಚು (೧೭೬೪೬ ಹೆಕ್ಟೇರ್) ಅರಣ್ಯ ಪ್ರದೇಶವನ್ನು ಹೊಂದಿದ ತಾಲೂಕಾಗಿದೆ. ನರಗುಂದ ಅರಣ್ಯರಹಿತ ತಾಲೂಕಾಗಿದೆ. ಇಲ್ಲಿನ ಅರಣ್ಯಗಳು ಸೌದೆಗೆ ಮತ್ತು ದನಗಳನ್ನು ಮೇಯಿಸುವುದಕ್ಕೆ ಉಪಯುಕ್ತವಾಗಿವೆ.[೨] ಈ ಜಿಲ್ಲೆಯ ಕಪ್ಪತಗುಡ್ಡ ಮತ್ತು ಇತರಡೆಗಳಲ್ಲಿ ನರಿ, ನವಿಲು, ತೋಳ, ಮೊಲ, ಕಾಡು ಬೆಕ್ಕುಗಳು ವಿಶೇಷವಾಗಿ ಗೋಚರಿಸುತ್ತವೆ. ಎತ್ತು, ಎಮ್ಮೆ, ಆಕಳು, ಕುರಿ, ಕೋಳಿ, ನಾಯಿ, ಬೆಕ್ಕು ಮುಂತಾದ ಸಾಕು ಪ್ರಾಣಿಗಳಾಗಿವೆ. ಮಾಗಡಿ ಕೆರೆಗೆ ಅನೇಕ ಬಗೆಯ ಪಕ್ಷಿಗಳು ವಲಸೆ ಬರುತ್ತವೆ.

ಅರಣ್ಯ ಉಳಿಸುವುದರ ಸಲುವಾಗಿ ಮುಂಡರಗಿಯ ವಿಶ್ವಸಂಘ ಪರಿಸರ ಸಂರಕ್ಷಣಾ ಸಂಘದ ಜನ ಜಾಗೃತಿ ಮೂಡಿಸುವ ಕಾರ್ಯಕ್ರಮಗಳ ಜೊತೆಗೆ ಬೀದಿ ನಾಟಕಗಳ ಮೂಲಕ ಪರಿಣಾಮಕಾರಿ ಕೆಲಸ ಮಾಡುತ್ತಿದೆ.

## ೨.೧.೧೦. ಕೃಷಿ ಮತ್ತು ನೀರಾವರಿ

ಜಿಲ್ಲೆಯ ಪ್ರಮುಖ ಉದ್ಯೋಗ ಕೃಷಿ ಆಗಿದ್ದು, ಒಟ್ಟು ಜನಸಂಖ್ಯೆಯ ಶೇಕಡಾ ೬೦ ರಷ್ಟು ಜನರು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಒಟ್ಟು ಭೌಗೋಳಿಕ ಪ್ರದೇಶದ ಶೇ ೭೫.೮೭ರಷ್ಟು ಪ್ರದೇಶವು ಕೃಷಿ ಪ್ರದೇಶಕ್ಕೆ ಒಳಪಟ್ಟಿರುತ್ತದೆ. ೯೬ ಸಾವಿರ ಹೆಕ್ಟೇರ್ ಭೂಮಿ ಸಾಗುವಳಿಗೆ ಒಳಪಟ್ಟಿದ್ದು, ಇದರಲ್ಲಿ ಜೋಳ, ಗೋದಿ, ಮೆಕ್ಕೆಜೋಳ, ನೆಲಗಡಲೆ, ಸೂರ್ಯಕಾಂತಿ, ಈರುಳ್ಳಿ, ಮೆಣಸಿನಕಾಯಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಜಿಲ್ಲೆಯಲ್ಲಿರುವ ಭೌಗೋಳಿಕ ಸ್ಥಿತಿ ಮಳೆ, ಹವಾಮಾನ ಮತ್ತು ಮಣ್ಣು ವೈವಿಧ್ಯತೆಗಳಿಂದಾಗಿ ಎರಡು ಕೃಷಿ ವಲಯಗಳನ್ನು ಹೊಂದಿದೆ. ಶೇ. ೮೦ರಷ್ಟು ಕಪ್ಪುಮಣ್ಣು (ಎರೆಮಣ್ಣು) ಹೊಂದಿದೆ. ಹಾಗೂ ಸರಾಸರಿ ೫೬೪ ಮಿ.ಮೀ. ಮಳೆಯನ್ನು ಪಡೆಯುವ ಉತ್ತರ ಕೃಷಿವಲಯದಲ್ಲಿ ರೋಣ, ಗದಗ, ನರಗುಂದ ತಾಲ್ಲೂಕುಗಳು ಮತ್ತು ಮುಂಡರಗಿಯ ಉತ್ತರ ಭಾಗವು ಬರುತ್ತಿದ್ದು ಇದು ಹಿಂಗಾರು ಕೃಷಿ ಪ್ರಧಾನ ವಲಯವಾಗಿರುವುದು.

ಶಿರಹಟ್ಟಿ ತಾಲ್ಲೂಕು ಮತ್ತು ಮುಂಡರಗಿಯ ದಕ್ಷಿಣ ಭಾಗವು ಶೇ. ೭೦ರಷ್ಟು ಕೆಂಪು ಮಣ್ಣು ಪ್ರದೇಶವಾಗಿದ್ದು, ಸರಾಸರಿ ೬೯೬ ಮಿ.ಮೀ ಮಳೆ ಬೀಳುತ್ತಿದೆ. ಈ ಪ್ರದೇಶ ಮುಂಗಾರು ಕೃಷಿ ಪ್ರಧಾನ ವಲಯವಾಗಿದೆ. ಈ ವಲಯದಲ್ಲಿ ಅನುಕೂಲಕರ ಹವಾಗುಣಕ್ಕೆ ಅನುಗುಣವಾಗಿ ಮಳೆಯಾಶ್ರಿತ ವಿವಿಧ ಬೆಳೆಗಳನ್ನು ಬೆಳೆಯಲಾಗುತ್ತದೆ. ಜಿಲ್ಲೆಯ ಒಟ್ಟು ಸಾಗುವಳಿ ಪ್ರದೇಶದಲ್ಲಿ ಶೇ. ೩೯ರಷ್ಟು ಪ್ರದೇಶದಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

### ನೀರಾವರಿ

ಒಟ್ಟು ನಿವ್ವಳ ಬಿತ್ತನೆಯಾದ ಪ್ರದೇಶದ ಶೇಕಡ ೧೮.೨೮ರಷ್ಟು ಪ್ರದೇಶವು ನೀರಾವರಿಗೆ ಒಳಪಟ್ಟಿದ್ದು ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಒಂಬತ್ತು ಕೆರೆಗಳಿದ್ದು(ಡಂಬಳ, ಜಂತ್ಲಿಶಿರೂರು, ಕೆಲೂರು, ತಾಮ್ರಗುಂಡಿ, ಶಿರೋಳ, ಹಿರೇವಡ್ಡಟ್ಟಿ, ಪೇಠಾಲೂರು, ಚಿಕ್ಕವಡ್ಡಟ್ಟಿ ಮುಂಡವಾಡ), ಅವುಗಳಿಂದ ೩.೧೨೩.೫೬ ಹೆಕ್ಟೇರ್ ನೀರಾವರಿ ಸೌಲಭ್ಯವನ್ನು ಹೊಂದಿದೆ. ಶಿರಹಟ್ಟಿ ತಾಲ್ಲೂಕಿನಲ್ಲಿ ನಾಲ್ಕು ಕೆರೆಗಳಿದ್ದು(ಮಜ್ಜೂರು, ಬಾಲೆಹೂಸೂರ, ಮಾಗಡಿ, ದೇವಿಹಾಳ), ಅವುಗಳಿಂದ ೯೪೯೧೩ ಹೆಕ್ಟೇರ್ ಭೂಮಿ ವ್ಯವಸಾಯಕ್ಕೆ ಸೂಕ್ತವಾಗಿದೆ. ಜಿಲ್ಲೆಯ ಒಟ್ಟು ನೀರಾವರಿ ಪ್ರದೇಶದ ಶೇಕಡಾ. ೩೮.೪ರಷ್ಟನ್ನು ಹೊಂದಿದೆ. ಮಲಪ್ರಭಾ ನದಿಗೆ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ನವಿಲುತೀರ್ಥ ಎಂಬಲ್ಲಿ ನಿರ್ಮಿಸಲಾದ ಅಣೆಕಟ್ಟು (ರೇಣುಕಾ ಜಲಾಶಯ) ಬಲದಂಡೆ ಕಾಲುವೆಯಿಂದ ನರಗುಂದ ತಾಲೂಕಿನ ೨೧೦೩೩ ಹೆಕ್ಟೇರ್ ಪ್ರದೇಶ ಮತ್ತು ರೋಣ ತಾಲೂಕಿನ ೮೧೧ ಹೆಕ್ಟೇರ್ ಪ್ರದೇಶ ಸೇರಿ ಒಟ್ಟು ೨೨೪೩೪ ಹೆಕ್ಟೇರ್ ಪ್ರದೇಶವು ಕಾಲುವೆ ನೀರಾವರಿಯ ಸೌಲಭ್ಯವನ್ನು ಹೊಂದಿದೆ. ತುಂಗಭದ್ರಾ ನದಿಯ ನೀರನ್ನು ಬಳಸಿಕೊಂಡು ೪ ಏತ ನೀರಾವರಿಯ

ಯೋಜನೆಗಳು ಕಾರ್ಯಗತವಾಗಿ ಕೆಲಸ ನಿರ್ವಹಿಸುತ್ತಿರುವುದು ಸಂತಸದ ವಿಷಯವಾಗಿದೆ. ಕಕ್ಕೂರ ಮೊದಲನೆಯ ಹಂತವು ೧೯೭೩-೭೪ರಲ್ಲಿ ಪ್ರಾರಂಭವಾಗಿ ೨೩೬ ಹೆಕ್ಟೇರ್ ನೀರಾವರಿ ಕ್ಷೇತ್ರವನ್ನು ಹೊಂದಿದೆ. ೧೯೮೩-೮೪ರಲ್ಲಿ ಪ್ರಾರಂಭವಾದ ಹಮ್ಮಿಗಿ ಯಾತ ನೀರಾವರಿಯಿಂದ ೨೧೦ ಹೆಕ್ಟೇರ್ ನೀರಾವರಿ ಹೊಂದಿದೆ. ೧೯೮೨ರಲ್ಲಿ ವಿಠಲಾಪೂರ ಏತ ನೀರಾವರಿ ಪ್ರಾರಂಭದಿಂದ ೯೨ ಹೆಕ್ಟೇರ್ ಕ್ಷೇತ್ರಕ್ಕೆ ನೀರನ್ನು ಉಣಬಡಿಸುತ್ತವೆ. ೧೯೮೩ರಲ್ಲಿ ಕೋರ್ಲಹಳ್ಳಿಯ ಯಾತ ನೀರಾವರಿ ೩೬೪ ಹೆಕ್ಟೇರ್ ನೀರಾವರಿ ಸಂತಸದ ಸಂಗತಿಯಾಗಿದೆ.[೩] ಸಿಂಗಟಾಲೂರ ಹುಲಿಗುಡ್ಡ ಯೋಜನೆ ೨೧ನೆಯ ಶತಮಾನದ ಬೃಹತ್ ಯೋಜನೆ. ಈ ಯೋಜನೆಯನ್ನು ಎಸ್.ಎಸ್.ಪಾಟೀಲರ ಮುಂದಾಳತ್ವದಲ್ಲಿ ಕಾರ್ಯಗತವಾಗಿದ್ದು ಈ ಭಾಗದ ಕನಸು. ಈ ಯೋಜನೆಯಿಂದ ಗದಗ ಜಿಲ್ಲೆಯ ಮುಂಡರಗಿ, ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮಗಳು ನೀರಾವರಿ ಸೌಲಭ್ಯವನ್ನು ಪಡೆದುಕೊಳ್ಳುತ್ತವೆ.

**ಈ ಜಿಲ್ಲೆಯ ನೀರಾವರಿಯಾದ ನಿವ್ವಳ ಪ್ರದೇಶ (ಹೆಕ್ಟರ್‌ಗಳಲ್ಲಿ)**

| ಕ್ರ ಸಂ. | ತಾಲ್ಲೂಕುಗಳು | ಕಾಲುವೆ | ಕೆರೆ | ಬಾವಿ | ಕೊಳವೆ ಬಾವಿ | ಏತ ನೀರಾವರಿ | ಇತರೆ | ಒಟ್ಟು |
|---|---|---|---|---|---|---|---|---|
| ೧ | ಗದಗ | – | ೩೫ | – | ೪೦೪೧ | – | ೧೧೬ | ೪೧೯೨ |
| ೨ | ಮುಂಡರಗಿ | – | ೮೫೫ | – | ೭೧೩೬ | ೧೮೧ | ೯೩೫೪ | ೧೭೫೨೬ |
| ೩ | ನರಗುಂದ | ೨೦೬೨೦ | – | ೯೬೭ | ೫೦೦ | – | ೯೭೫೭ | ೩೧೮೪೪ |
| ೪ | ರೋಣ | ೬೮೫ | ೩೮ | – | ೮೬೯೬ | – | ೩೬೮೬ | ೧೩೧೦೫ |
| ೫ | ಶಿರಹಟ್ಟಿ | – | ೧೫೧ | ೩೫೬ | ೬೯೨೬ | – | ೨೧೩೯ | ೯೫೭೨ |
| | ಒಟ್ಟು | ೨೧೩೦೫ | ೧೦೭೯ | ೧೩೨೩ | ೨೭೨೯೯ | ೧೮೧ | ೨೫೦೫೨ | |

## ೨.೧.೧೧. ಸಾರಿಗೆ ಮತ್ತು ಸಂಪರ್ಕ

ಜಿಲ್ಲೆಯು ಉತ್ತಮ ರೀತಿಯ ರಸ್ತೆ ಮತ್ತು ರೈಲು ಸಾರಿಗೆಯ ಸೌಲಭ್ಯವನ್ನು ಹೊಂದಿದೆ. ೪೩೨೯ ಕಿ.ಮೀ ಉದ್ದದ ರಸ್ತೆಗಳನ್ನು ಮತ್ತು ೯೬ ಕಿ.ಮೀ ಉದ್ದದ ರೈಲು ಮಾರ್ಗಗಳನ್ನು ಹೊಂದಿದೆ. ಗದಗ ರೈಲ್ವೆ ಜಂಕ್ಷನ್ ಆಗಿದ್ದು ಬಿಜಾಪುರ, ಸೊಲ್ಲಾಪುರ, ಗುಂತಕಲ್ಲು, ಹೈದ್ರಾಬಾದ್, ಹುಬ್ಬಳ್ಳಿ ಮತ್ತು ಬೆಂಗಳೂರಿಗೆ ನೇರ ಸಂಪರ್ಕವನ್ನು ಹೊಂದಿರುತ್ತದೆ. ೪೩೯ ಕಿ.ಮೀ ರಸ್ತೆಗಳಲ್ಲಿ ಎರಡು ರಾಷ್ಟ್ರೀಯ ಹೆದ್ದಾರಿಗಳು (ಎನ್.ಎಚ್-೬೩ ಅಂಕೋಲಾ-ಗೂಟಿ) (ಎನ್.ಎಚ್.-೨೧೮ ಹುಬ್ಬಳ್ಳಿ-ಬಿಜಾಪುರ) ಹಾದು ಹೋಗಿದ್ದು ಅವು ೪೫ ಕಿ.ಮೀ ಹೊಂದಿವೆ.

ಹೆಚ್ಚಿನ ರಸ್ತೆಗಳು ಕಚ್ಚಾ ರಸ್ತೆಗಳಿಂದ ಕೂಡಿವೆ. ೧೭೧ ಅಂಚೆ ಕಛೇರಿಗಳು ೫೦ ದೂರವಾಣಿ ವಿನಿಮಯ ಕೇಂದ್ರಗಳು ೨೩೨೨೧ ದೂರವಾಣಿಗಳು ೨೬೪೦ ಸಾರ್ವಜನಿಕ ದೂರವಾಣಿಗಳನ್ನು ಹೊಂದಿದೆ.

ಒಟ್ಟಾರೆ ಇಲ್ಲಿನ ಭೌಗೋಳಿಕ ಅಂಶಗಳ ಅಧ್ಯಯನದಿಂದ ಅನೇಕ ಬಹುಮುಖ್ಯ ವಿಚಾರಗಳು ಗೋಚರಿಸುತ್ತವೆ. ಮಾನವನ ಉಗಮ ಮತ್ತು ವಿಕಾಸದ ವಿಭಿನ್ನ ಅಂಶಗಳು ಇಲ್ಲಿನ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ರಂಗಗಳಲ್ಲಿ ತನ್ನದೆಯಾದ ಹಿರಿಮೆ, ಗರಿಮೆಯನ್ನು ಗಳಿಸಿಕೊಳ್ಳತ್ತಾ ಯಶಸ್ಸು ಗಳಿಸಿದೆ. ಕೃಷಿ, ಕೈಗಾರಿಕೆ, ಆರೋಗ್ಯ ಕ್ಷೇತ್ರದಲ್ಲಿ ಪ್ರಗತಿಪರ ದಾಪುಗಾಲು ಹಾಕಿ ಸಾಗುತ್ತಿದೆ. ಪಂಚಾಯತ ರಾಜ್ಯ ವ್ಯವಸ್ಥೆಯಿಂದ ಪ್ರತಿ ಗ್ರಾಮಗಳು ಆಧುನಿಕತೆಯ ಗಾಳಿಯಲ್ಲಿ ಉಸಿರಾಡಿಸುತ್ತಿವೆ. ಹಳ್ಳಿಗಳು ಹಿಂದಿಗಿಂತ ಇಂದು ಆರ್ಥಿಕವಾಗಿ ಪ್ರಬಲಗೊಂಡಿವೆ. ಮಾನವನ ಸಾಂಸ್ಕೃತಿಕ ಚರಿತ್ರೆಯ ರಚನೆಗೆ ಈ ಲಕ್ಷಣಗಳ ಅಧ್ಯಯನ ಬಹುಮುಖ್ಯ.

## ೨.೨. ಪ್ರಾಗಿತಿಹಾಸ ಹಿನ್ನೆಲೆ

ಕರ್ನಾಟಕದಲ್ಲಿ ಗದಗ ಜಿಲ್ಲೆಯ ಪ್ರಾಗಿತಿಹಾಸ ಕಾಲ ಇನ್ನುಳಿದ ಪ್ರದೇಶಗಳಿಗಿಂತಲೂ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಪ್ರಾಗಿತಿಹಾಸಕಾಲದ ಮಾನವನಿಗೆ ಈ ಪರಿಸರದಲ್ಲಿರುವ ಬೆಟ್ಟ, ಕಾಡು, ವಿವಿಧ ಕಾಡು ಪ್ರಾಣಿಗಳು, ನೀರು ಮತ್ತು ಆಯುಧ ತಯಾರಿಕೆಗೆ ಇಲ್ಲಿಯ ಮೂಲವಸ್ತುಗಳಾದ ತಾಮ್ರ, ಕಲ್ಲಿನ ಗಣಿ, ಕಬ್ಬಿಣದ ಅದಿರು ಮುಂತಾದವುಗಳು ಅನುಕೂಲಕರವಾಗಿದ್ದವು. ಸ್ವಾತಂತ್ರಪೂರ್ವ ಕಾಲದಿಂದಲೂ ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ಪ್ರಾಚೀನ ಸಂಸ್ಕೃತಿಯ ನೆಲೆಗಳನ್ನು ಕುರಿತು ದೇಶೀಯ ಹಾಗೂ ವಿದೇಶಿಯ ಪುರಾತತ್ವ ಶಾಸ್ತ್ರಜ್ಞರು ಅನೇಕ ಸಂಶೋಧನೆಗಳನ್ನು ಕೈಗೊಂಡಿರುವರು. ಈ ದಿಶೆಯಲ್ಲಿ ರಾಬರ್ಟ ಬ್ರೂಸ್‌ಪೂಟ್, ಕರ್ನಲ್ ಮೆಕೆಂಜಿ ಎಂ.ಎಚ್. ಕೃಷ್ಣ, ಬಿ ಸುಬ್ಬರಾವ್, ಆರ್ ಶೇಷಾದ್ರಿ, ಎಚ್.ಡಿ. ಸಂಕಾಲಿಯಾ, ಆರ್.ಎಸ್. ಪಪ್ಪು ಮೊದಲಾದವರು ಪ್ರಮುಖರಾಗಿದ್ದಾರೆ. ಭಾರತೀಯ ಪುರಾತತ್ವ ಇಲಾಖೆ ಮೈಸೂರು ಪುರಾತತ್ವ ಇಲಾಖೆ ಹಾಗೂ ಪುಣೆಯ ಡೆಕ್ಕನ್ ಕಾಲೇಜ ಮತ್ತು ಕೆಲವು ಸಂಸ್ಥೆಗಳು ಇತಿಹಾಸ ಪೂರ್ವ ಕಾಲದ ನೆಲೆಗಳನ್ನು ಪತ್ತೆ ಹಚ್ಚುವಲ್ಲಿ ಶ್ರಮವಹಿಸಿ ದುಡಿದಿವೆ. ಮದ್ರಾಸಿನ ಬಳಿಯ ಪಲ್ಲಾವರಂ ಎಂಬಲ್ಲಿ ಕ್ರಿ.ಶ ೧೮೬೩ ರಲ್ಲಿ ರಾಬರ್ಟ ಬ್ರೂಸ್‌ಪೂಟ್‌ರವರು ಜೇಡಿಮಣ್ಣಿನ ಗರಸು ನೆಲದಲ್ಲಿ ಮೊದಲ ಬಾರಿಗೆ ಶಿಲಾಯುಗದ ಉಪಕರಣಗಳನ್ನು ಶೋಧಿಸಿದ್ದಾರೆ. ಕರ್ನಾಟಕದಲ್ಲಿಯೂ ಇವರೇ ಮೊದಲ ಬಾರಿಗೆ ಹಳೆಯ ಶೀಲಾಯುಗದ ನೆಲೆಗಳನ್ನು ಗುರುತಿಸುವ ಪ್ರಯತ್ನಮಾಡಿ ಯಶಸ್ವಿಯಾಗಿದ್ದಾರೆ. ಆರ್.ಎಸ್. ಪಪ್ಪು, ಎಸ್.ಬಿ.ದೇವ್, ಆರ್.ಬಿ.ಜೋಷಿ, ಎಸ್.ಎಸ್.ಮಾಳವಾಡ, ಅ.ಸುಂದರ, ರವಿ ಕೋರಿಶೆಟ್ಟರ, ರು.ಮ.ಷಡಕ್ಷರಯ್ಯರವರು ಇತಿಹಾಸ ಪೂರ್ವಕಾಲದ ಬೇರೆ ಬೇರೆ ನೆಲೆಗಳನ್ನು ಗುರುತಿಸಿದ್ದಾರೆ. ಅ.ಸುಂದರ ಅವರು ಉತ್ತರ ಕರ್ನಾಟಕದ ಪ್ರಮುಖ ಪ್ರಾಕ್ಚಾರಿತ್ರಿಕ ನೆಲೆಗಳನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಿದವರಲ್ಲಿ ಮೊದಲಿಗರು. ಶೈಕ್ಷಣಿಕ ಸಂಸ್ಥೆಗಳಷ್ಟೇ ಉತ್ತಮ ಸಂಶೋಧನೆಯ ಕಾರ್ಯಗಳನ್ನು ನಿರ್ವಹಿಸುತ್ತಿರುವ ಕರ್ನಾಟಕ ಇತಿಹಾಸ ಅಕಾಡೆಮಿ ಹಾಗೂ ಕರ್ನಾಟಕ

ಇತಿಹಾಸ ಕಾಂಗ್ರೆಸ್ ಪರಿಷತ್‌ಗಳು ತಮ್ಮ ವಾರ್ಷಿಕ ಸಮ್ಮೇಳನದಲ್ಲಿ ಹೊಸ ಹೊಸ ನೆಲಗಳನ್ನು ಪರಿಚಯಿಸಿ ಹಾಗೂ ಅರ್ಥೈಸುವ ಕಾರ್ಯಗಳನ್ನು ಮಾಡಿರುತ್ತಾರೆ. ೨೦೦೫ ರಲ್ಲಿ ಉತ್ಖನನದಲ್ಲಿ ಲಕ್ಕುಂಡಿಯನ್ನು ನೂತನ ಶಿಲಾಯುಗ ನೆಲೆಯೆಂದು ಗೋಪಾಲ ಆರ್, ಅ.ಸುಂದರ, ಜೋಶಿ ಎನ್.ವಿ, ಗಂಗಾಧರ ಟಿ.ಎಸ್. ಇವರು ಗುರುತಿಸಿದ್ದಾರೆ.

ಈ ಜಿಲ್ಲೆಯ ಸುತ್ತಮುತ್ತಲಿನ ಸ್ಥಳಗಳಾದ ಬೂದಿಹಾಳ, ವಾರ್‌ಗುಂದ, ಬಿದರಹಳ್ಳಿ, ಅಸೂಟಿ, ಕೌಜಗೇರಿ, ಬಸರಕೋಡ, ಬೆಣಚಮಟ್ಟಿ, ಬೆಳವಣಿಕಿ, ಮೆಣಸಗಿ, ವದೇಗಲ್ಲು, ಜೀಗೆರಿ, ನಿಟ್ಟೂರು ಹೀಗೆ ಮುಂತಾದವುಗಳಲ್ಲಿ ಆದಿಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳು ಕಂಡುಬಂದಿವೆ. ಬೆನಕನಕೊಪ್ಪ, ಅರಿಶಿಣಗೋಡಿ, ವಾರ್‌ಗುಂದ, ಶಿರೋಳ, ಸುರಕೋಡ, ಅಮರಗೋಳ, ಉಣಚಗೇರಿ, ಉದಗಟ್ಟಿ, ಕಾಲಕಾಲೇಶ್ವರ, ಕುಂಟೋಜಿ, ಕೌಜಗೇರಿ, ಅಡರಕಟ್ಟಿ, ಆದರಹಳ್ಳಿ, ಜೀರಮಾದವಪುರ, ನವೆಭಾವನೂರು, ದೇವಿಹಾಳ ಮುಂತಾದ ಸ್ಥಳಗಳಲ್ಲಿ ನವಶಿಲಾಯುಗದಿಂದ ಇತಿಹಾಸಕಾಲದವರೆಗಿನ ಅವಶೇಷಗಳು ಕಂಡುಬರುತ್ತವೆ. ಮಾನವ ಈ ಜೀವವಿಕಾಸದ ಏಣಿಯಲ್ಲಿ ಏರಿರುವ ಒಂದು ಜೀವಿ. ಈ ದೀರ್ಘಾವಧಿ ಭೂ ಇತಿಹಾಸಕ್ಕೆ ಹೋಲಿಸಿದರೆ ಮಾನವನ ಪೂರ್ವಜರ ಹುಟ್ಟು ಕೇವಲ ೬೫ ಮಿಲಿಯನ್ ವರ್ಷಗಳ ಹಿಂದಷ್ಟೆ ಆಗಿರುವ ದಾಖಲೆ ಸಿಗುತ್ತದೆ. ಆದಿಮಾನವ ಉಗಮವಾಗಿ ಸರಿಸುಮಾರು ೧೪ ಮಿಲಿಯನ್ ವರ್ಷಗಳಾಗಿದ್ದರೆ, ಆಧುನಿಕ ಮಾನವನ ಉಗಮ ಕೇವಲ ೨ ಮಿಲಿಯನ್ ವರ್ಷಗಳ ಹಿಂದಷ್ಟೇ ಆಗಿದೆ ಎನ್ನಬಹುದು. ಮಾನವ ಕೋತಿ, ವಾನರನ್ನೊಳಗೊಂಡ ಪ್ರೈಮೋಟ ಗಣಕ್ಕೂ, ಸಸ್ತನಿ ವರ್ಗಕ್ಕೂ ಸೇರಿದ್ದಾನೆ. ಇಡೀ ಪ್ರಾಣಿ ಜಗತ್ತಿನಲ್ಲಿ ಮಾನವನಿಗೆ ಒಂದು ವ್ಯವಸ್ಥಿತ ಸ್ಥಾನವಿದೆ. ಪ್ರಾಗೈತಿಹಾಸಿಕ ಕಾಲದ ಈ ಕಾಲಘಟ್ಟವನ್ನು ಶಿಲಾಯುಗ, ಲೋಹಯುಗ ಎಂಬ ಎರಡು ವಿಭಾಗಗಳನ್ನಾಗಿ ಮಾಡಲಾಗಿದೆ. ಈ ಎರಡು ಯುಗಗಳನ್ನು ಹಳೆಶಿಲಾಯುಗ, ಸೂಕ್ಷ್ಮಶಿಲಾಯುಗ, ನವ ಶಿಲಾಯುಗ, ಶಿಲಾ ತಾಮ್ರಯುಗ, ಬೃಹತ್ ಶಿಲಾಯುಗ (ಕಬ್ಬಿಣ ಯುಗ) ಎಂದು ವಿಭಾಗಿಸಲಾಗಿದೆ.

ಗದಗ ಜಿಲ್ಲೆಯು ಪ್ರಾಗೈತಿಹಾಸಿಕವಾಗಿ ಸಮೃದ್ಧವಾದ ಪ್ರದೇಶವಾಗಿದ್ದ ಅಂಶ ಈವರೆಗೆ ನಡೆದಿರುವ ಪುರಾತತ್ವ ಅನ್ವೇಷಣೆಗಳಿಂದ ತಿಳಿದುಬಂದಿದೆ. ಈವರೆಗೆ ಆದಿ ಹಳೆ ಶಿಲಾಯುಗದ ೧೪, ಸೂಕ್ಷ್ಮಶಿಲಾಯುಗದ ೧, ನೂತನ ಶಿಲಾಯುಗದ ೨೪, ನೂತನ ತಾಮ್ರ ಶಿಲಾಯುಗದ ೫, ಬೃಹತ್ ಶಿಲಾಯುಗದ ನೆಲೆಗಳು ೩ ಮತ್ತು ೧೪ ಗೋರಿ ನೆಲೆಗಳು ದೊರೆತಿವೆ. ದೊರೆತಿರುವ ನೆಲೆಗಳ ಆಧಾರದಿಂದಲೇ ಸಾಧ್ಯವಾದಷ್ಟು ಮಟ್ಟಿಗೆ ಇಲ್ಲಿನ ಪುರಾತತ್ವ ಸಾಂಸ್ಕೃತಿಕ ಹಂತಗಳ ಬಗೆಗೆ ತಿಳಿಯುವ ಪ್ರಯತ್ನವನ್ನು ಮಾಡಬಹುದಾಗಿದೆ.

### ೨.೨.೧. ಹಳೆಯ ಶಿಲಾಯುಗ

ಗ್ರೀಕ್ ಭಾಷೆಯಲ್ಲಿ ಪ್ಯಾಲಿಯೋ ಎಂದರೆ ಹಳೆಯ, ಲಿತಿಕ್ ಎಂದರೆ ಶಿಲೆ ಎಂದು ಅರ್ಥ.

ಈ ಕಾಲದಲ್ಲಿ ಮಾನವ ಶಿಲೆಯಿಂದ ಮಾತ್ರ ಬಹುತೇಕ ಉಪಕರಣಗಳನ್ನು ತಯಾರಿಸಿಕೊಂಡು ಅವುಗಳನ್ನು ತನ್ನ ಬಳಕೆಗೆ ಬಳಸಿಕೊಂಡಿದ್ದರಿಂದ ಮತ್ತು ಅವನ ರೀತಿ ನೀತಿಗಳೂ ಸಾಕಷ್ಟೂ ಸುಧಾರಿಸದೇ ಇನ್ನೂ ಆದಿಮ ಹಂತದಲ್ಲಿ ಇದ್ದಿದ್ದರಿಂದ ಈ ಕಾಲಘಟ್ಟವನ್ನು ಹಳೇ ಶಿಲಾಯುಗ ಸಂಸ್ಕೃತಿ (ಪ್ಯಾಲಿಯೋಲಿತಿಕ್ ಕಲ್ಚರ್) ಎಂದು ಕರೆಯಲಾಗುತ್ತದೆ. ಅಧ್ಯಯನದ ಅನುಕೂಲಕ್ಕಾಗಿ ಹಳೇ ಶಿಲಾಯುಗ ಕಾಲಘಟ್ಟವನ್ನು ಮೂರು ಭಾಗಗಳಾಗಿ ಮುಂದಿನಂತೆ ವಿಂಗಡಿಸಲಾಗಿದೆ.

೧. ಆದಿ ಹಳೆಯ ಶಿಲಾಯುಗ (೭ ಲಕ್ಷ ಅಥವಾ ಅದಕ್ಕೂ ಮುಂಚೆ)

೨. ಮಧ್ಯ ಹಳೆಯ ಶಿಲಾಯುಗ (ಕ್ರಿ.ಪೂ. ೭೦.೦೦೦ ರಿಂದ ೩೦.೦೦೦)

೩. ಅಂತ್ಯ ಹಳೆಯ ಶಿಲಾಯುಗ (ಕ್ರಿ.ಪೂ. ೪೦.೦೦೦ ರಿಂದ ೧೦.೦೦೦)

**೨.೨.೧.೧. ಆದಿ ಹಳೆಯ ಶಿಲಾಯುಗ ಸಂಸ್ಕೃತಿ**

ಭಾರತದಲ್ಲಿ ಆದಿ ಹಳೇಯ ಶಿಲಾಯುಗದ ಅವಶೇಷಗಳು ೧೮೬೩ರಲ್ಲಿ ಬೆಳಕು ಕಂಡಿದ್ದು, ಇದೇ ಸಮಯದಲ್ಲಿ ಕರ್ನಾಟಕದ ಮಲಪ್ರಭಾ ನದಿ ಕೊಳ್ಳದಲ್ಲಿಯೂ ಈ ಸಾಂಸ್ಕೃತಿಕ ನೆಲೆ ಕಂಡು ಬಂದಿದ್ದು ತಿಳಿಯುತ್ತದೆ. ಈ ಹಂತದ ಹಲವು ನೆಲೆಗಳನ್ನು ಭೂ ವೈಜ್ಞಾನಿಕ ದೃಷ್ಟಿಕೋನದಲ್ಲಿ ಅಧ್ಯಯನ ನಡೆಸಿ ಸ್ತರ ವಿವರಗಳೊಂದಿಗೆ ಶಿಲೋಪಕರಣಗಳನ್ನು ಸಂಗ್ರಹಿಸಿ, ಜನರ ಜೀವನ ಕ್ರಮವನ್ನು ಅರಿಯುವುದರ ಜೊತೆಗೆ ಆಗಿನ ಪ್ರಾಕೃತಿಕ ಮತ್ತು ಭೌಗೋಳಿಕ ಸಂಪತ್ತಿನ ವಿವರಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಿದ್ದಾರೆ. ಹಲವು ಸ್ಥಳಗಳ ಉತ್ಖನನವು ಇವರ ವಸತಿ ನಿವೇಶನ ಹಾಗೂ ಜೀವನ ವಿಧಾನಕ್ಕೆ ಉತ್ತಮ ಉದಾಹರಣೆಯಾಗಿದೆ. ಈ ಹಂತವನ್ನು ಸುಮಾರು ೭ ಲಕ್ಷದಿಂದ ೧.೨೫ ಲಕ್ಷ ವರ್ಷಗಳಷ್ಟು ಹಳೆಯದೆಂದು ಗುರುತಿಸಲಾಗಿದೆ.

ಹಳೆಯ ಶಿಲಾಯುಗದ ಮಾನವನ ನೆಲೆಗಳು ಗದಗ ಜಿಲ್ಲೆಯ ಅನೇಕ ಭಾಗಗಳಲ್ಲಿ ಕಂಡುಬಂದಿವೆ. ಅವುಗಳೆಂದರೆ ನರಗುಂದ ತಾಲೂಕಿನ (ಬೂದಿಹಾಳ, ವಾರಗುಂದ), ಮುಂಡರಗಿ ತಾಲೂಕಿನ (ಬಿದರಳ್ಳಿ), ರೋಣ ತಾಲೂಕಿನ (ಅಸೂಟಿ, ಕೌಜಗೇರಿ, ಬಸರಕೋಡ, ಬೆಣಚಮಟ್ಟಿ, ಬೆಳವಣಿಕಿ, ಮೆಣಸಿಗಿ, ವದೇಗಲ್ಲ, ಜೀಗೇರಿ), ಮತ್ತು ಶಿರಹಟ್ಟಿ ತಾಲೂಕ (ಜೀರ್‌ಮಾಧವಪುರ, ನಿಟ್ಟೂರ) ಗಳಲ್ಲಿ ಕಂಡು ಬಂದಿದ್ದು ಅತಿ ಹೆಚ್ಚು ಸಂಖ್ಯೆಯ ನೆಲೆಗಳನ್ನು ರೋಣ ತಾಲೂಕಿನಲ್ಲಿ ಗುರುತಿಸಲಾಗಿದೆ.[೧೪] ಭೌಗೋಳಿಕವಾಗಿ ಆ ಕಾಲಮಾನದ ಜನರಿಗೆ ಅತ್ಯಾವಶ್ಯಕವಾಗಿ ಬೇಕಿದ್ದ ಪ್ರಕೃತಿದತ್ತವಾದ ಆಸರೆಯ ಸ್ಥಳಗಳು ವಿವಿಧ ಶಿಲಾ ಮಾದರಿಗಳು, ನೀರಿನಾಸರೆಗಳು ಹಾಗೂ ಹವಾಗುಣವು ಪೂರಕವಾಗಿ ಒದಗಿದ್ದವು ಎಂಬವುದು ತಿಳಿದುಬರುತ್ತದೆ. ಈ ಪ್ರದೇಶಗಳು ವಾಸಿಸಲು ಯೋಗ್ಯ ಸ್ಥಾನಗಳಾಗಿದ್ದುದಾಗಿ ಕಂಡುಬರುತ್ತದೆ. ಜಿಲ್ಲೆಯ ನರಗುಂದ, ರೋಣ, ಮುಂಡರಗಿ ಮತ್ತು ಶಿರಹಟ್ಟಿ ನೆಲೆಗಳಲ್ಲಿ ದೊರೆತಿರುವ ಉಪಕರಣಗಳನ್ನು ಕ್ವಾರ್ಟ್ಸ್, ಮರಳುಗಲ್ಲು, ಸಿಸ್ಟೈಸ್

ಹಾಗೂ ಗ್ರಾನೈಟ್ ಮಾದರಿಯ ಶಿಲಾ ಮಾದರಿಗಳಿಂದ ರೂಪಿಸಲಾಗಿದೆ. ಎಲ್ಲಾ ಮಾದರಿಯ ಶಿಲೆಗಳು ಸ್ಥಳೀಯವಾಗಿ ದೊರಕುವಂಥವಾಗಿದ್ದು ಇವುಗಳನ್ನು ಇಲ್ಲಿಯೇ ತಯಾರಿಸಲಾಗಿದೆ.

ಆದಿಮಾನವನ ಮುಖ್ಯ ಆಯುಧಗಳಿಗೆ ಅಬ್ಬೇವಿಲಿಯನ್, ಅಶೂಲಿಯನ್ ಹಾಗೂ ಲೆವಾಲಿಯಸ್ ಮಾದರಿಯ ತಾಂತ್ರಿಕತೆಯನ್ನು ಬಳಸಿರುವುದನ್ನು ಕಾಣಬಹುದಾಗಿದೆ. ಕೈಗೊಡಲಿಗಳನ್ನು ಚಕ್ಕೆ ಹಾಗೂ ಉಂಡೆಕಲ್ಲುಗಳಲ್ಲಿ ರೂಪಿಸಲಾಗಿದ್ದು ಅವುಗಳನ್ನು ಉಂಡೆಕಲ್ಲಿನ ಚಪ್ಪಡಿ ಹಾಗೂ ಚಕ್ಕೆ ತೆಗೆದ ಕೈಗೊಡಲಿಗಳೆಂದು ವಿಭಾಗಿಸಲಾಗಿದ್ದು, ಅವುಗಳನ್ನು ಎರಡು ಮುಖ್ಯ ಭಾಗವಾಗಿ ಉಲ್ಲೇಖಿಸಬಹುದು. ಉಳಿದ ವಿವಿಧ ಮಾದರಿಯ ಉಪಕರಣಗಳೆಂದರೆ ಅಂಡಾಕಾರ, ಸೀಳುಗತ್ತಿ, ಮೇಲ್ಭಾಗಗತ್ತಿ, ಚಕ್ರಸಾರ ಉಪಕರಣ ಹೆರೆಗತ್ತಿ ಮೊದಲಾಗಿವೆ. ಮುಖ್ಯವಾಗಿ ಮೂರು ನೆಲೆಗಳಾದ ಹೊಳೆಆಲೂರು, ಮೆಣಸಗಿ ಮತ್ತು ಬೂದಿಹಾಳಗಳಲ್ಲಿ ದೊರೆತಿರುವ ವಿವಿಧ ವೈವಿಧ್ಯ ಉಪಕರಣಗಳನ್ನು ಕಾಣಬಹುದು.

### ೨.೨.೨. ಸೂಕ್ಷ್ಮ ಶಿಲಾಯುಗ ಸಂಸ್ಕೃತಿ

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ ಇಲ್ಲವೇ ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಗ್ರೀಕ್ ಭಾಷೆಯಲ್ಲಿ ಮೆಸೋ ಎಂದರೆ ಸೂಕ್ಷ್ಮ ಲಿತಿಕ್ ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲದಲ್ಲಿ ಮಾನವ ಶಿಲೆಯಿಂದ ಬಹಳ ಸೂಕ್ಷ್ಮ ಉಪಕರಣಗಳನ್ನು ತಯಾರಿಸಿಕೊಂಡು ಅವುಗಳನ್ನು ತನ್ನ ಬಳಕೆಗೆ ಬಳಸಿಕೊಂಡಿದ್ದರಿಂದ ಈ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ (ಮೆಸೋಲಿತಿಕ್ ಕಲ್ಚರ್) ಎಂದು ಕರೆಯಲಾಗುತ್ತದೆ.

ಕರ್ನಾಟಕದ ಸೂಕ್ಷ್ಮ ಶಿಲಾಯುಗದ ನಿವೇಶನಗಳು ೧೯೨೯ರ ವೇಳೆಗೆ ಬೆಳಕಿಗೆ ಬಂದಿದ್ದರೂ ಅಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ಆರಂಭವಾದುದು ೧೯೫೬ರ ನಂತರವೇ. ಬ್ರಹ್ಮಗಿರಿ ಉತ್ಖನನ ೧೯೪೭ರಲ್ಲಿ ಈ ಹಂತದ ಉಪಕರಣಗಳು ಗಮನಾರ್ಹ ಪ್ರಮಾಣದಲ್ಲಿ ದೊರಕದಿದ್ದರೂ ಅವುಗಳು ನಿರ್ದಿಷ್ಟ ಹಾಗೂ ಪ್ರತ್ಯೇಕ ಸ್ತರದಲ್ಲಿದ್ದುದ್ದನ್ನು ಗುರುತಿಸಿದೆ. ಈ ಸಂಸ್ಕೃತಿ ಇಂದಿಗೂ ಸುಮಾರು ೨೫೦೦ ವರ್ಷದಿಂದ ೧೦,೦೦೦ ವರ್ಷಗಳಷ್ಟು ಪೂರ್ವದಲ್ಲಿದ್ದಿತ್ತೆಂದು ತಿಳಿದುಬರುತ್ತದೆ. ಗದಗ ಜಿಲ್ಲೆಯಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಯ ರೋಣ ತಾಲೂಕಿನ ಹೊಳೆಆಲೂರಿನಲ್ಲಿ ದೊರೆತಿದೆ. ಇದು ಈ ಪ್ರದೇಶದ ಏಕೈಕ ನೆಲೆಯಾಗಿದೆ.[೧೫] ದೊರೆತಿರುವ ಉಪಕರಣಗಳ ಹಿನ್ನೆಲೆಯಲ್ಲಿ ಯಾವುದೇ ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಇನ್ನೂ ಹೆಚ್ಚಿನ ನೆಲೆಗಳು ದೊರೆತಲ್ಲಿ ಈ ಸಂಸ್ಕೃತಿಯ ಬಗೆಗೆ ಹೆಚ್ಚಿನ ವಿವರಣೆ ಪಡೆದುಕೊಳ್ಳಲು ಸಾಧ್ಯವಾಗುತ್ತದೆ.

### ೨.೨.೩. ನೂತನ ಶಿಲಾಯುಗ ಸಂಸ್ಕೃತಿ

ಗ್ರೀಕ್ ಭಾಷೆಯಲ್ಲಿ ನಿಯೋ ಎಂದರೆ ನವೀನ/ಹೊಸದು, ಲಿತಿಕ್ ಎಂದರೆ ಸ್ಟೋನ್ ಎಂಬ ಅರ್ಥವಿದೆ. ಈ ಹಂತದಲ್ಲಿ ಮನುಷ್ಯ ಜೀವನದ ರೀತಿ ನೀತಿಗಳು ಸಾಕಷ್ಟು ಬದಲಾವಣೆಗೊಂಡಿದ್ದವು. ಅಲ್ಲದೆ ಈ ಕಾಲಘಟ್ಟದಲ್ಲಿ ಶಿಲಾಯುಧಗಳನ್ನು ಉಜ್ಜಿ ನಯಗೊಳಿಸಿ ತಯಾರಿಸುತ್ತಿದ್ದುದರಿಂದಾಗಿ ಈ ಯುಗವನ್ನು ನೂತನ ಶಿಲಾಯುಗ ಸಂಸ್ಕೃತಿ (ನಿಯೋಲಿತಿಕ್ ಕಲ್ಚರ್) ಎಂದು ಕರೆಯಲಾಗುತ್ತದೆ.

ನೂತನ ಶಿಲಾಯುಗವು ಮಾನವನ ಜೀವನ ವಿಕಾಸದಲ್ಲೂ ಕ್ರಾಂತಿಕಾರಕವಾದುದು. ಈ ಯುಗವು ಸ್ಥಿರ ಜೀವನದ ಸಂಕೇತವಾಗಿದೆ. ಆಹಾರಕ್ಕಾಗಿ ಅಲೆಯುವುದರ ಬದಲಾಗಿ ಮಾನವನು ಆಹಾರವನ್ನು ಉತ್ಪಾದಿಸಲು ಭೂಮಿಯನ್ನು ಉಳುವುದು, ಹಣ್ಣು ಹಾಗೂ ಧಾನ್ಯಗಳನ್ನು ಬೆಳೆಯಲಾರಂಭಿಸಿದ.

ಕರ್ನಾಟಕದಲ್ಲಿ ನೂತನ ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದ ಶೋಧನೆಗಳು ಪ್ರಥಮವಾಗಿ ೧೮೭೨ರಲ್ಲಿ ಶೋಧಿತವಾದವು.[೧೬] ಪ್ರೇಸರ್ ಅವರು ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ಬೆಟ್ಟದಲ್ಲಿ ನೂತನ ಶಿಲಾಉಪಕರಣ ಹಾಗೂ ವಾಸ್ತವ್ಯದ ನೆಲೆಯೊಂದನ್ನು ಗುರುತಿಸಿದರು. ರಾಬರ್ಟ್ ಬ್ರೂಸ್‌ಪೂಟ್ ಅವರು ಕೋಲಾರ ಜಿಲ್ಲೆ ಶ್ರೀನಿವಾಸಪುರ ಮತ್ತು ಬೀರಮಂಗಲ್ ನೆಲೆಗಳನ್ನು ಶೋಧಿಸಿದರು. ಈ ನಿವೇಶನಗಳ ಅಧ್ಯಯನದಿಂದಾಗಿ ಕರ್ನಾಟಕದಲ್ಲಿ ಈ ಸಾಂಸ್ಕೃತಿಕ ಹಂತವು ಉಚ್ಛ್ರಾಯ ಸ್ಥಿತಿಯಲ್ಲಿದ್ದದ್ದು ತಿಳಿಯುತ್ತದೆ. ಮುಖ್ಯ ಅವಶೇಷಗಳಾದ ವೈವಿಧ್ಯ ಶಿಲಾಉಪಕರಣಗಳು ಮಣ್ಣಿನ ಪಾತ್ರೆಗಳು, ಶವಸಂಸ್ಕಾರ ಪದ್ಧತಿ, ಕಲೆಗಾರಿಕೆ ಮುಂತಾದ ಅನೇಕ ವಿಷಯಗಳ ಕುರಿತು ಮಹತ್ವದ ಮಾಹಿತಿಗಳು ತಿಳಿದುಬಂದಿವೆ. ಈ ಸಾಂಸ್ಕೃತಿಕ ಹಂತಗಳ ಉತ್ಖನನ ಫಲಿತಾಂಶ ಹಾಗೂ ದೊರೆತ ವಿವಿಧ ವೈಜ್ಞಾನಿಕ ಕಾಲಮಾನದನ್ವಯದಂತೆ ಮೂರು ಹಂತಗಳೆಂದು ತಿಳಿಯಲಾಗಿದ್ದು, ಮೊದಲನೆಯ ಹಂತ ಕ್ರಿ.ಪೂ. ೨೦೦೦-೧೭೦೦, ಎರಡನೆ ಹಂತ ಕ್ರಿ.ಪೂ. ೧೭೦೦-೧೪೦೦ ಮತ್ತು ಮೂರನೇ ಹಂತ ಕ್ರಿ.ಪೂ. ೧೪೦೦ ರಿಂದ ೧೦೦೦ವರೆಗೆ ಇತ್ತೆಂದು ತಿಳಿಯಲಾಗಿದೆ.

ಗದಗ ಜಿಲ್ಲೆಯು ಪ್ರಾಕೃತಿಕ ಸಂಪತ್ತಿನಿಂದ ಹಾಗೂ ಅದರಲ್ಲಿಯೂ ಸ್ಥಳೀಯವಾಗಿ ದೊರೆತ ಸ್ಥಳಗಳೆಂದರೆ ೨೦೦೫ರ ಉತ್ಖನನದಿಂದ ಲಕ್ಕುಂಡಿಯಲ್ಲಿ ನೂತನ ಶಿಲಾಯುಗದ ಕುಣಿಗಳು ಪತ್ತೆಯಾಗಿವೆ. ಗದಗ ಜಿಲ್ಲೆಯಲ್ಲಿ ಒಟ್ಟು ೨೬ ನೆಲೆಗಳು ಕಂಡುಬಂದಿದ್ದು,[೧೭] ಅವುಗಳಲ್ಲಿ ಗದಗ ತಾಲೂಕಿನ ಬೆನಕೊಪ್ಪದಲ್ಲಿ ಶಿಲಾಪಕರಣ ದೊರೆತರೆ, ನರಗುಂದ ತಾಲೂಕಿನ ೮ ನೆಲೆ(ಅರಶಿಣಗೋಡು, ಬೆಣಚಮಟ್ಟಿ, ಹಲಗೊಪ್ಪ, ಕುರುವಿನಕೊಪ್ಪ, ಲಿಂಗದಹಳ್ಳಿ, ವಾರಗುಂದ, ಹಿರೇಕೊಪ್ಪ ಮತ್ತು ಶಿರೋಳ)ಗಳಲ್ಲಿ ನೂತನ ಶಿಲಾಯುಗದ ಕೊಡಲಿ ಉಪಕರಣ, ಸೂಕ್ಷ್ಮಶಿಲೋಪಕರಣಗಳಲ್ಲಿ ಮುಖ್ಯವಾಗಿ

ಇಬ್ಬದಿ ನೀಳಚೆಕ್ಕೆ, ಚರ್ಪ್ ಶಿಲೆಯ ಮೂಲ ಶಿಲಾಗಟ್ಟಿಗಳು ದೊರೆತಿವೆ. ರೋಣ ತಾಲೂಕಿನ ೭ ನೆಲೆ(ಅಮರಗೋಳ, ನಿಡಗುಂದಿ, ಮೆಣಸಗಿ, ಯಾವಗಲ್ಲ, ಲಿಂಗದಾಳ, ಹಡಗಲಿ ಮತ್ತು ಸವಡಿ)ಗಳಲ್ಲಿ ಉಜ್ಜಿ ನಯಗೊಳಿಸಿದ ಶಿಲಾ ಕೊಡಲಿ ಹಾಗೂ ಮತ್ತಿತರ ಉಪಕರಣಗಳು ಕಂಡುಬಂದಿವೆ. ಈ ನೆಲೆಗಳಲ್ಲಿ ಬ್ರಹ್ಮಗಿರಿ ಮಾದರಿಯ ಬೂದು ಹಾಗೂ ಕಂದು ವರ್ಣದ ಮಡಕೆ ಭಾಗಗಳು ದೊರೆತಿವೆ. ಶಿರಹಟ್ಟಿ ತಾಲೂಕಿನಲ್ಲಿ ೧೦ ನೆಲೆ(ಜೀರಮಾದವಪುರ, ನವೆಭಾವನೂರ, ನಿಟ್ಟೂರು, ಬಟ್ಟೂರು, ಯವಟ್ಟಿ, ಲಕ್ಷ್ಮೇಶ್ವರ, ಸಂಖದಾಳ, ಹುಲ್ಲೂರು ಮತ್ತು ಹೊಳಲಾಪುರ)ಗಳಲ್ಲಿ ಶಿಲೋಪಕರಣ ಮತ್ತು ಮಡಿಕೆ ಭಾಗಗಳು ದೊರೆತಿವೆ. ಹೀಗೆ ಈ ಜಿಲ್ಲೆಯಲ್ಲಿ ವೈಶಿಷ್ಟ್ಯಪೂರ್ಣವಾದ ಮಡಿಕೆ ಮಾದರಿಗಳು ಅಲ್ಲದೇ ಹಲವು ನೆಲೆಗಳಲ್ಲಿ ನೂತನ ಯುಗದ ಸೂಕ್ಷ್ಮ ಶಿಲೋಪಕರಣಗಳು ಕಂಡುಬಂದಿದ್ದು, ಈ ಸಂಸ್ಕೃತಿಯ ಆರಂಭದ ಹಂತದಿಂದ ಮುಂದುವರಿದ ಹಂತದ ಬೆಳವಣಿಗೆಯನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ.

### ೨.೨.೪. ಶಿಲಾ ತಾಮ್ರಯುಗ ಸಂಸ್ಕೃತಿ

ನೂತನ ಶಿಲಾಯುಗದ ಮಾನವನು ಕಲ್ಲಿನ ಜೊತೆಗೆ ತಾಮ್ರದ ಬಳಕೆ ಆರಂಭವಾಯಿತು. ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಗೊಂಬೆ, ಆಯುಧ ಮೊದಲಾದವುಗಳನ್ನು ಮಾಡಲಾಗುತ್ತಿತ್ತು. ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳನ್ನು ಬಳಸುತಿದ್ದ, ಈ ಸಂಸ್ಕೃತಿಯನ್ನು ಶಿಲಾ ತಾಮ್ರಯುಗ(ಚಾಲ್ಕೋಲಿಥಿಕ್ ಪಿರಿಯಡ್)ವೆಂದು ಕರೆಯಲಾಗುತ್ತದೆ. ಚಾಲ್ಕೋಲಿಥಿಕ್ ಎಂದರೆ ತಾಮ್ರ ಮತ್ತು ಕಲ್ಲು ಎಂದು ಅರ್ಥ. ನೂತನ ಶಿಲಾಯುಗದ ಸಂಸ್ಕೃತಿಯ ನಂತರ ವಿಕಸನಗೊಂಡ ಈ ಹಂತದಲ್ಲಿ ತಾಮ್ರದ ಆಯುಧಗಳ ಬಳಕೆ, ಸುಟ್ಟ ಮಣ್ಣಿನ ಪಾತ್ರೆಗಳ ಬಳಕೆ, ಸುಧಾರಿಸಿದ ಬೇಸಾಯ ಪದ್ಧತಿಯ ಅಳವಡಿಕೆ ಈ ಸಾಂಸ್ಕೃತಿಕ ಹಂತದ ಮುಖ್ಯ ಲಕ್ಷಣಗಳು.[೧೮] ಕರ್ನಾಟಕಕ್ಕೆ ಸಂಬಂಧಿಸಿದಂತೆ ಸುಧಾರಿತ ಮಣ್ಣಿನ ಪಾತ್ರೆಗಳ ಬಳಕೆ ಅದರೊಂದಿಗೆ ಅಲ್ಪಪ್ರಮಾಣದ ಲೋಹದ ಬಳಕೆ ಜೊತೆಗೆ ಶಿಲೋಪಕರಣಗಳನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಈ ಶಿಲಾ ತಾಮ್ರಯುಗ ಸಂಸ್ಕೃತಿಯ ಕಾಲಮಾನವು ಸುಮಾರು ಕ್ರಿಪೂ. ೧೩೦೦-೮೦೦ ಎಂದು ನಿರ್ಧರಿಸಲಾಗಿದೆ.

ಶಿಲಾ ತಾಮ್ರಯುಗದ ಸಂಸ್ಕೃತಿಯು ದಕ್ಷಿಣ ಭಾರತದಲ್ಲಿ ತನ್ನದೇ ಆದ ನಿರ್ದಿಷ್ಟತೆಯನ್ನು ಹೊಂದಿರುವದನ್ನು ಕಾಣಬಹುದು. ಮುಖ್ಯವಾಗಿ ಕರ್ನಾಟಕ ಪ್ರದೇಶದಲ್ಲಿ ಈ ಸಂಸ್ಕೃತಿಯು ನಿರ್ದಿಷ್ಟ ನೆಲೆಗಳಲ್ಲಿ ಕಂಡು ಬಂದಿದ್ದು, ಪ್ರಸ್ತುತ ಪ್ರದೇಶದ ನೆರೆಯ ಪ್ರದೇಶಗಳಾದ ಮಸ್ಕಿ ಹಾಗೂ ಬ್ರಹ್ಮಗಿರಿಗಳಲ್ಲಿದ್ದಂತಹ ಅವಶೇಷಗಳನ್ನು ಇಲ್ಲಿಯೂ ಕಂಡುಕೊಳ್ಳಲಾಗಿದೆ. ಗದಗ ಜಿಲ್ಲೆಯ ರೋಣ ತಾಲೂಕಿನಲ್ಲಿ ಮಾತ್ರ ಈ ಹಂತದ ನೆಲೆಗಳು ಕಂಡುಬಂದಿದ್ದು, ಅವುಗಳೆಂದರೆ ಕೌಜಗೇರಿ, ಬಸರಕೋಡ, ಬೆಳವಣಿಕಿ, ಹಿರೇಹಾಳ ಮತ್ತು ಹೊಳೆಆಲೂರ.[೧೯] ಈ ಎಲ್ಲಾ ನೆಲೆಗಳಲ್ಲಿಯೂ

ಮುಖ್ಯವಾಗಿ ಬ್ರಹ್ಮಗಿರಿ ಮಾದರಿಯ ಕಂದುಬಣ್ಣದ ಮಡಿಕೆ ಭಾಗಗಳು ದೊರೆತಿರುವುದರ ಜೊತೆಗೆ ನಿರ್ದಿಷ್ಟ ನೆಲೆಗಳಲ್ಲಿ ಇಬ್ಬದಿ ನೀಳಚೆಕ್ಕೆ ಉಬ್ಬೇಣು, ನೀಳಚಕ್ಕೆ ಉಪಕರಣಗಳು ಕಂಡು ಬಂದಿದ್ದು, ಇವುಗಳನ್ನು ಚರ್ಪ್ ಶಿಲೆಯಲ್ಲಿ ಲೋಹಯುಗದ ಮೆದು ಹಂತದ ಶಿಲಾ ತಾಮ್ರಯುಗದ ಸಂಸ್ಕೃತಿಯು ಇದ್ದುದನ್ನು ಕಾಣಬಹುದು.

### ೨.೨.೫. ಬೃಹತ್ ಶಿಲಾಯುಗದ ಸಂಸ್ಕೃತಿ

ತಾಮ್ರ ಮತ್ತು ಕಂಚಿನ ಲೋಹಕ್ಕೆ ಬದಲಾಗಿ ಕಬ್ಬಿಣವನ್ನು ಉಪಯೋಗಿಸಲಾರಂಭಿಸಿದ್ದು, ಮಾನವನ ಇತಿಹಾಸದಲ್ಲಿ ಒಂದು ಮಹತ್ವದ ಮೈಲುಗಲ್ಲು. ಈ ಸಂಸ್ಕೃತಿಯ ಜನರು ಕುತೂಹಲಕರವಾದ ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗದ ಸಂಸ್ಕೃತಿ (ಮೆಗಾಲಿಥಿಕ್ ಕಲ್ಚರ್) ಎಂದು ಕರೆಯಲಾಗುತ್ತಿದೆ. ಜೊತೆಗೆ ಈ ಹಂತದಲ್ಲಿ ಕಬ್ಬಿಣದ ಬಳಕೆ ಆರಂಭಗೊಂಡಿದ್ದರಿಂದ ಈ ಕಾಲವನ್ನು ಕಬ್ಬಿಣ ಯುಗವೆಂತಲೂ (ಐರನ್ ಏಜ್) ಕರೆಯಲಾಗುತ್ತದೆ. ಈ ಕಾಲದ ಕಲ್ಲು ಗೋರಿಗಳು ಈ ಜನರ ಪಾರಂಪರಿಕ ನಂಬಿಕೆಗಳ ತಳಹದಿಯ ಮೇಲೆ ರೂಪಿತವಾಗಿದ್ದು ಅತ್ಯಂತ ಮಹತ್ವ ಪಡೆದಿವೆ. ಈ ಸಂಸ್ಕೃತಿಯ ಕಾಲಮಾನವು ಉತ್ತರ ಕರ್ನಾಟಕದಲ್ಲಿ ಕ್ರಿಪೂ. ೧೨೦೦–೧೦೦೦ ಸುಮಾರಿಗೆ ಆರಂಭವಾಗಿ ಕ್ರಿಪೂ. ೧೨೦೦–೨೫೦ರವರೆಗೆ ಪ್ರವರ್ಧಮಾನ ಹೊಂದಿದ್ದಿತೆಂದು ಗುರುತಿಸಲಾಗಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಹಂತದಲ್ಲಿ ಮಾನವನು ಮುಖ್ಯವಾಗಿ ಕಬ್ಬಿಣದ ಬಳಕೆಯನ್ನು ರೂಡಿಸಿಕೊಂಡಿದ್ದು ಹಾಗೂ ತನ್ನದೇ ರೀತಿಯಲ್ಲಿ ಮಡಕೆ ಮಾದರಿಗಳನ್ನು ರೂಪಿಸಿಕೊಂಡಿದ್ದನ್ನು ಕಾಣಬಹುದು. ಈ ಸಂಸ್ಕೃತಿಯ ಹಂತದಲ್ಲಿ ಮುಖ್ಯವಾಗಿ ಒಂದು ವಾಸ್ತವದ ನೆಲೆಯಾದರೆ ಮತ್ತೊಂದು ಗೋರಿ ನೆಲೆ. ವಾಸ್ತವ್ಯದ ನೆಲೆಗಳಲ್ಲಿ ರೂಢಿ ಮೂಲವಾದಂತೆ ಕಪ್ಪು-ಕೆಂಪು ವರ್ಣದ ಮಡಿಕೆ ಭಾಗಗಳು ಕಂಡು ಬಂದಿವೆ. ಅವುಗಳಲ್ಲಿ ಪ್ರಮುಖವಾಗಿ ರೋಣ ತಾಲೂಕಿನ ಗೌಡಗೇರಿ ಹಾಗೂ ಹಿರೇಹಾಳ ಮತ್ತು ಶಿರಹಟ್ಟಿ ತಾಲೂಕಿನ ಇಟಗಿಯಲ್ಲಿ ಮಾತ್ರ ಕಂಡುಬಂದಿದೆ. ಗೌಡಗೇರಿ ನೆಲೆಯ ವಾಸ್ತವ್ಯದ ಜೊತೆಗೆ ಗೋರಿ ನೆಲೆಯೂ ಆಗಿದೆ. ಗದಗ ಜಿಲ್ಲೆಯಲ್ಲಿ ೧೪ ನೆಲೆಗಳಲ್ಲಿ ಗೋರಿಗಳನ್ನು ಗುರುತಿಸಲಾಗಿದ್ದು,[೨೦] ಇವು ರೋಣ ತಾಲೂಕಿನಲ್ಲಿ ಅತೀ ಹೆಚ್ಚು ಅಂದರೆ ೭ ನೆಲೆಗಳು, ಶಿರಹಟ್ಟಿ ತಾಲೂಕಿನಲ್ಲಿ ೬ ನೆಲೆಗಳು ಹಾಗೂ ನರಗುಂದ ತಾಲೂಕಿನಲ್ಲಿ ಬೈರನಹಳ್ಳಿ ನೆಲೆಯನ್ನು ಗುರುತಿಸಲಾಗಿದೆ.

ಒಟ್ಟಾರೆ ಗದಗ ಜಿಲ್ಲೆಯ ಭೂ ಭಾಗದಲ್ಲಿ ಕರ್ನಾಟಕದ ಇತರೆ ಭಾಗಗಳಂತೆ ಈ ಪ್ರದೇಶದಲ್ಲಿಯೂ ಪೂರ್ವೇಇತಿಹಾಸದ ಕಾಲಮಾನದಿಂದಲೂ ಜನಜೀವನ ಇದ್ದುದನ್ನು ಗುರುತಿಸಬಹುದಾಗಿದೆ. ಆದರೆ ಈ ಪ್ರದೇಶದಲ್ಲಿ ಯಾವುದೇ ಉತ್ಖನನ ನಡೆದಿಲ್ಲ. ಹೆಚ್ಚಿನ ಮಾಹಿತಿಯನ್ನು ಪಡೆಯಲು ಈ ಪ್ರದೇಶದಲ್ಲಿಯೇ ಉತ್ಖನನ ಅವಶ್ಯಕತೆಯಿದ್ದು ಇಲ್ಲಿನ ಪ್ರಾಗಿತಿಹಾಸದ

ಮಾನವನ ಸಮೃದ್ಧತೆಯ ಬಗೆಗೆ ತಿಳಿಯಲು ಅಗತ್ಯವಾಗಿ ಆಗಬೇಕಿರುವ ಕಾರ್ಯವಾಗಿದೆ. ಹೀಗೆ ಗದಗ ಜಿಲ್ಲೆಯು ಕರ್ನಾಟಕ ಭೂಭಾಗದ ಒಂದು ಆಯಕಟ್ಟಿನ ಸ್ಥಳದಲ್ಲಿದ್ದು, ಇದು ಸಮೃದ್ಧವಾದ ಮಾನವನ ಇತಿಹಾಸವನ್ನು ಹೊಂದಿರುವ ಸ್ಥಳವೆಂದು ತಿಳಿದುಬರುತ್ತದೆ. ಅದೇ ರೀತಿ ಇಲ್ಲಿನ ನಿಸರ್ಗದ ಹಿನ್ನೆಲೆಯಾಗಿ ಈ ಪ್ರದೇಶವು ತನ್ನದೇ ವೈಶಿಷ್ಟ್ಯಪೂರ್ಣ ಜೀವನ ಕ್ರಮವನ್ನು ರೂಢಿಗೊಳಿಸಿಕೊಂಡು ಕಾಲಮಾನದುದ್ದಕ್ಕೂ ಒಂದು ಪ್ರಮುಖವಾದ ಪ್ರದೇಶವಾಗಿದ್ದನ್ನು ಕಂಡುಕೊಳ್ಳಬಹುದಾಗಿದೆ. ಈ ಭಾಗದಲ್ಲಿ ಕರ್ನಾಟಕದ ಇತರೆ ಕಡೆಗಳಂತೆ ಈ ಪ್ರದೇಶದಲ್ಲಿಯೂ ಪೂರ್ವಇತಿಹಾಸದ ಕಾಲಮಾನದಿಂದಲೂ ಜನಜೀವನ ಇದ್ದುದನ್ನು ಕಾಣಬಹುದು. ಇಲ್ಲಿನ ಪ್ರಾಗಿತಿಹಾಸದ ಮಾನವನ ಸಮೃದ್ಧತೆಯ ಬಗೆಗೆ ತಿಳಿಯಲು ಅತ್ಯಗತ್ಯವಾಗಿ ಉತ್ಖನನದ ಅವಶ್ಯಕತೆ ಇದೆ.

**ಗದಗ ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ದೊರೆತಿರುವ ನೆಲೆಗಳ ವಿವರ**

| ಕ್ರ. ಸಂ. | ತಾಲ್ಲೂಕು | ಹಳೆ ಶಿಲಾ ಯುಗ | | | ಸೂಕ್ಷ್ಮ ಶಿಲಾ ಯುಗ | ನೂತನ ಶಿಲಾ ಯುಗ | ಶಿಲಾ ತಾಮ್ರ ಯುಗ | ಬೃಹತ್ ಶಿಲಾ ಯುಗ | | ಇತಿಹಾಸ ಆರಂಭ ಕಾಲ | ಒಟ್ಟು |
|---|---|---|---|---|---|---|---|---|---|---|---|
| | | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | |
| ೧. | ಗದಗ | – | – | – | – | ೧ | – | – | – | ೧ | ೨ |
| ೨ | ನರಗುಂದ | ೨ | – | – | – | ೮ | – | – | ೧ | ೧ | ೧೨ |
| ೩ | ಮುಂಡರಗಿ | ೧ | – | – | – | – | – | – | – | ೧ | ೨ |
| ೪ | ರೋಣ | ೮ | – | – | ೧ | ೭ | ೫ | ೨ | ೭ | ೬ | ೩೬ |
| ೫ | ಶಿರಹಟ್ಟಿ | ೩ | – | – | – | ೧೦ | – | ೧ | ೬ | ೧೬ | ೩೬ |
| | ಒಟ್ಟು | ೧೪ | – | – | ೧ | ೨೬ | ೫ | ೩ | ೧೪ | ೨೫ | ೮೮ |

## ೨.೩. ಚಾರಿತ್ರಿಕ ಹಿನ್ನೆಲೆ:

### ಗದಗ: ನಾಮ ವಿವೇಚನೆ

ಗದುಗಿಗೆ ಎರಡು ಸಾವಿರ ವರುಷಗಳ ಇತಿಹಾಸವಿದೆ. ಇದು ಪುರಾಣ ಕಾಲದಿಂದಲೂ ಪ್ರಸಿದ್ಧ ನಗರ. ಕೃತಕ, ಕ್ರತುಪುರ, ಕರ್ದುಗ, ಕಳ್ದುಗ, ಗದುಗ ಮುಂತಾಗಿ ಗದುಗಿಗೆ ಹೆಸರುಗಳುಂಟು.[೨೦] ಕ್ರತು ಎಂದರೆ ಸಂಸ್ಕೃತದಲ್ಲಿ ಯಜ್ಞ ಎಂದರ್ಥ. ಹಿಂದೆ ಜನಮೇಜಯ ರಾಜನು ಸರ್ಪಯಜ್ಞವನ್ನು ಇದೇ ಸ್ಥಳದಲ್ಲಿ ಮಾಡಿದ್ದರಿಂದ (ವೀರನಾರಾಯಣ ದೇವಸ್ಥಾನದಲ್ಲಿ ಈಗಲೂ ದಕ್ಷಿಣ ದ್ವಾರದ ಮಗ್ಗಲಿಗೆ ಸರ್ಪೇಶ್ವರ ದೇವಸ್ಥಾನವಿದೆ) ಗದುಗಿಗೆ ಕೃತುಪುರ ಎಂಬ ಹೆಸರು ಬಂದಿರಬಹುದು. ಕೃತಪುರವು ಜನಮೇಜಯನ ಕಾಲದಲ್ಲಿ ಪ್ರಸಿದ್ಧ ಅಗ್ರಹಾರ[೨೧] (ಅಗ್ರಹಾರ ಎಂದರೆ

ವೇದೋಪನಿಷತ್ತುಗಳನ್ನು ಬಲ್ಲ ಸಂಸ್ಕೃತ ಪಂಡಿತರ ಸಾಮೂಹಿಕ ವಸತಿಯ ವಿದ್ಯಾಕೇಂದ್ರ. ಈ ಸ್ಥಳಕ್ಕೆ ರಾಜ, ಮಹಾರಾಜರ ವಿಶೇಷ ಮನ್ನಣೆ ಇರುತ್ತಿತ್ತು) ಆಗಿತ್ತೆಂದು ತಿಳಿದುಬರುತ್ತದೆ. ಈ ಕ್ರತುಕವು (ಗದಗು) ಬೆಳ್ವಲದ ದೊಡ್ಡ ಅಗ್ರಹಾರ. (ಕ್ರತುಕೋ ನಾಮ ಮಹಾಅಗ್ರಹಾರ;) ಪಾಂಡುಕುಲ ತಿಲಕನಾದ ಮಹಾರಾಜ ಜನಮೇಜಯ ಸರ್ಪಯಾಗ ಮಾಡಿ ತಪೋನಿಷ್ಟರೂ ವಿದ್ಯಾಸಂಪನ್ನರೂ ಆಗಿದ್ದ ಬೇರೆ ಬೇರೆ ಗೋತ್ರದ ೭೨ ಜನ ಬ್ರಾಹ್ಮಣರಿಗೆ ಭೂಮಿ, ಮನೆ, ಹೂದೋಟ ಹಾಗೂ ೭೨೮ ಗದ್ಯಾಣಗಳನ್ನು ತ್ರಿಕೂಟೇಶ್ವರ ದೇವಸ್ಥಾನಕ್ಕೆ ದಾನ ಕೊಟ್ಟ ವಿವರಗಳಿವೆ.[೨೩] ಗದುಗಿನ ಕುರಿತು ಶಬ್ದ ನಿಷ್ಪತ್ತಿ ಬೇರೆ ಬೇರೆ ಶಾಸನಗಳಲ್ಲಿ ಈ ರೀತಿ ಉಲ್ಲೇಖವಾಗಿದೆ. ಉದಾ; ೯೧೮ನೆಯ ಶಾಸನದಲ್ಲಿ[೨೪] ಕಳದೂಗ ಅಗ್ರಹಾರ, ೧೧೮೪ ಶಾಸನದಲ್ಲಿ[೨೫] ಕೃತಪುರ, ಗದುಗು ಎಂಬ ಶಬ್ದ ಪ್ರಯೋಗವುಳ್ಳ ೧೨೧೩ರ[೨೬] ಈ ಶಿಲಾಶಾಸನವು ತ್ರಿಕೂಟೇಶ್ವರ ದೇವಸ್ಥಾನದ ಪ್ರಾಕಾರದ ಗೋಡೆಯಲ್ಲಿದೆ. ಈ ಶಾಸನದ ೩೬ ಮತ್ತು ೩೯ ನೇ ಸಾಲುಗಳಲ್ಲಿ ಎರಡು ಕಡೆಗಳಲ್ಲಿ ಗದುಗು ಎಂಬ ಶಬ್ದ ಪ್ರಯೋಗವಾಗಿರುವುದನ್ನು ಈಗಲೂ ನೋಡಬಹುದಾಗಿದೆ. ೧೪-೧೫ನೆಯ ಶತಮಾನದ ಅವಧಿಯಲ್ಲಿ ಕುಮಾರವ್ಯಾಸ ಭಾರತದಲ್ಲಂತೂ ಗದುಗಿನ ಹೆಸರು ನಿರರ್ಗಳವಾಗಿ ಬಂದಿದೆ. ಶಂಕರ ಕವಿಯ ಚೋರಬಸವ ಚರಿತ್ರೆಯಲ್ಲಿ ಮಹಾಕವಿ ಚಾಮರಸನ ಹುಟ್ಟೂರಿನ ಬಗ್ಗೆ ಹೇಳುವಾಗ 'ನೀಂ ಪುಟ್ಟಿದೆಡೆ ಗದಗು'[೨೭] ಎಂಬ ಪ್ರಸ್ತಾಪ ಬಂದಿದೆ. (ಕಿಟ್ಟೆಲ್ ಕೋಶ)ದಲ್ಲಿ ಗದುಗು ಒಂದು ಸ್ಥಳನಾಮವೆಂದು ಮುದ್ರಿತವಾಗಿದೆ.

**ಕ್ರತು ಶಬ್ದನಿಷ್ಪತ್ತಿ**

ಇತಿಹಾಸ ಸಂಶೋಧಕ ಪಿ.ಬಿ. ದೇಸಾಯಿಯವರು ಮಂಗರಾಜ ನಿಘಂಟಿನ ಆಧಾರದಿಂದ ಕ್ರತು ಒಂದು ವನಸ್ಪತಿಯ ಹೆಸರೆಂದು, ಆದ್ದರಿಂದ ಈ ಹೆಸರು ಬಂತೆಂದು ಅಭಿಪ್ರಾಯಪಟ್ಟಿದ್ದಾರೆ.

**ಸಾಹಿತ್ಯ ಆಕರಗಳ ಪ್ರಕಾರ**

ಶಾಸನ ಹಾಗೂ ಸಾಹಿತ್ಯ ಪ್ರಮಾಣಗಳಿಂದ ಗದುಗಿಗೆ ತನ್ನದೇ ಆದ ಕನ್ನಡದ ರೂಪ ನಿಷ್ಪತ್ತಿ ಇರುವುದು ಸ್ಪಷ್ಟ.

ಕರ್ದುಕ>ಗಳ್ದುಗ>ಗದುನಂಗ> ಗದುನಗ>ಗದುಗ>ಗದಗ[೨೮]

**ಮುಸ್ಲಿಂ ಗ್ರಂಥಗಳ ಪ್ರಕಾರ:**

ಷಾಹನಾಮಾ ಇದು ಫಾರ್ಸಿ ಭಾಷೆಯಲ್ಲಿರುವ ಗ್ರಂಥ. ಇದರ ಕರ್ತೃ ಫಿರ್ದೋಸಿ. ಇವನು ೧೫ನೇ ಶತಮಾನದವನು. ಮುಸ್ಲಿಂ ದೊರೆಯೊಬ್ಬನು ಒಂದು ತರಹದ ವನಸ್ಪತಿ (ಕ್ರತು)ಯನ್ನು ಹುಡುಕಿ ತರಲು ಒಬ್ಬ ಪ್ರತಿನಿಧಿಯನ್ನು ದೇಶದ ಭಾಗಗಳಿಗೆ ಕಳಿಸುತ್ತಾನೆ. ಅವನು ಈ ಕ್ರತುಪುರಕ್ಕೆ[೨೯] ಬಂದು ಆ ವನಸ್ಪತಿಯನ್ನು ಪಡೆದನೆಂದು ತಿಳಿಸಿದೆ.

ಗದಗ ಜಿಲ್ಲೆಯ ಪ್ರದೇಶವು ಕನ್ನಡ ನಾಡಿನಲ್ಲಿ ಆಳಿದ ವಿವಿಧ ಅರಸ ಮನೆತನಗಳ ಆಳ್ವಿಕೆಗೆ ಒಳಪಡುತ್ತಾ ಬಂದಿರುವುದು ಸಮಕಾಲೀನ ಶಾಸನ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳಿಂದ ಮನದಟ್ಟಾಗುವುದು. ಆ ಜಿಲ್ಲೆಯನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಈ ಜಿಲ್ಲೆಯಾದ್ಯಂತ ಆಳ್ವಿಕೆ ಕೈಗೊಂಡಿದ್ದನ್ನು ವಿವಿಧ ಅರಸ ಮನೆತನಗಳು ಹಾಗೂ ಪ್ರಾಚೀನ ಆಡಳಿತ ವಿಭಾಗವನ್ನು ಕುರಿತು ಸಹ ನಿರೂಪಿಸಲಾಗಿದೆ. ಈ ಪರಿಸರದಲ್ಲಿ ಆಳ್ವಿಕೆ ಕೈಗೊಂಡಿದ್ದ ಅರಸರು, ರಾಣಿಯರು, ಮಹಾಮಂಡಳೇಶ್ವರರು, ಮಹಾಸಾಮಂತರು, ಗಾವುಂಡರು ದೇವಾಲಯ, ಕೆರೆ-ಬಾವಿ, ಪುಷ್ಕರಣಿಗಳನ್ನು ನಿರ್ಮಾಣಕ್ಕೆ ಉದಾರ ದಾನ ದತ್ತಿಗಳನ್ನು ನೀಡಿ ಪ್ರೋತ್ಸಾಹಿಸಿರುವುದನ್ನು ಕಾಣಬಹುದು.

ಇತಿಹಾಸ ಕಾಲದಲ್ಲಿ ಮೌರ್ಯರು, ಶಾತವಾನರು ಈ ಜಿಲ್ಲೆಯನ್ನು ಆಳಿದ್ದು ಐತಿಹಾಸಿಕ ಆಧಾರಗಳಿಂದ ತಿಳಿದುಬರುತ್ತದೆ. ಮುಂದೆ ಮೂರನೇ ಶತಮಾನದಿಂದ ಆಳ್ವಿಕೆ ನಡೆಸಿದ ಬನವಾಸಿ ಕದಂಬರು, ತಮ್ಮ ರಾಜ್ಯವನ್ನು ಇಲ್ಲಿಯವರೆಗೆ ವಿಸ್ತರಿಸಿದ್ದರು. ಬಾದಾಮಿಯ ಚಾಲುಕ್ಯರು ೬ರಿಂದ ೮ನೇ ಶತಮಾನದಲ್ಲಿ ಆಳ್ವಿಕೆ ಮಾಡಿದರು. ಆಗ ಇದು ಅವರ ಸಾಮ್ರಾಜ್ಯದ ಹೃದಯ ಭಾಗದಲ್ಲಿದ್ದಿತು. ಈ ಸಾಮ್ರಾಜ್ಯ ವ್ಯವಸ್ಥೆ ಮುಂದೆ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಕಲ್ಯಾಣ ಚಾಲುಕ್ಯರು ಮತ್ತು ವಿಜಯನಗರ ಕಾಲದವರೆಗೂ ಮುಂದುವರೆಯಿತು. ಆಗ ಈ ಪ್ರದೇಶದಲ್ಲಿ ಪೆರ್ಬಾಳ-೭೦, ಪುಲಿಗೆರೆ-೩೦೦, ಬೆಳ್ವೊಲ-೩೦೦, ಮಾಸವಾಡಿ-೧೪೦ ಎಂಬ ಆಡಳಿತ ವಿಭಾಗಗಳು ಅಸ್ತಿತ್ವದಲ್ಲಿದ್ದವು.

### ೨.೩.೧. ಮೌರ್ಯರು ಮತ್ತು ನಂದರು

ಮೌರ್ಯ ದೊರೆಗಳು ಉತ್ತರ ಭಾರತದ ಅರಸು ಮನೆತನದವರಾಗಿದ್ದರೂ ಕರ್ನಾಟಕ ಚರಿತ್ರೆಯಲ್ಲಿ ಅಶೋಕ ಸಾಮ್ರಾಟ (ಕ್ರಿ.ಶ.೨೭೩-೨೩೨)ನ ಆಳ್ವಿಕೆಯ ಅವಧಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಭೌಗೋಳಿಕವಾಗಿ ಅಶೋಕನ ಶಾಸನಗಳು ಕರ್ನಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಂಗಿರಾಮೇಶ್ವರ, ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೆಗೋಳ, ಗದಗ ಜಿಲ್ಲೆಯ ಪೂರ್ವದಲ್ಲಿರುವ ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿಗೊಂಡ, ರಾಯಚೂರು ಜಿಲ್ಲೆಯ ಮಸ್ಕಿ, ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಸನ್ನತಿಗಳಲ್ಲಿ ದೊರೆತಿವೆ. ಈ ಶಾಸನಗಳು ದಕ್ಷಿಣ ಭಾರತದಲ್ಲಿನ ಮೌರ್ಯರ ಬಗ್ಗೆ ವಿಶೇಷ ಬೆಳಕನ್ನು ಚೆಲ್ಲುತ್ತವೆ.

ಭಾರತದಾದ್ಯಂತ ಆಳಿದ ಮೌರ್ಯರಿಂದ ಇತಿಹಾಸ ಯುಗ ಆರಂಭವಾಗುತ್ತದೆ. ಆ ವೇಳೆಯಿಂದಲೇ ಕೆರೆ ನಿರ್ಮಾಣ ಶ್ರೇಷ್ಠತೆಯಲ್ಲಿ ಉನ್ನತ ಮಟ್ಟವನ್ನು ಹೊಂದಿತ್ತು. ಇದಕ್ಕೆ ಉದಾಹರಣೆ ಸೌರಾಷ್ಟ್ರದ ಜುನಾಗಡದ ಸುದರ್ಶನ ಸರೋವರ. ಕ್ರಿ ಶ. ೧೫೦ರ ಶಕ ರುದ್ರಧಾಮನರ ಶಾಸನವು ಮೌರ್ಯರಿಂದ ಶಕರ ಕಾಲದವರೆಗಿನ ಈ ಸರೋವರದ ಇತಿಹಾಸವನ್ನು ಹೇಳುವುದು. ಅದನ್ನು ಕಟ್ಟಿದವನು ಚಂದ್ರಗುಪ್ತ ಮೌರ್ಯನ ರಾಜ್ಯಪಾಲ ಪುಷ್ಯಗುಪ್ತ, ಅಶೋಕನ ರಾಜ್ಯಪಾಲ ತುಷಸ್ಪ ಅದಕ್ಕೆ ಕಾಲುವೆಗಳನ್ನು ಕಟ್ಟಿಸಿದ. ಈ ಅಣೆಕಟ್ಟಿನ ಇತಿಹಾಸ ಮೌರ್ಯರಿಂದ (ಕ್ರಿ.ಪೂ

೩೨೦) ಹಿಡಿದು ಗುಪ್ತರ (ಕ್ರಿ.ಶ. ೪೫೦) ಕಾಲದವರೆಗೆ ಹರಡಿಕೊಂಡಿದೆ. ೭೫೦ ವರ್ಷಗಳಿಗೂ ಹೆಚ್ಚುಕಾಲ ನಿಲ್ಲುವಂಥ ಜಲಾಶಯಗಳನ್ನು ಮೌರ್ಯರು ಕಟ್ಟಬಲ್ಲವರಾಗಿದ್ದರು ಎನ್ನುವುದನ್ನು ತೋರಿಸಲು. ಈ ಅಣೆಕಟ್ಟಿನ ಇತಿಹಾಸವೇ ಸಾಕು.[೩೦] ಮೌರ್ಯರು ಕರ್ನಾಟಕದ ಉತ್ತರ ಮತ್ತು ಮಧ್ಯಭಾಗದಲ್ಲಿ ಆಳ್ವಿಕೆಯನ್ನು ಮಾಡಿದ್ದರು. ಆ ಪ್ರದೇಶದಲ್ಲಿ ಅವರ ಉತ್ತರಾಧಿಕಾರಿಗಳಾದ ಶಾತವಾಹನರು ಮೌರ್ಯರಿಂದಲೇ ಕೆರೆ ಕಾಲುವೆ ನಿರ್ಮಾಣ ಕಲೆಯ ವಿಜ್ಞಾನವನ್ನು ಕಲಿತಿರಬೇಕು.

### ೨.೩.೨. ಶಾತವಾಹನರು

ಉತ್ತರ ಭಾರತದಲ್ಲಿ ಮೌರ್ಯ ಸಾಮ್ರಾಜ್ಯದ ಅವನತಿಯ ನಂತರ ದಕ್ಷಿಣ ಭಾರತದಲ್ಲಿ ಕರ್ನಾಟಕ ರಾಜಕೀಯ ಇತಿಹಾಸವು ಕ್ರಿ.ಶ. ೨ನೇ ಶತಮಾನದಲ್ಲಿ ಶಾತವಾಹನರ ಉದಯದಿಂದ ಆರಂಭಗೊಳ್ಳುತ್ತದೆ.

ಮೌರ್ಯರ ಸಾಮಂತರಾದ ಶಾತವಾಹನರು ದಕ್ಷಿಣ ದಿಕ್ಕಿನಲ್ಲಿ ಸ್ವತಂತ್ರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿ ಉತ್ತರ ಭಾರತದವರೆಗೆ ವಿಸ್ತರಿಸಿದರು. ಶಾತವಾಹನರ ಕಾಲದ ಪ್ರಸಿದ್ಧ ಅರಸ ಶ್ರೀ ಪುಳುಮಾವಿಯ ಒಂದು ಪ್ರಾಕೃತ ಶಾಸನ[೩೧] ನರಗುಂದ ತಾಲ್ಲೂಕಿನ ಗಡಿಯಲ್ಲಿ ದೊರೆತಿದೆ. ಈ ಶಾಸನದಲ್ಲಿ ಮಹಾದೇವ ಚಂಡಶಿವನ ದೇವಾಲಯ ಹಾಗೂ ಶಿಲ್ಪಿಯೊಬ್ಬನ ಉಲ್ಲೇಖವಿದೆ. ಇಲ್ಲಿ ಶಾತವಾಹನರ ಕಾಲದಲ್ಲಿ ಕೈಮಗ್ಗಗಳ ಉದ್ಯಮಕ್ಕೆ ಪ್ರಸಿದ್ಧಿಯನ್ನು ಹೊಂದಿತ್ತು. ಅಂಥ ಉದ್ಯಮದ ಕೇಂದ್ರಗಳ ವ್ಯಾಪಾರದಲ್ಲಿ ಕೆಲವು ಗದಗ ಜಿಲ್ಲೆಯನ್ನು ಒಳಗೊಂಡಿದ್ದವು ಎಂಬುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಅಷ್ಟಲ್ಲದೇ ಇವರ ಕಾಲದಲ್ಲಿ ಕೆರೆ-ಬಾವಿಗಳ ನಿರ್ಮಾಣ ಮಾಡಿದ್ದರ ಬಗ್ಗೆ ಅನೇಕ ಶಾಸನಗಳು ಮಾಹಿತಿಯನ್ನು ನೀಡುತ್ತವೆ. ಆದರೆ ಗದಗ ಜಿಲ್ಲೆಯಲ್ಲಿ ಇವರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ-ಬಾವಿಗಳ ಕುರಿತು ಮಾಹಿತಿ ಲಭ್ಯವಿರುವುದಿಲ್ಲ.

### ೨.೩.೩. ಬನವಾಸಿಯ ಕದಂಬರು

ಕದಂಬ ರಾಜವಂಶದ ಮಯೂರಶರ್ಮನ ಆಳ್ವಿಕೆಯ ಕುರುಹುಗಳು ಈ ಜಿಲ್ಲೆಯ ನೈರುತ್ಯ ಗಡಿಯಲ್ಲಿ ವಿಶೇಷವಾಗಿ ಕಂಡುಬಂದಿವೆ. ಕದಂಬರ ಆಳ್ವಿಕೆಯಲ್ಲಿ ವಿಷಯ, ಮಂಡಲ, ರಾಷ್ಟ್ರ ಎಂಬ ವಿಭಾಗಗಳಿದ್ದವು. ಕದಂಬ ರಾಜ್ಯವು ಈಗಿನ ಕರ್ನಾಟಕದ ಬೆಳಗಾವಿ, ಉತ್ತರಕನ್ನಡ, ಬಿಜಾಪುರ, ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಂಗಳೂರು ಮತ್ತು ಧಾರವಾಡ ಹಾಗೂ ಹಾವೇರಿ ಜಿಲ್ಲೆಗಳ ಬಹುಭಾಗಗಳನ್ನು ಒಳಗೊಂಡಂತೆ ವಿಸ್ತಾರವಾಗಿದೆ.

ಇವರು ಕೂಡ ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ್ದರು ಎಂಬುದಕ್ಕೆ ಕೆಳಗಿನ ಉದಾಹರಣೆ.

ಕದಂಬಾಣಂ ಮಯೂರವರ್ಮಣಾ

ತಟಾಕಂ ದೃಢೀಕೃತಂ ಅಭಿರೂಪ ರಚಯಿತ್ವಾ

ವಾನವಾಸಕಂ ಸ್ಥಾಪಿತ್ವಾ[೩೨]

ಇದು ಪ್ರಾಕೃತ ಮಿಶ್ರ ಸಂಸ್ಕೃತ ಭಾಷೆಯಲ್ಲಿದ್ದು, ಒಂದು ಸರ್ವಜನಿತ ದಾಖಲೆಯೊಂದಿಗೆ ನಾಲ್ಕನೇ ಶತಮಾನದಲ್ಲಿ ಕೆರೆ ನಿರ್ಮಾಣ ನಿರ್ವಹಣೆ ಮತ್ತು ಸೌಂದರ್ಯಕ್ಕಾಗಿ ಕನ್ನಡ ನಾಡಿನ ಪ್ರಥಮ ಸ್ವತಂತ್ರ ರಾಜ ಮನೆತನ ಮಾಡಿದ್ದು ತುಂಬಾ ಸ್ವಾರಸ್ಯಕರವಾಗಿದೆ.

ಹೀಗೆ ಇವರ ಆಳ್ವಿಕೆಯ ಕಾಲದಲ್ಲಿ ಅನೇಕ ಕೆರೆ-ಬಾವಿಗಳನ್ನು ನಿರ್ಮಾಣ ಮತ್ತು ದುರಸ್ತಿಗಳ ಶಾಸನಗಳು ಉಲ್ಲೇಖಗಳಿವೆ. ಉದಾ: ಚಿತ್ರದುರ್ಗದ ಬಳಿಯ ಚಂದ್ರವಳ್ಳಿಯ ಒಂದು ಕೆರೆ ಕಟ್ಟಿಸಿರುವುದಾಗಿ ಮಯೂರವರ್ಮನು ಹೇಳುತ್ತಾನೆ. ಆದರೆ ಶಾಸನದ ಪ್ರಕಾರ ಕೆರೆ ನಿರ್ಮಾಣ ಮಾಡಲಿಲ್ಲ ಅದನ್ನು ಜೀರ್ಣೋದ್ಧಾರ ಮಾಡಿದ ಬಗ್ಗೆ ತಿಳಿಸುವುದರಿಂದ ಈ ಹಿಂದೆಯೇ ಕೆರೆಗಳ ನಿರ್ಮಾಣದ ಬಗ್ಗೆ ಗೊತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇದು ಅತೀ ಪ್ರಾಚೀನ ಕೆರೆ ಆಗಿದೆ. ಕದಂಬರ ಎರಡನೆಯ ಕೆರೆ ದಾಖಲಾಗಿರುವದು ಕಾಕುತ್ಸವರ್ಮನ (೪೩೦ ರಿಂದ ೪೫೦) ಪ್ರಖ್ಯಾತವಾದ ತಾಳಗುಂದ ಶಾಸನದಲ್ಲಿ[೩೩] ಅಂದರೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ತಾಳಗುಂದದ ಪ್ರಣೇಶ್ವರ ಗುಡಿಯ ಎದುರಿಗೆ ಕೆರೆ ನಿರ್ಮಿಸಿದುರ ಬಗ್ಗೆ ಈ ಶಾಸನ ಹೇಳುತ್ತದೆ. ಕದಂಬರ ಕಾಲದ ಮೂರನೇ ಕೆರೆಯನ್ನು ರಾಜ ರವಿವರ್ಮನು ರಚಿಸಿ (೪೮೫ ರಿಂದ ೫೧೯) ಆತನು ಗುಡ್ಡತಟಾಕ ಎಂಬ ದೊಡ್ಡ ಕೆರೆಯನ್ನು ತೋಡಿಸಿ ಗುಡ್ನಾಪೂರ ಊರಿನ ಪ್ರವೇಶ ಭಾಗದಲ್ಲಿ ಒಂದು ದೊಡ್ಡ ಕೆರೆ ಇದೆ. ಇದು ಉತ್ತರ ಕನ್ನಡದ ಅತೀ ದೊಡ್ಡ ಕೆರೆಗಳಲ್ಲಿ ಒಂದು. ಈ ಕೆರೆ ನಮ್ಮ ಇತಿಹಾಸದಲ್ಲಿಯೇ ವಿಶಿಷ್ಟವಾದುದು ಇದು ೧೩ನೇ ಶತಮಾನದಿಂದಲೂ ಅಸ್ತಿತ್ವದಲ್ಲಿದ್ದು ಮತ್ತು ಎಡೆಬಿಡದೆ ಬಳಕೆಯಲ್ಲಿದೆ.

ಹೀಗೆ ಕದಂಬರು ಪ್ರಾಚೀನ ಕಾಲದಲ್ಲಿ ಕೆರೆಗಳ ನಿರ್ಮಾಣಕ್ಕೆ ಎಷ್ಟು ಪ್ರಾಮುಖ್ಯತೆಯನ್ನು ನೀಡುತ್ತಿದ್ದರು ಎಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಗದಗ ಜಿಲ್ಲೆ ಬನವಾಸಿ ಕದಂಬರ ಆಳ್ವಿಕೆಗೆ ಒಳಪಟ್ಟಿದ್ದರೂ ಅವರ ಕಾಲದ ಕುರುಹುಗಳು ಲಭ್ಯವಾಗಿಲ್ಲ. ಕ್ರಿ.ಶ. ೬ನೇ ಶತಮಾನದಲ್ಲಿ ಅಂತ್ಯಗೊಂಡ ಇವರ ಆಳ್ವಿಕೆ ತರುವಾಯ ಬಾದಾಮಿ ಚಾಲುಕ್ಯರು ಈ ಜಿಲ್ಲೆಯನ್ನು ತಮ್ಮ ಹಿಡಿತದಲ್ಲಿ ಇರಿಸಿಕೊಂಡರು.

### ೨.೩.೪. ಬಾದಾಮಿಯ ಚಾಲುಕ್ಯರು

ಬನವಾಸಿ ಕದಂಬರನ್ನೇ ಬದಿಗೊತ್ತಿ ರಾಜಕೀಯ ಯುಗವನ್ನು ಪ್ರವೇಶಿಸಿದ ಬಾದಾಮಿ ಚಾಲುಕ್ಯರು ಕ್ರಿ.ಶ. ೫ರಿಂದ ೮ನೇ ಶತಮಾನದವರೆಗೂ ಆಳ್ವಿಕೆ ನಡೆಸಿದ್ದಾರೆ. ಅವರ ಆಳ್ವಿಕೆಯು

ಕನ್ನಡನಾಡಿನ ಇತಿಹಾಸದಲ್ಲಿ ಒಂದು ರಚನಾತ್ಮಕ ಕಾಲವಾಗಿತ್ತು. ಬಾದಾಮಿ ಚಾಲುಕ್ಯರನ್ನು ಸಲ್ಕಿ ಅಥವಾ ಸಲುಕಿಗೆ ಸಂಬಂಧವಿರುವ ಕೃಷಿಕ ಮೂಲದವರು ಎಂದು ಹೇಳಬಹುದು.

ಇವರ ಕಾಲಕ್ಕೆ ಸೇರಿದ ಸುಮಾರು ೧೫೦ಕ್ಕೂ ಹೆಚ್ಚು ಶಾಸನಗಳು ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ದೊರೆತಿವೆ. ಗದಗ ಜಿಲ್ಲೆಯಲ್ಲಿಯೂ ಬಾದಾಮಿ ಚಾಲುಕ್ಯರ ಕಾಲದ ಶಾಸನಗಳು ಶಿಲ್ಪ, ವಾಸ್ತು ಅವಶೇಷಗಳ ಹಾಗೂ ಕೆರೆ-ಬಾವಿಗಳ ನಿರ್ಮಾಣಗಳು ಕಂಡುಬರುತ್ತವೆ. ಅವೆಲ್ಲವೂ ಆ ಕಾಲದ ಆಡಳಿತ ಹಾಗೂ ಅಂದಿನ ಕಾರ್ಯಚಟುವಟಿಕೆಗಳ ಬಗ್ಗೆ ಮಾಹಿತಿ ನೀಡುತ್ತವೆ.

ಬಾದಾಮಿ ಚಾಲುಕ್ಯರ ಆಳ್ವಿಕೆಯಲ್ಲಿ ವಾನಸತ್ತಿ ಅರಸ[೩೪] ಮುಳಗುಂದ ನಾಡಿನ ಪಶ್ಚಿಮ ಗಡಿಯಲ್ಲಿನ ಶಿರಗುಪ್ಪಿಯನ್ನು ಆಳುತ್ತಿದ್ದನೆಂದು ತಿಳಿಯುತ್ತದೆ. ಮುಳಗುಂದ-೧೨ರ ಗ್ರಾಮಗಳಲ್ಲೊಂದಾದ ಕುರ್ತಕೋಟಿಯನ್ನು ಚಾಲುಕ್ಯ ವಿಜಯಾದಿತ್ಯನ ಕಾಲದಲ್ಲಿ ಲೋಕ ತಿಮ್ಮಡಿಗನು ಆಳುತ್ತಿದ್ದ ಉಲ್ಲೇಖ ಅಲ್ಲಿನ ಶಾಸನದಲ್ಲಿ ಕಂಡುಬರುತ್ತದೆ.

ಬಾದಾಮಿ ಚಾಲುಕ್ಯರ ಲಾಂಛನವಾದ 'ವರಾಹ'[೩೫] ದೇವಾಲಯವೊಂದು ಮುಳಗುಂದದ ತಿಗಡಕೇರಿ ಓಣಿಯಲ್ಲಿದೆ. ಇದರಿಂದ ಈ ಪ್ರದೇಶವು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ.

ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದಲ್ಲಿ ಬಾದಾಮಿ ಚಾಲುಕ್ಯರ ಶಾಸನಗಳು ದೊರೆತಿವೆ. ಇವುಗಳು ಈ ಊರನ್ನು ಪುಲಿಗೆರೆ ಎಂದು ಉಲ್ಲೇಖಿಸುತ್ತವೆ. ಇದು ಪ್ರಾಚೀನ ಆಡಳಿತ ವಿಭಾಗದ ಮುಖ್ಯ ಕೇಂದ್ರವೂ ಆಗಿತ್ತು. ಶಿಗ್ಗಾವಿಯ ತಾಮ್ರಪಟವು ಲಕ್ಷ್ಮೇಶ್ವರದಲ್ಲಿ ಬಸದಿಗೆ ನೀಡಿದ ಶಾಸನಗಳ ವಿವರಗಳನ್ನು ತಿಳಿಸುವುದರೊಂದಿಗೆ ೧೪ ಜಲಾಶಯಗಳ ಬಗೆಗೆ ಮಾಹಿತಿಯನ್ನು ನೀಡಿರುವುದು ಗಮನಾರ್ಹ. ಇವರ ಕಾಲದಲ್ಲಿ ನಿರ್ಮಾಣಗೊಂಡ ಕೆರೆಗಳೆಂದರೆ, ೬ನೇ ವಿಕ್ರಮಾದಿತ್ಯನು (ಕ್ರಿ.ಶ.೬೭೦) ಒಂದು ಕೆರೆಯ ಕೆಳಗೆ ಗದ್ದೆಗಳನ್ನು ದಾನವಿತ್ತಿದ್ದನ್ನು ಅನುಗೊಂಡು ಶಾಸನ ದಾಖಲಿಸುತ್ತದೆ. ಚಾಲುಕ್ಯ ವಿಜಯೋತ್ಸವ (೭೦೭) ಶಿಗ್ಗಾವಿ ಶಾಸನವು[೩೬] ಗುಡ್ಡಿಕೆರೆ (ಗದಗ ಜಿಲ್ಲೆಯ ಗುಡಗೇರಿ) ಎಂಬ ದಾನ ಗ್ರಾಮದ ಸರಹದ್ದುಗಳನ್ನು ಹೇಳುತ್ತದೆ. ದಕ್ಷಿಣಕ್ಕೆ ವೆಣ್ಣ ಎಂಬ ಕೆರೆ, ಪಶ್ಚಿಮಕ್ಕೆ ಕಂಪೇರ ಎಂಬ ಕೆರೆ, ವಾಯವ್ಯಕ್ಕೆ ಕೋಡಿ ಕೆರೆ, ಉತ್ತರಕ್ಕೆ ಪುಲುವಾರು ಕೆರೆ, ಈಶಾನ್ಯಕ್ಕೆ ಮಕ್ಕೆರೆ ಮತ್ತು ಅರಸಾಳ ಕೆರೆ ಇದ್ದವು ಎಂದು ತಿಳಿಸುತ್ತದೆ. ಕಡಪಟ್ಟಿ ಮತ್ತು ಪೊಂಬಳ ಎಂಬ ಇನ್ನೊಂದು ದಾನಗ್ರಾಮಗಳ ಸರಹದ್ದಿನಲ್ಲಿ ಕುರಹಟ್ಟಿ ಕೆರೆ ಇತ್ತು. ಖಾನಾಪೂರ ಎಂಬ ದಾನ ಗ್ರಾಮದ ಉತ್ತರಕ್ಕೆ ಮಹಿಷಿವಾಣಿ ಕೆರೆಯ, ಈಶಾನ್ಯಕ್ಕೆ ಪುಲಿಕೆರೆಗಳಿದ್ದವು. ಆದ್ದರಿಂದ ೮ನೇ ಶತಮಾನದ ಆರಂಭದಲ್ಲಿ ಈ ಕೆರೆಗಳು ನಿರ್ಮಾಣಗೊಂಡಿವೆ. ಇದರಿಂದ ಧಾರವಾಡ ಪರಿಸರದಲ್ಲಿ ಕೆರೆಗಳ ವ್ಯೂಹ ಬೆಳೆದದ್ದನ್ನು ಸಮರ್ಥಿಸುತ್ತದೆ.

ರೋಣ ತಾಲೂಕಿನ ಕಾಲಕಾಲೇಶ್ವರ ಗುಡ್ಡ ಅಥವಾ ಕಳಕಪ್ಪನ ಗುಡ್ಡದ ದೇವಾಲಯದ ಎದುರಿನ ಬಂಡೆಯಲ್ಲಿ ಇತ್ತೀಚೆಗೆ ಅಪ್ರಕಟಿತ ಶಾಸನ[೩೭] ದೊರೆತಿದ್ದು, ಅದರಲ್ಲಿರುವ "ಶ್ರೀ ಬಾಕರಾಶಿಬಟರು" ಎಂಬ ಉಲ್ಲೇಖದ ಅಕ್ಷರಗಳು ಬಾದಾಮಿ ಚಾಲುಕ್ಯರ ಕಾಲದವಾಗಿವೆ. ಕಾಲದ ದೃಷ್ಟಿಯಿಂದ ಈ ಶಾಸನ ಗದಗ ಜಿಲ್ಲೆಯಲ್ಲಿ ಕಂಡುಬಂದಿರುವ ಬಾದಾಮಿ ಚಾಲುಕ್ಯರ ಪ್ರಾಚೀನ ಶಾಸನವಾಗಿದೆ.

ಬಾದಾಮಿ ಚಾಲುಕ್ಯರು ಈ ಪ್ರದೇಶದಲ್ಲಿ ದೇವಾಲಯ, ಜಿನಾಲಯ, ಪುಷ್ಕರಣಿ, (ಕೆರೆ-ಬಾವಿಗಳು) ನೀರಾವರಿ ಕಾಮಗಾರಿಗಳನ್ನು ಕೈಗೊಂಡಿರುವುದು ತಿಳಿದುಬರುತ್ತದೆ. ಇವರ ಕಾಲದ ಸಾಮಂತ ಅಧಿಕಾರಿಗಳು ಹಾಗೂ ಸಾಮಾಜಿಕ ಇತರೆ ವ್ಯಕ್ತಿಗಳು ಕೈಗೊಂಡ ಕಾಮಗಾರಿಗಳ ಬಗೆಗೆ ಸಾಕ್ಷ್ಯಾಧಾರಗಳು ದೊರೆತಿವೆ. ಇಂದಿಗೂ ಅವರ ಕಾಲದಲ್ಲಿ ನಿರ್ಮಿಸಿರುವ ಜಿನಾಲಯ ಇದೆ.

**೨.೩.೫. ಮಳಖೇಡದ ರಾಷ್ಟ್ರಕೂಟರು**

ಬಾದಾಮಿ ಚಾಲುಕ್ಯರ ತರುವಾಯ ರಾಜಕೀಯ ರಂಗವನ್ನು ಪ್ರವೇಶಿಸಿದ, ಮಳಖೇಡ ರಾಷ್ಟ್ರಕೂಟರು ದಕ್ಷಿಣ ಭಾರತದ ಬಹು ಭಾಗದಲ್ಲಿ (ಕ್ರಿ.ಶ ೭೫೭ ರಿಂದ ೯೭೩ ರವರೆಗೆ) ಆಳ್ವಿಕೆ ನಡೆಸಿದ್ದಾರೆ. ಇವರ ಸಾಮ್ರಾಜ್ಯವು ಕಾವೇರಿ ನದಿಯಿಂದ ನರ್ಮದಾ ನದಿಯವರೆಗೂ ವಿಸ್ತಾರವಾಗಿತ್ತು. ಅವರು ವ್ಯವಸ್ಥಿತವಾದ ಆಡಳಿತದ ವಿಭಾಗಗಳ ಅನುಕೂಲಕ್ಕಾಗಿ ತಮ್ಮ ವಿಶಾಲವಾದ ಸಾಮ್ರಾಜ್ಯವನ್ನು ಹಲವು ಮಂಡಲಗಳನ್ನಾಗಿ ವಿಂಗಡಿಸಿದ್ದರು. ಅವರಲ್ಲಿ ಕೆಲವು ಅರಸರು ನೇಮಕವಾಗಿ ಮತ್ತೆ ಕೆಲವರು ಅನುವಂಶಿಕವಾಗಿ ಆಳುತ್ತಿದ್ದರು. ಶಿರಹಟ್ಟಿ ತಾಲ್ಲೂಕಿನ ಹೆಬ್ಬಾಳದಲ್ಲಿ ದೊರೆತ ಕ್ರಿ.ಶ. ೯೭೫ರ ಶಾಸನವು[೩೮] ರಾಷ್ಟ್ರಕೂಟರ ೩ನೇ ಕೃಷ್ಣ ಆಳ್ವಿಕೆ ಮಾಡಿದ ಬಗ್ಗೆ ಉಲ್ಲೇಖಿಸುತ್ತದೆ. ಬಾದಾಮಿ ಚಾಲುಕ್ಯರನ್ನು ಸೋಲಿಸಿ ಅನಂತರ ಪಟ್ಟಕ್ಕೆ ಬಂದ ರಾಷ್ಟ್ರಕೂಟರ ಕಾಲದ ಅನೇಕ ಪುರಾವೆಗಳು ಈ ಜಿಲ್ಲೆಯಲ್ಲಿವೆ.

ಗದಗ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಶಾಸನಗಳು ಅಧಿಕ ಸಂಖ್ಯೆಯಲ್ಲಿ ದೊರೆತಿದ್ದು, ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಅಸುಂಡಿ ಕ್ರಿ.ಶ. ೯೨೫ರ ಶಾಸನ[೩೯], ಕುರ್ತಕೋಟಿ ಕ್ರಿ.ಶ. ೯೪೬ರ ಶಾಸನ[೪೦], ಗಾವರವಾಡ[೪೧], ಚಿಂಚಲಿ ಕ್ರಿ.ಶ. ೮೪೭ರ ಶಾಸನ[೪೨], ನಾಗಾವಿ ಕ್ರಿ.ಶ. ೯೪೯ರ ಶಾಸನ[೪೩], ನೀಲಗುಂದ ಕ್ರಿ.ಶ. ೮೬೬ರ ಶಾಸನ[೪೪], ಬೆಟಗೇರಿ[೪೫], ಬೆಂತೂರ ಕ್ರಿ.ಶ. ೮೬೬ರ ಶಾಸನ[೪೬], ಬೆಳಹೊಡ[೪೭], ಮುಳಗುಂದ.[೪೮], ವೆಂಕಟಾಪೂರ ಕ್ರಿ.ಶ. ೯೦೭ರ ಶಾಸನ[೪೯], ಶಿರುಂಜ[೫೦], ಸೊರಟೂರ ಕ್ರಿ.ಶ. ೮೬೮ರ ಶಾಸನ[೫೧], ಹರ್ಲಾಪುರ.[೫೨], ಕರಮುಡಿ[೫೩], ಕೌಜಗೇರಿ[೫೪], ನರೇಗಲ್ಲ ಕ್ರಿ.ಶ. ೯೫೦ರ ಶಾಸನ[೫೫], ರೋಣ[೫೬], ಸವಡಿ[೫೭], ಕೊಣ್ಣೂರ ಕ್ರಿ.ಶ. ೮೬೦ರ ಶಾಸನ[೫೮], ದಂಡಾಪುರ ಕ್ರಿ.ಶ. ೯೨೦ರ ಶಾಸನ[೫೯] ಗ್ರಾಮಗಳಲ್ಲಿ ದೊರೆತಿವೆ.

ರಾಷ್ಟ್ರಕೂಟರು ನೀರಾವರಿಗಾಗಿ ಕೆರೆ-ಬಾವಿ ನಿರ್ಮಿಸಿರುವುದನ್ನು ಕಾಣಬಹುದು. ಅವು ಮುಖ್ಯವಾಗಿ ಈ ಕೆಳಗಿನಂತಿವೆ. ಬಾಗಲಕೊಟೆ ಜಿಲ್ಲೆಯ ಹುನಗುಂದ ತಾಲೂಕಿನ ಕ್ರಿ.ಶ. ೮೩೭ರ ಕೇಸರಭಾವಿ ಶಾಸನದಲ್ಲಿ[೬೦] ಅಮೊಘವರ್ಷನಿಂದ ಅಥವಾ ಅವನ ಆಳ್ವಿಕೆಯಲ್ಲಿ ಒಂದು ಕೆರೆ ಮತ್ತು ಅದರ ತೂಬು ಕಟ್ಟಿಸಿದುದನ್ನು ದಾಖಲಿಸುತ್ತದೆ. ಅದೇ ರಾಜ್ಯದ ಆಳ್ವಿಕೆಯಲ್ಲಿ ಕ್ರಿ.ಶ. ೮೬೨ರ ಬಾಗೇವಾಡಿ ತಾಲೂಕಿನ ಹೂವಿನ ಹಿಪ್ಪರಗಿ ಶಾಸನವು[೬೧] ಎರಡು ಕೆರೆಗಳನ್ನು ದಾಖಲಿಸಿದೆ. ಇದೇ ಅವಧಿಯಲ್ಲಿ ಗದಗ ತಾಲೂಕಿನ ಚಿಂಚಲಿ ಶಾಸನವು[೬೨] ಖಾಸಗಿ ವ್ಯಕ್ತಿಯು ಕೆರೆಗೆ ನೀಡಿದ ದಾನವನ್ನು ದಾಖಲಿಸುತ್ತದೆ. ಕ್ರಿ.ಶ. ೮೭೨ರ ಅದೇ ಶಾಸನ[೬೩] ನೀರುಣಿ ಸುಂಕದ (ನೀರಿನ ಸಂಗ್ರಹಣೆ ಅಥವಾ ಬಳಕೆಗಾಗಿ ವಿಧಿಸುವ ಸುಂಕ) ಬಗ್ಗೆ ಹೇಳುತ್ತದೆ. ನೀಲಗುಂದದ ಶಾಸನವು[೬೪] ಅಮೋಘವರ್ಷ ನೃಪತುಂಗನ ಕಾಲದಲ್ಲಿ ಸಾಮಾಂತಾಧಿಪತಿಯಾಗಿದ್ದ ದೇವಣ್ಣಯ್ಯ ಬೆಳ್ವೊಲ-೩೦೦ನ್ನು ಆಳುತ್ತಿದ್ದಾಗ ಈತನ ಮೈದುನನಾದ ಕೂಲಪ್ಪಯ್ಯ ಮುಳಗುಂದ-೧೨ನ್ನು ಆಳುತ್ತಿದ್ದನೆಂದು ಹೇಳುತ್ತದೆ. ಕ್ರಿ.ಶ. ೯೫೦ರ ೩ನೇ ಕೃಷ್ಣನ ನರೇಗಲ್ಲ ಶಾಸನದಲ್ಲಿ[೬೫] ಮಾರಸಿಂಗಯ್ಯನು ಬಸದಿಗೆ ಹೊಂದಿಕೊಂಡಿರುವ ದಾನ ಶಾಲೆಗೆ ಕೆರೆಯನ್ನು ದಾನ ನೀಡಿದ ಬಗ್ಗೆ ತಿಳಿದುಬರುತ್ತದೆ. ಈ ಕೆರೆಯನ್ನು ನೀರಾವರಿ ಸೌಲಭ್ಯಕ್ಕಾಗಿ ಉಪಯೋಗಿಸುತ್ತಿದ್ದರು ಮತ್ತು ಕೆರೆಯ ನೀರನ್ನು ಉಪಯೋಗಿಸುತ್ತಿದ್ದ ಜನರ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದರೆಂದು ತಿಳಿದುಬರುತ್ತದೆ. ಇಂದಿಗೂ ಇದು ಕೊಂಡಿಕೊಪ್ಪ ಮತ್ತು ನರೇಗಲ್ಲ ಊರುಗಳ ಮಧ್ಯದಲ್ಲಿರುವ ಹಿರಿಯ ಕೆರೆಯೆಂದು ಪ್ರಸಿದ್ಧವಾಗಿದೆ. ಈ ಕೆರೆಯ ಸುತ್ತಲಿನ ಪ್ರದೇಶದಲ್ಲಿ ಕಲ್ಲಿನ ಕಾಲುವೆಗಳು ಇಂದಿಗೂ ಕಂಡುಬರುತ್ತವೆ. ಈ ಕೆರೆಗೆ ದಾನವನ್ನು ಗುಣಚಂದ್ರ ಪಂಡಿತರ ಮೂಲಕ ನೀಡಿದ್ದು, ಈ ದಾನವನ್ನು ೧೬ ರಿಂದ ೧೮ ಜನ ಸದಸ್ಯರು ರಕ್ಷಿಸುತ್ತಿದ್ದರು ಎಂಬುದು ಶಾಸನದಿಂದ ತಿಳಿದುಬರುತ್ತದೆ.

೪ನೇ ಗೋವಿಂದನ ಕ್ರಿ.ಶ. ೮೪೦ರ ದಂಡಾಪೂರ ಶಾಸನದಲ್ಲಿ[೬೬] ಕನ್ನಮೇಗೇರಿ ಕೆರೆಗೆ ಭೂಮಿದಾನ ಮಾಡಿದ್ದು ಮತ್ತು ಬೇರೆ ಬೇರೆ ವರ್ಗದ ಜನರು ವಿವಾಹದ ಸಂದರ್ಭದಲ್ಲಿ ಕೊಟ್ಟ ದಾನದಲ್ಲಿ ಕೆರೆಗೆ ದಾನ ನೀಡಿದ ಬಗ್ಗೆ ತಿಳಿದುಬರುತ್ತದೆ.

ಕ್ರಿ.ಶ. ೯೧೮ರ ಶಾಸನದಲ್ಲಿ[೬೭] ರಾಷ್ಟ್ರಕೂಟರ ದೊರೆ ಪ್ರಭೂತವರ್ಷನ ಆಳ್ವಿಕೆ ಕಾಲದಲ್ಲಿ ನನ್ನವೆಡಂಗನು ದಂಡಾಪೂರದ ಕೆರೆಗೆ ಭೂಮಿದಾನ ಮಾಡಿದನು. ಇದಲ್ಲದೆ ಬೇರೆ ಬೇರೆ ವರ್ಗದ ಜನರರಿಂದ ದಾನವಾಗಿ ಪಡೆದ ಹಣದಿಂದ ಈ ಕೆರೆಯನ್ನು ಜೀರ್ಣೋದ್ಧಾರ ಮಾಡುತ್ತಿದ್ದರು ಎಂಬುದು ಶಾಸನದಿಂದ ತಿಳಿದುಬರುತ್ತದೆ. ಒಟ್ಟಾರೆ ಇವರ ಕಾಲದಲ್ಲಿ ಕೆರೆಗಳ ನಿರ್ಮಾಣ ಮತ್ತು ದುರಸ್ತಿಗಳ ಮಾಹಿತಿ ಸಿಗುತ್ತದೆ. ಕುರ್ತಕೋಟಿ, ನರಗುಂದ, ಬೆಳ್ಳಟ್ಟಿ, ನಾಗಾವಿಗಳಲ್ಲಿ ಕೆರೆಗಳನ್ನು ಕಟ್ಟಿಸಿ ನೀರಾವರಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿರುವುದು ಮೇಲಿನ ಅಂಶಗಳಿಂದ ಗೊತ್ತಾಗುತ್ತದೆ.

## ೨.೩.೬. ಕಲ್ಯಾಣದ ಚಾಲುಕ್ಯರು

ಗದಗ ಜಿಲ್ಲೆಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ಶಾಸನಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಾಗಿದ್ದು, ಇಮ್ಮಡಿ ತೈಲಪನ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ. ೯೯೦ರ ಕಾಲದ ಶಾಸನದಿಂದ[೧೮] ಕ್ರಿ.ಶ. ೧೧೮೭ರ ನಾಲ್ವಡಿ ಸೋಮೇಶ್ವರ ಕಾಲದವರೆಗೆ ಅವು ವ್ಯಾಪಿಸಿವೆ. ಜಿಲ್ಲೆಯಲ್ಲಿ ಇವರ ಕಾಲಕ್ಕೆ ಸಂಬಂಧಿಸಿದ ೨೫ಕ್ಕೂ ಹೆಚ್ಚು ಶಾಸನಗಳು ಕೆರೆ ಬಾವಿಗಳ ಬಗ್ಗೆ ಉಲ್ಲೇಖ ನೀಡುವುದರಿಂದ ಇವರ ಕಾಲಘಟ್ಟವನ್ನು ಕೆರೆಗಳ ಸುವರ್ಣಯುಗವೆಂದು ಕೆರೆಯಬಹುದು. ವಿದ್ವಾಂಸರು ನೆಲೆಸುವುದಕ್ಕಾಗಿ ಅಸಂಖ್ಯಾತ ಹೊಸ ಅಗ್ರಹಾರಗಳ ನಿರ್ಮಾಣ, ಅಲ್ಲಿ ಕೆರೆ–ಬಾವಿ, ಛತ್ರ ಅಥವಾ ವಿಶ್ರಾಂತಿ ಗೃಹಗಳು ಹಾಗೂ ದೇವಸ್ಥಾನಗಳನ್ನು ಕಟ್ಟುವುದು ಈ ಕಾಲದಲ್ಲಿ ರೂಢಿಯಾಗಿತ್ತು. ಕೆರೆಯನ್ನು ಕಟ್ಟಿ ಮುಗಿಸಿದ ನಂತರ ಕೃತಜ್ಞತೆಯ ರೂಪವಾಗಿ ಒಂದು ಗುಡಿಯನ್ನು ಕೆರೆಯ ಹತ್ತಿರ ಕಟ್ಟಲಾಗುತ್ತಿತ್ತು. ಕೆಲವೊಮ್ಮೆ ಕೆರೆ ಒಡೆದಾಗ ಅದರ ದುರಸ್ತಿಗೆ ದೇವಾಲಯದ ನಿಧಿಯೇ ಒದಗುತ್ತಿತ್ತು ಅಲ್ಲದೇ ದೇವಾಲಯಗಳಿಗೆ ಸಾಕಷ್ಟು ಜಮೀನು ಇರುತ್ತಿತ್ತು. ಇದರಿಂದ ಕೆರೆಗಳನ್ನು ಜೀರ್ಣೋದ್ಧಾರ ಮಾಡಲು ಸಾಧ್ಯವಾಗುತ್ತಿತ್ತು.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೆರೆಗಳ ನಿರ್ಮಾಣವು ಇಮ್ಮಡಿ ತೈಲಪ (೯೭೩ ರಿಂದ ೯೯೭), ಇಮ್ಮಡಿ ಜಯಸಿಂಹ (೧೦೧೫ ರಿಂದ ೧೦೪೪) ಹಾಗೂ ಮೊದಲನೇ ಸೋಮೇಶ್ವರ (೧೦೬೮ ರಿಂದ ೧೦೭೬) ಮತ್ತು ಮುಂದಿನ ದೊರೆಗಳ ಆಳ್ವಿಕೆಯಲ್ಲಿ ಶೇಕಡಾ ೫೦ ರಷ್ಟಿದ್ದರೆ ಆರನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಉಳಿದ ಶೇ. ೫೦ರಷ್ಟಾಗಿದೆ. ಈ ಅವಧಿಯಲ್ಲಿ ಕರ್ನಾಟಕದ ಧಾರವಾಡ ಗದಗ, ಬಳ್ಳಾರಿ, ಚಿತ್ರದುರ್ಗ ಹಾಗೂ ಹಾವೇರಿ ಜಿಲ್ಲೆಗಳು ಕೆರೆ–ಬಾವಿಗಳ ನಿರ್ಮಾಣದಲ್ಲಿ ಅತ್ಯಂತ ಹೆಚ್ಚಿನ ಲಾಭವನ್ನು ಪಡೆದಿವೆ. ಕೆಲವು ಉದಾಹರಣೆ ಈ ಕೆಳಗಿನಂತಿವೆ.

ಕೋಟುಮಚಗಿಯ ದೇವಿಂಗೆರೆ.[೧೯] ರಾಜೂರಿನ ಜಣಬನ ಕೆರೆ.[೨೦] ಸೂಡಿಯ ಗೋಸಾಸಿ ಕೆರೆ.[೨೧] ಮಾಳದ ಆಲೂರಿನ ಗೌಡಗೆರೆ.[೨೨] ಕುಂಟೋಜಿಯ ಬಿ.ಚಿ. ಶೆಟ್ಟಿಯ ಕೆರೆ.[೨೩] ಉಣಚಗೇರಿಯ ರೊಳ್ಳದ ಕೆರೆ.[೨೪] ಸೂಡಿಯ ಮಾಚಿಯ ಕೆರೆ.[೨೫] ಉಣಚಗೇರಿಯ ಅಕ್ಕನ ಕೆರೆ.[೨೬] ಗದುಗಿನ ಬಟ್ಟಕೆರೆ.[೨೭] ಆಲೂರಿನ ಬಟ್ಟಕೆರೆ[೨೮] ನರಗುಂದದ ಉಂಚಿವನ ಕೆರೆ.[೨೯] ಲಕ್ಕುಂಡಿಯ ಸೂವಿಜಿಯ ಕೆರೆ.[೩೦] ಪೇಠಾಲೂರಿನ ಬನ್ನಿಕೆರೆ.[೩೧] ಗದುಗಿನ ತಮ್ಮನ ಕೆರೆ.[೩೨] ರೋಣದ ಜಕ್ಕಲಿಯ ಕೆರೆ.[೩೩] ಚಿಕ್ಕವಡ್ಡಟ್ಟಿಯ ಹಿರಿಯಕೆರೆ.[೩೪] ಡಂಬಳದ ಗೋಣ ಸಮುದ್ರ ಕೆರೆ.[೩೫] ನರಗುಂದದ ಈಶ್ವರ ಸಮುದ್ರ.[೩೬] ಹೀಗೆ ಮುಂತಾದ ಕೆರೆಗಳು ಕಂಡುಬರುತ್ತವೆ.

## ೨.೩.೭. ಹೊಯ್ಸಳರು

ಅತಿ ಪ್ರಮುಖ ಕೆರೆಗಳ ನಿರ್ಮಾಪಕರಲ್ಲಿ ಹೊಯ್ಸಳರೆಂದರೆ ತಪ್ಪಾಗಲಾರದು. ಇವರು

೧೧ನೇ ಶತಮಾನದ ಕೊನೆಯಿಂದ ಸುಮಾರು ೧೪ನೇ ಶತಮಾನದ ಮಧ್ಯದವರೆಗೂ ದಕ್ಷಿಣ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದರು. ಆದರೆ ೧೧ನೇ ಶತಮಾನದ ಕೊನೆಯಲ್ಲಿ ಅವರ ಆಳ್ವಿಕೆಯು ಉತ್ತುಂಗಕ್ಕೇರಿ ಅವರು ಇಡೀ ಕರ್ನಾಟಕವನ್ನೇ ಆಳಿದರು. ಪ್ರಾಚೀನ ಕರ್ನಾಟಕದಲ್ಲಿ ಅತ್ಯಂತ ಶ್ರೇಷ್ಠ ಕೆರೆಗಳ ನಿರ್ಮಾಪಕರೆಂದರೆ ಹೊಯ್ಸಳರು. ಕಲ್ಯಾಣ ಚಾಲುಕ್ಯ ಅವನತಿಯೊಂದಿಗೆ ಈ ಪ್ರದೇಶಗಳು ಹೊಯ್ಸಳರು ಮತ್ತು ದೇವಗಿರಿಯ ಸೇವುಣರ ಆಕ್ರಮಣಕ್ಕೆ ಈಡಾದವು. ಅಂತೆಯೇ ಕ್ರಿ.ಶ. ೧೧೯೧ರಲ್ಲಿ ಸೇವುಣರ ಬಿಲ್ಲಮನ ಶಾಸನ ಕ್ರಿ.ಶ. ೧೧೯೨ರ ಹೊಯ್ಸಳರ ಇಮ್ಮಡಿ ವೀರಬಲ್ಲಾಳನ ಶಾಸನ[೮೭] ಗದಗ ಜಿಲ್ಲೆಗಳಲ್ಲಿ ಕಂಡು ಬಂದಿವೆ. ಮುಂದೆ ಹೊಯ್ಸಳ ಇಮ್ಮಡಿ ವೀರಬಲ್ಲಾಳನ ಶಾಸನಗಳು ಗದಗ ತಾಲೂಕಿನ ಸೊರಟೂರು, ಗದಗ, ಶಿರಹಟ್ಟಿ, ಬೆಳ್ಳಟ್ಟಿಗಳಲ್ಲಿ ಲಭ್ಯವಾಗಿವೆ. ಬೆಳ್ವೊಲ-೩೦೦, ಮುಳಗುಂದ-೧೨ ಎಂಬ ಆಡಳಿತ ಘಟಕಗಳನ್ನು ಉಲ್ಲೇಖಿಸುತ್ತದೆ.

**೨.೩.೮. ವಿಜಯನಗರ ಸಾಮ್ರಾಜ್ಯ**

ಮೂರು ಶತಮಾನಕ್ಕಿಂತ ಅಧಿಕ ಕಾಲ ಆಳಿದ ವಿಜಯನಗರದ ಅರಸರು ನೀರಾವರಿಗೆ ಕೊಟ್ಟ ಪ್ರಾಶಸ್ತ್ಯ ದೇಶವಿದೇಶದ ಪ್ರವಾಸಿಗರ ಮೆಚ್ಚುಗೆಗಳಿಸಿತು. ಕರ್ನಾಟಕದಲ್ಲಿ ವ್ಯವಸಾಯಕ್ಕೆ ಕೆರೆ-ಕಟ್ಟೆಗಳನ್ನು ಕಟ್ಟಿಸುವ ಪರಿಪಾಠ ಕದಂಬ, ಗಂಗ, ರಾಷ್ಟ್ರಕೂಟ, ಚಾಲುಕ್ಯ ಮತ್ತು ಹೊಯ್ಸಳರ ಕಾಲದಿಂದಲೂ ನಡೆದು ಬಂದಿತ್ತು. ವಿಜಯನಗರದ ಅರಸರು ಕಾಲದಲ್ಲಿ ಅದು ಮುಂದುವರಿದದ್ದಲ್ಲದೆ, ಇಡೀ ದಕ್ಷಿಣ ಭಾರತಕ್ಕೆ ವಿಸ್ತರಿಸಿತು. ವಿಜಯನಗರದ ಕಾಲದಲ್ಲಿ ಒಬ್ಬ ವ್ಯಕ್ತಿ ನೀರಾವರಿ ಕಾರ್ಯಮಾಡವುದು ಏಳು ಶ್ರೇಯಸ್ಕರ ಕಾರ್ಯಗಳಲ್ಲಿ ಒಂದಾಗಿತ್ತು. ಕೆರೆಯ ರಚನೆಯ ತಾಂತ್ರಿಕತೆ ಕೂಡ ಆ ಕಾಲದಲ್ಲಿ ಅಭಿವೃದ್ಧಿ ಹೊಂದಿತ್ತು.

ವಿಜಯನಗರದ ಅರಸರ ಕಾಲದಲ್ಲಿ ಕೆರೆ ಕಟ್ಟುವುದು ಒಂದು ಸಂಸ್ಕೃತಿಯಾಗಿ ಬೆಳೆಯಿತು. ವಿಜಯನಗರದ ಪ್ರಧಾನ ಮಾದರಸ ಮತ್ತು ಸಾಯಣರ ಕಾಲದಲ್ಲಿ ಒಂದು ಶಾಸನ ಹೀಗೆ ಹೇಳುತ್ತದೆ. "ತೋಡದ ಬಾವಿಯಿಲ್ಲ ಮರೆಕಟ್ಟದ ಪೆಗ್ಗೆರೆಯಿಲ್ಲ". ವಿಜಯನಗರದ ಪರಿಸರದಲ್ಲಿ ಎಲ್ಲಿ ಸಾಧ್ಯವೋ ಅಲ್ಲಿ ಕೆರೆಗಳನ್ನು ಕಟ್ಟಲಾಯಿತು. ಹೊಸದಾಗಿ ಕೆರೆ ನಿರ್ಮಿಸಲು ಸ್ಥಳವೇ ಉಳಿದಿರಲಿಲ್ಲವೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೧೪೧೧ರ ಶಾಸನದಲ್ಲಿ[೮೭] "ಕೆರೆಯಂ ಕಟ್ಟಿಸು ದೇವಗಾರಮಂ ಮಾಡಿಸು" ಎನ್ನುವುದು ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಜನರಾಡುವ ಮಾತಾಗಿತ್ತು.

| ಕೆರೆ ಕಟ್ಟಿಸಿದವರು | ಶೇಕಡಾವಾರು |
| --- | --- |
| ರಾಜರು | ೫.೭೨ |
| ಮಂತ್ರಿಗಳು | ೭.೯೦ |
| ರಾಜಉದ್ಯೋಗಿಗಳು | ೫.೭೨ |
| ಮಾಂಡಲೀಕರು | ೩.೬೬ |
| ಸ್ಥಳೀಯ ಅಧಿಕಾರಿಗಳು | ೨೯.೯೦ |
| ಸಾಮಂತರು (ವ್ಯಾಪಾರಿ ಸಾಮಾನ್ಯ ಇತ್ಯಾದಿ) | ೨೬.೫೬ |

ಮೇಲಿನ ಪಟ್ಟಿಯನ್ನು ನೋಡಿದಾಗ ಸ್ಥಳೀಯ ಅಧಿಕಾರಿಗಳು ಹಾಗೂ ಶ್ರೀ ಸಾಮಾನ್ಯರು ಕೆರೆಯ ನಿರ್ಮಾಣದಲ್ಲಿ ಹೆಚ್ಚು ಪಾಲ್ಗೊಂಡಿರುವದು ಕಂಡುಬರುತ್ತದೆ. ವಿಜಯನಗರ ಅರಸರ ಕಾಲದಲ್ಲಿ ಬಯಕಾರ ರಾಮಪ್ಪನು ಅತಿ ಹೆಚ್ಚು ಕೆರೆ ಕಟ್ಟಿಸಿದವರ ಸಾಲಿನಲ್ಲಿ ಮೊದಲ ಪಂಕ್ತಿಯಲ್ಲಿ ನಿಲ್ಲುತ್ತಾನೆ. ಕೆರೆಗಳನ್ನು ಕಟ್ಟಿಸುವುದಲ್ಲದೇ ಅವುಗಳ ಸುತ್ತಲೂ ಗಿಡ ಮರಗಳನ್ನು ನೆಡಿಸಿ ತೋಟ ಪಟ್ಟಿ ಮಾಡಿ ಕೆರೆಗಳನ್ನು ಅಂದಗೊಳಿಸಿರುತ್ತಾನೆ.

ವಿಜಯನಗರ ಅರಸರು ಕೆರೆಗಳ ನಿರ್ಮಾಣಕ್ಕೆ ಕೊಟ್ಟ ಪ್ರಾಮುಖ್ಯತೆಯನ್ನು ಅವುಗಳ ನಿರ್ವಹಣೆ ಮತ್ತು ದುರಸ್ತಿ ಕಾರ್ಯಕ್ಕೂ ನೀಡಿದ್ದರು. ವಿಜಯನಗರ ಅರಸರು ಕೆರೆ-ಕುಂಟೆ-ಬಾವಿಗಳ ನಿರ್ಮಾಣದ ಜೊತೆಗೆ ಚಿಕ್ಕ ಚಿಕ್ಕ ಅಣೆಕಟ್ಟೆಗಳನ್ನು ನದಿ, ತೊರೆಗಳಿಗೆ ನಿರ್ಮಿಸಿ ನೀರಾವರಿಗೆ ಅನುಕೂಲ ಮಾಡಿಕೊಟ್ಟಿದ್ದರು. ಉದಾ: ಇಮ್ಮಡಿ ಹರಿಹರನ ಕ್ರಿ.ಶ. ೧೯೭೯ರ ಕೊರ್ಲಹಳ್ಳಿ ತಾಮ್ರಪಟ ಶಾಸನದಲ್ಲಿ[೮೮] ತುಂಗಭದ್ರಾ ನದಿಗೆ ಅಡ್ಡಲಾಗಿ ಸೇತುವೆ ಕಟ್ಟಿ ಸಂಪರ್ಕ ಸಾಧಿಸಿದ ಮಾಹಿತಿ ಇದೆ. ಈ ಸ್ಥಳವು ಹಂಪೆಯ ಆಚೆಗೆ ರಾಜ್ಯ ಸಂಪರ್ಕ ಸಾಧಿಸಲು ಮೊದಲಗಟ್ಟ ಆಗಿತ್ತೆಂದು ಹೇಳಬಹುದು.

## ೨.೩.೯. ಆದಿಲ್‌ಶಾಹಿ ದೊರೆಗಳು

ಬಿಜಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ೨೦೦ ವರ್ಷಗಳ ಕಾಲ ಆಳಿದ ಆದಿಲ್‌ಶಾಹಿ ದೊರೆಗಳು ಕುಡಿಯುವ ನೀರಿಗಾಗಿ ನೂರಾರು ಕೆರೆ-ಬಾವಿಗಳನ್ನು ಕಟ್ಟಿಸಿದರು. ಅಹಮ್ಮದ್ ಆದಿಲ್‌ಶಾಹನ ಕಾಲದಲ್ಲಿ ಪ್ರಸಿದ್ಧವಾದ ಬೇಗಂ ತಲಾಬ ಕಟ್ಟಲ್ಪಟ್ಟಿತು. ಅಲ್ಲಿಂದ ನಗರಕ್ಕೆ ೧೫ ಸೆಂ.ಮೀ. ವ್ಯಾಸದ ಕುಂಬಾರರು ಮಾಡಿದ ಮಣ್ಣಿನ ಕೊಳವೆಗಳ ಮೂಲಕ ನೀರನ್ನು ಸರಬರಾಜು ಮಾಡಲಾಗುತ್ತಿತ್ತು. ಕೃಷಿಗಾಗಿ ಕೆರೆ-ಕಟ್ಟೆಗಳನ್ನು ಅವರು ನಿರ್ಮಿಸಿರುವುದು ತಿಳಿದುಬಂದಿಲ್ಲ. ನೀರೆಂಬುವುದು ಆದಿಲ್‌ಶಾಹಿ ದೊರೆಗಳಿಗೆ ಭೋಗದ ವಸ್ತುವಾಗಿತ್ತು. ಅವರು ಭವ್ಯ ಭವನಗಳಲ್ಲಿ ಕೊಳಗಳನ್ನು ನಿರ್ಮಿಸಿಕೊಂಡು ಯುದ್ಧದ ದಣಿವು, ಬಿಸಿಲಿನ ತಾಪವನ್ನು

ನೀಗಿಸಿಕೊಳ್ಳಲು ಈಜು ಕೊಳಗಳಲ್ಲಿ ಸಂತೋಷದಿಂದ ಕಾಲಕಳೆಯುತ್ತಿದ್ದರು. ಗದಗ ಜಿಲ್ಲೆಯಲ್ಲಿ ಇವರ ಕಾಲಘಟ್ಟದಲ್ಲಿ ನಿರ್ಮಾಣಗೊಂಡ ಬಾವಿಗಳೆಂದರೆ, ಲಕ್ಷ್ಮೇಶ್ವರದ ಗುಮ್ಮಟಬಾವಿ, ಮಹಾಲಿಂಗಪುರ ತಾಂಡೆಯ ಬಾವಿ, ಲಕ್ಷ್ಮೇಶ್ವರದ ಪಾಟೀಲರ ಹೊಲದಲ್ಲಿಯ ಬಾವಿ ಮುಂತಾದವು.

**೨.೩.೧೦. ಆಂಗ್ಲರ ಆಳ್ವಿಕೆಯಲ್ಲಿ ಕೆರೆಗಳು**

ಆಂಗ್ಲರ ಆಳ್ವಿಕೆಯ ಕಾಲಾವಧಿಯಲ್ಲಿ ಕೆರೆಗಳ ನಿರ್ಮಾಣ ಕಾರ್ಯ ಇಳಿಮುಖವಾಗಿದ್ದು ಕಂಡುಬರುತ್ತದೆ. ಅದಕ್ಕೆ ಅನೇಕ ಕಾರಣಗಳಿರಬಹುದು, ಬಹುಮುಖ್ಯ ಕಾರಣವೆಂದರೆ ೧೯ನೇ ಶತಮಾನಕ್ಕೆ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ಹೆಚ್ಚಿನ ಕೆರೆಗಳೆಲ್ಲ ನಿರ್ಮಾಣವಾಗಿದ್ದುದು. ೧೮೨೧ರ ಸುಮಾರಿಗೆ ಮೈಸೂರು ಪ್ರಾಂತ್ಯದಲ್ಲಿ ಇಂಜಿನೀಯರ್‌ರಾಗಿದ್ದ ಮೇಜರ್ ಸ್ಯಾಂಕಿ ಹೀಗೆ ಹೇಳುತ್ತಾರೆ. "ಈಗಿರುವ ಕೆರೆಕಟ್ಟೆಗಳ ದುರಸ್ತಿ ಅಭಿವೃದ್ಧಿಯ ಕಾರ್ಯಕ್ಕೆ ಹೆಚ್ಚಿನ ಗಮನ ನೀಡಬೇಕು. ಹೊಸಕೆರೆ ಕಟ್ಟಿದರೆ ಇದರಿಂದ ತಗ್ಗಿನ ಕೆಳಗಿನ ಕೆರೆಗೆ ನೀರಿನ ತೊಂದರೆ ಯಾಗುವುದು ಖಚಿತ".[೯೮] ಈ ಮಾತು ಮೇಲಿನ ವಿಷಯಕ್ಕೆ ಸ್ಯಾಂಕಿ ನೀಡಿದ ಹೇಳಿಕೆಯನ್ನೇ ೧೮೮೪ರಲ್ಲಿ ಮೈಸೂರಿನ ದೀವಾನರಾಗಿದ್ದ ಸರ್ ಶೇಷಾದ್ರಿ ಅಯ್ಯರ್ ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾತನಾಡುತ್ತ, ಮೈಸೂರು ಪ್ರಾಂತ್ಯದಲ್ಲಿ ಸಣ್ಣವು ದೊಡ್ಡವು ಸೇರಿ ಹೆಚ್ಚು ಕಡಿಮೆ ೨೮೦೦೦ ಕೆರೆಗಳಿವೆ. ಹೊಸ ಕೆರೆಗಳ ನಿರ್ಮಾಣಕ್ಕೆ ಸೂಕ್ತ ಸ್ಥಳ ಹುಡುಕುವುದು ತುಂಬಾ ಕಷ್ಟ ಎಂದು ಹೇಳಿದ್ದಾರೆ. (ಈ ಮಾತನ್ನು ಅವಲೋಕಿಸಿದಾಗ ೧೮ನೇ ಶತಮಾನಕ್ಕೆ ಮೊದಲೇ ಕೆರೆಗಳ ನಿರ್ಮಾಣ ಕಾರ್ಯ ಮುಗಿದು ಹೋಗಿರುವುದು ಕಾಣುತ್ತದೆ).

ವಿಜಯನಗರ ಸಾಮ್ರಾಜ್ಯವಂತೂ ಕೆರೆಗಳ ಸಾಮ್ರಾಜ್ಯವೇ ಆಗಿತ್ತು ಇಡೀ ದಕ್ಷಿಣ ಭಾರತದಲ್ಲಿ ನೀರಾವರಿಯ ನಾಗರಿಕತೆಯನ್ನು ಬೆಳೆಸಿತ್ತು. ನದಿ, ಕಾಲುವೆ, ಆಣೆಕಟ್ಟು, ಕೆರೆ, ಕುಂಟೆ, ಎಲ್ಲಾ ಬಗೆಯ ನೀರಾವರಿ ವಿಧಾನಗಳನ್ನು ಕೈಗೊಂಡು ಸುಭಿಕ್ಷ ಸಾಮ್ರಾಜ್ಯವನ್ನು ಸ್ಥಾಪಿಸಲು ಶಕ್ತಿಮೀರಿ ಪ್ರಯತ್ನಿಸಿತು. ಸಿ.ಟಿ.ಎಂ. ಕೊಟ್ರಯ್ಯನವರು ಇದರ ಕುರಿತು "ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ" ಪುಸ್ತಕದಲ್ಲಿ ಹೀಗೆ ದಾಖಲಿಸಿದ್ದಾರೆ: ಹಿಂದಿನ ಮದ್ರಾಸ್ ಪ್ರಾಂತ್ಯವು ವಿಜಯನಗರದ ಅವಧಿಯಲ್ಲಿ ಅಧಿಕ ನೀರಾವರಿ ಕಾಮಗಾರಿಗಳನ್ನು ಹೊಂದಿದ್ದ ಪ್ರಾಂತ್ಯವಾಗಿತ್ತು. ಭಾರತದ ಬೇರಾವ ಪ್ರಾಂತ್ಯವು ಹೀಗೆ ಅಧಿಕ ಮೊತ್ತದ ಮತ್ತು ವಿವಿಧ ನೀರಾವರಿ ಯೋಜನೆಗಳನ್ನು ಹೊಂದಿರಲಿಲ್ಲ. ಒಂದು ದಾಖಲೆಯು ವರ್ಣಿಸುವಂತೆ ಈ ಪ್ರಾಂತ್ಯದ ನೀರಾವರಿ ಕಾರ್ಯಗಳಿಗೆಂದೇ ನಿರ್ಮಾಣವಾಗಿರುವ ಒಡ್ಡುಗಳನ್ನೆಲ್ಲಾ ಜೋಡಿಸಿದರೆ ಅದು ಭೂಗೋಳದ ಮೇಲೆ ಆರು ಅಡಿ ಎತ್ತರದ ಮತ್ತು ಒಂದೂವರೆ ಅಡಿ ಸುತ್ತಳತೆಯ ಗೋಡೆಯಾದೀತೆಂದು ಶ್ಲಾಘಿಸಲಾಗಿದೆ.

ರಾಯಲ್‌ಸೀಮಾ ಅಧಿಕಾರಿಯಾಗಿದ್ದ ಸರ್ ಥಾಮಸ್ ಮನ್ರೋ ನೂತನ ಕೆರೆಗಳನ್ನು ನಿರ್ಮಿಸುವ ಅವಶ್ಯಕತೆ ಇಲ್ಲ. ಇದ್ದ ಕೆರೆಗಳನ್ನು ದುರಸ್ತಿಗೊಳಿಸಿದರೆ ಸಾಕು ಎಂದಿದ್ದಾನೆ.

ಇದನ್ನೆಲ್ಲಾ ಅವಲೋಕಿಸಿದಾಗ ೧೮ನೇ ಶತಮಾನಕ್ಕೆ ಮೊದಲೇ ಆಯಕಟ್ಟಿನ ಸ್ಥಳಗಳಲ್ಲಿ ಕೆರೆಗಳ ನಿರ್ಮಾಣ ಕಾರ್ಯ ಮುಗಿದು ಹೋಗಿದ್ದುದು ಸ್ಪಷ್ಟವಾಗುತ್ತದೆ. ಬ್ರಿಟೀಷರ ಕಾಲಕ್ಕೆ ಏನಿದ್ದರೂ ಹಳೆಯ ಕೆರೆಗಳ ಜೀರ್ಣೋದ್ಧಾರ ಮಾತ್ರ ಅಧಿಕವಾಗಿತ್ತು. ವಿಲ್ಸನ್‌ರ ಪ್ರಕಾರ ೧೯೭೭ರಲ್ಲಿ ನೂರಾರು ವರುಷಗಳಿಂದ ಒಡೆದು ಹೋಗಿ ನಿರುಪಯುಕ್ತವಾಗಿದ್ದ ಕೆರೆಗಳು ದೇಶದ ತುಂಬ ಅಲ್ಲಲ್ಲಿ ಕಾಣುತ್ತಿದ್ದವೆಂದು ಹೇಳಿದ್ದಾನೆ. ಆಂಗ್ಲರ ಆಡಳಿತದ ಕಾಲದಲ್ಲಿ ಬೆಂಗಳೂರಲ್ಲಿ ೧೮೭೮ರಲ್ಲಿ ಸ್ಯಾಂಕಿ ಕೆರೆ, ೧೮೪೨ರಲ್ಲಿ ಮತ್ತಿ ಕೆರೆ ಹಾಗೂ ಜ್ಯಾನ್‌ಕ್ಯಾಮರಾನ್ ಲಾಲಬಾಗ್ ಮತ್ತು ಕೆರೆಯನ್ನು ಕೂಡಾ ಅಭಿವೃದ್ಧಿಪಡಿಸಿದನು. ೧೯೩೦ರ ಸುಮಾರಿಗೆ ಬೆಂಗಳೂರು ಜಿಲ್ಲೆಯ ೩೮೭ ದೊಡ್ಡ ಕೆರೆಗಳು ೧೨೫೮ ಸಣ್ಣ ಕೆರೆಗಳಿದ್ದವು.

ಬ್ರಿಟಿಷ್ ಸರ್ಕಾರ ಕೆರೆಗಳ ಜೀರ್ಣೋದ್ಧಾರ ಕೈಗೊಂಡಿತಾದರೂ ಬಹಳ ತಾರತಮ್ಯ ಮಾಡಿತು. ಸರ್ಕಾರಕ್ಕೆ ಆದಾಯ ಬರುವ ದೊಡ್ಡ ಕೆರೆಗಳ ಜೀರ್ಣೋದ್ಧಾಕ್ಕೆ ಬ್ರಿಟಷ್ ಸರ್ಕಾರ ಹೆಚ್ಚಿನ ಆದ್ಯತೆ ನೀಡಿ, ಸಣ್ಣಪುಟ್ಟ ಕೆರೆಕುಂಟೆ ಕಟ್ಟೆಗಳನ್ನು ಸಂಪೂರ್ಣ ನಿರ್ಲಕ್ಷಿಸಿತೆಂಬುದು ಅಭಿಪ್ರಾಯ. ಹೀಗಾಗಿ ಅವುಗಳೆಲ್ಲ ಮತ್ತಷ್ಟು ಶಿಥಿಲಗೊಂಡವು.

೧೮೦೦-೧೮೧೦ ರವರೆಗಿನ ಆಡಳಿತದ ಅವಧಿಯಲ್ಲಿ ದಿವಾನರಾಗಿದ್ದ ಪೂರ್ಣಯ್ಯ ನವರು ಕಂದಾಯ ಶೇಕಡಾ ೩.೪ ರಷ್ಟನ್ನು ನೀರಾವರಿಯ ಕಾರ್ಯಗಳಿಗೆ ವೆಚ್ಚ ಮಾಡಿರುವುದು ತಿಳಿದುಬರುತ್ತದೆ. ಇದರ ಹೆಚ್ಚಿನ ಭಾಗ ಕಾವೇರಿ ಪರಿಸರಕ್ಕೆ ಖರ್ಚಾಗಿರುವುದು ತೋರುತ್ತದೆ. ೧೮೩೧ರಲ್ಲಿ ಮೈಸೂರು ಆಡಳಿತವನ್ನು ಬ್ರಿಟೀಷರು ವಹಿಸಿಕೊಂಡ ಮೇಲೆ ಕೆರೆಗಳ ಜೀರ್ಣೋದ್ಧಾರಕ್ಕೆ ಮಾಡಲಾದ ವೆಚ್ಚ ಸರಾಸರಿ ವಾರ್ಷಿಕ ಆದಾಯದ ಶೇ. ೧.೧ರಷ್ಟು ಮಾತ್ರ.

ಮೊದಲಿಗೆ ಕೆರೆಗಳ ಸಂರಕ್ಷಣೆಯಲ್ಲಿ ಗ್ರಾಮ ಸಮುದಾಯ ಪ್ರಧಾನ ಪಾತ್ರವಹಿಸಿತ್ತು. ಬ್ರಿಟೀಷರು ಆಡಳಿತದ ಚುಕ್ಕಾಣಿ ಹಿಡಿದ ಮೇಲೆ ಪರಂಪರಾಗತವಾಗಿ ನಡೆದು ಬಂದ ಗ್ರಾಮದ ಆಡಳಿತವೇ ಕುಸಿದು ಬಿತ್ತು. ಪದೇ ಪದೇ ನಡೆಯುತ್ತಿದ್ದ ಯುದ್ಧಗಳು ಕೂಡ ಇದರ ಮೇಲೆ ಪರಿಣಾಮ ಬೀರಿತು. ಹೀಗಾಗಿ ಕೆರೆ ನೀರಾವರಿ ಅವನತಿಯತ್ತ ಸಾಗಿತು.

**೨.೩.೧೧. ಸ್ವಾತಂತ್ರ್ಯಾ ನಂತರದ ಕೆರೆ ನೀರಾವರಿ**

ಸ್ವಾತಂತ್ರ್ಯ ನಂತರ ಒಂದು ದಶಕ ಕಾಲ ಕೆರೆ ನೀರಾವರಿ ಹಾಗೂ ಹೀಗೂ ಜೀವ ಹಿಡಿದಿತ್ತು. ನಂತರ ಗ್ರಾಮ ಸಮುದಾಯ ಊರಿನ ಕೆಲಸ ಕಾರ್ಯಗಳಲ್ಲಿ ಭಾಗಿಯಾಗುವುದು ಕಡಿಮೆಯಾದಂತೆ ಕೆರೆಗಳು ಅವನತಿಯ ಹಾದಿ ಹಿಡಿದವು. ಬ್ರಿಟೀಷರ ಕಾಲದಲ್ಲೇ ಶಿಥಿಲಗೊಂಡಿದ್ದ ಕೆರೆಗಳು ಮತ್ತಷ್ಟು ಹಾನಿಗೊಳಗಾದವು.

ಕೆರೆಯ ದುರಸ್ತಿ ಮತ್ತು ಉಸ್ತುವಾರಿ ವ್ಯವಸ್ಥೆಯೇ ಮುರಿದು ಬಿದ್ದುದರಿಂದ ಕೆರೆಗಳು ಅಪಾರ ಹಾನಿಗೀಡಾದವು. ಬೆಳೆಯುತ್ತಿರುವ ಜನಸಂಖ್ಯೆ ಮತ್ತು ನಗರೀಕರಣ ಕೆರೆಗಳ ಉಳಿವಿಗೆ ಮತ್ತಷ್ಟು

ದಕ್ಕೆ ಉಂಟುಮಾಡಿದವು. ೧೯೪೯ರಲ್ಲಿ ರಾಜ್ಯದಲ್ಲಿ ಹಾಲಿ ಇದ್ದ ೩೬೪೦೮ ಕೆರೆಗಳಿಗೆ ಸುಮಾರು ೧೬ ಲಕ್ಷ ಎಕರೆ ಅಚ್ಚುಕಟ್ಟು ದಾಖಲಾಗಿತ್ತು;[೯೦] ಆದರೆ ನೀರಾವರಿ ಆಗುತ್ತಿದ್ದುದು ಎರಡು ಲಕ್ಷ ಎಕರೆ ಮಾತ್ರ. ಕೆರೆ ನೀರಾವರಿ ಹಾನಿಯಾಗಿದ್ದನ್ನು ಇದು ಸ್ಪಷ್ಟವಾಗಿ ಬಿಂಬಿಸುತ್ತದೆ.

**೨.೪. ಆಡಳಿತ ವಿಭಾಗಗಳು**

ಆಡಳಿತದ ಅನುಕೂಲಕ್ಕಾಗಿ ದೇಶವನ್ನು ಹಲವಾರು ವಿಭಾಗಗಳಲ್ಲಿ ವಿಭಾಗಿಸುವ ಪದ್ಧತಿ ಎಂದಿನಿಂದಲೂ ಇದೆ. ಇಂದಿನ ರಾಜ್ಯ ಜಿಲ್ಲೆ ತಾಲ್ಲೂಕುಗಳಂತೆ ಪ್ರಾಚೀನ ಕಾಲದಲ್ಲಿಯೂ ದೇಶವನ್ನು ಚಿಕ್ಕದೊಡ್ಡ ವಿಭಾಗಳಲ್ಲಿ ವಿಭಾಗಿಸಲಾಗುತ್ತಿದ್ದಿತು. ನಾಡು, ದೇಶ, ಕಂಪಣ, ಮಂಡಲ ಎಂದು ಮುಂತಾಗಿ ಇಂತಹ ವಿಭಾಗಗಳಿಗೆ ಹೆಸರು ಇರುತ್ತಿದ್ದವು.[೯೧] ಭೌಗೋಳಿಕವಾಗಿ ಒಂದು ಪ್ರತ್ಯೇಕ ಘಟಕವಾಗಿದ್ದ ಕುಂತಲ ದೇಶದಲ್ಲಿಯೂ ಇಂತಹ ವಿಭಾಗಗಳಿದ್ದವು. ಇಲ್ಲಿ ಇಂತಹ ವಿಭಜನೆ ವ್ಯವಸ್ಥಿತವೂ ಶಾಸ್ತ್ರೀಯವೂ ಆಗಿದ್ದಿತೆಂದು ಊಹಿಸಲು ಆಧಾರಗಳಿವೆ. ಗದಗ ಜಿಲ್ಲೆಯ ಆಡಳಿತ ವಿಭಾಗಗಳನ್ನು ಈ ಕೆಳಕಂಡಂತೆ ವಿಂಗಡಿಸಲಾಗಿದೆ. ೧) ಪುಲಿಗೆರೆ-೩೦೦, ೨) ಬೆಳ್ವೊಲ-೩೦೦. ೩) ಮಾಸವಾಡಿ-೧೪೦.

ಬೆಳ್ವೊಲ-೩೦೦ ಮತ್ತು ಪುಲಿಗೆರೆ-೩೦೦ ಇವೆರಡನ್ನು ನಿರ್ದೇಶಿಸಲು ಶಾಸನಗಳಲ್ಲಿ ಎರಡನೂರು ಎಂಬ ಶಬ್ದವನ್ನು ಬಳಸಲಾಗಿದೆ. ಎರಡಾರನೂರು ಎಂದರೆ ಎರಡ ಆರನೂರುಗಳಲ್ಲ, ಪುಲಿಗೆರೆ-೩೦೦, ಬೆಳ್ವೊಲ-೩೦೦ ಎರಡು ಸೇರಿ ಆರುನೂರು ಎಂದು ಅರ್ಥಮಾಡಿಕೊಳ್ಳಬೇಕು. ಎಂ. ಎಂ ಕಲಬುರ್ಗಿಯವರು ಮೂಲ ಬೆಳ್ವೊಲ ೬೦೦ ಗ್ರಾಮಗಳಿಂದ ಅಖಂಡವಾಗಿದ್ದು, ಯಾವುದು ಒಂದು ಕಾಲದಲ್ಲಿ ದಕ್ಷಿಣ ಬೆಳ್ವೊಲವನ್ನು ಪುಲಿಗೆರಿ ಎಂದು ಹೆಸರು ಪ್ರಾಪ್ತವಾಗಿರಬೇಕು. ಮೊರಬ ಶಾಸನದಲ್ಲಿ[೯೨] 'ಪುಲಿಗೆರಿ-೩೦೦, ಬೆಳ್ವೊಲ-೩೦೦ ಎರಡಾನೂರು ನಾಳ್' ಎಂದು ಹೇಳಲಾಗಿದೆ.

**೨.೪.೧. ಪುಲಿಗೆರೆ-೩೦೦**

ಪುಲಿಗೆರೆ-೩೦೦ ಎಂಬುದು ಒಂದು ವಿಭಾಗ. ಪುಲಿಗೆರೆ ಅಥವಾ ಪುರಿಗೆರೆ=ಹುಲಿಗೆರೆ ಅಚ್ಚಗನ್ನಡ ಶಬ್ದ ಎಂಬುದು ಸ್ಪಷ್ಟವಿದೆ. ಹೇಗೆ ಊರಿಗೆ ಈ ಹೆಸರು ಬಂದಿತೆಂಬುದು ಖಚಿತವಾಗಿ ತಿಳಿದುಬರದಿದ್ದರೂ. ಇಲ್ಲಿಯ ಒಂದು ಕೆರೆಯ ಮೂಲಕ ಈ ಹೆಸರು ಬಂದಿತ್ತೆಂಬುದು ಸೂಚಿತವಾಗುತ್ತದೆ. ಇದೇ ಹೆಸರು ಸಂಸ್ಕೃತ ಶಾಸನಗಳಲ್ಲಿ ಪುರಿಕರ, ಪುರಿಕರ ನಗರ, ಎಂದು ಕಾಣಿಸಿಕೊಳ್ಳುತ್ತದೆ. ಇಲ್ಲಿಯ ಕೆಲವು ಶಾಸನಗಳಲ್ಲಿ[೯೩] ರಕ್ತಪುರ ಎಂಬ ಹೆಸರು ಸಿಗುತ್ತದೆ. ಇದು ಪುರಿಗೆರೆಯ ಇನ್ನೊಂದು ಹೆಸರಿರಬಹುದು. ಆದರೆ ಈ ಹೆಸರು ಹೆಚ್ಚಾಗಿ ಬರುವುದು ಈ ಊರಿನಲ್ಲಿರುವ ಬಾದಾಮಿಯ ಚಾಲುಕ್ಯರ ಕಾಲದ ಶಾಸನಗಳಲ್ಲಿ. ಇವು ಸಂಸ್ಕೃತ ಶಾಸನಗಳಾಗಿದ್ದು, ೭-೮ನೇ ಶತಮಾನದ ತೇದಿಗಳನ್ನು ಹೊಂದಿದ್ದರೂ, ಇವು ಬರೆಯಲ್ಪಟ್ಟಿದ್ದು ೧೧-೧೨ನೇ

ಶತಮಾನದ ಅಕ್ಷರಗಳಲ್ಲಿ ಇವು ಬಾದಾಮಿ ಚಾಲುಕ್ಯರ ಶಾಸನಗಳ ನಂತರದ ಪ್ರತಿಗಳು ಎಂಬುದು ಸೂಚಿತವಾಗುತ್ತದೆ. ಇಲ್ಲಿ ಕಾಣಿಸಿಕೊಳ್ಳುವ ರಕ್ತಪುರವು ಪುಲಿಗೆರೆಯಾಗಿರದೇ ಬಾದಾಮಿ ಚಾಲುಕ್ಯರಿಗೆ ನಿಕಟ ಸಂಬಂಧವಿದ್ದ ಇನ್ನೊಂದು ಊರಾಗಿದ್ದಿರಬಹುದು.

ಈ ಪುಲಿಗೆರೆ ಪ್ರದೇಶ, ಪುಲಿಗೆರೆ-೩೦೦ ಎಂಬ ಆಡಳಿತದ ವಿಭಾಗವಾಗಿದ್ದಿತು. ಇದರ ಉತ್ತರದ ನೆರೆಯ ಪ್ರ್ಯಾಂತದ ಹೆಸರು ಬೆಳ್ವೊಲ-೩೦೦ ಇವೆರಡು ಒಂದಕ್ಕೊಂದು ಹೊಂದಿಕೊಂಡಿದ್ದರಿಂದ ಅನೇಕ ಶಾಸನಗಳಲ್ಲಿ ಇವೆರಡು ಜೊತೆ ಜೊತೆಯಾಗಿ ಹೆಸರಿಸಲ್ಪಟ್ಟಿದ್ದಲ್ಲದೇ ಇವೆರಡನ್ನೂ ಸೇರಿ ಎರಡಾರನೂರು ಅಂದರೆ ಎರಡು ಮುನ್ನೂರು ಪ್ರಾಂತ್ಯಗಳ ಆರುನೂರು ಪ್ರಾಂತ್ಯ ಎಂಬ ಹೆಸರು ಉಂಟಾಯಿತ್ತಲ್ಲದೇ ಎಷ್ಟೋ ಸಲ ಈ ಆರುನೂರು ಪ್ರಾಂತ್ಯವು ಒಂದೇ ಆಡಳಿತ ವಿಭಾಗವೆಂಬರ್ಥದ ಉಲ್ಲೇಖಗಳು ದೊರೆಯುತ್ತವೆ.

ಪುಲಿಗೆರೆ-೩೦೦, ಬೆಳ್ವೊಲ-೩೦೦ ಗ್ರಾಮಗಳನ್ನೊಳಗೊಂಡ ಒಂದು ಆಡಳಿತ ವಿಭಾಗ. ಇದರ ವ್ಯಾಪ್ತಿಯನ್ನು ಹಳೆಯ ಧಾರವಾಡ ಜಿಲ್ಲೆಯ ಶಿರಹಟ್ಟಿ, ಸವಣೂರು ತಾಲೂಕುಗಳು, ಶಿಗ್ಗಾಂವ ತಾಲೂಕಿನ ಕೆಲ ಭಾಗ, ಇವುಗಳನ್ನು ಒಳಗೊಂಡು ದಕ್ಷಿಣದಲ್ಲಿ ವರದಾ ನದಿಯವರೆಗೂ ಹಬ್ಬಿತ್ತೆಂದೇ ಹೇಳಬಹುದು. ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಭಾಗವು ಮಾಸವಾಡಿ ಎಂಬ ಪ್ರಾಂತ್ಯದಲ್ಲಿನ ಭಾಗವಾಗಿದ್ದಿತು. ಹೀಗೆ ಈ ವಿಭಾಗವು ಸ್ಥೂಲವಾಗಿ ಹಳೆಯ ಧಾರವಾಡ ಜಿಲ್ಲೆಯ ಮಧ್ಯ ಭಾಗವಾಗಿತ್ತೆಂದು ಹೇಳಬಹುದು.

ಈ ಪ್ರಾಂತ್ಯದ ಉತ್ತರ ಗಡಿ ರೇಖೆ ಸುಮಾರಾಗಿ ಶಿರಹಟ್ಟಿ ತಾಲೂಕಿನ ಉತ್ತರ ಮೇರೆಗುಂಟ ಸಾಗಿ ಅದರಾಚೆಯ ಗದಗ ತಾಲೂಕಿನ ಸೊರಟೂರಗಳನ್ನು ಒಳಗೊಳ್ಳುತ್ತದೆ. ಪೂರ್ವಕ್ಕಿರುವ ಮುಂಡರಗಿ ತಾಲೂಕಿನ ಭಾಗ ಮಾಸವಾಡಿ-೧೪೦[೧೪] ಎಂಬ ಭಾಗದಲ್ಲಿದ್ದುದರಿಂದ ಪುಲಿಗೆರೆಯ ಗಡಿ ರೇಖೆಯು ಶಿರಹಟ್ಟಿ ತಾಲೂಕಿನ ಬೆಳ್ಳಟ್ಟಿ ಮೇಲಿಂದ ಹಾಯ್ದು ದಕ್ಷಿಣಕ್ಕೆ ಕೆಳಗಿಳಿದು ವರದಾ, ತುಂಗಭದ್ರಾ ನದಿಗಳ ಸಂಗಮವನ್ನು ಸೇರುತ್ತದೆ ಎಂದು ಹೇಳಬಹುದು. ಈ ಪ್ರಾಂತ್ಯದ ದಕ್ಷಿಣದ ಮೇರೆ ವರದಾ ನದಿ. ಏಕೆಂದರೆ ವರದಾ ತುಂಗಭದ್ರಾ ನಡುವಿನ ಪ್ರದೇಶವು ಬನವಾಸಿಯಂದೇ ಹೇಳಲ್ಪಟ್ಟಿರುವುದು. ಪಶ್ಚಿಮಕ್ಕೆ ಬಂಕಾಪುರ ಮತ್ತು ಶಿಗ್ಗಾಂವಗಳು ಬನವಾಸಿ ಪ್ರಾಂತ್ಯದ ಭಾಗಗಳೇ ಆಗಿದ್ದರಿಂದ ಈ ಗಡಿರೇಖೆಯು ವರದಾ ನದಿಗುಂಟ ಸಾಗಿ ಪೂರ್ವದಲ್ಲಿ ಸವಣೂರು ತಾಲೂಕಿನ ಮೇರೆಗುಂಟ ಸಾಗುತ್ತದೆ ಎಂದು ಸ್ಥೂಲವಾಗಿ ಹೇಳಬಹುದು. ಈ ರೇಖೆ ಅಲ್ಲಿಂದ ಪೂರ್ವಾಭಿಮುಖವಾಗಿ ಕುಂದಗೋಳ, ಶಿರಹಟ್ಟಿ ತಾಲೂಕಿನ ಯಳವತ್ತಿಯನ್ನು ದಾಟಿ ಗಡಿರೇಖೆಗುಂಟ ಸಾಗಿ ಸೊರಟೂರನ್ನು ಸೇರಿಕೊಳ್ಳುತ್ತದೆ. ಹೀಗೆ ಪುಲಿಗೆರೆ-೩೦೦ ಪ್ರಾಂತ್ಯವು ಶಿರಹಟ್ಟಿ, ಸವಣೂರು ತಾಲೂಕುಗಳನ್ನು ಶಿಗ್ಗಾಂವ, ಕುಂದಗೋಳ, ಗದಗ, ತಾಲೂಕುಗಳ ಕೆಲ ಭಾಗಗಳನ್ನು ಒಳಗೊಂಡಿರುವುದು ವ್ಯಕ್ತವಾಗುತ್ತದೆ.

### ೨.೪.೨. ಬೆಳ್ವೊಲ-೩೦೦

ಬೆಳ್ವಲ ದೇಶ ಕುಂತಲದ ಮಧ್ಯವರ್ತಿ ಪ್ರದೇಶವಾದ ಧಾರವಾಡ, ಬೆಳಗಾವಿ, ಗದಗ, ಬಿಜಾಪುರ, ಹಾವೇರಿ ಜಿಲ್ಲೆಗಳ ಭಾಗಗಳನ್ನು ಒಳಗೊಂಡಿದ್ದು ಕರ್ನಾಟಕದ ಇತಿಹಾಸದುದ್ದಕ್ಕೂ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಗಿದ್ದಿತು. ಲಕ್ಕುಂಡಿ, ಅಣ್ಣಿಗೇರಿ, ಶಿರಸಂಗಿ, ಕುಕನೂರು, ಗದಗ ಮುಂತಾದ ಖ್ಯಾತ ನಗರಗಳು ಇಲ್ಲಿ ತಲೆಯೆತ್ತಿದವು.[೯೫] ಬೆಳ್ವೊಲ ಎಂದರೆ ಬೆಳೆಯುವ ಹೊಲ, ಫಲವತ್ತಾದ ಭೂಮಿ ಎಂದರ್ಥ. ಈ ಪ್ರದೇಶದ ಶಾಸನಗಳನ್ನು ಪರಿಶೀಲಿಸಿದಾಗ ಹಳೆಯ ಧಾರವಾಡ ಜಿಲ್ಲೆಯ ಗದಗ, ನವಲಗುಂದ ಮತ್ತು ನರಗುಂದ ತಾಲೂಕುಗಳ, ಹುಬ್ಬಳ್ಳಿ ಮತ್ತು ಕುಂದಗೋಳ ತಾಲೂಕುಗಳ ಕೆಲಭಾಗ, ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಕೆಳಭಾಗ, ಬಿಜಾಪುರ ಜಿಲ್ಲೆಯ ರಾಮದುರ್ಗ ಮತ್ತು ಬದಾಮಿ ತಾಲೂಕಿನ ಕೆಳಭಾಗ, ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಸ್ವಲ್ಪಭಾಗ, ಈ ಬೆಳ್ವಲ ದೇಶಕ್ಕೆ ಸೇರಿದ್ದವೆಂದು ತಿಳಿದುಬರುತ್ತದೆ. ಇಲ್ಲಿಯ ಶಾಸನಗಳ ಆಧಾರದ ಮೇಲೆ ಈ ವಿಭಾಗದ ಮೇರೆಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ.



ರೋಣ ತಾಲೂಕಿನ ಕೌಜಗೇರಿ ಬೆಳ್ವಲದ ಒಂದು ಗ್ರಾಮವಾಗಿತ್ತು. ಇದು ಬೆಳವಣಕಿ-೧೨ ಎಂಬ ಚಿಕ್ಕ ಭಾಗದಲ್ಲಿದ್ದು, ಇದು ಚಿಕ್ಕ ಬೆಳ್ವಲದ ಭಾಗವಾಗಿದ್ದಿತು. ಇದೇ ಗಡಿರೇಖೆ ಜಕ್ಕಲಿ, ನರೇಗಲ್ಲಗಳನ್ನು ಒಳಗೊಳ್ಳುವಂತೆ ಪೂರ್ವದ ಕಡೆಗೆ ಸಾಗುತ್ತದೆ. ಈ ತಾಲೂಕಿನ ಉತ್ತರಕ್ಕಿದ್ದ ರೋಣ ನಿಡಗುಂದಿ, ಸೂಡಿಗಳು ಕಿಸುಕಾಡು-೭೦ ಎಂಬ ಇನ್ನೊಂದು ವಿಭಾಗಕ್ಕೆ ಸೇರಿದ್ದವು. ಕೊನೆಗೆ ಬೆಳ್ವೊಲದ ಗಡಿರೇಖೆ ಹಾಗೆಯೇ ಪೂರ್ವದ ಕಡೆಗೆ ಸಾಗಿ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಮುಧೋಳವನ್ನು ಸೇರುತ್ತದೆ. ಅಲ್ಲಿಂದ ದಕ್ಷಿಣಕ್ಕೆ ಇದೇ ತಾಲೂಕಿನ ಇಟಗಿ ಕಡೆಗೆ ಸಾಗುತ್ತದೆ. ಗದಗ ತಾಲೂಕಿನ ಹೊಸೂರು, ಮುಳಗುಂದಗಳು ತೀರಾ ದಕ್ಷಿಣದ ಗ್ರಾಮಗಳಾಗಿದ್ದವು.

ಈ ಬೆಳ್ವಲ ದೇಶದಲ್ಲಿ ಹಲವಾರು ಚಿಕ್ಕಮಟ್ಟ ಆಡಳಿತ ವಿಭಾಗಗಳಿದ್ದವು. ಇಂತಹ ವಿಭಾಗಗಳಲ್ಲಿ ದೊಡ್ಡದೆಂದರೆ ಬೆಣ್ಣೆದಡೆ-೭೦,[೯೬] ಗದಗ ತಾಲೂಕಿನ ಚಿಂಚಲಿ-೫೦,[೯೭] ಮುಳಗುಂದ-೧೨,[೯೮] ನೆರೆಗಲ್ಲ-೧೨,[೯೯] ಬೆಳವಣಿಕೆ-೧೨,[೧೦೦] ಕಿಸುಕಾಡು-೭೦,[೧೦೧] ಕೊಳನೂರು-೩೦,[೧೦೨] ಹೀಗೆ ಗದಗ ಜಿಲ್ಲೆಯಲ್ಲಿ ಆಡಳಿತ ವಿಭಾಗಗಳು ಸಮಾವೇಶಗೊಳ್ಳುತ್ತವೆ.

### ೨.೪.೩. ಮಾಸವಾಡಿ-೧೪೦

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಬಹುತೇಕ ಹಳ್ಳಿಗಳನ್ನು ವ್ಯಾಪಿಸಿರುವ ಮಾಸವಾಡಿ-೧೪೦ ಹಳ್ಳಿಗಳ ನಾಡಾಗಿರುವುದನ್ನು ಪೇಠಾಲೂರು ಶಾಸನ[೧೦೩] ಸ್ಪಷ್ಟಪಡಿಸುತ್ತದೆ. ಮಾಸೆಯವಾಡಿ ನೂರಾನಲವತ್ತು ಮಾಸವಾಡಿ ನೂರಾನಾಲ್ವತ್ತು, ಮಾಸವಾಡಿನಾಡು, ಮಾಸವಾಡಿ ಎಂಬ

ನಾಮಪದಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದರಿಂದ ಮಾಸವಾಡಿಯು 'ನಾಡು' ಎಂಬ ವಿಭಾಗವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಮಾಸವಾಡಿ ನಾಡಿನ ಉಪಲಬ್ಧವಿರುವ ಪ್ರಾಚೀನ ಶಾಸನವೆಂದರೆ ರಾಷ್ಟ್ರಕೂಟರ ಅಮೋಘವರ್ಷನ ಕ್ರಿ.ಶ. ೮೧೪-೮೭೫ರ ಕಾಲದ ಮೇವುಂಡಿ ಶಾಸನ. ಇದರಲ್ಲಿ ಮಾಸವಾಡಿ ನಾಡಿನ ಉಲ್ಲೇಖ ದೊರೆಯುವುದಿಲ್ಲ. ಆದರೆ ಅಮೋಘವರ್ಷನ ನಂತರ ಆಳ್ವಿಕೆ ಮಾಡಿದ ಎರಡನೆಯ ಕೃಷ್ಣನ ಕಾಲದ ಮೇವುಂಡಿಯ ಶಾಸನದಲ್ಲಿ ಮಾಸವಾಡಿಯ ಉಲ್ಲೇಖ ಬರುತ್ತದೆ. ಮಾಸವಾಡಿ-೧೪೦ ಕರ್ನಾಟಕದ ತುಂಗಭದ್ರಾ ಮತ್ತು ಮಲಪ್ರಭಾ ನದಿಗಳ ಮಧ್ಯದ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಗ್ರಾಮಗಳನ್ನು ವ್ಯಾಪಿಸಿತ್ತು. ಮಾಸವಾಡಿ-೧೪೦ ರಲ್ಲಿ ಸಮಾವೇಶಗೊಳ್ಳುವ ಗ್ರಾಮಗಳೆಂದರೆ ಡಂಬಳ, ಆಲೂರು, ಕಕ್ಕೂರ, ಮೇವುಂಡಿ, ನಾಗರಹಳ್ಳಿ, ಕೊರ್ಲಹಳ್ಳಿ, ಬೂದಿಹಾಳ, ಶಿರೂರ, ಡೋಣಿ, ತಾಮ್ರಗುಂಡಿ, ಬರದೂರ, ಬಿದರಹಳ್ಳಿ, ಚಿಕ್ಕವಡ್ಡಟ್ಟಿ, ಮುಂಡರಗಿ, ಕವಲೂರು ಪ್ರಮುಖವಾಗಿವೆ.

ಹೀಗೆ ಗದಗ ಜಿಲ್ಲಾ ಪ್ರದೇಶವು ವಿವಿಧ ಕಾಲಘಟ್ಟಗಳಲ್ಲಿ ಮೌರ್ಯ, ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯನಗರ, ಆದಿಲ್‌ಶಾಹಿಗಳು ಮತ್ತು ಬ್ರಿಟೀಷರು ಸೇರಿದಂತೆ ತಮ್ಮ ಸಾಮ್ರಾಜ್ಯ ಹಾಗೂ ಸಂಸ್ಥಾನದೊಳಗೆ ಸೇರಿಸಿಕೊಂಡು ಆಳ್ವಿಕೆ ನಡೆಸಿದ್ದು, ಕ್ರಿ.ಶ. ೬ನೇ ಶತಮಾನದಿಂದ ಕ್ರಿ.ಶ. ೨೦ನೇ ಶತಮಾನದವರೆಗೂ ಐತಿಹಾಸಿಕ ಹಾಗೂ ಚಾರಿತ್ರಿಕವಾಗಿ ಮಹತ್ವವನ್ನು ಪಡೆದಿದೆ.

**ಟಿಪ್ಪಣಿಗಳು**

೦೧. ಬೇಲೇರಿ ವೈ.ಆರ್., **ಭೌಗೋಳಿಕತೆ ಮತ್ತು ಪ್ರಾಗಿತಿಹಾಸ, 'ಹಾನಗಲ್ಲು'** ವಾಸುದೇವ ಬಡಿಗೇರ, (ಸಂ) ಪು. ೮.

೦೨. ಶ್ರೀನಿವಾಸ ಎಲ್., ೨೦೧೦, '**ಹಂಪಿ ಪರಿಸರದ, ಆದಿ ಮಾನವನ ನೆಲೆಗಳು,** ಪು. ೭.

೦೩. ವಾಸುದೇವನ್ ಸಿ.ಎಸ್. ಹಾಗು ಇತರರು., ೨೦೦೭, **ಕರ್ನಾಟಕ ದೇವಾಲಯ ಕೋಶ; ಗದಗ ಜಿಲ್ಲೆ,** ಪು. ೩.

೦೪. ಅದೇ, ಪು. ೪.

೦೫. ಗೌಡರ ಎಂ. ಬಿ., ೨೦೧೦, **ಭೌಗೋಳಿಕ ಪರಿಸರ**, ಗದಗ ಜಿಲ್ಲಾ ಒಂದು ಅಧ್ಯಯನ, ಕೆರೆಮನಿ. ಸಿ.ವ್ಹಿ(ಸಂ), ಪು. ೨೭೨.

೦೬. ಅದೇ, ಪು. ೨೭೩.

೦೭. ಅಂತರ್‌ಜಾಲದ ಮಾಹಿತಿಯ ಪ್ರಕಾರ.

೦೮. ಅಂತರ್‌ಜಾಲದ ಮಾಹಿತಿಯ ಪ್ರಕಾರ.

೦೯. ಗೌಡರ ಎಂ. ಬಿ., ೨೦೧೦, **ಪೂರ್ವೋಕ್ತ**, ಪು. ೨೭೭.

೧೦. ಗದಗ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೦೭–೨೦೦೮, ಪು. ೬೩.

೧೧. ಅದೇ.

೧೨. ಗೌಡರ ಎಂ. ಬಿ., ೨೦೧೦, **ಪೂರ್ವೋಕ್ತ**, ಪು. ೨೮೧.

೧೩. ಪಾಟೀಲ್ ಬಿ. ಎಸ್., ೨೦೦೦, **ಕಪೋತಗಿರಿ**, ಪು. ೩೯–೪೦.

೧೪. ಶಿವತಾರಕ್ ಕೆ.ಬಿ., ೨೦೦೬, **ಗದಗ ಜಿಲ್ಲೆಯ ಪ್ರಾಗಿತಿಹಾಸ**, ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಆರ್, ಗೋಪಾಲ್(ಸಂ), ಪು. ೧೩.

೧೫. ಅದೇ, ಪು. ೧೨.

೧೬. ಅದೇ.

೧೭. ಅದೇ, ಪು. ೧೫.

೧೮. ಅದೇ, ಪು. ೧೭.

೧೯. ಅದೇ.

೨೦. ಅದೇ, ಪು. ೧೮.

೨೧. SII, VOL-XI, NO-48, AD–೧೦೦೨.

೨೨. ಹರಿದಾಸ. ಎಂ ಹೆಚ್., ೨೦೧೦, **ಗದುಗಿನ ಶ್ರೀ ವೀರನಾರಾಯಣಸ್ವಾಮಿ**, ಪು. ೯.

೨೩. ಅದೇ, ಪು. ೧೨.

೨೪. ಅದೇ.

೨೫. SII, VOL-XV, NO-140, AD-೧೧೮೪

೨೬. SII, VOL-XI, NO-159, AD–೧೨೧೩

೨೭. ಹರಿದಾಸ. ಎಂ ಹೆಚ್., ೨೦೧೦, **ಪೂರ್ವೋಕ್ತ**, ಪು. ೧೫.

೨೮. ಅದೇ.

೨೯. ಅದೇ, ಪು. ೧೬.

೩೦. ಕಸ್ತೂರಿ ನೀಲತ್ತಹಳ್ಳಿ., ೨೦೦೨, **ಕರ್ನಾಟಕದಲ್ಲಿ ಕೆರೆ ನೀರಾವರಿ**, ಪು. ೨೭.

೩೧. ನರೇಗಲ್ಲ ಎಂ.ಎಸ್., ೨೦೧೦, **ಉತ್ತರ ಗದಗ ಜಿಲ್ಲಾ ಶಾಸನಗಳು**, ಪು. ೧೬.

೩೨. ಕೆರೆಮನಿ. ಸಿ.ಫ್ಹಿ., ೨೦೧೦, **ಗದಗ ಜಿಲ್ಲಾ ಒಂದು ಅಧ್ಯಯನ**, ಪು. ೨೫೧

೩೩. ಕಸ್ತೂರಿ ನೀಲತ್ತಹಳ್ಳಿ., ೨೦೦೨, **ಪೂರ್ವೋಕ್ತ**, ಪು. ೫೦.

೩೪. ಬಡಿಗೇರ. ಶಂಕ್ರಪ್ಪ., ೨೦೦೯, **ಶಿರಹಟ್ಟಿ ಪರಿಸರ ಇತಿಹಾಸ ಮತ್ತು ಪುರಾತತ್ವ** ಪು. ೧೮.

೩೫. ಕಸ್ತೂರಿ ನೀಲತ್ತಹಳ್ಳಿ., ೨೦೦೨, **ಪೂರ್ವೋಕ್ತ**, ಪು. ೩೧.

೩೬. ನರೇಗಲ್ಲ ಎಂ.ಎಸ್., ೨೦೧೦, **ಪೂರ್ವೋಕ್ತ**, ಪು. ೧೭.

೩೭. ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ್, ರಮೇಶ ನಾಯಕ., ೨೦೦೭, **ಪೂರ್ವೋಕ್ತ**, ಪು. ೯.

೩೮. ಕೆರೆಮನಿ. ಸಿ.ವ್ಹಿ., ೨೦೧೦, **ಗದಗ ಜಿಲ್ಲಾ ಒಂದು ಅಧ್ಯಯನ**, ಪು. ೨೫೩.

೩೯. ನರೇಗಲ್ಲ ಎಂ.ಎಸ್., ೨೦೧೦, **ಪೂರ್ವೋಕ್ತ**, ಪು. ೧೯೮.

೪೦. ಕಸ್ತೂರಿ ನೀಲತ್ತಹಳ್ಳಿ., ೨೦೦೨, **ಪೂರ್ವೋಕ್ತ**, ಪು. ೩೪.

೪೧. SII-XI, No.24, ಅಸುಂಡಿ, ಕ್ರಿ.ಶ. ೯೨೫.

೪೨. SII-XI, No.37, ಕುರ್ತಕೋಟಿ, ಕ್ರಿ.ಶ. ೯೪೬

೪೩. SII-XI, No.13, ಗಾವರವಾಡ,

೪೪. SII-XI, No.24, ಚಿಂಚಲಿ, ಕ್ರಿ.ಶ. ೮೯೭.

೪೫. SII-XI, No.41, ನಾಗಾವಿ, ಕ್ರಿ.ಶ. ೯೪೯.

೪೬. EI Vol-VI, P No. 98 to 108, ನೀಲಗುಂದ, ಕ್ರಿ.ಶ. ೮೬೬.

೪೭. SII-XI, P-I, No.21, ಬೆಟಗೇರಿ.

೪೮. SII-XI, P-I, No.10, ಬೆಂತೂರ, ಕ್ರಿ.ಶ. ೮೬೪.

೪೯. SII-XI, P-I, No.06, ಬೆಳಹೋಡ.

೫೦. EI Vol-XIII, P No. 192 to 194, ಮುಳಗುಂದ.

೫೧. SII-XI, P-I, No.28, ವೆಂಕಟಾಪೂರ, ಕ್ರಿ.ಶ. ೯೦೭.

೫೨. SII-XI, P-I, No.99, ಶಿರುಂಜ, ಕ್ರಿ.ಶ. ೮೮೩.

೫೩. SII-XI, P-I, No.12, ಸೊರಟೂರ, ಕ್ರಿ.ಶ. ೮೬೮.

೫೪. SII-XI, P-I, No.23, ಹರ್ಲಾಪುರ, ಕ್ರಿ.ಶ. ೮೯೬.

೫೫. SII-XI, P-I, No.17, ಕರಮುಡಿ,

೫೬. SII-XI, P-I, No.29, ಕೌಜಗೇರಿ, ಕ್ರಿ.ಶ. ೯೧೨.

೫೭. SII-XI, P-I, No.38, ನರೇಗಲ್ಲ, ಕ್ರಿ.ಶ. ೯೫೦.

೫೮. SII-XI, P-I, No.16, ರೋಣ, ಕ್ರಿ.ಶ. ೮೭೪.

೫೯. EI Vol-XV, P No. 74 to 75, ಸವಡಿ.

೬೦. EI Vol-VII, P No. 25 to 28, ಕೊಣ್ಣೂರ, ಕ್ರಿ.ಶ. ೮೬೦.

೬೧. KI Vol-II, No. 4, ದಂಡಾಪುರ, ಕ್ರಿ.ಶ. ೯೨೦.

೬೨. ಬಡಿಗೇರ. ಶಂಕ್ರಪ್ಪ., ೨೦೦೯, **ಪೂರ್ವೋಕ್ತ**, ಪು. ೨೧.

೬೩. SII-XI, No.108, ನರೇಗಲ್ಲ, ಕ್ರಿಶ. ೯೫೦.

೬೪. ನರೇಗಲ್ಲ. ಎಂ.ಎಸ್., **ಪೂರ್ವೋಕ್ತ** ದಂಡಾಪುರ, ಕ್ರಿಶ. ೮೪೦. ಪು. ೨೦೨.

೬೫. SII-XVIII, No.178, ದಂಡಾಪೂರ, ಕ್ರಿಶ. ೯೧೮.

೬೬. ಅದೇ.

೬೭ ಕಸ್ತೂರಿ ನೀಲತ್ತಹಳ್ಳಿ., ೨೦೦೨, **ಪೂರ್ವೋಕ್ತ**, ಪು. ೩೪.

೬೮. ಅದೇ.

೬೯. EI-XX No.6, SII-IX P-1, No.69, ಕೊಟುಮಚಗಿ.

೭೦. SII-IX, P-1, No. 69. ರಾಜೂರ.

೭೧. EI-7 No.19, ಸೂಡಿ

೭೨. SII-XI, P-1, No.101, ಪೇಠಾಲೂರ.

೭೩. SII-XI, P-1, No.112. ಕುಂಟೋಜಿ.

೭೪. SII-XI, P-1, No.112, ಉಣಚಗೇರಿ.

೭೫. EI-XV, ಸೂಡಿ.

೭೬. SII-XI, P-2, No.122, ಉಣಚಗೇರಿ

೭೭ SII-XI, P-2, No.104, ಗದಗ.

೭೮. SII-XI, P-2, No.136, ಪೇಠಾಲೂರ.

೭೯. KI-V, No.12, ನರಗುಂದ.

೮೦. KI-II, No.10, ಲಕ್ಕುಂಡಿ.

೮೧. SII-XI, P-2, No.136, ಪೇಠಾಲೂರ.

೮೨. SII-XVIII, No.104, ಗದಗ.

೮೩. SII-XV, No.78, ರೋಣ.

೮೪. SII-XV, No.29, ಚಿಕ್ಕವಡ್ಡಟ್ಟಿ

೮೫. SII-XV, P-1, No.57. ಡಂಬಳ.

೮೬. EI-VI, No.12 & KI-V, No.12, ನರಗುಂದ.

೮೭. ನೀಲತ್ತಹಳ್ಳ ಕಸ್ತೂರಿ., ೨೦೦೨, **ಪೂರ್ವೋಕ್ತ**, ಪು. ೩೯.

೮೮. ಬಡಿಗೇರ. ಶಂಕ್ರಪ್ಪ., ೨೦೦೯, **ಪೂರ್ವೋಕ್ತ**, ಪು. ೨೧.

೮೯. SII. Vol-IV, No-೨೬೭, ಕ್ರಿಶ. ೧೪೧೧.

೯೦. ಕುಂಚೂರ ಬಸವರಾಜ., **ನಮ್ಮೂರ ಕೆರೆಗಳು**, ಪು. ೧೯-೨೦.

೯೧. ರಿತ್ತಿ ಶ್ರೀನಿವಾಸ, ಪುಲಿಗೆರೆ-೩೦೦, ೧೯೯೯, ಕಲಬುರ್ಗಿ ಎಂ.ಎಂ., **ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳು,** ಪು. ೧೦೫.

೯೨. ಅದೇ, ಪು. ೧೦೬.

೯೩. ನಾಗಯ್ಯ ಜಿ.ಎಂ.., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ ಪು. ೧೦೩-೧೦೭

೯೪. ಅದೇ.

೯೫. ರಿತ್ತಿ ಶ್ರೀನಿವಾಸ., ೧೯೯೯, **ಪೂರ್ವೋಕ್ತ,** ಪು. ೧೦೭

೯೬. SII VOL-XI, NO-48, ನರಗುಂದ.

೯೭. SII VOL-XVIII, NO-13, ಕ್ರಿ.ಶ. ೮೬೬, ಚಿಂಚಲಿ.

೯೮. SII VOL-XI, NO-97, ಕ್ರಿ.ಶ. ೧೦೬೨, ಮುಳಗುಂದ.

೯೯. ನರೆಗಲ್ಲ ಎಂ ಎಸ್., ೨೦೦೯, **ಪೂರ್ವೋಕ್ತ,** ಪು. ೫೩.

೧೦೦. ನಾಗಯ್ಯ ಜಿ.ಎಂ., **ಪೂರ್ವೋಕ್ತ,** ಪು. ೧೦೫.

೧೦೧. SII VOL-XI, NO-129, ಕ್ರಿ.ಶ. ೧೦೮೩, ಸವಡಿ.

೧೦೨. ನಾಗಯ್ಯ ಜಿ.ಎಂ., **ಪೂರ್ವೋಕ್ತ,** ಪು. ೧೦೪.

೧೦೩. SII VOL-XI,p-1, NO-101, ಕ್ರಿ.ಶ. ೧೦೬೮, ಪೇಠಾಲೂರು

# ಅಧ್ಯಾಯ ಮೂರು

## ಕೆರೆಗಳು

೩.೧. ಉಗಮ

೩.೨. ಪ್ರಾಚೀನತೆ

೩.೩. ಕೆರೆ ನೀರಾವರಿ ಪರಂಪರೆ

೩.೪. ನಾಮಾವಳಿಗಳು

೩.೫. ವರ್ಗೀಕರಣ

೩.೬. ವಿವಿಧ ಆಯಾಮಗಳು

೩.೭. ಶಾಸನೋಕ್ತ ಕೆರೆಗಳು

೩.೮. ಶಾಸನೋಕ್ತವಲ್ಲದ ಕೆರೆಗಳು

೩.೯. ಕೆರೆಗಳ ಇಂದಿನ ಸ್ಥಿತಿ-ಗತಿಗಳು

೩

# ಕೆರೆಗಳು

### ೩.೧. ಉಗಮ :

ಕ್ರಿಸ್ತಶಕ ಆರಂಭದ ಶತಮಾನಗಳಲ್ಲಿ ಕರ್ನಾಟಕವು ಅತೀ ಪ್ರಾಚೀನ ನೀರಾವರಿ ಯೋಜನೆಯನ್ನು ಅಳವಡಿಸಿಕೊಂಡಿತ್ತೆಂಬುದು ಶಿಲಾಶಾಸನಗಳಿಂದ ತಿಳಿಯುತ್ತದೆ. ಚಂದ್ರವಳ್ಳಿ, ತಾಳಗುಂದ ಮತ್ತು ಗುಡ್ನಾಪುರ ಕೆರೆಗಳು ಕದಂಬರ ಕಾಲದ ಕೆರೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಕಟ್ಟಿಸುವುದು ಒಂದು ಪುಣ್ಯದ ಕಾರ್ಯವೆಂದು ಪರಿಗಣಿಸಲಾಗಿತ್ತು. ರಾಜರು, ರಾಣಿಯರು, ಮಂತ್ರಿ ಮಹೋದಯರು, ದಂಡನಾಯಕರು, ಅಧಿಕಾರಿಗಳು, ಗಣ್ಯರು, ವರ್ತಕರು ದೇವಸ್ಥಾನ ಕಟ್ಟಲು ತೋರಿಸಿದ ಭಕ್ತಿ ಭಾವದಿಂದಲೇ ಕೆರೆ ಮತ್ತು ಜಲಾಶಯಗಳನ್ನು ಕಟ್ಟುತ್ತಿದ್ದರು. ಹಂಪಿಯ ಲಕ್ಷ್ಮೀಧರನ ಶಿಲಾಶಾಸನ[೧] ಒಂದರಲ್ಲಿ, ತಾಯಿ ತನ್ನ ಮಗುವಿಗೆ ಹಾಲೆರೆಯುವಾಗ "ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಂಗಳಂ ಮಾಡಿಸು", ಎಂದು ಹಾಡುತ್ತಿದ್ದಳೆಂದು ಹೇಳಿದೆ. ಕ್ರಿ.ಶ. ೧೧೪೮ರ ಶಾಸನದ ಪ್ರಕಾರ ಶಿರಸಂಗಿಯ ಸಾಮಾನ್ಯ ಸ್ತ್ರೀಯಾದ ಸೋರಿಗಾವುಂಡಿಯು ತನಗೆ ಪುಣ್ಯವನ್ನು ತರುವಂತಹ ಯಾವುದಾದರೂ ಕೆಲಸವನ್ನು ಮಾಡಬೇಕೆಂದು ತನ್ನ ಮೂರು ಮಕ್ಕಳನ್ನು ಕೋರಿಕೊಂಡಳೆಂದು; ಅದರಂತೆ ಒಂದು ಕೆರೆಯನ್ನು ದುರಸ್ತಿ ಮಾಡಿದರೆಂದು ಹೇಳಲಾಗಿದೆ.

ಮಾನವನ ಉಗಮ ಮತ್ತು ವಿಕಾಸದ ಸುದೀರ್ಘ ಇತಿಹಾಸವನ್ನು ಗಮನಿಸಿದಾಗ ಮಾನವ ಪೂರ್ವ ಕಾಲದಿಂದಲೂ ಭೌತಿಕ ಹಾಗೂ ಮಾನಸಿಕವಾಗಿ ವಿಕಾಸ ಹೊಂದುವುದರದೊಂದಿಗೆ ಪರಿಸರದಲ್ಲಿ ಆಗುತ್ತಿರುವ ಕಠಿಣ ಸಮಸ್ಯೆಗಳನ್ನು ಸಹ ಎದುರಿಸುತ್ತಾ ಬಂದಿದ್ದಾನೆ. ಮಾನವ ಎಲ್ಲಾ ಬಗೆಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ಕೆರೆ, ನದಿ, ತೊರೆಗಳ ಸಮೀಪದಲ್ಲಿಯೇ ಕೇಂದ್ರಿಕೃತವಾಗಿತ್ತು. ಸರಿಸುಮಾರು ಇಂದಿನಿಂದ ಏಳು ಸಾವಿರ ವರ್ಷಗಳ ಪೂರ್ವದಲ್ಲಿ ಮಾನವ ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಒಂದಡೆ ಮಾನವನು ಸ್ಥಿರವಾಗಿ ನೆಲೆ ನಿಲ್ಲುವ ಪ್ರಯತ್ನವು ಅವನ ಜೀವನದಲ್ಲಿ ಬಂದದ್ದು ವ್ಯವಸಾಯದಿಂದಲೇ. ಈ ವ್ಯವಸಾಯ ಪದ್ಧತಿಯು ಅವರ ಜೀವನದಲ್ಲಿ ಒಂದು ಕ್ರಮಬದ್ಧತೆಯನ್ನು ತಂದಿತು. ಮಾನವನ ಸರ್ವತೋಮುಖ ಅಭಿವೃದ್ಧಿ

ವ್ಯವಸಾಯದ ಅವಿಷ್ಕಾರದಿಂದಲೇ ಪ್ರಾರಂಭವಾಯಿತು. ಒಂದು ಸಂಸ್ಕೃತಿಯ ಉಗಮ ಮತ್ತು ವಿಕಾಸಕ್ಕೆ ವ್ಯವಸಾಯ ತಳಹದಿಯಾಯಿತು.

ಮಾನವನು ಮೊದಲಿಗೆ ವ್ಯವಸಾಯವನ್ನು ಪ್ರಾರಂಭಿಸಿದಾಗ ಮಳೆಯನ್ನು ನಂಬಿದ. ವಿಪುಲವಾಗಿ ನೀರು ಸಿಗುವ ಭಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆ ಮತ್ತು ಸಕಾಲದ (ಪ್ರಸ್ತುತ ಕಾಲ) ವೈಪಲ್ಯತೆಯು ಅವನನ್ನು ಅಗಾಗ ಕಷ್ಟಕ್ಕೆ ಒಳಪಡಿಸುತ್ತಿದ್ದರಿಂದ ಅವನು ನೀರನ್ನು ಸಂಗ್ರಹಮಾಡಿ ಉಪಯೋಗ ಮಾಡಹತ್ತಿದ. ಮುಂದೆ ವ್ಯವಸಾಯಕ್ಕೆ ಉಪಯೋಗಿಸಲು ನೀರಿಗೆ ಒಡ್ಡು ಹಾಕಿ ಸಂಗ್ರಹ ಮಾಡಲು ಪ್ರಾರಂಭಿಸಿದ ನಂತರ ಇವುಗಳೇ ಕೆರೆ ಕುಂಟೆಗಳಾಗಿ ಉಗಮಗೊಂಡವು.

### ೩.೨. ಪ್ರಾಚೀನತೆ

ನೀರು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ನೀರಿಲ್ಲದೆ ಮನುಷ್ಯ ಅಷ್ಟೇ ಏಕೆ, ಇಡೀ ಜೀವ ಸಂಕುಲ ಬದುಕಲಾರದು. ಹಾಗಾಗಿ ನೀರು ಭೂಮಿಯ ಮೇಲಿನ ಅತ್ಯಮೂಲ್ಯ ಸಂಪನ್ಮೂಲ. ನೀರು ಕೇವಲ ಮನುಷ್ಯ, ಪ್ರಾಣಿ ಹಾಗೂ ಪಕ್ಷಿ ಸಂಕುಲಕ್ಕೆ ಮಾತ್ರವಲ್ಲ, ಸಸ್ಯ ಸಂಕುಲಕ್ಕೂ ಜೀವ ಸಂಜೀವಿನಿ. ಹಾಗಾಗಿ ಮನುಷ್ಯ ಭೂಮಿ ಮೇಲೆ ಕಾಣಿಸಿ ಕೊಂಡಾಗಿನಿಂದ ಸದಾ ನೀರಿನ ಮೂಲದ ನೆಲೆಗಳಲ್ಲಿ ವಾಸಿಸಲಾರಂಭಿಸಿದ. ಕ್ರಮೇಣ ನಾಗರಿಕತೆ ವಿಕಸಿಸಿದಂತೆ ಆದಿಮಾನವ ಬೇಟೆ ಸಂಸ್ಕೃತಿಗೆ ಕಾಲಿರಿಸಿದಾಗ ಅವನಿಗೆ ನೀರಿನ ಅವಶ್ಯಕತೆ ಮತ್ತು ಮಹತ್ವ ಮತ್ತಷ್ಟು ಹೆಚ್ಚಾಯಿತು. ಮಳೆಗಾಲದಲ್ಲಿ ತನ್ನ ಸುತ್ತಮುತ್ತಲ ಪ್ರಕೃತಿ ಹಚ್ಚ ಹಸುರಿನಿಂದ ನಳನಳಿಸುವುದನ್ನು ಕಂಡುಕೊಂಡ.[೨] ತಾನು ಉತ್ತಿ ಬಿತ್ತಿದ ಬೆಳೆ ಹುಲುಸಾಗಿ ಬೆಳೆದು ಫಲವ ನೀಡಲು ನೀರು ಅವಶ್ಯವೆಂಬುದನ್ನು ಮನಗಾಣುತ್ತಾನೆ. ಬೆಳೆ ಬೆಳೆಯಲು ಈಗ ಅವನು ಬೆಟ್ಟದಿಂದ ಇಳಿದು ಬಯಲು ಪ್ರದೇಶಕ್ಕೆ ಬರುವುದು ಅನಿವಾರ್ಯವಾಯಿತು. ಅಲ್ಲಿ ಸುರಿಯುತ್ತಿದ್ದ ಮಳೆ ನೀರನ್ನು ಹಿಡಿದಿಟ್ಟುಕೊಳ್ಳಲು ಯೋಚಿಸಿದ. ಹರಿವ ಹಳ್ಳಗಳಿಗೆ ಒಡ್ಡುಗಳನ್ನು ಹಾಕಿ, ಇಲ್ಲವೇ ಗುಂಡಿಗಳನ್ನು ತೋಡಿ ನೀರನ್ನು ನಿಲ್ಲಿಸಿದ. ಹೀಗೆ ಸಂಗ್ರಹಿಸಿದ ನೀರು ಅವನ ದಿನಬಳಕೆಯ ಜೊತೆಗೆ ಕೃಷಿಗೂ ಉಪಯೋಗವಾಗಿ ನೀರಾವರಿ ಪದ್ಧತಿ ಮೊದಲಾಯಿತು. ರಾಜಸತ್ತೆ ಪ್ರಾರಂಭಗೊಂಡ ಮೇಲೆ ಜನರಿಗೆ, ಪ್ರಾಣಿಗಳಿಗೆ ಮತ್ತು ಕೃಷಿಗೆ ನೀರಿನ ವ್ಯವಸ್ಥೆಯನ್ನು ಒದಗಿಸುವುದು ಅರಸರ ಒಂದು ಸಾಮಾಜಿಕ ಜವಾಬ್ದಾರಿಯಾಯಿತು. ಕೆರೆ, ಬಾವಿ, ಕೊಳ, ಕಟ್ಟೆ, ಕಾಲುವೆ ಮುಂತಾದ ರೂಪಗಳಲ್ಲಿ ಜಲ ಸಂಗ್ರಹಣೆ ವಿಧಾನಗಳು ರೂಢಿಗೊಂಡವು. ಹೀಗೆ ಗದಗ ಜಿಲ್ಲೆಯಲ್ಲಿ ಪ್ರಾರಂಭಿಕ ಅರಸರ ಕಾಲಗಳಲ್ಲಿ ಇಂಥ ಪ್ರಯತ್ನಗಳು ನಡೆದಿರುವುದಕ್ಕೆ ಸಾಕಷ್ಟು ಸಾಕ್ಷಿಗಳಿವೆ. ಊರನ್ನು ಕಟ್ಟುವ ಮೊದಲು ಕೆರೆಗಳನ್ನು ಕಟ್ಟು, ಊರು ತನ್ನಿಂದ ತಾನೇ ಬೆಳೆಯುತ್ತದೆ ಎಂಬುದು ವಾಸ್ತವ. ಕೆರೆಗಳನ್ನು ಕಟ್ಟಿದರೆ ಅಲ್ಲಿ ಊರು ಬೆಳೆಯುತ್ತದೆ. ಊರು ಬೆಳೆಯಲು ಕೆರೆಗಳು ಬೇಕೇಬೇಕೆ. ಹಾಗೆ

ನೋಡಿದರೆ ನಮ್ಮ ನಾಗರಿಕತೆ ಬೆಳೆದಿರುವುದೇ ನದಿ ಪಾತ್ರಗಳಲ್ಲಿ ಹಾಗೂ ಕೆರೆಕಟ್ಟೆಗಳಲ್ಲಿ. ಕೆರೆ ಕೇವಲ ನೀರಿನ ಸೆಲೆ ಅಥವಾ ಸಂಗ್ರಹತಾಣ ಮಾತ್ರ ಅಲ್ಲ. ಕೆರೆಗಳಿಂದ ನಿರ್ಧರಿಸುವ ಕಾಲವೂ ಇತ್ತು. ಯಾವ ಊರಿನಲ್ಲಿ ಹೆಚ್ಚು ಕೆರೆಗಳಿವೆಯೋ ಆ ಊರು ಸ್ವಾಭಾವಿಕವಾಗಿ ಸಮೃದ್ಧವಾಗಿದೆ ಎಂಬುದು ನಂಬಿಕೆ. ಕೆರೆಗಳು ನಮ್ಮ ಜೀವನದ ಅವಿಭಾಜ್ಯ ಅಂಗ. ನಮ್ಮ ಜನಪದರಲ್ಲಂತೂ ಕೆರೆಗಳ ಪಾತ್ರಗಳೂ ಕೆರೆಗಳ ಸುತ್ತಲೇ ಸುತ್ತುತ್ತಿರುತ್ತವೆ. ಯಾವುದೇ ಊರಿರಬಹುದು, ಆ ಊರಿನಲ್ಲಿ ಒಂದು ಕೆರೆಯಿರಬೇಕು, ನೀರನ್ನು ಸೇದಲು, ಬಟ್ಟೆ ತೊಳೆಯಲು, ಸ್ನಾನ ಮಾಡಲು, ಜಾನುವಾರುಗಳಿಗೆ ಮೈ ತೊಳೆಯಲು ಎಲ್ಲರೂ ಕೆರೆಗೆ ಬರಬೇಕು. ಅಲ್ಲಿಗೆ ಬರುವವರನ್ನು ನೋಡಲು, ಕಳ್ಳದೃಷ್ಟಿ ಬೀರಲು, ನಿಂತು ಮಾತಾಡಲು ಕೆರೆಯೇ ಒಂದು ಕುಂಟನೆಪ. ಊರಿಗೆ ಬಂದವಳು ನೀರಿಗೆ ಬಾರದಿರುತ್ತಾಳಾ ..ಎಂದು ಹೇಳಿರುವುದು ಕೆರೆಯನ್ನು ಉದ್ದೇಶಿಸಿಯೇ.

ಕೆರೆ ಕಟ್ಟೆಗಳು ಭಾರತೀಯ ಪರಂಪರೆಯಲ್ಲಿ ಮಾನವನ ಅವಿಭಾಜ್ಯ ಅಂಗಗಳಾಗಿ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಆದಿಮಾನವನು ತನ್ನ ನೀರಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಳೆಯ ನೀರನ್ನು ಸಂಗ್ರಹಿಸುವ, ನದಿಯ ಪ್ರವಾಹವನ್ನು ಬೇರೆಡೆಗೆ ತಿರುಗಿಸುವ ಪ್ರಯತ್ನಗಳನ್ನು ಮಾಡಿ, ಅದರಿಂದ ಬೇಸಾಯವನ್ನು ಮಾಡುವುದಲ್ಲದೇ, ತನ್ನ ವಸತಿಯ ಬೆಳವಣಿಗೆಗೆ ಕಾರಣನಾಗಿದ್ದಾನೆ.[೩]

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ನೂತನ ಶಿಲಾಯುಗದ ಕಾಲದಲ್ಲಿ ಹಾಗೂ ನಂತರದ ಬೃಹತ್ ಶಿಲಾಯುಗದ ಕಾಲದಲ್ಲಿ ಕೃತಕ ಅಥವಾ ಮಾನವ ನಿರ್ಮಿತ ಕೆರೆಗಳು ಪ್ರಾರಂಭವಾದವೆಂದು ಹೇಳಬಹುದು. ಇದನ್ನು ಬೇರೆ ರೀತಿಯಾಗಿ ಹೇಳುವುದಾದರೆ ಕೆರೆಕಟ್ಟೆಗಳ ನಿರ್ಮಾಣ ಕಾರ್ಯ ಕರ್ನಾಟಕದಲ್ಲಿ ಪ್ರಾರಂಭವಾದದ್ದು ನೂತನ ಶಿಲಾಯುಗದ ಕಾಲದಲ್ಲಿ. ಅದು ಹೆಚ್ಚು ಬೆಳಕಿಗೆ ಬಂದಿರುವುದು ಬೃಹತ್ ಶಿಲಾಯುಗದ ಕಾಲದಲ್ಲಿ. ಶಾತವಾಹನ ರಾಜನಾದ ಪುಳಮಾವಿಯ ಮ್ಯಾಕೆಡೋಣಿ ಶಾಸನವು ಕೆರೆ ಬಗ್ಗೆ ಪ್ರಸ್ತಾಪಿಸುವ ಅತೀ ಪ್ರಾಚೀನವಾದ ಶಾಸನ. ಇದಾದ ನಂತರ ಕದಂಬ ಅರಸ ಮಯೂರವರ್ಮನ ಚಂದ್ರವಳ್ಳಿ ಶಾಸನ[೪] ಆತನು ಚಂದ್ರವಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ. ಕರ್ನಾಟಕ ಪ್ರದೇಶವನ್ನು ಆಳಿದ ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ವಿಜಯನಗರ ಅರಸರು, ಆದಿಲ್‌ಶಾಹಿಗಳು ಮತ್ತು ಬ್ರಿಟೀಷರು ಕೆರೆಗಳನ್ನು ಹತ್ತು ಹಲವು ಕಾರಣಗಳಿಗೆ ನಿರ್ಮಿಸಿದರೂ ವ್ಯವಸಾಯ ಮತ್ತು ವಸತಿ ಪ್ರದೇಶಕ್ಕೆ ನೀರನ್ನು ಒದಗಿಸುವ ಮುಖ್ಯ ಉದ್ದೇಶವನ್ನು ಹೊಂದಿದ್ದರು. ಕೆರೆಗಳ ನಿರ್ಮಾಣ ಪುಣ್ಯಪ್ರದವೆಂದೇ ಭಾವಿಸಿದ್ದ ಅಂದಿನ ಜನ ಅದನ್ನು ನಿರ್ಮಿಸುವ ಮತ್ತು ಸುಸ್ಥಿತಿಯಲ್ಲಿ ಕಾಪಾಡುವ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು.[೫] ಹಾಗಾಗಿ ಅಂದಿನ ಕೆರೆಗಳು ಇಂದಿನವರೆಗೂ ಉಳಿದುಕೊಂಡು ಬಂದಿವೆ. ಮುಖ್ಯವಾಗಿ ಅಗ್ರಹಾರ, ದೇವಾಲಯ,

ಛತ್ರ, ಮಠ ಮತ್ತು ಕೆರೆಗಳು ಹಾಗೂ ನೂತನವಾಗಿ ಸ್ಥಾಪಿತವಾದ ವಸತಿ ಪ್ರದೇಶಗಳು ಒಂದನ್ನೊಂದು ಅವಲಂಬಿಸಿದ್ದವು. ಈ ಹಿನ್ನೆಲೆಯಲ್ಲಿ ನೋಡಿದಾಗ ಗದಗ ಜಿಲ್ಲೆಯ ಕೆರೆಗಳು ಹಲವು ಕಾರಣಗಳಿಂದಾಗಿ ನಿರ್ಮಾಣ ಮಾಡಿದ್ದರೂ ವ್ಯವಸಾಯಕ್ಕೆ ನೀರು ಒದಗಿಸುವ, ಅಲ್ಲಿನ ಜನವಸತಿಯ ದೈನಂದಿನ ಅವಶ್ಯಕತೆಗಳನ್ನು ಪೂರೈಸಲು ಅಥವಾ ದೇವಾಲಯದ ಅವಶ್ಯಕತೆಗಳನ್ನು ಪೂರೈಸುವ ಉದ್ದೇಶಗಳಿಗೆ ನಿರ್ಮಿತವಾಗಿವೆ.

ಕೆರೆಗಳು ಹೇಗೆ? ಯಾವಾಗ? ಏಕೆ ಕಟ್ಟಲ್ಪಟ್ಟವು ಎಂಬ ಪ್ರಶ್ನೆಗೆ ಇತಿಹಾಸದಲ್ಲಿ ಸ್ಪಷ್ಟ ಉತ್ತರವಿಲ್ಲ. ಆದರೆ ಪ್ರಾಚೀನ ಕಾಲದಲ್ಲಿ ನವಶಿಲಾಯುಗದ ಮಾನವನು ಸ್ವಾಭಾವಿಕವಾಗಿ ಮಳೆ ತಗ್ಗು ಪ್ರದೇಶಗಳಲ್ಲಿ ಸಂಗ್ರಹಗೊಳ್ಳುವುದನ್ನು ಅವಲೋಕಿಸಿದ ನಂತರ ಕೃತಕ ನೀರಿನ ಸೆಲೆಯನ್ನು ಸೃಷ್ಟಿಸಿಕೊಳ್ಳುವುದು ಅನಿವಾರ್ಯವಾಗಿತ್ತು.[೬] ಹೀಗೆ ನಿಂತ ನೀರಿನ ಉಪಯೋಗ ಮಾಡಿಕೊಳ್ಳಲು ಪ್ರಾಚೀನ ಕಾಲದ ಮಾನವನಿಗೆ  ಕೆರೆಗಳನ್ನು ಕಟ್ಟಲು ಪ್ರೇರಣೆ ಆಗಿರಬೇಕು. ಮನುಷ್ಯರು ನೆಲೆನಿಂತು ಪಶುಪಾಲನೆ ಮತ್ತು ಕೃಷಿಯಲ್ಲಿ ಪಾಲ್ಗೊಂಡ ಮೇಲೆ ಕೆರೆಗಳು ಸೃಷ್ಟಿಯಾಗಿರಬಹುದು. ರಾಜಪ್ರಭುತ್ವ ಬೆಳೆದು ಬಂದ ಮೇಲೆ ಇಂಥ ಕೆರೆಗಳನ್ನು ಕಟ್ಟಿಸುವುದು ರಾಜಧರ್ಮವಾಗಿ ಪರಿಣಮಿಸಿತು. "ಕೆರೆಯಂ ಕಟ್ಟಿಸು ಕಾಲುವೆಯಂ ಸವೆಸು" ಎಂಬಿತ್ಯಾದಿ ಮಾತುಗಳು ಹುಟ್ಟಿ ಜನಪ್ರಿಯವಾದವು. ದಕ್ಷಿಣ ಭಾರತದ ಚರಿತ್ರೆಯಲ್ಲಿ ಚೋಳರು ಕೆರೆ ಕಟ್ಟಿಸುವ ಕಾಯಕವನ್ನು ತಾವು ರಾಜ್ಯ ಸ್ಥಾಪಿಸಿದ ಕಡೆಗಳಲ್ಲೆಲ್ಲಾ ವಿಸ್ತರಿಸಿದರು. ಇದೇ ಕೆರೆಯ ಪರಂಪರೆಯನ್ನು ಮಿಕ್ಕೆಲ್ಲಾ ರಾಜರು ಮುಂದುವರಿಸಿದರು. ಚೋಳರು ತಮ್ಮ ರಾಜ್ಯಾಡಳಿತದಲ್ಲಿ ಕೆರೆಕಟ್ಟೆ ವಾರಿಯಂ, (ಕೆರೆಕಟ್ಟೆ ಸಮಿತಿ) ಎಂಬ ಆಡಳಿತ ವಿಭಾಗವನ್ನೇ ಆರಂಭಿಸಿದ್ದರು. ಸ್ಥಳೀಯ ಆಡಳಿತದ ಅತಿಮುಖ್ಯ ಕೆಲಸ ಇದೇ ಆಗಿತ್ತು. ಚೋಳರ ಆಡಳಿತಕ್ಕೊಳಪಟ್ಟ ಕರ್ನಾಟಕದ ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ ನೂರಾರು ಕೆರೆಗಳ ಒಂದು ದೊಡ್ಡ ಜಾಲವೇ ಜೀವ ತಳೆದದ್ದು ಈ ಕಾರಣದಿಂದಲೇ. ಕೆರೆ ಕಟ್ಟಿಸುವ ಕಾರ್ಯ ಕೇವಲ ರಾಜಕಾರ್ಯವಾಗಿರಲಿಲ್ಲ, ಅದು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯವಾಗಿತ್ತು.[೭] ಆದ್ದರಿಂದಲೇ ರಾಜರಿಗೆ ಕೆರೆ ಕಟ್ಟಿಸುವ ಕೆಲಸ ಕಷ್ಟವಾಗಿರಲಿಲ್ಲ. ಉಳ್ಳವರು ಹಣಸಹಾಯ, ದವಸಧಾನ್ಯದ ಸಹಾಯ ಮಾಡಿದರೆ ದುಡಿಯುವ ಜನರು ಕೆರೆ ನಿರ್ಮಾಣ ಕಾರ್ಯದ ರೂವಾರಿಗಳಾದರು. ಹತ್ತಾರು ವರ್ಷ ಹಿಡಿಯುತ್ತಿದ್ದ ಕೆರೆ ನಿರ್ಮಾಣದ ಕೆಲಸ ದೇವಾಲಯ ನಿರ್ಮಾಣದ ಕೆಲಸಕ್ಕಿಂತ ಶ್ರದ್ಧೆಯಿಂದ ನಡೆಯುತ್ತಿತ್ತು.

ಇಂತಹ ಕೆರೆಗಳ ನಿರ್ಮಾಣದಲ್ಲಿ ರಾಜ ಮಹಾರಾಜರು, ಮಂತ್ರಿಗಳು, ಸಾಮಂತ ಅಧಿಕಾರಿಗಳು ಅತಿಯಾದ ಶ್ರದ್ಧೆ ತೋರಿದ್ದು ಯಾಕೆ? ಈಗಾಗಲೇ ಇದ್ದ ಬಾವಿಗಳು, ಸಣ್ಣ ಸಣ್ಣ ಕಟ್ಟೆಗಳು, ಸ್ವಾಭಾವಿಕ ಕೆರೆಗಳು ಸಾಲದಾದವೇ? ಪಶುಪಾಲನೆಗೆ ಇವರ ವಿಶೇಷ ಕೊಡುಗೆಯೇ? ಕೆರೆ ನಿರ್ಮಾಣಕ್ಕೆ ಅತಿ ಉತ್ಸಾಹಕ್ಕೆ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕಾರಣಗಳಷ್ಟೇ ಕಾರಣವೇ?

ಎಂಬಿತ್ಯಾದಿ ಪ್ರಶ್ನೆಗಳ ಜೊತೆಗೆ ಇನ್ನೊಂದು ಅಂಶವನ್ನು ಗಮನಿಸಬಹುದು. ರಾಜರ ಮೊದಲ ಆದ್ಯತೆ "ಜನಕಲ್ಯಾಣ ಆಗಿರಲಿಲ್ಲ, ಅದು ಒಂದು ಅಂಶವಾಗಿತ್ತೆಂದು ನಿಜವಾದರೂ ಅವರ ಆದ್ಯತೆ ತಮ್ಮ ರಾಜ್ಯಗಳ ಅಧಿಕಾರಿಗಳ ರಕ್ಷಣೆ ಅದಕ್ಕೆ ಬೇಕಾದ ಸೈನ್ಯ ಕಟ್ಟುವುದು, ಸೈನ್ಯ ಹೆಚ್ಚಿಸುತ್ತಾ ಹೋಗುವುದು, ಕುದುರೆ ಸೈನ್ಯ, ಆನೆ ಸೈನ್ಯ, ಒಂಟೆ ಸೈನ್ಯ, ಸೈನ್ಯಕ್ಕೆ ಬೇಕಾದ ಶಸ್ತ್ರಾಸ್ತ್ರ, ಆಹಾರ, ಬಟ್ಟೆ ಇತ್ಯಾದಿಗಳನ್ನು ಹೊತ್ತುಕೊಂಡು ಹೋಗಲು ಎತ್ತುಗಳು, ಕತ್ತೆಗಳು, ಹೆಸರಗತ್ತೆಗಳು, ಸೈನ್ಯದೊಂದಿಗೆ ಸಾಗಬೇಕಾಗಿತ್ತು. ಇವೆಲ್ಲವುಗಳೊಂದಿಗೆ ಅಪಾರ ಪ್ರಮಾಣದಲ್ಲಿ ಬೇಕಾಗಿದ್ದ ನೀರನ್ನು ಹೊತ್ತು ಒಯ್ಯುವುದು ಸಾಧ್ಯವೇ ಇರಲಿಲ್ಲ. ಆದ್ದರಿಂದ ರಾಜರು ಅವರ ಬುದ್ಧಿವಂತ ಮಂತ್ರಿಗಳು ಕಂಡುಹಿಡಿದ ನೇರಮಾರ್ಗ ಈ ಕೆರೆಗಳು. ರಾಜರು ದಂಡೆಯಾತ್ರೆಗಳಿಗೆ ನೀರೊದಗಿಸುವುದು ಕೆರೆಗಳ ಮೊದಲ ಆದ್ಯತೆಯಾಗಿತ್ತು.

ಅವನ ಅಧಿಕಾರಿಗಳು ಕೆರೆಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ರಾಜತ್ವದ ಈ ಹಂತದಲ್ಲಿ ಕೆರೆಗಳಿಗೆ ತೂಬುಗಳೇ ಇರಲಿಲ್ಲವೆಂಬುದು ಅವರ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಬರಗಾಲ, ಜಲಕ್ಷಾಮ, ಅಲ್ಪಸ್ವಲ್ಪ ಜನರಲ್ಲಿನ ಜಾಗೃತಿ, ಬಂಡಾಯ, ಅತೃಪ್ತಿ ಇತ್ಯಾದಿ ಕಾರಣಗಳ ಫಲವಾಗಿ ಜನರ ಯೋಗಕ್ಷೇಮದ ಕಡೆಗೆ ರಾಜರು ಗಮನಹರಿಸಿದರು. ಆಗ ಕೆರೆಗಳ ಮೇಲೆ ಜನರಿಗೆ ಅಲ್ಪ ಅಧಿಕಾರ ಪ್ರಾಪ್ತವಾಯಿತು. ಹೆಚ್ಚುವರಿ ನೀರನ್ನು ಕೃಷಿಗೆ ಬಳಸಲು ತೂಬುಗಳನ್ನು ಅಳವಡಿಸಿದರು. ಇಷ್ಟಾದರೂ ಕೆರೆಗಳ ಹಿಂಭಾಗದ ಭೂಮಿ ಬಹುಕಾಲ ರಾಜರು ಮತ್ತವರ ಜೊತೆಗಿದ್ದ ಬ್ರಾಹ್ಮಣ ಪುರೋಹಿತರ ಹಿಡಿತದಲ್ಲಿತ್ತು.[೮] ಈ ಜಮೀನಿನಲ್ಲಿ ಬೆಳೆದ ಬೆಳೆಯನ್ನು ಮಂತ್ರಿಗಳು ಮತ್ತು ಪುರೋಹಿತರಿಗೆ ಮೀಸಲಾಗಿತ್ತು. ದುಡಿತ ಮಾತ್ರ ಬಡವರ ಕಡ್ಡಾಯ ಕರ್ತವ್ಯವಾಗಿತ್ತು. ಹೀಗೆ ಕೆರೆಗಳು ಮತ್ತು ನದಿಗಳ ಅಕ್ಕ-ಪಕ್ಕಗಳ ಭೂ ಪ್ರದೇಶವೆಲ್ಲಾ ಶ್ರೀಮಂತರ ಒಡೆತನದಲ್ಲಿತ್ತು. ಕೆರೆಗಳ ಏರಿಗೆ ಮಣ್ಣು ಹಾಕುವುದು, ದಡ ಕುಸಿಯದಂತೆ ಏರಿಗೆ ಕಲ್ಲು ಕಟ್ಟುವುದು ಒಡ್ಡರ ಆದ್ಯ ಕರ್ತವ್ಯವಾಗಿತ್ತು. ಹೂಳೆತ್ತುವುದು ಇತರೆ ಬಡವರ್ಗದ ಕೆಲಸವಾಗಿತ್ತು. ಇಷ್ಟಾದರೂ ಇವರಿಗೆ ನೀರಿನ ಒಡೆತನ ಕಿಂಚಿತ್ತು ಇರಲಿಲ್ಲ. ದಲಿತರು ನೀರನ್ನು ಮುಟ್ಟುವಂತೆ ಇರಲಿಲ್ಲ.

ದಂಡೆತ್ತಿ ಬರುತ್ತಿದ್ದ ಸೈನಿಕರ ಕುದುರೆ, ಆನೆ, ಕತ್ತೆ, ಎತ್ತುಗಳು ನೀರು ಕುಡಿಯುಲು, ಮೈತೊಳೆಯಲು ಈ ಕೆರೆಗಳ ನೀರನ್ನು ಬಳಸುತ್ತಿದ್ದರು. ಆರಂಭದಲ್ಲಿ ನೂರಾರು ನಂತರ ಸಾವಿರಾರು ಅನಂತರ ಲಕ್ಷಾಂತರ ಸಂಖ್ಯೆಗೇರಿದ ರಾಜರ ಸೈನಿಕರು ಇಂತಹ ಕೆರೆಯ ನೀರನ್ನು ಒಮ್ಮೆ ಕುಡಿದು ಬಿಡುವಷ್ಟು ಭಯ ಹುಟ್ಟಿಸುತ್ತಿದ್ದರು. ಸೈನ್ಯದ ಹಾದಿ ಅಷ್ಟು ಭಯಂಕರವಾಗಿತ್ತು. ಅವರು ಇತರ ರಾಜ್ಯದ ಮೇಲಷ್ಟೇ ದಾಳಿ ಮಾಡುತ್ತಿರಲಿಲ್ಲ. ತಮ್ಮದೇ ಕೆರೆಗಳ ನೀರಿನ ಮೇಲೂ ಅಂತಹ ದಾಳಿ ನಡೆಯುತ್ತಿತ್ತು. ಇಂತಹ ತಮ್ಮದೇ ಅಸಂಖ್ಯಾತ ದಾಳಿಗಳನ್ನು ಇತರ ವೈರಿ

ರಾಜ್ಯಗಳ ಕೊನೆ ಇರದ ದಾಳಿಗಳನ್ನು ಸಹಿಸಿ ಸಾಕಾಗಿ ಜನ ರೊಚ್ಚಿಗೆದ್ದು, ದಂಗೆ ಏಳತೊಡಗಿದ ಮೇಲೆ ಕೆರೆಗಳಿಗೆ ತೂಬುಗಳ ರಚನೆಯಾಗಿರಬೇಕು.[೯] ರಾಜರ ಕಾಲ ಮುಗಿದ ಮೇಲೆ ಹೊಸ ಕಾಲ ಆರಂಭವಾಯಿತು; ಕಾಲ ಕಳೆದಂತೆ ಕೆರೆಗಳು ಊರಿನ ಉಸ್ತುವಾರಿಗೆ ಬಂದಿರಬೇಕು.

ಚೋಳರ ಕಾಲದಲ್ಲಿ ಕಟ್ಟಲ್ಪಟ್ಟ ಕೆರೆಗಳು ಹೆದ್ದಾರಿಗಳಿಗೆ ಹೊಂದಿಕೊಂಡೇ ಇದ್ದವು. ಈ ಹೆದ್ದಾರಿಗಳ ಕೆರೆಗಳು ಮೊದಲಿಗೆ ತೂಬುಗಳನ್ನು ಹೊಂದಿದ್ದಂತೆ ಕಾಣುವುದಿಲ್ಲ. ಈ ಬಗೆಯ ಕೆರೆಗಳು ಮಾತ್ರ ಬೃಹತ್ ಸೈನ್ಯದ ನೀರಿನ ಅಗತ್ಯತೆಯನ್ನು ಪೂರೈಸಲು ಶಕ್ತವಾಗಿದ್ದವು. ಸೈನ್ಯದ ಬಹುಮುಖ್ಯ ಭಾಗವಾಗಿದ್ದ ಪ್ರಾಣಿಗಳಿಗೂ ಈ ನೀರು ಬಳಕೆಯಾಗುತ್ತಿತ್ತು. ಎರಡು ಮೂರು ವರ್ಷ ಮಳೆ ಕೈಕೊಟ್ಟರೂ, ಈ ಬಗೆಯ ಕೆರೆಗಳಿಂದ ನೀರಿಗೇನು ದುಸ್ತರವಾಗುತ್ತಿರಲಿಲ್ಲ. ನಾಡು ಬರ ಅನುಭವಿಸುತ್ತಿದ್ದರೂ ಲೂಟಿಗಾಗಿ ರಾಜ್ಯ ಒತ್ತುವರಿಗಾಗಿ, ಕ್ರೀಡೆಗಾಗಿ ಯುದ್ಧಗಳು ಮುಂದುವರಿಯುತ್ತಿದ್ದವು. ದೆಹಲಿ ಸುಲ್ತಾನ ಮತ್ತು ಮೊಗಲ್ ರಾಜರ ಪ್ರವೇಶದಿಂದ ಭಾರತ ಪ್ರದೇಶಗಳ "ಪ್ರಭುತ್ವಕ್ಕಾಗಿ ಸ್ಪರ್ಧೆ" ತೀವ್ರಗೊಂಡು ರೈತ ಬಂಡಾಯಗಳು ಚಿಗುರೊಡೆಯ ತೊಡಗಿದ ಮೇಲೆ "ಉದಾರ ಪ್ರಭುತ್ವ" "ಜನರ ಕಲ್ಪನೆ" ಅಲ್ಪಮಟ್ಟಿಗಾದರೂ ಸ್ಥಾಪಿತವಾಗತೊಡಗಿತು.[೧೦] ಇದರ ಒಂದು ಪರಿಣಾಮದಿಂದ ಕೆರೆ ನೀರಿನ ಮೇಲೆ ರೈತರಿಗೆ ತುಸುಮಟ್ಟಿನ ಹಕ್ಕು ಪ್ರಾಪ್ತವಾಯಿತು. ಇದಕ್ಕೆ ಮುನ್ನ ಕೆರೆ ಹಿಂಭಾಗದ ಭೂಮಿ ಎಂದೂ ರೈತಾಪಿ ಜನರ ಒಡೆತನದಲ್ಲಿರದೆ ರಾಜಪರಿವಾರ, ದೇವಾಲಯ ಮತ್ತು ಪುರೋಹಿತರ ದತ್ತಿ ಭೂಮಿಯಾಗಿರುತ್ತಿತ್ತು. ಇದೇ ಪರಿಸ್ಥಿತಿ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಇಂದಿಗೂ ಮುಂದುವರಿದು, ನದಿ ನೀರು ಮತ್ತು ಅಂತರ್ಜಲದ ಒಡೆತನ ಮೇಲ್ಜಾತಿಗಳಿಗಷ್ಟೆ ವಿಸ್ತಾರ ಗೊಂಡಿರುವುದು, ಯಾವಾಗಲೂ ಪ್ರಭುತ್ವಗಳು ಯಾರ ಪರ ಎಂಬುವುದನ್ನು ಸಾಬೀತು ಪಡಿಸುವಂತಿದೆ.

ನೀರು, ಜಲ, ಉದಕ, ಗಂಗೆ ಹೀಗೆ ಹತ್ತು ಹಲವು ಹೆಸರುಗಳಿಂದ ಕರೆಸಿಕೊಳ್ಳುವ ನೀರಿಗೆ ಭರತಖಂಡದಲ್ಲಿ ಪುರಾಣ ಕಾಲದಿಂದಲೂ ಒತ್ತುಕೊಡಲಾಗಿದೆ. ಭಗೀರಥ ಗಂಗೋಧಕವನ್ನು ದೇವಲೋಕದಿಂದ ತಂದನೆಂದು ಪ್ರತೀತಿ. ಋಷ್ಯಶೃಂಗನೆಂಬ ಮುನಿ ಸಂಚಾರಕ್ಕೆ ತೆರಳಿದೆಡೆಯಲ್ಲೆ ಮಳೆ ಬರುತ್ತಿತ್ತು. ಅಗಸ್ತ್ಯ ಮಹಾಮುನಿ ಸಮುದ್ರವನ್ನೇ ಆಪೋಶನ ತೆಗೆದುಕೊಂಡಿದ್ದಾನಂತೆ, ದುರ್ಯೋಧನ ಜಲಸ್ತಂಭನ ವಿದ್ಯೆಯಲ್ಲಿ ಪಾರಂಗತನಾಗಿದ್ದ, ಪಾಂಡವರು ಬಾಯಾರಿ ನೀರಿಗೆ ಕೈಹಾಕಿ ನಾಲ್ವರು ಅಸುನೀಗಿದ್ದರು, ಧರ್ಮರಾಯ ಯಕ್ಷಪ್ರಶ್ನೆಗೆ ಉತ್ತರಿಸಿ ಅವರೆಲ್ಲರನ್ನೂ ಬದುಕಿಸಿಕೊಂಡ. ಶಿವ ತನ್ನ ಮಡದಿಯಾದ ಪಾರ್ವತಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡರೆ, ನೀರಿನ ಮಾತೆ ಗಂಗೆಯನ್ನು ಮುಡಿಯಲ್ಲೆ ಇರಿಸಿಕೊಂಡಿದ್ದಾನೆ. ಭೀಷ್ಮಾಚಾರ್ಯರು ಉತ್ತರಾಯಣ ಪುಣ್ಯಕಾಲಕ್ಕೆ ಕಾದು ಪ್ರಾಣತ್ಯಾಗಕ್ಕೆ ಸಿದ್ಧರಾಗಿದ್ದರು, ಆಗ ಅರ್ಜುನ ನಿಂತಲ್ಲೇ ಬಾಣ ಬಿಟ್ಟು ಗಂಗೆಯನ್ನು ಅವರ ಬಾಯಿಗೆ ಬೀಳುವಂತೆ ಮಾಡಿದ್ದ. ರಾಮ ನೀರಿಗಾಗಿ ಬಾಣಬಿಟ್ಟು ನೀರು

ಉಕ್ಕುವಂತೆ ಮಾಡಿದ ಕಥೆ ನಮ್ಮ ರಾಜ್ಯದಲ್ಲಿ ಹತ್ತು ಹಲವು ಕಡೆಗಳಲ್ಲಿ ಕೇಳುತ್ತೇವೆ.[೧೧] ಹೀಗೆ ಪ್ರಾಚೀನ ಕಾಲದಲ್ಲಿ ನೀರಿನ ಉಗಮದ ಬಗ್ಗೆ ಪುರಾಣ, ಐತಿಹ್ಯಗಳ ಮೂಲಕ ತಿಳಿದುಕೊಳ್ಳಬಹುದು.

ಕನ್ನಡದ ಕವಿ ಬೇಂದ್ರೆ 'ಇಳಿದು ಬಾ ತಾಯಿ ಇಳಿದು ಬಾ' ಎಂದು ಮುಗಿಲಿನಿಂದ ಗಂಗೆಯನ್ನು ಕರೆಯುತ್ತಾರೆ. ನೀರು ನೀರಿನೊಳಗು ನೀರಿನಿಂದ ನೀರು ಜನಿಸುತ್ತದೆ. ಇದೊಂದು ಸೃಷ್ಟಿ ಚಕ್ರದ ನಿಯಮ. ನೆಲದ ಮೇಲಿರುವ ನೀರು ಸೂರ್ಯನ ತಾಪಕ್ಕೆ ಆವಿಯಾಗಿ ಮುಗಿಲಿಗೆ ಹೋಗಿ ಮೋಡಗಟ್ಟಿ ಪುನಃ ಭೂಮಿಗೆ ಮಳೆಯ ರೂಪದಲ್ಲಿ ಸುರಿಯುವ ಒಂದು ಕ್ರಮದಿಂದಾಗಿ ನೀರು ಜೀವ ಜಲದ ಚೈತನ್ಯವಾಗಿ ಭೂಮಿಯ ಮೇಲಿನ ಸಕಲ ಜೀವರಾಶಿಗಳಿಗೆ ಬದುಕನ್ನು ನೀಡಿದೆ.[೧೨] ಜೀವಂತ ನೀರು ಜೀವಿಗಳನ್ನು ಬದುಕಿಸಿದೆ. ಆದ್ದರಿಂದ ನೀರು ಎಂಬುದು ಜೀವಾಮೃತ ಅದಿಲ್ಲದಿದ್ದರೆ ಯಾವ ಜೀವಿಯೂ ಜೀವಿಸಲಾರದು. ಒಂದೊತ್ತು ಊಟವಿಲ್ಲದಿದ್ದರೂ ನಾವು ಬದುಕಬಹುದು, ಆದರೆ ಒಂದು ತಂಬಿಗೆ ನೀರಿಲ್ಲದೆ ಬದುಕಲು ಸಾಧ್ಯವಿಲ್ಲ. ಏಕೆಂದರೆ ನೀರಿಲ್ಲದೆ ನಾವು ಯಾವುದನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಆದ್ದರಿಂದ ನೀರನ್ನು ಅತಿಹೆಚ್ಚು ಪವಿತ್ರವೆಂದು ಪರಿಗಣಿಸಿದ್ದೇವೆ.

ದೇವಸ್ಥಾನಗಳಲ್ಲಿ ನೀರು 'ತೀರ್ಥ' ಎಂದು ಎನ್ನಿಸಿಕೊಳ್ಳುವುದು. ಅದರ ಶುದ್ಧ ರೂಪದಿಂದಾಗಿಯೆ. ಮನುಷ್ಯನ ನಡುವೆ ಮಡಿ–ಮೈಲಿಗೆಗಳು ನಿರ್ಧಾರ ಆಗುವುದು, ಶುದ್ಧೀಕರಣದ ಪವಿತ್ರ ಜಲವನ್ನಾಗಿ ನೀರನ್ನು ಬಳಸುತ್ತೇವೆ. ಜಾತಿಯ ಹೀನತೆ–ಶ್ರೇಷ್ಠತೆಗಳ ತಾರತಮ್ಯ ಕೂಡ ನೀರನ್ನೇ ಅವಲಂಬಿಸಿರುತ್ತದೆ. ನೀರು ಬೇಕಿಲ್ಲದ ಸ್ಥಿತಿಯಾದರೂ ಯಾವುದಿದೆ. ಮೊದಲು ಮನುಷ್ಯ ಅಲೆಮಾರಿ ಸ್ವರೂಪದಿಂದ ಒಂದೆಡೆ ನೆಲೆ ನಿಲ್ಲಲು ಅವರು ಅವಲಂಬಿಸಿದ್ದು ನೀರಿನ ಅಕ್ಕ–ಪಕ್ಕದ ಹಳ್ಳಕೊಳ್ಳದ ಪ್ರದೇಶದಲ್ಲಿ. ಆದ್ದರಿಂದಲೇ ಅದನ್ನು ಹಳ್ಳ–ಕೊಳ್ಳದ ಸಂಸ್ಕೃತಿ ಎನ್ನುತ್ತೇವೆ.[೧೩] ದೊಡ್ಡ ನದಿಪಾತ್ರಗಳಲ್ಲಿ ದೊಡ್ಡ ಪಟ್ಟಣಗಳು ಸೃಷ್ಟಿಯಾಗಲು ನೀರು ಕಾರಣ. ಕುಡಿಯಲು ಮತ್ತು ಕೃಷಿಗೆ ನೀರನ್ನು ಪ್ರಾಚೀನ ಕಾಲದಿಂದಲೂ ಮನುಷ್ಯ ಪಳಗಿಸಿಕೊಂಡು ಬಂದಿದ್ದಾನೆ. ಅದರಿಂದ ರಕ್ಷಣೆ ಪಡೆದು ಜೀವನ ಸಾಗಿಸಿದ್ದಾನೆ. ನೀರಿಲ್ಲದ ಮನುಷ್ಯನ ಬದುಕನ್ನು ಊಹಿಸಲು ಸಾಧ್ಯವಿಲ್ಲ. ನೀರು ಎಂದರೆ ಏನೆಂದು ಹೇಳವುದು ಸುಲಭದ ಮಾತಲ್ಲ, ಅದರ ಬಗ್ಗೆ ಹೇಳುತ್ತಾ ಹೋದರೆ ಕೊನೆ ಎಂಬುದು ಇರುವುದೇ ಇಲ್ಲ.

ಪೃಥ್ವಿಯ ಮುಕ್ಕಾಲುಭಾಗ ನೀರಿನಿಂದಲೇ ಕೂಡಿಕೊಂಡಿರುವುದರಿಂದ ಇದನ್ನು ಜಲಾವೃತ ಗೃಹವೆಂದು ಕರೆಯುವರು. ಪೃಥ್ವಿಯ ಒಟ್ಟು ವಿಸ್ತೀರ್ಣ ೫೧೦ ದಶಲಕ್ಷ ಚದರ ಕಿ.ಮೀ. ಇದರಲ್ಲಿ ನೀರಿನಿಂದ ಆವರಿಸಿದ ಒಟ್ಟು ಪ್ರದೇಶ ೩೬೧.೮ ದಶಲಕ್ಷ ಕಿ.ಮೀ. ಆದರೆ ಈಗ ೧೪೫.೨ ದಶಲಕ್ಷ ಕಿ.ಮೀ ಪ್ರದೇಶ ಭೂಮಿಯಿಂದ ಕೂಡಿದೆ. ಒಟ್ಟು ನೀರಿನ ಪ್ರಮಾಣ ಶೇಕಡಾವಾರು ೭೦.೮ರಷ್ಟಾದರೆ ಭೂಮಿಯ ಪ್ರಮಾಣ ೨೧.೨ರಷ್ಟು ಎಂದು ಗುರುತಿಸಲಾಗಿದೆ.[೧೪] ನೀರು

ದ್ರವರೂಪದಲ್ಲಿ ಇದೆ ಎಂದು ನಾವೆಲ್ಲ ತಿಳಿದಿದ್ದೇವೆ. ಆದರೆ ಇದರ ಬಗ್ಗೆ ಆಳವಾದ ಅಧ್ಯಯನವನ್ನು ಮಾಡಿದಾಗ ನೀರಿನ ಇನ್ನೆರಡು ರೂಪಗಳನ್ನು ಗುರುತಿಸಬಹುದು. ಅವು ಯಾವುವೆಂದರೆ ಅನಿಲ ಮತ್ತು ಘನ. ಭೂಮಿಯನ್ನು ಆವರಿಸಿರುವ ವಾಯವಿನಲ್ಲಿ ಶೇ. ೨ರಷ್ಟು ನೀರು ಆವಿಯ ರೂಪದಲ್ಲಿರುತ್ತದೆ. ಇದನ್ನು ನೀರಾಟ ಅಥವಾ ಆದ್ರತೆ ಎಂದು ಕರೆಯುತ್ತಾರೆ ಇದುವೇ ಮೋಡಗಳಾಗಿ ಮಳೆ ಸುರಿಯಲು ಕಾರಣವಾಗುತ್ತದೆ. ಸಾಮಾನ್ಯವಾಗಿ ನೇರ ವಾಯು ಭೂಮಿಯಿಂದ ವಾಯುವಿನಲ್ಲಿ ೧೦ ಕಿ.ಮೀ ಎತ್ತರದವರೆಗೂ ಕಂಡುಬರುತ್ತದೆ. ನೀರಾವಿಯು ಮೂಲತಃ ಸಾಗರ, ಸಮುದ್ರ, ಕೆರೆ-ಬಾವಿ, ಕಾಲುವೆ, ಸರೋವರ ಮುಂತಾದವುಗಳಿಂದ ನೀರು ಬಾಷ್ಪೀಭವನಕ್ರಿಯೆಯಿಂದ ವಾಯುಮಂಡಲವನ್ನು ಸೇರಲ್ಪಡುತ್ತದೆ. ಅದರಂತೆ ಆಳ ಪ್ರಮಾಣದಲ್ಲಿ ಮಣ್ಣು ತೇವಾಂಶವನ್ನು ಕಳೆದುಕೊಳ್ಳುವುದರಿಂದ ಸಸ್ಯವರ್ಗಗಳ ಬಾಷ್ಪೀಭವನಕ್ರಿಯೆಯನ್ನು ವಿಸರ್ಜನೆಗೊಳಿಸುವುದರಿಂದ ಪ್ರಾಣಿಗಳ ಉಸಿರಾಟ ಹಾಗೂ ಸಾಗರಗಳಲ್ಲಿ ಸಂಭವಿಸುವ ಜ್ವಾಲಾಮುಖಿಗಳಿಂದಲೂ ನೀರು ವಾಯುಮಂಡಲದಲ್ಲಿ ಅನಿಲ ರೂಪದಲ್ಲಿ ಸೇರುತ್ತದೆಯಾದರೂ ಇದರಿಂದಾಗುವ ಬಾಷ್ಪೀಭವನದ ಪ್ರಮಾಣ ಅತ್ಯಂತ ಕಡಿಮೆ. ಆದರೆ ಪ್ರತಿವರ್ಷ ಸಾಗರ, ಸರೋವರ, ಸಮುದ್ರ ಪ್ರದೇಶಗಳಿಂದ ೩.೨೫, ೬೦೦ ಘನ ಕಿ.ಮೀ, ಕೆರೆ, ಬಾವಿ, ಕಾಲುವೆಗಳಿಂದ ೬೧.೧೫೧ ಘನ ಕಿ.ಮೀ ನೀರು ಭಾಷ್ಪೀಭವನಗೊಂಡು ವಾಯುವಿನಲ್ಲಿ ಸೇರುತ್ತದೆ.[೧೫] ಇಷ್ಟೊಂದು ಪ್ರಮಾಣದಲ್ಲಿ ಬಾಷ್ಪೀಭವನ ಹೊಂದಿದ ನೀರು ಮರಳಿ ಭೂಮಿಯ ಕಡೆಗೆ ಮಳೆಯ ರೂಪದಲ್ಲಿ ಬರುವ ಪ್ರಮಾಣ ಶೇ ೯೮,೦೦೦ ಘನ ಕಿ.ಮೀ. ಮಾತ್ರವೇ ಆಗಿದೆ.

ಭಾರತದಲ್ಲಿ ಮೂರು ಕಡೆ ನೀರಿದೆ. ಅದಕ್ಕೆ ಪರ್ಯಾಯವಾಗಿ ಭೂಮಿ ಇದೆ. ದಕ್ಷಿಣ ಭಾಗದ ಸುತ್ತಲೂ ಜಲಾವೃತದಿಂದ ಕೂಡಿದೆ. ಉತ್ತರ ಭಾಗದಲ್ಲಿ ಹಿಮಾಲಯದಿಂದ ಆವೃತವಾಗಿದ್ದು, ಅಲ್ಲಿ ಹಲವು ನದಿಗಳು ಜನ್ಮ ತಾಳುತ್ತವೆ. ಬೇಸಿಗೆಯಲ್ಲಿ ತುಂಬಿ ಹರಿಯುತ್ತವೆ. ಉಳಿದಂತೆ ಹಿಮರೂಪ ತಾಳುತ್ತವೆ. ಭಾರತವು ಸಮಶೀತೋಷ್ಣ ವಲಯವಾಗಿರುವುದರಿಂದ ಅಧಿಕ ಮಳೆ ಕಡಿಮೆ ಮಳೆ ಹೀಗೆ ಎರಡೂ ಸ್ವರೂಪದ ಪ್ರದೇಶಗಳಿವೆ. ಉತ್ತರದಲ್ಲಿನ ನದಿಗಳು ಬೇಸಿಗೆಯಲ್ಲಿ ಉಕ್ಕಿ ಹರಿದರೆ, ಋತುಮಾನಗಳಲ್ಲಿ ಹಿಮದಿಂದ ನಿದ್ರಿಸುತ್ತಿರುತ್ತವೆ. ಎತ್ತರದ ಹಿಮಾಲಯದ ಶಿಖರ ಶ್ರೇಣಿಗಳಲ್ಲಿ ಹುಟ್ಟುವ ನದಿಗಳು ಪೂರ್ವಾಭಿಮುಖವಾಗಿ ಹರಿಯುತ್ತವೆ. ಪಶ್ಚಿಮದಿಂದ ಪೂರ್ವಕ್ಕೆ ಹರಿಯವ ನದಿಗಳು ಹೆಚ್ಚಾಗಿವೆ. ನದಿಗಳಿಂದಾಗಿ ಭಾರತದ ಒಳನಾಡಿನ ನೀರು ಮತ್ತು ಅದರ ಉತ್ಪನ್ನಗಳಿಂದ ಸಮೃದ್ಧವಾಗಿದೆ. ನೂರಾರು ನದಿಗಳು ಭಾರತವನ್ನೇ ಜೀವಂತವಾಗಿಸಿಬಿಟ್ಟಿವೆ. ನಿರಂತರ ಇಲ್ಲವೆ ಋತುಮಾನಗಳಿಗನುಗುಣವಾಗಿ ಬೇರೆ ಬೇರೆ ಪಾತ್ರ ವಹಿಸುವ ನದಿಗಳು ಮುಖ್ಯ ಜೀವನ ಶಕ್ತಿಯಾಗಿವೆ. ಸ್ವಾತಂತ್ರ್ಯೋತ್ತರ ನದಿಗಳ ಅಭಿವೃದ್ಧಿ ಯೆಂದರೆ ಎಲ್ಲಾ ನದಿಗಳಿಗೂ ಅಣೆಕಟ್ಟುಗಳನ್ನು ಕಟ್ಟಿದ್ದು ಮುಖ್ಯವಾಗಿ ವ್ಯವಸಾಯದ ಅಭಿವೃದ್ಧಿಗಾಗಿ ಮತ್ತು ಹಸಿರು ಕ್ರಾಂತಿಗೆ

ನಾಂದಿಯಾಯಿತು.[೧೬] ಭಾರತ ಆಹಾರ ಸಮಸ್ಯೆಯಿಂದ ಮುಕ್ತವಾಗಿಸಲು ಅಪಾರ ಕಾಡಿನ ಮುಳುಗಡೆ, ಆ ಮೂಲಕ ಜೀವ ವೈವಿಧ್ಯತೆಯ ನಾಶ, ಗಿರಿಜನರ ಎತ್ತಂಗಡಿ, ಬೃಹತ್ ಅಣೆಕಟ್ಟು ಮತ್ತು ಉನ್ನತ ಯೋಜನೆಗಳ ಆಗಮನದಿಂದಾಗಿ ಅಭಿವೃದ್ಧಿಯೆಂಬುದು ತೋರಿಕೆಯ ಕಾರ್ಯವಾಯಿತು. ಕಣ್ಣಿಗೆ ಕಾಣುವ ಅಭಿವೃದ್ಧಿ ಅಧಿಕವಾಯಿತು. ನೀರಿನ ಪ್ರಮುಖ ಶೇಖರಣಾ ಕ್ರಮವಾಗಿ ಅಣೆಕಟ್ಟುಗಳು ಹೆಚ್ಚಿನ ಮಹತ್ವವನ್ನು ಪಡೆದವು. ಭಾರತದಲ್ಲಿ ಚಿರಾಪುಂಜಿಯಂತಹ ಅತಿ ಹೆಚ್ಚು ಮಳೆಯಾಗುವ ಪ್ರದೇಶವಿದ್ದಂತೆ ಸಹರಾದಂತಹ ಮರುಭೂಮಿ ಪ್ರದೇಶಗಳು ಇವೆ. ಭಾರತ ಒಂದು ಪರ್ಯಾಯ ದ್ವೀಪ, ಒರತೆ, ತೊರೆ, ಹಳ್ಳ, ನದಿ, ಸಮುದ್ರ ಹೀಗೆ ನೀರಿನ ಸಮೃದ್ಧವಾದ ದೇಶ; ಆದರೆ ಬಹುತೇಕ ನದಿಗಳು ನೀರು ಬಳಕೆಗಿಂತ ಸಮುದ್ರ ಸೇರುವುದೇ ಅಧಿಕ. ಸಮಶೀತೋಷ್ಣವಲಯದ ಭಾರತದಲ್ಲಿ ನಿತ್ಯ ಹರಿದ್ವರ್ಣದ ಕಾಡುಗಳು, ಕುರುಚಲು ಗಿಡಗಳು, ಮರುಭೂಮಿ ಮೂರು ಬಗೆಯ ಪ್ರದೇಶಗಳಿಂದ ಕೂಡಿದೆ. ಪಶ್ಚಿಮಘಟ್ಟಗಳು ಜೀವವೈವಿಧ್ಯತೆಗೆ ಪ್ರಸಿದ್ಧವಾದವು. ಅತಿ ಹೆಚ್ಚು ಮಳೆಯನ್ನು ತಮ್ಮತ್ತ ಆಕರ್ಷಿಸುವ ಶಕ್ತಿಯನ್ನು ಪಡೆದುಕೊಂಡಿವೆ.

ನೀರಿನ ಉಗಮಸ್ಥಾನವನ್ನು ಕಂಡುಹಿಡಿಯಲು ಪ್ರಾಚೀನರು ಅನುಸರಿಸುತ್ತಿದ್ದ ಮಾರ್ಗಗಳ ಬಗೆಗೆ ಕನ್ನಡ ವಿಶ್ವಕೋಶವಾದ ಲೋಕೋಪಕಾರ[೧೭] (೧೦೨೪)ದಲ್ಲಿ ಉದಕಾರ್ಗಳ ಎಂಬ ಅಧ್ಯಾಯದಲ್ಲಿ ಗಿಡಗಳು, ಮರಗಳು, ಬಳ್ಳಿಗಳು ಮತ್ತು ಇತರೆ ವಿಧವಾದ ಪರಿಸ್ಥಿತಿ ಇವುಗಳ ಪಟ್ಟಿಯನ್ನು ಕೊಟ್ಟು ನೀರಿನ ಮೂಲವನ್ನು ಅವು ತೋರಿಸಿಕೊಡುತ್ತವೆ ಎಂದು ಹೇಳಿದೆ. ಹಾಗೆಯೇ "ಮುಳ್ಳುಗಳಿಲ್ಲದ ಬನ್ನಿವೃಕ್ಷ ಮತ್ತು ದೊಡ್ಡ ಹುತ್ತ ಇರುವ ಕಡೆ ಆಳ ಪ್ರಮಾಣ ಅಗೆದರೆ ನೀರು ದೊರೆಯುತ್ತದೆ. ಮತ್ತೊಂದು ಪದ್ಯದ ಪ್ರಕಾರ ಬೆರಿಲ್, ಕಾಗೆಬಂಗಾರ, ಪಾದರಸ ಅಥವಾ ಅತ್ತಿಮರ ಇರುವ ಕಡೆ ಖಂಡಿತವಾಗಿಯೂ ನೀರನ್ನು ಪಡೆಯಬಹುದು.

ಭಾರತದಲ್ಲಿ ಜಲದ ಉಪಯೋಗವನ್ನು ಸಿಂಧು ಬಯಲಿನ ನಾಗರಿಕತೆಯಿಂದಲೇ ಬೆಳೆದುಬಂದಿದೆ ಎಂದು ಗುರುತಿಸುತ್ತಾರೆ.[೧೮] ಇಲ್ಲಿನ ನೀರಾವರಿ ಪದ್ಧತಿಗಳಲ್ಲಿ ಕಾಲುವೆ, ಈಜುಕೊಳ, ಬಾವಿ, ಒಳಚರಂಡಿ ವ್ಯವಸ್ಥೆ, ಸ್ನಾನ ಗೃಹ, ನಗರ ಬೀದಿ, ಇತರೆ ಲಕ್ಷಣಗಳು ಕಂಡು ಬರುವುದರಿಂದ ನಾಗರಿಕತೆಯ ಮೊದಲ ಹಂತವನ್ನು ನೋಡಬಹುದು. ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾ ಸಂಸ್ಕೃತಿಯಿಂದಲೂ ನೀರಿನ ಬಳಕೆ ಆರಂಭಗೊಂಡಿತು.

ವೇದ ಮತ್ತು ಬ್ರಾಹ್ಮಣಕಗಳಲ್ಲಿ ನದಿ, ಕೆರೆ, ಕಾಲುವೆಗಳ ಉಲ್ಲೇಖವಿದೆ. ಗಂಗಾ ಬಯಲಿನ ಆರ್ಯರ ಬದುಕು ಸಂಘಟನೆಯಿಂದ ಪ್ರೇರಿತವಾಗಿತ್ತು. ಆರ್ಯರೊಡನೆ ಕಾದಾಡಿದ ಅಸುರರು ಸಮುದ್ರ ತೀರದಲ್ಲಿ ನೆಲೆಸಿದ್ದರು. ಈ ಕಾಲದ ಭಾರತವು ಕೃಷಿ ಸಂಪದ್ಭರಿತವಾಗಿತ್ತು ಎನ್ನುವುದಕ್ಕೆ ಇಲ್ಲಿನ ವಾಯುಗುಣ, ಮಳೆ, ಬೆಳೆಗಳು ಕಾರಣವಾಗಿವೆ.

ತಿರುವಳ್ಳುವರ್ ಹೇಳುವಂತೆ ಜಲವಿರದಿದ್ದರೆ ಈ ಜಗತ್ತೇ ನಿರ್ಮಾಣವಾಗುತ್ತಿರಲಿಲ್ಲ. ನೀರು ಇಲ್ಲದಿದ್ದರೆ ಋತುಮಾನಗಳೇ ಸಂಭವಿಸುತ್ತಿರಲಿಲ್ಲ ಎನ್ನುವುದು ನಿರ್ವಿವಾದ ಸಂಗತಿ. ನೀರನ್ನು ಚಿನ್ನಕ್ಕಿಂತ ಅಮೂಲ್ಯವೆಂದು ಜನರು ನಂಬಿದ್ದರು. ಬೃಹತ್ ಶಿಲಾ ಸಂಸ್ಕೃತಿಯಲ್ಲಿ ನೀರಿನ ಬಳಕೆಯ ಬಗೆಗೆ ನಿರ್ದಿಷ್ಟ ಕಾಲ ಮಹತ್ವ ಸಿಕ್ಕಂಥದ್ದಾಗಿದೆ. ಈ ಕಾಲಕ್ಕೆ ಸಂಬಂಧಪಟ್ಟ ನೆಲೆಗಳನ್ನು ಉತ್ಖನನ ಮಾಡಿದ್ದು, ಕೃಷ್ಣಾ, ತುಂಗಭದ್ರಾ, ಕಾವೇರಿ ನದಿಗಳ ಪರಿಸರದಲ್ಲಿ ಅವು ವ್ಯಾಪಕವಾಗಿವೆ. ಸ್ವಾಭಾವಿಕ ಜಲಸಂಪತ್ತು ರಚಿಸಲು ಅಣೆಕಟ್ಟು, ಜಲಾಶಯಗಳು ಹಿಂದೆ ನಿರ್ಮಾಣವಾಗಿದ್ದವು. ಮಳೆ ಬರದಿದ್ದರೂ ನೀರು ಸಂಗ್ರಹಿಸುವ ಕಲೆ ಭಾರತೀಯರಿಗೆ ಈ ಹಿನ್ನೆಲೆಯಲ್ಲಿ ತಿಳಿದಿತ್ತು. ಶೇಕಡಾ ೯೦ರಷ್ಟು ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳಲ್ಲಿ ಕೃತಕ ನೀರಾವರಿಯ ಲಕ್ಷಣಗಳು ಕಂಡುಬಂದಿವೆ. ಕ್ರಿ.ಶ. ೧೮೫೦ರಲ್ಲಿ ಇವುಗಳನ್ನು ಮೊದಲು ಪತ್ತೆ ಹಚ್ಚಿದವರು ಮೆಂಡೋಸ್ ಟೇಲರ್.[೧೯] ಕೃತಕ ನೀರಾವರಿಯ ಸ್ಥಳಗಳೆಂದರೆ ಬ್ರಹ್ಮಗಿರಿ, ಚಂದ್ರವಳ್ಳಿ, ಮಸ್ಕಿ, ಕೇರಳ, ತಮಿಳುನಾಡು ಇತ್ಯಾದಿ ಕಡೆಗಳಲ್ಲಿ ಕಂಡುಬಂದಿವೆ.

ಪ್ರಾಚೀನ ಕಾಲದಲ್ಲಿ ನೀರಾವರಿ ಕಾರ್ಯಗಳಲ್ಲಿ ಕೆರೆ, ಕಾಲುವೆ, ಕೋಡಿಗಳ ನಿರ್ಮಾಣ ಮಹತ್ವದ ಧಾರ್ಮಿಕ ಸಾಮಾಜಿಕ ಕಾರ್ಯಗಳೆಂಬ ವಿಚಾರ ಶಾಸನಗಳಲ್ಲಿವೆ. ಅಂದಿನ ಕಾಲದ ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿದ್ದಿತು. ರಾಜರು, ಶ್ರೀಮಂತರು ಮತ್ತು ಗ್ರಾಮಸಂಸ್ಥೆಗಳು ಕೆರೆ, ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದೇ ನಂಬಿದ್ದರು.[೨೦] ಕಟ್ಟಿಸಿದ ಕೆರೆ ಬಾವಿಗಳನ್ನು ಯಾರೇ ಆಗಲಿ ಅಂದಿನ ಕಾಲದಲ್ಲಿ ನಾಶಪಡಿಸುವುದು ಅತ್ಯಂತ ಪಾಪಕರ ಭಾವನೆ ಇದ್ದಿತು.

ಈ ದೇಶದ ಎರಡು ಶ್ರೇಷ್ಠ ಮಹಾಕಾವ್ಯಗಳೆಂದರೆ 'ಮಹಾಭಾರತ' ಮತ್ತು 'ರಾಮಾಯಣ', ಮಹಾಭಾರತದ 'ಅನುನಾಶಿಕ ಪರ್ವವು' ಮಹಾರಾಜನಾದಂಥವನು ಕೈಗೊಳ್ಳಬೇಕಾದ ಪ್ರಜಾಹಿತಾತ್ಮಕ ಕಾರ್ಯಗಳಲ್ಲಿ ಕೆರೆಗಳ ನಿರ್ಮಾಣವು ಒಂದು; ಅದಲ್ಲದೇ ನಾಲೆಗಳ (ಕಾಲುವೆ) ನಿರ್ಮಾಣವು ಪ್ರಜಾಹಿತಾತ್ಮಕ ಕೆಲಸವೆಂದು ವಿವರಿಸುತ್ತದೆ.[೨೧] ಮತ್ತೊಂದು ವಿಶೇಷವೆಂದರೆ ನಾರದನು ಧರ್ಮರಾಜನಿಗೆ ಮಳೆಯನ್ನೇ ನೆಚ್ಚಿಕೊಂಡು ಬೇಸಾಯಕ್ಕೆ ತೊಡಗಬಾರದೆಂತಲೂ ಹಾಗೂ ಕೆರೆ ಮತ್ತು ಸರೋವರಗಳನ್ನು ನಿರ್ಮಿಸಿಕೊಂಡು ಬೇಸಾಯಕ್ಕೆ ತೊಡಗಬೇಕು ಎಂದು ಹೇಳುತ್ತಾನೆ. ಪ್ರಾಚೀನ ಭಾರತದಲ್ಲಿ ಹವಾಮಾನವು ಒಂದೇ ರೀತಿಯಾಗಿರದೇ ಮಳೆಯು ಕೆಲವೊಮ್ಮೆ ಬರುತ್ತಿರಲಿಲ್ಲ. ಇದರಿಂದ ಅಂದಿನ ಹವಾಮಾನವನ್ನು ಕುರಿತಂತೆ ನಮ್ಮ ನಿಲುವನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಎರಡನೆಯದಾಗಿ ಮಳೆಯು ನೀರಿನ ಪರ್ಯಾಯ ವ್ಯವಸ್ಥೆಯೆಂದು ಕೆರೆ ಮತ್ತು ಸರೋವರ ನಿರ್ಮಾಣಗಳ ಕಾರ್ಯವನ್ನು ಅಂದಿನ ರಾಜರು ಕೈಗೊಳ್ಳುತ್ತಿದ್ದರು. ಪ್ರಾಚೀನ ಭಾರತದ ಕೆರೆಗಳ ನಿರ್ಮಾಣ ಕುರಿತಂತೆ ಈ ಕೆಳಕಂಡ ದಾಖಲೆಗಳು ಪ್ರಮುಖ ಆಕರಗಳಾಗಿವೆ. 'ಪದ್ಮ ಪುರಾಣ'ದಲ್ಲಿ ಕೆರೆಗಳ

ನಿರ್ಮಾಣದ ಕುರಿತು, 'ವಿಷ್ಣುಧರ್ಮೋತ್ತರ' ಹಾಗೂ 'ದೇವಿ ಪುರಾಣ'ಗಳು 'ನದಿವಾಹಾಸ್' ಅಂದರೆ ನೀರಾರಿ ಕಾಲುವೆಗಳ ಬಗೆಗೆ ಮತ್ತು ನದಿ, ಕೆರೆ, ತಟಾಕಗಳ ಬಗೆಗೆ ವಿವಿರಗಳಿವೆ.[೨೨]

ಕೌಟಿಲ್ಯನ 'ಅರ್ಥಶಾಸ್ತ್ರ'[೨೩]ದಲ್ಲಿ ಆಹಾರ ಧಾನ್ಯಗಳನ್ನು, ಕೃತಕ ನೀರಾವರಿ ಕಾಲುವೆಗಳಿಂದ, ನೀರನ್ನು ಹರಿಸುವ, ಏತ ನೀರಾವರಿ, ಕಪ್ಪಲಿಗಳ ಇರವುದನ್ನು ಕಾಣುತ್ತೇವೆ.

ಬುದ್ಧನ 'ಜಾತಕ ಕಥೆ'ಗಳು[೨೪] ಕೆರೆ ಮತ್ತು ಬೇಸಾಯದ ಬಗೆಗೆ ಕೆಲವು ಉಪಯುಕ್ತ ಮಾಹಿತಿಗಳನ್ನು ಒದಗಿಸುತ್ತವೆ.

ಮೆಗಾಸ್ತಾನಿಸ್‌ನ 'ಇಂಡಿಕಾ'[೨೫]ದಲ್ಲಿ ಭೂಮಿಯ ಅನುಗುಣವಾಗಿ ಕೆರೆಗಳ ನೀರನ್ನು ಸಮರ್ಪಕವಾಗಿ ವಿತರಿಸುವುದು, ನಾಲೆ ಮತ್ತು ತೂಬುಗಳನ್ನು ದುರಸ್ತಿ ಮಾಡಿ ಸುಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳುತ್ತಿದ್ದರೆಂದು ಇದರಿಂದ ತಿಳಿದುಬರುತ್ತದೆ.

ಶುಕ್ರನು ರಚಿಸಿದ 'ನೀತಿಸಾರ'[೨೬]ದಲ್ಲಿ ಕೆರೆ ಮತ್ತು ನಾಲೆಗಳ ಬಗೆಗೆ ಮಾಹಿತಿ ಇದೆ. ಜನಸಾಮಾನ್ಯರಿಗೆ ನೀರಾವರಿ ಸೌಕರ್ಯ ಒದಗಿಸಿಕೊಟ್ಟ ಪ್ರತಿಫಲವಾಗಿ ತೆರಿಗೆಯನ್ನು ವಿಧಿಸಬೇಕೆಂಬ ಮಾಹಿತಿಯನ್ನು ತಿಳಿಸುವುದು ವಿಶೇಷವಾದ ಸಂಗತಿಯಾಗಿದೆ.

ಪಂಪಾದಿ ಕವಿಗಳ ಕಾವ್ಯಗಳಲ್ಲೂ ಕೆರೆ, ಕಾಲುವೆಗಳ ಪ್ರಸ್ತಾಪ ಉಂಟು. ಪಂಪ ಭಾರತದ ಹಸ್ತಿನಾಪುರ ವರ್ಣನೆಯಲ್ಲಿ 'ಗಗನ ತಳಿರು ಪರಿದುಮ್ಮಿದೆನಪ ಬಹುತಟಾಕದಿಂ' ಎಂಬ ಮಾತು ಬಂದಿದೆ. ಅದೇ ಕೃತಿಯಲ್ಲಿ ಕಾಲುವೆಗಳ ವರ್ಣನೆ, ಕೆರೆಗಳ ಪ್ರಸ್ತಾಪವು ಬಂದಿದೆ. 'ಆದಿ ಪುರಾಣ'ದಲ್ಲಿ 'ಜಲಾಶಯಗಳುಮಂ ನಿಮ್ನಗಾತಟ ನಿಕಟವರ್ತಿಗಳಪ್ಪ ದ್ರೋಣಾಮುಖಗಳಮಂ' ಎಂಬ ಮಾತಿನಲ್ಲಿಯು ಅಂದಿನ ಕೆರೆ, ಕಾಲುವೆ, ಜಲಾಶಯಗಳ ಪ್ರಸ್ತಾಪವಿದೆ. 'ಅಜಿತ ಪುರಾಣ'ದಲ್ಲಿ ಅರಗಟಿಯಂತ್ರದ ಸುಂದರ ವರ್ಣನೆಯನ್ನು ಒಳಗೊಂಡಿದೆ.[೨೭] ಹೀಗೆ ಕೆರೆ ಕಾಲುವೆಗಳ ವರ್ಣನೆ ಕಾವ್ಯಗಳಲ್ಲಿ ಬಂದಿದ್ದರೂ ಅವು ನೈಸರ್ಗಿಕ ಕೆರೆ, ಕಾಲವೆಗಳ ವರ್ಣನೆಗಳಾಗಿದ್ದು ಕೆಲವೊಮ್ಮೆ ಅವು ಕಾಲ್ಪನಿಕವಾಗಿರುವ ಸಾಧ್ಯತೆಗಳು ಉಂಟು. ಹೀಗೆ ಕದಂಬರಿಂದ ಮೊದಲಗೊಂಡು ಬ್ರಿಟಿಷರ ಆಡಳಿತದ ಕಾಲದವರೆಗೂ ಗದಗ ಜಿಲ್ಲೆಯಲ್ಲಿ ನೂರಾರು ಕೆರೆಗಳು ನಿರ್ಮಾಣಗೊಂಡಿವೆ ಎಂಬುದಕ್ಕೆ ಶಾಸನಗಳು, ಮೌಖಿಕ ಸಾಹಿತ್ಯ ಮತ್ತು ಐತಿಹ್ಯಗಳು ಆಧಾರಗಳಾಗಿವೆ.

### ೩.೩. ಕೆರೆ ನೀರಾವರಿ:

ಕೆರೆಬಾವಿಗಳು ನೀರಾವರಿಯ ಪುರಾತನವಾದ ಕಲೆ, ಪ್ರಾಚೀನ ನಾಗರಿಕತೆಗಳೆಲ್ಲಾ ಜಲ ಸಮೃದ್ಧವಾದ ನದಿಗಳು ಬಯಲುಗಳಲ್ಲಿ ಮೊದಲು ಬೆಳೆದವು. ನಮ್ಮ ದೇಶದಲ್ಲಿ ಸಿಂಧೂ, ಗಂಗಾ, ಕಾವೇರಿ, ಈಜಿಪ್ತನಲ್ಲಿ ನೈಲ್, ಮೈಸೊಪೊಟೇಮಿಯಾದಲ್ಲಿ ಯುಪ್ರಟಿಸ್, ಟೈಗ್ರಿಸ್; ಚೀನಾದಲ್ಲಿ ಯಾಂಗ್ ಸಿಕಿಯಾಂಗ್, ಹುಯಾಂಗ್ ಹೊ ಈ ನದಿಗಳು ಅಲ್ಲಿನ ಜನರನ್ನು ತಾಯಿ ಮಕ್ಕಳನ್ನು

ಸಾಕಿದಂತೆ ಸಾಕಿದವು. ಅದಕ್ಕಾಗಿ ಎಲ್ಲೆಲ್ಲಿಯೂ ಜನರು ನದಿಗಳನ್ನು ಪೂಜ್ಯ ಭಾವನೆಯಿಂದ ಕಾಣುತ್ತಾರೆ.

**೧. ಭಾರತ :**

"ನಮ್ಮ ದೇಶದಲ್ಲಿ ಪ್ರಕೃತಿದತ್ತವಾದ ಅನುಕೂಲಗಳು ಪ್ರಪಂಚದ ಮುಂದುವರಿದ ರಾಷ್ಟ್ರಗಳಿಗೆ ಅನುಕೂಲಗಳಿಗೆ ಸಮಾನವಾಗಿವೆ. ಉತ್ಕೃಷ್ಟವಾದ ಜಮೀನು ಲಕ್ಷಾಂತರ ಎಕರೆಯಷ್ಟಿದೆ. ನಮ್ಮ ಜನರಿಗೆ ಕೆರೆ–ಬಾವಿಗಳ ಮತ್ತು ದೇವಾಲಯ ನಿರ್ಮಾಣ ಇವು ಹುಟ್ಟುಗುಣಗಳಾಗಿ ಬಂದಿವೆ. ಇವರು ಬುದ್ಧಿ ಬಲದಲ್ಲಿಯೂ ದಕ್ಷತೆಯಲ್ಲಿಯೂ ಯಾರಿಗೂ ಕಡಿಮೆಯಿಲ್ಲ; ಆದರೆ ಕಷ್ಟಪಟ್ಟು ದುಡಿಯುವ ಅಭ್ಯಾಸ ಇನ್ನೂ ಬೆಳೆಯಬೇಕು. ನಮ್ಮ ಪರ್ವತ ಶ್ರೇಣಿಗಳಲ್ಲಿಯೂ ಕಾಡುಗಳಿಂದ ಕೂಡಿದ ಪ್ರದೇಶದಲ್ಲಿ ಅಪಾರವಾದ ಕನಿಜ ಸಂಪತ್ತು ಅಡಗಿದೆ. ಶ್ರಮಪಟ್ಟು ಕೆಲಸ ಮಾಡುವುದಕ್ಕೆ ಅನುಕೂಲವಾದ ವಾಯುಗುಣವಿದೆ. ದೇಶದಾದ್ಯಂತವೂ ಸಮೃದ್ಧಿಯಾಗಿ ನೀರನ್ನು ಸಾಗಿಸುವ ಮಹಾನದಿಗಳು, ಉಪನದಿಗಳು ಹರಿಯುತ್ತಿವೆ. ಆದರೂ ಉತ್ತರದಲ್ಲಿ ಸಿಂಧೂ ಗಂಗಾ ನದಿಗಳ ಬಯಲು, ದಕ್ಷಿಣದಲ್ಲಿ ಪಶ್ಚಿಮ ಸಮುದ್ರ ತೀರದ ಸಮೀಪದಲ್ಲಿ ಕೆಲವು ಭಾಗ, ಇಂಥ ಪುಣ್ಯಭೂಮಿಗಳನ್ನು ಬಿಟ್ಟು ಉಳಿದ ಪ್ರದೇಶಗಳಲ್ಲಿ ಮಳೆಯೇನಾದರೂ ಕಡಿಮೆಯಾದರೆ ನೀರಾವರಿಗೆ ಅಲ್ಲದೇ ಜನಕ್ಕೂ ಜಾನುವಾರುಗಳಿಗೂ ಕುಡಿಯುವ ನೀರಿಗೆ ಅಭಾವವಾಗಬಹುದು. ಈ ಸ್ಥಿತಿಯು ಮಾರನೇ ವರ್ಷವೂ ಮುಂದುವರಿದರೆ ಆ ಭಾಗದಲ್ಲಿ ಕ್ಷೋಭೆಯಾಗುತ್ತದೆ. ಇನ್ನೊಂದು ವರ್ಷವೂ ಹಾಗೆ ಇದ್ದರೆ ಕ್ಷಾಮವು ಬರುತ್ತದೆ. ದೇಶದ ಬೇಸಾಯಕ್ಕೆ ನೀರಾವರಿ ಅವಶ್ಯವೆಂದೇ ನಮ್ಮ ಸಾಹಸಿಗಳಾದ ಪೂರ್ವಜರು ಚೆನ್ನಾಗಿ ಅರಿತಿದ್ದರು. ಅವರು ಆಯಾ ಪ್ರದೇಶದ ಭೂಮಿಯ ಉಬ್ಬು ತಗ್ಗುಗಳು, ದೊರೆಯುವ ನೀರಿನ ಆಸರೆ, ಇವುಗಳಿಗೆ ಅನುಗುಣವಾಗಿ ನಮ್ಮ ಪಾಲಿನ ಭಾಗ್ಯವಾಗಿ ಅನುಗ್ರಹಿಸಿದ್ದಾರೆ. ಬಾವಿಗಳು ಕೊಳಗಳು ಕೆರೆಗಳು ದೇಶದ ಎಲ್ಲಾ ಭಾಗಗಳಲ್ಲಿ ಕಾಣಬಹುದು.[೨೮]

ದಕ್ಷಿಣ ಭಾರತದಲ್ಲಿ ಗಟ್ಟಿಯಾದ ಬೆಣಚುಕಲ್ಲು ಮತ್ತು ಗ್ಲೇಸ್‌ಕಲ್ಲು ಇರುವುದರಿಂದ ಅಲ್ಲಿ ಬಾವಿ ನೀರಾವರಿಗೆ ಅವಕಾಶ ಸೀಮಿತವಾಗಿವೆ. ಕರ್ನಾಟಕದಲ್ಲಿ ಸಾವಿರಾರು ಕೆರೆಗಳಿವೆ ಆದರೆ ಅವು ಪರಿಣಾಮ ರಹಿತವಾಗಿವೆ. ಅವುಗಳ ಸಂರಕ್ಷಣೆ ಸಾಂಪ್ರದಾಯಿಕ ವಿಧಾನಗಳು ಶಿಥಿಲವಾಗಿರುವುದೇ ಇದಕ್ಕೆ ಕಾರಣ. ಹಿಂದೆ ಕೆರೆ ನಿರ್ಮಾಣ ಬಹುತೇಕ ಖಾಸಗಿ ಉದ್ಯಮವಾಗಿತ್ತು. ಗ್ರಾಮ ಸಮುದಾಯದ ಮೇಲುಸ್ತುವಾರಿಯಲ್ಲಿ ನಡೆಯುತ್ತಿತ್ತು. ಆದಾಯದ ಉದ್ಯಮದಾರನಿಗೆ ಕೆರೆಯ ಆಯಕಟ್ಟಿನಲ್ಲಿ ಪ್ರತಿಫಲವಾಗಿ ಸಿಗುತ್ತಿತ್ತು ಫಲಾನುಭವಿಗಳಿಗೆ ತೃಪ್ತಿಕರವಾಗುವಂತೆ ಗ್ರಾಮ ಸಮುದಾಯ ತನ್ನ ಅಧಿಕಾರಗಳ ಮೂಲಕ ನೀರನ್ನು ಹಂಚುತ್ತಿತ್ತು.[೨೯] ಇಂದು ಈ ಎಲ್ಲ ಹಳೆಯ ಪದ್ಧತಿಗಳನ್ನು ನಾವು ಮುಂದುವರೆಸಿಕೊಂಡು ಹೋಗಬೇಕಾಗಿದೆ. ಇತಿಹಾಸ ಪೂರ್ವಯುಗದಲ್ಲಿ ಕೆರೆಗಳನ್ನು

ಮೊಟ್ಟಮೊದಲು ನಿರ್ಮಾಣ ಮಾಡಿದವರು ತಾಮ್ರಯುಗ ಮತ್ತು ಬೃಹತ್ ಶಿಲಾಯುಗದ ಜನರು. ಪೂನಾದ ಹತ್ತಿರದಲ್ಲಿರುವ ಇನಾಮದಾರನಲ್ಲಿ ತಾಮ್ರಯುಗದ ಜನ ಕಟ್ಟಿದ ಕೆರೆ ಪತ್ತೆಯಾಗಿದೆ. ಅದರ ಕಾಲ ಕ್ರಿಪೂ. ೧೫೦೦ ಅವರಾದ ಮೇಲೆ ಬೃಹತ್ ಶಿಲಾಯುಗದ ಜನ ಬೆಟ್ಟಗಳ ಬಳಿ ಇದ್ದು, ಅದರ ಇಳಿಜಾರಿನಿಂದ ಇಳಿಯುತ್ತಿದ್ದ ಮಳೆಯ ನೀರನ್ನು ಜಲಾಶಯಗಳಲ್ಲಿ ಸಂಗ್ರಹಿಸಿಡುತ್ತಿದ್ದರು.

**೨. ಕರ್ನಾಟಕ :**

"ಕರ್ನಾಟಕದಲ್ಲಿ ಕೆರೆ ನೀರಾವರಿ ಮೂಲವನ್ನು ಇತಿಹಾಸ ಪೂರ್ವ ಮಾನವನಲ್ಲಿ ಗುರುತಿಸಬಹುದು. ಶಿಲಾಯುಗದ ಮಾನವ ಸಸ್ಯ ಬೆಳೆಯುವುದರ ರಹಸ್ಯವನ್ನು ಅರಿತುಕೊಂಡು ಬೇಸಾಯಗಾರನಾಗಿ ಪರಿವರ್ತಿತನಾದ ಮೇಲೆಯೇ ಮಳೆಯನ್ನು ಪೂರಾ ನೆಚ್ಚಿಕೊಂಡಿದ್ದ. ಅವನ ವಾಸಸ್ಥಳದಲ್ಲಿ ಮಳೆಯೇನೋ ಸಮೃದ್ಧವಾಗಿತ್ತು. ಅವನ ಸಂಖ್ಯೆ ಹೆಚ್ಚಿದಂತೆ ಮೂಲ ಸ್ಥಳಕ್ಕಿಂತ ಕಡಿಮೆ ಮಳೆಯಾಗುವ ಸ್ಥಳಗಳಿಗೆ ವಲಸೆ ಹೋಗಬೇಕಾಯಿತು. ಆಗ ಆತ ಮಳೆ ಕಡಿಮೆ ಬೀಳುವ ಅಥವಾ ಮಳೆಯೇ ಬಾರದಂಥಹ ಕಾಲದಲ್ಲಿ ತನ್ನ ಅಗತ್ಯವನ್ನು ಪೂರೈಸಲು ಮಳೆಯ ನೀರನ್ನು ಕೂಡಿಡುವ ತಂತ್ರವನ್ನು ಬೆಳೆಸಿಕೊಂಡ. ಜಲ-ನೆಲ ಎರಡರಲ್ಲೂ ವಾಸಿಸಿ ನೀರಿನ ಅಡ್ಡಕಟ್ಟುವ ಬೀವರ್ ಪ್ರಾಣಿಯ ಹಾಗೆ ಅವನು ಹೊಲಗಳಿಗೆ ಅಡ್ಡಲಾಗಿ ಮರದ ರೆಂಬೆ, ಎಲೆ, ಮಣ್ಣುಗಳನ್ನು ಬಳಸಿ ಸಣ್ಣ ಒಡ್ಡುಗಳನ್ನು ಕಟ್ಟಿದ. ಜೋರಾಗಿ ಮಳೆ ಬಿದ್ದಾಗ ಆ ಒಡ್ಡುಗಳು ಕೊಚ್ಚಿ ಹೋಗುತ್ತಿದ್ದವು ಅವುಗಳನ್ನು ಮತ್ತೆ ಕಟ್ಟುತ್ತಿದ್ದ. ಅಲ್ಲಿ ಸಂಗ್ರಹವಾದ ನೀರನ್ನು ಸಣ್ಣ ಕಾಲುವೆಗಳನ್ನು ತೋಡಿ ತನ್ನ ಹೊಲಗಳಿಗೆ ಹಾಯಿಸುತ್ತಿದ್ದ ಹಾಗೆಯೇ ಹಾಯಿಸಲು ಆಗದೇ ಇದ್ದ ಕಡೆಗೆ ತಾನು ನೀರನ್ನು ಎತ್ತಿ ಹೊಲಗಳಿಗೆ ಬಿಡುತ್ತಿದ್ದ. ಹೀಗೆ ಕೆರೆ ನಿರ್ಮಾಣ ಕಲೆ ಮಾನವನಲ್ಲಿ ಆರಂಭವಾಯಿತು. ಅಂದಿನಿಂದ ಇಂದಿನ ವರೆಗೂ ವಿವಿಧ ರಾಜ ಮನೆತನಗಳಿಗೆ ಸೇರಿದ ದೊರೆಗಳು ಕೆರೆಗಳ ನಿರ್ಮಾಣಕ್ಕೆ ಉತ್ತೇಜನವನ್ನು ನೀಡಿ ಕೃಷಿಯನ್ನು ವಿಸ್ತರಿಸಿದರು.

ಕರ್ನಾಟಕದ ಪೀಠಭೂಮಿಯಲ್ಲಿ ಮೇಲ್ಮೈಯ ನೆಲವು ಗಟ್ಟಿಯಾಗಿದ್ದು, ಕೆಳಗಡೆ ಸಾಮಾನ್ಯವಾಗಿ ಬಂಡೆ ಸಿಕ್ಕುತ್ತದೆ. ಭೂಮಿಯು ಇಳಿಜಾರಾಗಿದೆ. ಬೀಳುವ ಮಳೆಯು ಹೆಚ್ಚಾಗಿಲ್ಲ. ಹಳ್ಳಿಗಳಲ್ಲಿ ಮಳೆಗಾಲದಲ್ಲಿ ಹರಿಯುವ ನೀರಿಗೆ ಮಣ್ಣಿನ ಏರಿಗಳಿಂದ ಅಡ್ಡಕಟ್ಟೆಗಳನ್ನು ಹಾಕಿ ಸಾವಿರಾರು ವರ್ಷಗಳಿಂದ ಕೆರೆಗಳಲ್ಲಿ ನೀರನ್ನು ಶೇಖರಿಸಿ ಬೇಸಾಯಕ್ಕಾಗಿ ಉಪಯೋಗಿಸುತ್ತಿದ್ದಾರೆ. ಬೇಸಿಗೆಯಲ್ಲಿ ಜನರಿಗೆ, ಜಾನುವಾರುಗಳಿಗೆ, ಕೆರೆಗಳ ನೀರಿನಿಂದ ಆಗುವ ಉಪಕಾರವು ಎಷ್ಟೆಂದು ಅರಿತ ಈ ಜನರಲ್ಲಿ ವಾಪಿ, ಕೂಪ, ತಟಾಕಗಳನ್ನು ನಿರ್ಮಿಸುವುದು ಪುಣ್ಯಕಾರ್ಯವೆಂಬ ಭಾವನೆ ಬೆಳೆಯಿತು. ಅರಸರು, ಅರಸಿಯರು, ಶ್ರೀಮಂತರು ಧಾರ್ಮಿಕ ಕಾರ್ಯಗಳಿಗೆ ಕೆರೆಗಳನ್ನು ಕಟ್ಟಿ ಕೃತಾರ್ಥರಾದರು. ಈ ಕೆಲಸವು ಶಾಸ್ತ್ರೀಯವಾಗಿ ಬಹುಕಾಲ ನಡೆದು ಒಂದೊಂದು ಹಳ್ಳದಲ್ಲಿ ಹರಿಯುವ ನೀರನ್ನು ಸತತವಾದ ಶ್ರಮದಿಂದ ಕೂಡಿಹಾಕಿದ್ದಾರೆ. ಹೀಗಾಗಿ ಒಂದು ಹಳ್ಳದಲ್ಲಿ ಒಂದರ ಕೆಳಗೆ ಒಂದು

ಕೆರೆಯಿದ್ದು ಮೇಲಿನ ಕೆರೆಗೆ ಹೆಚ್ಚಾಗಿ ಬಂದ ನೀರೆಲ್ಲ ಕೆಳಗಿನ ಕೆರೆಗಳಿಗೆ ಶೇಖರವಾಗುತ್ತದೆ. ಎಷ್ಟೋ ವಿಚಕ್ಷಣೆಯಿಂದ ಈ ಕೆಲಸ ನಡೆದಿದೆ ಎಂದರೆ ಈ ಪ್ರದೇಶದಲ್ಲಿ ಹೊಸದೊಂದು ಕೆರೆಗೆ ಜಾಗವನ್ನು ಕಂಡುಹಿಡಿಯುವುದಕ್ಕೆ ತುಂಬಾ ಜಾಣತನಬೇಕು. ಕರ್ನಾಟಕ ದೇಶದಲ್ಲಿ ಹರಿಯುವ ನದಿಗಳ ನೀರನ್ನು ನೀರಾವರಿಗಾಗಿ ನಮ್ಮ ಪೂರ್ವಜರು ಬೇರೆ ರೀತಿಯಾಗಿ ಉಪಯೋಗಿಸಿಕೊಂಡಿದ್ದಾರೆ.[೩೦] ದೊಡ್ಡ ಕಲ್ಲುಗಳನ್ನು ಗಾರೆಯಿಲ್ಲದೇ ನಯವಾಗಿ ಜೋಡಿಸಿ ಮಳೆಗಾಲದಲ್ಲಿ ಬಂದ ನೀರು ಮೇಲೆ ಉರುಳಿ ಹೋಗುವ ಹಾಗೆ ಮಾಡಿದ್ದಾರೆ. ಹೀಗೆ ಮೇಲು ಭಾಗದಲ್ಲಿ ಎತ್ತರವಾಗಿ ನಿಂತ ನೀರನ್ನು ಎರಡು ದಡಗಳಲ್ಲಿ ಕಾಲುವೆಗಳಲ್ಲಿ ಸಾಗಿಸಿ ಬಯಲುಗಳಲ್ಲಿ ಗದ್ದೆಗಳಿಗೆ ನೀರನ್ನು ಹಾಯಿಸಿದ್ದಾರೆ".

**೩.೪. ನಾಮಾವಳಿಗಳು:**

ಕೆರೆಯನ್ನು ಕಟ್ಟಿಸುವುದು ಧಾರ್ಮಿಕ ಕಾರ್ಯವೆಂದು ದೇವಾಲಯ ನಿರ್ಮಾಣದಷ್ಟೇಮಹೋನ್ನತ ಕಾರ್ಯವೆಂದು ನಮ್ಮ ಹಿರಿಯರು ನಂಬಿಕೆಯಾಗಿತ್ತು. ಧಾರ್ಮಿಕ ಭಾವನೆಗಳಿಂದಾಗಿ ಅಂದಿನ ನೀರಾವರಿ ಕಾರ್ಯಕ್ಕೆ ಚಾಲನೆ ದೊರೆಯಿತು. ಕೆರೆಗಳನ್ನು ಕಟ್ಟಿಸಿ ಅದನ್ನು ಜನರಿಗೆ ಸಮರ್ಪಿಸುವಾಗ ಅದಕ್ಕೊಂದು ಹೆಸರಿಡುವುದು ಸಾಮಾನ್ಯವಾಗಿತ್ತು. ಕೆರೆಗಳ ನಾಮಾವಳಿಯ ಒಂದು ರೋಚಕ ಇತಿಹಾಸ. ಶಬ್ದಾರ್ಥವಾಗಿ ಕೆರೆಯನ್ನು ಕಟ್ಟೆ, ಕುಂಟೆ, ತಟಾಕ, ಸರೋವರ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಸಮುದ್ರ ಸಾಗರದೊಂದಿಗೆ ಬೆಸೆದು ಕೊಂಡ ಕೆರೆಯ ಹೆಸರುಗಳು.

೧. ಗಾತ್ರ ಮತ್ತು ಆಕೃತಿಗನುಗುಣವಾಗಿ ಕೆರೆಯ ಹೆಸರುಗಳು
೨. ಪ್ರಭುತ್ವ ಮೂಲದ ಕೆರೆಯ ಹೆಸರುಗಳು
೩. ಧಾರ್ಮಿಕ ಮೂಲದ ಕೆರೆಯ ಹೆಸರುಗಳು
೪. ಸಾಧುಸಂತರ ಹೆಸರಿನ ಕೆರೆಗಳು
೫. ಸ್ತ್ರೀ ಮೂಲದ ಕೆರೆಯ ಹೆಸರುಗಳು
೬. ಶ್ರೀ ಸಾಮಾನ್ಯರ ಕೆರೆಯ ಹೆಸರುಗಳು
೭. ವೃತ್ರಿ ಮೂಲದ ಕೆರೆಯ ಹೆಸರುಗಳು
೮. ಸಸ್ಯ ಮೂಲದ ಕೆರೆಯ ಹೆಸರುಗಳು
೯. ವೃತ್ತಿ ಮೂಲದ ಕೆರೆಯ ಹೆಸರುಗಳು
೧೦. ಸಮುದ್ರ ಸಾಗರದೊಂದಿಗೆ ಬೆಸೆದು ಕೊಂಡ ಕೆರೆಯ ಹೆಸರುಗಳು
೧೧. ಊರಿನ ಹೆಸರುಗಳೊಂದಿಗೆ ಬೆಸೆದುಕೊಂಡು ಕೆರೆಯ ಹೆಸರುಗಳು.

೧. ಗಾತ್ರ ಮತ್ತು ಆಕೃತಿಗನುಗುಣವಾಗಿ ಕೆರೆಯ ಹೆಸರುಗಳು:

ಒಂದು ಊರಿನಲ್ಲಿ ಒಂದಕ್ಕಿಂತ ಹೆಚ್ಚಿನ ಕೆರೆಗಳಿದ್ದಾಗ ಅವುಗಳನ್ನು ಸುಲಭವಾಗಿ ಗುರುತಿಸಲು ಬೇರೆ ಬೇರೆ ಹೆಸರಿನಿಂದ ಕರೆಯುವುದು ವಾಡಿಕೆ. ಉದಾ: ಹಿರಿಯ ಕೆರೆ, ಪಿರಿಯ ಕೆರೆ, ಪೆರ್ಗೆರೆ, ಸಣ್ಣಕೆರೆ ಇತ್ಯಾದಿ. ಗದಗ ಜಿಲ್ಲೆಯ ೪ ಶಾಸನಗಳಲ್ಲಿ ಕೆರೆಗಳ ಹೆಸರನ್ನು ಕಾಣುತ್ತೇವೆ. ಚಿಕ್ಕವಡ್ಡಟ್ಟಿಯ ಹಿರಿಯ ಕೆರೆ, ಹಿರೆಮಣ್ಣೂರಿನ ಹಿರಿಯ ಕೆರೆ, ನೆರೆಗಲ್ಲಿನ ಹಿರಿಯ ಕೆರೆ, ಬೆಂತೂರಿನ ಹಿರಿಯ ಕೆರೆ ಇತ್ಯಾದಿ.

೨. ಪ್ರಭುತ್ವ ಮೂಲದ ಕೆರೆಯ ಹೆಸರುಗಳು :

ಈ ಪ್ರಕಾರದಲ್ಲಿ ರಾಜಮಹಾರಾಜರು, ಮಂತ್ರಿಗಳು, ದಂಡನಾಯಕರು, ಮಹಾಜನರು, ಊರಗೌಡರು ಇತ್ಯಾದಿ ಕೆರೆಯ ನಿರ್ಮಾಪಕರನ್ನು ಹೆಸರಿಸಬಹುದು. ಮಾಳದಲೂರ(ಪೇಠಾಲೂರು)ನ ಗೌಡಗೆರೆ ಇದನ್ನು ಊರಿನ ಮುಖಂಡನಾದ ಗೌಡನು ಈ ಕೆರೆಯನ್ನು ಕಟ್ಟಿಸಿದ ಬಗ್ಗೆ ದಾಖಲೆ ದೊರೆಯುತ್ತದೆ. ನರಗುಂದದ ಈಶ್ವರ ಸಮುದ್ರ ಇದನ್ನು ೬ನೆಯ ವಿಕ್ರಮಾದಿತ್ಯನ ದಂಡನಾಯಕನಾದ ಈಶ್ವರನಾಯಕನು ಈ ಕೆರೆಯನ್ನು ಕಟ್ಟಿಸಿದ ಬಗ್ಗೆ ದಾಖಲೆ ಇದೆ. ಕುಂಟೋಜಿ ಕೆರೆಯನ್ನು ಊರಿನ ಶೆಟ್ಟಿಯಾದ ಬಿ.ಚಿ ಶೆಟ್ಟಿಯು ನಿರ್ಮಾಣಮಾಡಿದನು. ಲಕ್ಷ್ಮೇಶ್ವರದ ನೊಳಂಬ ಸಮುದ್ರ ಕೆರೆ.

೩. ಧಾರ್ಮಿಕ ಮೂಲದ ಕೆರೆಯ ಹೆಸರುಗಳು:

ಗ್ರಾಮ ದೇವರ, ದೇವತೆಯ ಹೆಸರಿನಲ್ಲಿ ಕಟ್ಟಿಸಿದ ರಾಮ, ಭೀಮ, ಹನುಮ, ಬಸವ, ಲಕ್ಷ್ಮಿ, ದ್ಯಾಮವ್ವ, ಚೌಡವ್ವ, ಹೀಗೆ ಅನೇಕ ಕೆರೆಗಳಿವೆ. ಉದಾ: ಜಂತ್ಲಿಯ ಕೆರೆಕೋಡಿಬಸವೇಶ್ವರ ಕೆರೆ, ದ್ಯಾಮವ್ವನ ಕೆರೆ ಪ್ರಮುಖವಾಗಿ ಕಂಡುಬರುತ್ತವೆ.

೪. ಸಾಧುಸಂತರ ಹೆಸರಿನ ಕೆರೆಗಳು:

ಇದಕ್ಕೆ ಒಳ್ಳೆಯ ಉದಾಹರಣೆ ಎಂದರೆ, ೧೨ನೆಯ ಶತಮಾನದಲ್ಲಿ ಸೊಲ್ಲಾಪುರದಲ್ಲಿ ಶರಣಸಿದ್ಧರಾಮ ಕಟ್ಟಿಸಿದ 'ಸಿದ್ಧರಾಮೇಶ್ವರ ಕೆರೆ', ಶ್ರೀ ರಂಗಪಟ್ಟಣದ ಬಳಿಯ ತೊಣ್ಣೂರು ಕೆರೆಯನ್ನು ಶ್ರೀ ರಾಮಾನುಜಾಚಾರ್ಯರ ಕಾಲದಲ್ಲಿ ಕಟ್ಟಲಾಯಿತು.

೫. ಸ್ತ್ರೀ ಮೂಲದ ಕೆರೆಯ ಹೆಸರುಗಳು:

ಪುರಷರಂತೆ ಸ್ತ್ರೀಯರು ಕೂಡ ಕೆರೆ ಕಟ್ಟಿಸುವುದರಲ್ಲಿ ಹಾಗೂ ಅವುಗಳ ಒಂದಿಲ್ಲದೊಂದು ಕಾರ್ಯಗಳಲ್ಲಿ ತೊಡಗಿಕೊಂಡಿದ್ದ ಬಗೆಗೆ ಶಾಸನಗಳಿಂದ ತಿಳಿದುಬರುತ್ತದೆ. ಹೈತಾಪೂರದ ಕ್ರಿ.ಶ. ೯ನೇ ಶತಮಾನದ ಶಾಸನದಲ್ಲಿ[೧] ಕಲಚೂರಿಗಳ ವಂಶಾವಳಿ ಹಾಗೂ ಇದರಲ್ಲಿ ಕೋವುರೂರು (ಕವಲೂರ) ಮತ್ತು ಮೊರಿವಳು (ಮೆವುಂಡಿ)ಗಳ ಮಧ್ಯೆ ಮಹಾಸಾಮಂತ ಬಿಜ್ಜಳನ ಹೆಂಡತಿ

ಬೆಗೆಬ್ಬೆ ಕೆರೆಯನ್ನು ಕಟ್ಟಿಸಿದ ಬಗ್ಗೆ ಉಲ್ಲೇಖವಿದೆ. ಅದೇ ಈ ಕೆರೆಯಾಗಿರಬಹುದೆಂದು ಸ್ಪಷ್ಟವಾಗುತ್ತದೆ. ಲಕ್ಕುಂಡಿಯಲ್ಲಿ ಅತ್ತಿಮಬ್ಬೆಯ ಕೆರೆಯನ್ನು ಕಟ್ಟಿಸಿದ ಬಗ್ಗೆ ದಾಖಲೆಗಳು ಸಿಗುತ್ತವೆ. ಮತ್ತೊಂದು ಉದಾಹರಣೆ ದಾವಣಗೆರೆ ಜಿಲ್ಲೆಯ ಚಿನ್ನಗಿರಿ ತಾಲ್ಲೂಕಿನ ಸೂಳೆಕೆರೆ ರಾಜ್ಯದಲ್ಲಿಯೆ ಪ್ರಸಿದ್ಧವಾದ ದೊಡ್ಡಕೆರೆ ಅದನ್ನು 'ಶಾಂತಿಸಾಗರ' ಎಂದು ಕರೆಯಲಾಗುತ್ತದೆ. ಹಂಪಿ ಪರಿಸರದ ಗೌರಮ್ಮನ ಕೆರೆ ಸ್ತ್ರೀಯರು ನಿರ್ಮಿಸಿದ ಕೆರೆಗಳಾಗಿವೆ.

**೬. ಶ್ರೀ ಸಾಮಾನ್ಯರ ಕೆರೆಯ ಹೆಸರುಗಳು:**

ಕೆರೆಯ ನಿರ್ಮಾಣದಲ್ಲಿ ಶ್ರೀ ಸಾಮಾನ್ಯರು ಪಾಲು ದೊಡ್ಡದಿದೆ. 'ಎಲೆಮರೆಯ ಕಾಯಂತೆ' ಅವರು ಸೇವೆ ಸಲ್ಲಿಸಿದ್ದಾರೆ. ರಾಜಮಹರಾಜರ, ಗಣ್ಯರ, ಮಹಾಜನರ, ಹೆಸರನ್ನು ಮಾತ್ರ ನಾವು ಶಾಸನಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಸಾಮಾನ್ಯರ ಹೆಸರುಗಳು ನಗಣ್ಯವೆಂದೇ ಹೇಳಬಹುದು.

**೭. ವೃತ್ತಿ ಮೂಲದ ಹೆಸರುಳ್ಳ ಕೆರೆಗಳು:**

ಒಂದೊಂದು ಜಾತಿಗೂ ಒಂದೂಂದು ಕೆರೆ ಮೀಸಲಿರುವ ಪದ್ಧತಿ ಇತ್ತು. ಜಾತಿ ಎಲ್ಲ ಅಂಗಗಳಿಗೂ ಅಂಟಿಕೊಂಡಿತ್ತು. ಅಸ್ಪೃಶ್ಯರಿಗೆ ಕುಡಿಯುವ ನೀರಿಗಾಗಿ ಪ್ರತ್ಯೇಕ ಬಾವಿ, ಹೊಂಡ, ಕೆರೆಗಳಿದ್ದವು. ಜಾತಿ ಎಷ್ಟು ಭಯನಾಕವಾಗಿತ್ತೆಂದರೆ. ಹೊಳೆ ಇದ್ದ ಊರುಗಳಲ್ಲಿ ಕೆಳಗಿನ ಭಾಗದ ಹೊಳೆಯನ್ನು ಮಾತ್ರ ಹರಿಜನರು ಉಪಯೋಗಿಸಬೇಕಾಗಿತ್ತು. ಅವರು ಹೊಳೆಯ ಮೇಲ್ಭಾಗಕ್ಕೆ ಬರುವಂತಿರಲಿಲ್ಲ. ಅನೇಕ ಹಳ್ಳಿಗಳಲ್ಲಿ ಈಗಲೂ ಮಾದರಹೊಳೆ ಎಂದು ಕೆರೆಯುವುದು ರೂಢಿ ಇದೆ.[೨] ವೃತ್ತಿಗನುಸಾರವಗಿ ಕೆರೆಗಳಲ್ಲಿ ಅಗಸರಕೆರೆ. ಅಗಸರಕಟ್ಟೆ, ಕುಂಬಾರಗೆರೆ, ಕುಂಬಾರಕಟ್ಟೆ, ಗಾಣಿಗರ ಕೆರೆ, ಬಡಿಗೇರ ಕೆರೆ, ಗೊಲ್ಲರ ಕೆರೆ, ಭಟ್ಟಗೆರೆಗಳು ಪ್ರಮುಖವಾಗಿವೆ. ಭಟ್ಟಗೆರೆ ಎಂದರೆ ಬಟ್ಟೆ ತೊಳೆಯಲು ಉಪಯೋಗಿಸಲು ಬಳಸುವ ಕೆರೆಗೆ ಭಟ್ಟಗೆರೆ ಎಂದು ಕೆರೆದಿದ್ದರಬೇಕು. ಲಕ್ಷ್ಮೇಶ್ವರದ ಇಟ್ಟಿಗೆಗೆರೆ ಇದರ ಮಣ್ಣನ್ನು ಇಟ್ಟಿಗೆ ತಯಾರಿಸಲು ಉಪಯೋಗಿಸತಿದ್ದರಬೇಕು. ಆದ್ದರಿಂದ ಇದಕ್ಕೆ ಇಟ್ಟಿಗೆರೆ

**೮. ಸಸ್ಯ ಮೂಲದ ಹೆಸರಿನ ಕೆರೆಗಳು:**

ಸಸ್ಯ ಮೂಲದ ಹೆಸರಿನ ಕೆರೆಗಳು ಕರ್ನಾಟಕದಾದ್ಯಂತ ಇವೆ. ಕೆರೆಯನ್ನು ಕಟ್ಟಿದ ಮೇಲೆ ಕೆರೆಯ ಒಡ್ಡಿನ ಹೊರಭಾಗದಲ್ಲಿ ಹುಲ್ಲನ್ನು ಬೆಳೆಸುವುದು ಫಲಕೊಡುವ ಗಿಡಮರಗಳನ್ನು ನೆಡುವದು ಸಾಮಾನ್ಯವಾದ ಸಂಗತಿ. ಇದರಿಂದ ಮಣ್ಣಿನ ಒಡ್ಡು ಜಾರದೆ ಭದ್ರವಾಗಿ ಉಳಿಯಲು ನೆರವಾಗುತ್ತದೆ. ನಮ್ಮ ಹಿರಿಯರು ಕೆರೆ ಕಟ್ಟಿದ ಮೇಲೆ ತಪ್ಪದೆ ಮಾಡುತ್ತಿದ್ದ ಎರಡು ಕಾರ್ಯಗಳೆಂದರೆ ಒಂದು ಮರಬೆಳಸುವುದು, ಮತ್ತೊಂದು ಗುಡಿ ಕಟ್ಟುವುದು. ಮರಗಳಿಂದಾಗಿ ಪರಿಸರ ತಂಪಾಗಿ ಉಳಿದು, ಪ್ರಾಣಿ ಪಕ್ಷಿಗಳಿಗೆ ಆಶ್ರಯವು ದೊರೆಯುತ್ತಿತ್ತು. ಕೆರೆಯ ಒಡ್ಡಿನ ಹತ್ತಿರ ಯಾವ ಜಾತಿಯ

ಮರಗಳಿರುತ್ತವೆಯೋ ಆ ಮರದ ಹೆಸರಿನಿಂದ ಕೆರೆಯನ್ನು ಕರೆಯುವುದೂ ವಾಡಿಕೆ.[೩೩] ಉದಾ: ಮಾವಿನ ಕೆರೆ, ಬೇವಿನ ಕೆರೆ, ಜಾಲಿ ಕೆರೆ, ಹುಣಸಿಕೆರೆ ಇತ್ಯಾದಿ. ಜಿಲ್ಲೆಯ ನರಗುಂದ ತಾಲೂಕಿನ ಹುಣಸಿಕಟ್ಟೆ ಕೆರೆ, ಮುಂಡರಗಿ ತಾಲೂಕಿನ ಜಂತಲಿಕೆರೆ, ಗದಗ ತಾಲೂಕಿನ ಲಕ್ಕುಂಡಿ ಕೆರೆ, ಆಲೂರಿನ ಬನ್ನಿಕೆರೆ, ಕಪ್ಪತ್ತಗಿರಿಯ ಆಲದ ಕೆರೆ, ಬಂಡೆಕೊಳ್ಳ ಹೀಗೆ ಮುಂತಾದವುಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ.

**೯. ಊರಿನ ಹೆಸರುಗಳೊಂದಿಗೆ ಬೆಸದು ಕೊಂಡ ಕೆರೆಗಳು:**

ಈ ಪ್ರಕಾರದ ಕೆರೆಗಳು ಸಾಕಷ್ಟು ಪ್ರಮಾಣದಲ್ಲಿ ಕಂಡುಬರುತ್ತವೆ. ಶಿರಹಟ್ಟಿ ತಾಲೂಕಿನ ಚಿಂಚಲಿ ಕೆರೆ, ಬೆಟಗೇರಿಯ ಭಟ್ಟಗೇರಿ, ಶೆಟ್ಟಿಗೇರಿ ಕೆರೆ, ರೋಣದ ಕೆರೆ, ಹಾಳಕೆರೆಯ ಹಾಲಕೆರೆ, ಕೋಡಿಕೊಪ್ಪದ ಕೋಡಿಕೆರೆ, ಡೋಣಿಯ ಡೋಣಿಕೆವ್ವನ ಕೆರೆ, ಹಳ್ಳಿಕೆರೆ ಹೀಗೆ ಮುಂತಾದ ಕೆರೆಗಳನ್ನು ನೊಡಬಹುದು.

**೧೦. ಸಮುದ್ರ ಸಾಗರದೊಂದಿಗೆ ಬೆಸೆದಕೊಂಡ ಕೆರೆಯ ಹೆಸರುಗಳು:**

ರಾಜಮಹಾರಾಜರು ಕಟ್ಟಿಸಿದ ಕೆರೆಗಳನ್ನು ಉತ್ಪ್ರೇಕ್ಷೆಯಿಂದ ಕರೆಯುತ್ತಿದ್ದರು. ಗಾತ್ರದಲ್ಲಿ ದೊಡ್ಡದಾಗಿ ಸಾಗರ ಸಮುದ್ರ ಹೋಲಿಕೆಗುಂಟ ಕರೆಯುವ ಪರಿಪಾಠವಿತ್ತು.[೩೪] ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಕೆರೆಯು ಗಾತ್ರದಲ್ಲಿ ಸಮುದ್ರವನ್ನು ಹೋಲವುದರಿಂದ ಇದನ್ನು ಗೋಣಸಮುದ್ರ ಕೆರೆಯೆಂದು ಕೆರೆಯುತ್ತಾರೆ. ನರಗುಂದ ಈಶ್ವರನಾಯಕನು ಕಟ್ಟಿಸಿದ ಕೆರೆಗೆ ಈಶ್ವರ ಸಮುದ್ರ ಕೆರೆಯೆಂದು ಕೆರೆಯುತ್ತಾರೆ.

ಹೀಗೆ ಪ್ರಾಚೀನ ಕಾಲದಲ್ಲಿ ಗ್ರಾಮಗಳಿಗೆ ವ್ಯಕ್ತಿಯ ಹೆಸರಿನ ಮುಂದೆ ಪುರ ಪಟ್ಟಣ ಎಂದು ಸೇರಿಸಿ ಹೆಸರಿಡುತ್ತಿದ್ದು. ಹಾಗೆಯೇ ಕೆರೆಗಳನ್ನು ಕಟ್ಟಿಸಿದಾಗ ವ್ಯಕ್ತಿಯ ಹೆಸರಿನ ಜೋತೆಗೆ ಸಾಗರ, ಸಮುದ್ರೆಂದು ಸೇರಿಸಿ ಹೆಸರಿಡವುದು ರೂಢಿಯಲ್ಲಿತ್ತು.

**೩.೫. ವರ್ಗೀಕರಣ:**

ಶಾಸನ ಹಾಗೂ ಹಲವಾರು ಸಾಹಿತ್ಯ ಕೃತಿಗಳಲ್ಲಿ ಜಲಾಶಯಗಳನ್ನು ವಿವಿಧ ಹೆಸರುಗಳಿಂದ ಉಲ್ಲೇಖಿಸಿರುವುದು ಕಂಡು ಬರುತ್ತದೆ. ನಮ್ಮ ಪೂರ್ವಜರು ಜಲಾಶಯಗಳನ್ನು ನೀರಾವರಿ ಒಂದೆ ಅಲ್ಲದೆ ಬೇರೆ ಬೇರೆ ಉದ್ದೇಶಗಳಿಗೆ ಕೂಡ ನಿರ್ಮಾಣ ಮಾಡುತ್ತಿದ್ದರು. ವಿವಿಧ ರೀತಿಯ ಕೆರೆಗಳ ಪ್ರಕಾರಗಳೆಂದರೆ ಕೆರೆ, ಕುಂಟೆ, ಕಟ್ಟೆ, ಮದನ, ಸರೋವರ, ತಟಾಕ, ಕೊಳ, ಕಲ್ಯಾಣಿ, ತೀರ್ಥ, ದೋಣಿ ಇವುಗಳಲ್ಲಿ ಕೆರೆ ಎಂಬುದು ಹೆಚ್ಚು ವ್ಯಾಪಕವಾಗಿ ಜನರ ಬಾಯಲ್ಲಿ ಹಾಗೂ ಕೃತಿಗಳಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

ಇವುಗಳಲ್ಲಿ ಕಲ್ಯಾಣಿ, ಕೊಳ, ತೀರ್ಥ ಇವು ಧಾರ್ಮಿಕ ಜಲಾಶಯಗಳಾಗಿ, ದೇವರ ಆರಾಧನೆಯ ಉದ್ದೇಶ ಹಾಗೂ ದೇವಾಲಯದ ಇತರೆ ಕಾರ್ಯಗಳಿಗೆ ನಿರ್ಮಾಣವಾದವುಗಳಾಗಿವೆ. ಸಾಮಾನ್ಯವಾಗಿ ಇವು ದೇವಾಲಯಕ್ಕೆ ಹೊಂದಿಕೊಂಡೆ ಇರುವ ಜಲಾಶಯಗಳು ಉಳಿದವುಗಳು ನೀರಾವರಿ ಹಾಗೂ ಜನ ಜಾನುವಾರುಗಳಿಗೆ ಕುಡಿಯಲು ಬಳಸುವ ಜಲಾಶಯಗಳಾಗಿವೆ.

ಒಂದು ಕೆರೆಯ ವಿಸ್ತೀರ್ಣ, ಅಳತೆ, ಅಗಾಧತೆ ಮತ್ತು ಆಳವನ್ನು ಗಮನದಲ್ಲಿರಿಸಿಕೊಂಡು ಅವುಗಳನ್ನು ವರ್ಗೀಕರಿಸುತ್ತಾರೆ. ಕೆರೆಯ ಆಯಕಟ್ಟು ಪ್ರದೇಶಗಳಿಗೆ ನೀರುಣಿಸುವ ಸಾಮರ್ಥ್ಯವನ್ನು ಮುಖ್ಯ ಅಳತೆಗೋಲನ್ನಾಗಿಸಿಕೊಂಡು ಕೆರೆಗೆ ಹಿರಿಯ, ಪಿರಿಯ, ಚಿಕ್ಕ ಇವೇ ಮುಂತಾದ ಗುಣವಾಚಕಗಳನ್ನು ಜೋಡಿಸಿರುವುದನ್ನು ಕಂಡುಕೊಳ್ಳಬಹುದಾಗಿದೆ. ಉದಾಹರಣೆಗೆ, ಹಿರಿಯಕೆರೆಯ ನೀರಿನಿಂದ ಇನ್ನೂರಕ್ಕೂ ಹೆಚ್ಚು ಎಕರೆಗಳನ್ನು ಕೃಷಿಗೆ ಒಳಪಡಿಸಿದರೆ, ಚಿಕ್ಕಕೆರೆಯು ಐವತ್ತು ಎಕರೆಗಳಷ್ಟು ಭೂಮಿಯನ್ನು ಕೃಷಿಗೆ ಒಳಪಡಿಸಿರಬಹುದು. ಆದ್ದರಿಂದ ಕೆರೆಯ ನೀರು ಸಂಗ್ರಹ ಸಾಮರ್ಥ್ಯವನ್ನು ಮತ್ತು ಆ ಕೆರೆಯ ಅಚ್ಚುಕಟ್ಟು ಪ್ರದೇಶವನ್ನು ಮುಖ್ಯ ಅಳತೆಗೋಲನ್ನಾಗಿಸಿಕೊಂಡು ಕೆರೆಗೆ ಹಿರಿಕೆರೆ, ಹಿರಿಯ ಕೆರೆ, ಚಿಕ್ಕಕೆರೆ ಸಣ್ಣ ಕೆರೆ ಎಂದು ಇತ್ಯಾದಿಯಾಗಿ ಹೆಸರಿಸುತ್ತಾರೆ.

ಕೆರೆಗಳನ್ನು ಮತ್ತೊಂದು ಬಗೆಯಾಗಿ ವರ್ಗೀಕರಿಸಬಹುದು. ಈ ವರ್ಗೀಕರಣವು ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದನ್ನು ಈಗಾಗಲೇ ಗಮನಿಸಲಾಗಿದೆ. ಈ ವರ್ಗೀಕರಣದಿಂದ ಕೆರೆಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು. ೧) ನದಿ ಆಶ್ರಿತ ಕೆರೆಗಳು(ನದಿ ಮಾತೃಕೆ) ೨) ಮಳೆ ಆಶ್ರಿತ ಕೆರೆಗಳು(ದೇವ ಮಾತೃಕೆ).

**೧. ನದಿ ಆಶ್ರಿತ ಕೆರೆಗಳು(ನದಿ ಮಾತೃಕೆ)**

ಕರ್ನಾಟಕದಲ್ಲಿ ಕಂಡುಬರುವ ಬಹುತೇಕ ಕೆರೆಗಳು ಮಳೆಯನ್ನೇ ಆಶ್ರಯಿಸಿವೆ. ಕೆಲವೇ ಕೆಲವು ಕೆರೆಗಳು ನದಿಯ ನೀರನ್ನು ಆಶ್ರಯಿಸಿವೆ. ಇಂದು ಬಳಕೆಯಲ್ಲಿರುವ ಕೆಲವು ಪ್ರಾಚೀನ ಕೆರೆಗಳು ಪ್ರಮುಖವಾಗಿ ಜಿಲ್ಲೆಯ ನರಗುಂದ ತಾಲ್ಲೂಕಿನಲ್ಲಿ ಇರುವಂತಹ ಕೆರೆಗಳು ಮಲಪ್ರಭಾ ನದಿಯ ನೀರನ್ನು ಆಶ್ರಯಿಸಿವೆ. ಮಲಪ್ರಭಾ ನದಿಯ ಇಲಾಖೆಯವರು ನದಿಯಿಂದ ನಾಲೆಗಳ ಮುಖಾಂತರ ನೀರನ್ನು ಹಾಯಿಸಿ, ಕೆಲವು ಪ್ರಾಚೀನ ಕೆರೆಗಳನ್ನು ಜೀವಂತವಾಗಿರಿಸಿದ್ದಾರೆ.

**೨. ಮಳೆ ಆಶ್ರಿತ ಕೆರೆಗಳು(ದೇವ ಮಾತೃಕೆ)**

ಮಳೆ ಆಶ್ರಿತ ಕೆರೆಗಳನ್ನು ದೇವಮಾತೃಕೆಗಳೆಂದು ಕೆರೆಯಲಾಗುತ್ತದೆ. ಸಾಮಾನ್ಯವಾಗಿ ಕರ್ನಾಟಕದ ಹೆಚ್ಚಿನ ಕೆರೆಗಳಲ್ಲ ಈ ಪ್ರಕಾರದಲ್ಲಿ ಸೇರಿದವುಗಳು. ಅನೇಕ ಮಳೆ ಆಶ್ರಿತ ಕೆರೆಗಳನ್ನು ನದಿ ಆಶ್ರಿತ ಕೆರೆಗಳನ್ನಾಗಿ ಮಾಡಲಾಗಿದೆ. ಇದಕ್ಕೆ ಉದಾ; ನರಗುಂದದ ದಂಡಾಪೂರ ಕೆರೆ ಮತ್ತು ಸೋಮಾಪೂರ ಕೆರೆ.

## ೩.೫. ವಿವಿಧ ಆಯಾಮಗಳು

೧. ಭೌಗೋಳಿಕ

೨. ರಾಜಕೀಯ

೩. ಸಾಮಾಜಿಕ

೪. ಆರ್ಥಿಕ

೫. ಧಾರ್ಮಿಕ ಮತ್ತು

೬. ಸಾಂಸ್ಕೃತಿಕ

### ೧. ಭೌಗೋಳಿಕ ಕಾರಣಗಳು :

ಉತ್ತರ ಭಾರತದ ಭೌಗೋಳಿಕ ಪರಿಸ್ಥಿತಿ ದಕ್ಷಿಣ ಭಾರತದ ಸ್ಥಿತಿಗಿಂತ ಭಿನ್ನವಾದುದು. ಉತ್ತರದ ವಿಶಾಲ ಪ್ರದೇಶಗಳು ನಿರಂತರ ಹರಿಯವ ನದಿಗಳಿಂದ ಅವೃತವಾಗಿವೆ. ಮಳೆಗಾಲ ದಲ್ಲಿ ಮಳೆಯ ನೀರು ಮತ್ತು ಬೇಸಿಗೆಯಲ್ಲಿ ಹಿಮಕರಗಿದ ನೀರನ್ನು ಉಪಯೋಗಿಸುತ್ತಾರೆ. ಅವುಗಳಿಂದ ಮೆಕ್ಕಲು ಮಣ್ಣು ಬಯಲುಗಳು ಉಂಟಾಗುತ್ತವೆ. ಹೀಗಾಗಿ ಅಲ್ಲಿ ನೀರಾವರಿಗಳಿಗಾಗಿ ಕೆರೆ ಬಾವಿಗಳನ್ನು ಅಥವಾ ಜಲಾಶಯಗಳನ್ನು ಕಟ್ಟುವ ಅಗತ್ಯ ಬರಲಿಲ್ಲ.[೩೫] ಆದರೆ ದಕ್ಷಿಣ ಭಾರತದ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿದ್ದು ಈ ಪ್ರದೇಶವು ವ್ಯವಸಾಯಕ್ಕೆ ತನ್ನದೇ ಆದ ವಿಧಾನಗಳನ್ನು ರೂಪಿಸಿಕೊಳ್ಳಬೇಕಾಯಿತು. ಮಳೆ ಹಾಗೂ ನದಿಯ ನೀರನ್ನು ತಡೆಹಿಡಿದು ತನ್ನ ನೀರಾವರಿ ವ್ಯವಸ್ಥೆಯನ್ನು ವಿಕಾಸಗೊಳಿಸುವ ಮೂಲಕ ತನ್ನ ಸಂಕಷ್ಟಗಳನ್ನು ನಿವಾರಿಸಿಕೊಳ್ಳುವ ಉಪಾಯಗಳನ್ನು ಕಂಡುಕೊಳ್ಳುವುದು ಈ ಪ್ರದೇಶದ ಜನರ ಅನಿವಾರ್ಯವಾಗಿತ್ತು.[೩೬] ಏಕೆಂದರೆ ಈ ಪ್ರದೇಶಗಳಲ್ಲಿ ವಾರ್ಷಿಕ ಮಳೆ ಕನಿಷ್ಠವಾಗಿದ್ದು ಅದು ಬೇಸಾಯಕ್ಕೆ ಪೂರಕವಾಗಿರಲಿಲ್ಲ. ಅದು ಅನಿಶ್ಚಿತತೆಯಿಂದ ಒಡಗೂಡಿತ್ತು, ಈ ಆತಂಕದಿಂದ ಪಾರಾಗಬೇಕಾಗಿದ್ದಲ್ಲಿ ಕೃತಕಯುಕ್ತ ತಂತ್ರಗಳನ್ನು ಕಂಡು ಹಿಡಿದು ತನ್ಮೂಲಕ ತಮಗೆ ಬೇಕಾದ ನೀರನ್ನು ಪಡೆಯಲೇಬೇಕಾಗಿತ್ತು.

ಸಾಮಾನ್ಯವಾಗಿ ಬೀಳುತ್ತಿದ್ದ ಮಳೆ ಸಾಲದಾಗಿ ರೈತರು ಆಹಾರ ಕಷ್ಟ ನಷ್ಟಗಳಿಗೆ ಗುರಿಯಾಗುತ್ತಿದ್ದರು. ಅಲ್ಲದೇ ಅನೇಕ ನದಿಗಳಲ್ಲಿಯ ನೀರಿನ ಪ್ರಮಾಣ ಕೂಡ ಅಧಿಕವಾಗಿರಲಿಲ್ಲ. ದಕ್ಷಿಣ ಪ್ರಾಂತದಲ್ಲಿ ಕೃಷ್ಣ, ಕಾವೇರಿಗಳನ್ನು ಹೊರತುಪಡಿಸಿ ಬೇರೆ ಯಾವ ನದಿಗಳು ಸರ್ವಋತು ನದಿಗಳಾಗಿರಲಿಲ್ಲ. ಅನೇಕ ನದಿಗಳಿದ್ದರೂ ಅವು ಬೇಸಿಗೆ ಕಾಲದಲ್ಲಿ ಕ್ಷೀಣಿಸಿ ಹೋಗುತ್ತಿದ್ದರಿಂದ ನೀರಿನ ಅಭಾವ ಉಂಟಾಗುತ್ತಿತ್ತು. ಈ ಎಲ್ಲಾ ಕಾರಣಗಳಿಂದಾಗಿ ಬೇಸಾಯಕ್ಕೆ ಬೇಕಾದ ನೀರನ್ನು ಅನೇಕ ವಿಧಾನಗಳಿಂದ ಸಂರಕ್ಷಿಸಿಕೊಳ್ಳಲೇಬೇಕಾಗಿತ್ತು. ಮಳೆಗಾಲದಲ್ಲಿ ನದಿಗಳು ತುಂಬಿ ಹರಿದು ಸಮುದ್ರದ ಪಾಲಾಗುತ್ತಿರುವುದನ್ನು ತಡೆಗಟ್ಟಿ ನೀರನ್ನು ಸಂಗ್ರಹಿಸಿ ಅದರಿಂದ ವ್ಯವಸಾಯವನ್ನು

ಮಾಡಬೇಕಾದ ಪರಿಸ್ಥಿತಿ ಅನಿವಾರ್ಯವಾಗಿತ್ತು.[೩೭] ಅದರಲ್ಲೂ ಗದಗ ಜಿಲ್ಲೆಯು ಗುಡ್ಡಗಾಡು ಏರಿಳಿತದಿಂದ ಕೂಡಿದ ಭೂಮಿಯಾಗಿದ್ದು ವ್ಯವಸಾಯಕ್ಕೆ ನೀರಾವರಿಯನ್ನೇ ಅವಲಂಬಿಸಿದೆ. ಈ ಪ್ರಾಂತದಲ್ಲಿಯ ಭೂಮಿ ಕೆಂಪು ಮತ್ತು ಕಪ್ಪು ಮಣ್ಣಿನಿಂದಾಗಿದ್ದರಿಂದ ಭೂಮಿಯ ತೇವಾಂಶ ಆರಿ ಹೋಗಿ ಬೆಳೆಗಳಿಗೆ ಧಕ್ಕೆ ಉಂಟುಮಾಡುತ್ತಿದ್ದರಿಂದ ಕೆರೆ ನೀರಾವರಿ ವಿಧಾನವು ಅನಿವಾರ್ಯವಾಗಿತ್ತು. ಈ ಜಿಲ್ಲೆಯಲ್ಲಿ ಶಿರಹಟ್ಟಿ ತಾಲೂಕಿನ ಶೆಟ್ಟಿಗೇರಿ ಕೆರೆ, ನಾಗೇಂದ್ರಗಡ ಕೆರೆ, ಜೀಗೇರಿ ಕೆರೆ, ಕುಂದ್ರಳ್ಳಿ ಕೆರೆಗಳು ಭೌಗೋಳಿಕ ಪರಿಸರಕ್ಕನುಗುಣವಾಗಿ ನಿರ್ಮಿಸಿದ್ದಾರೆ. ಅಂದರೆ ಇದರ ಜಲಾನಯನ ಪ್ರದೇಶಕ್ಕೆ ಗುಡ್ಡದ ಮೇಲೆ ಬಿದ್ದ ಮಳೆಯ ನೀರು ಸರಾಗವಾಗಿ ಕೆರೆಯಲ್ಲಿ ನೀರು ಸಂಗ್ರಹವಾಗುವಂತೆ ನಿರ್ಮಿಸಿದ್ದಾರೆ.

ಹೀಗೆ ಮೇಲೆ ಹೇಳಲಾದ ಎಲ್ಲಾ ಕಾರಣಗಳಿಂದ ಪಾರಾಗಬೇಕಾಗಿದ್ದಲ್ಲಿ ನೀರಾವರಿಯ ವಿವಿಧ ಕ್ರಮಗಳನ್ನು ಕೈಗೆತ್ತಿಕೊಂಡು ಜೀವನೋಪಾಯಕ್ಕೆ ಅನಿವಾರ್ಯವಾದ ವ್ಯವಸಾಯವನ್ನೇ ಮುಂದುವರಿಸಬೇಕಾಗಿತ್ತು. ಹೀಗೆ ಈ ಮೇಲಿನ ಭೌಗೋಳಿಕ ಕಾರಣಗಳಿಂದಾಗಿ ಕೆರೆ-ಬಾವಿಗಳ ಅಭಿವೃದ್ಧಿಗೆ ತಮ್ಮದೇ ಆದ ಪ್ರಭಾವವನ್ನು ಬೀರಿವೆ.

**೨. ರಾಜಕೀಯ ಕಾರಣಗಳು :**

ಧಾರ್ಮಿಕ ಮನೋಭಾವದ ಜೊತೆಗೆ ಕೆರೆ ನಿರ್ಮಾಣದ ಹಿಂದೆ ರಾಜಕೀಯ ಉದ್ದೇಶವು ಪ್ರಧಾನ ಪಾತ್ರವಹಿಸಿರುವುದನ್ನು ಗಮನಿಸದೆ ಇರಲಾಗದು. ತಮ್ಮ ಅಧಿಪತ್ಯಕ್ಕೆ ಒಳಪಟ್ಟ ಪ್ರದೇಶಗಳ ಸಂಪತ್ತಿನ ಅಭಿವೃದ್ಧಿಯ ಉದ್ದೇಶದೊಂದಿಗೆ ಸ್ಥಳೀಯರ ಪ್ರೀತಿಗೆ ಪಾತ್ರರಾಗುವುದಕ್ಕಾಗಿ ದೊರೆಗಳು, ಆಡಳಿತಗಾರರು ಕೆರೆಗಳ ನಿರ್ಮಾಣಕ್ಕೆ ಮುಂದಾಗುತ್ತಿದ್ದರು. ಈ ಪ್ರದೇಶದಲ್ಲಿ ಅರಸರು, ರಾಣಿಯರು, ಸಾಮಂತರು ಮತ್ತು ಅಧಿಕಾರಿಗಳು ಕೆರೆ ನಿರ್ಮಿಸಿರುವ ಅನೇಕ ದಾಖಲೆಗಳು ದೊರಕುತ್ತವೆ.[೩೮] ದಕ್ಷಿಣ ಭಾರತದಲ್ಲಿ ಆಳಿಹೋದ ಪ್ರತಿಯೊಂದು ಅರಸು ಮನೆತನಗಳು ರಾಜಕೀಯ, ಧಾರ್ಮಿಕ, ಸಾಹಿತ್ಯ ಮತ್ತು ಕಲೆ-ವಾಸ್ತುಶಿಲ್ಪ ಮೊದಲಾದ ರಂಗಗಳಲ್ಲಿ ತಮ್ಮದೇ ಆದ ಕಾಣಿಕೆಯನ್ನು ನೀಡಿವೆ. ಪ್ರಾರಂಭದಲ್ಲಿ ಪ್ರತಿಯೊಂದು ರಾಜ ಮನೆತನ ಇನ್ನೊಂದು ರಾಜ ಮನೆತನದ ಅಧೀನವಾಗಿ ಆಳ್ವಿಕೆ ಆರಂಭಿಸಿ ತಾವು ಸ್ವತಂತ್ರ ರಾಜ್ಯ ಕಟ್ಟಬೇಕೆಂದು ಬಯಸಿ ತಮ್ಮ ಅಸಮರ್ಥ ದೊರೆಗಳ ಕಾಲದಲ್ಲಿ ಇಲ್ಲವೇ ಅವನತಿಯ ವೇಳೆಯಲ್ಲಿ ಧಂಗೆಯೆದ್ದು ಅವರ ಅಧೀನತೆಯಿಂದ ಮುಕ್ತರಾಗಿ ಸ್ವತಂತ್ರ ಅರಸರೆಂದೇ ಘೋಷಿಸಿಕೊಂಡು ತಮ್ಮದೇ ಆದ ರಾಜ್ಯವನ್ನು ಕಟ್ಟಿ ಅದನ್ನು ವಿಶಾಲ ಸಾಮ್ರಾಜ್ಯವನ್ನಾಗಿ ಮಾಡುವುದಕ್ಕಾಗಿ, ನೆರೆಹೊರೆಯ ರಾಜ ಮನೆತನಗಳೊಂದಿಗೆ ಸದಾ ಯುದ್ಧದಲ್ಲಿ ತೊಡಗಿ ಅವರನ್ನು ಸೋಲಿಸಿ ಅವರ ಪ್ರದೇಶಗಳನ್ನು ಆಕ್ರಮಿಸಿಕೊಂಡು ಅವುಗಳ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದ್ದಾರೆ. ಅಲ್ಲದೇ ಆ ಪ್ರದೇಶಗಳ ಜನರ ಪ್ರೀತಿಯನ್ನು ಸಂಪಾದಿಸಲು ಹಲವು ಜನೋಪಕಾರಿ ಕಾರ್ಯಗಳನ್ನು ಕೈಗೊಂಡಿದ್ದಾರೆ.

ಪಲ್ಲವರನ್ನು ಸೋಲಿಸುವುದಕ್ಕಾಗಿಯೇ ಕ್ಷತ್ರೀಯ ಧರ್ಮ ಸ್ವೀಕರಿಸಿದ ಕದಂಬರ ಮಯೂರಶರ್ಮನು ಪಲ್ಲವರನ್ನಲ್ಲದೇ ತನ್ನ ಇತರೆ ಶತ್ರುಗಳನ್ನು ಸೋಲಿಸಿದ್ದರ ನೆನಪಿಗಾಗಿ ಚಂದ್ರವಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸಿದನೆಂದು ತಿಳಿಯುತ್ತದೆ. ಅರಸ ರಾಜೇಂದ್ರ ಚೋಳನು ಉತ್ತರ ಭಾರತವನ್ನು ಗೆದ್ದು ಗಂಗಾ ನದಿಯವರೆಗೆ ತನ್ನ ಸಾಮ್ರಾಜ್ಯ ವಿಸ್ತರಿಸಿದ್ದರ ನೆನಪಿಗಾಗಿ ಗಂಗೈಕೊಂಡ ಚೋಳಪುರದಲ್ಲಿ ವಿಶಾಲವಾದ ಕೆರೆಯೊಂದನ್ನು ನಿರ್ಮಿಸಿ ಅದನ್ನು ವಿಜಯ ಜಲಸ್ಥಂಭ ಎಂದೇ ಹೆಮ್ಮೆಯಿಂದ ಕರೆಯುತ್ತಿದ್ದನೆಂದು ತಿಳಿಯುತ್ತದೆ. ಕಲ್ಯಾಣ ಚಾಲುಕ್ಯರ ಮೂರನೇ ಸೋಮೇಶ್ವರನು ತನ್ನ ಮಾನಸೋಲ್ಲಾಸ ಕೃತಿಯಲ್ಲಿ ರಾಜರು ಬಾವಿ, ಕೆರೆ ಮತ್ತು ಸರೋವರ ಮುಂತಾದ ನೀರು ಶೇಖರಿಸುವ ಕಾರ್ಯಗಳಲ್ಲಿ ಆಸಕ್ತಿ ವಹಿಸಿ ತಮ್ಮ ರಾಜ್ಯದ ವಿಕಾಸಕ್ಕೆ ಎಡೆಮಾಡಿಕೊಡಬೇಕೆಂದು ಹೇಳಿದ್ದಾನೆ. ಈ ಮೇಲೆ ತಿಳಿಸಿದ ಅಂಶಗಳು ಅರಸನಾದವನು ಕೇವಲ ಸಾಮ್ರಾಜ್ಯ ವಿಸ್ತರಣೆಯಲ್ಲಿ ಮಾತ್ರ ತೊಡಗದೇ ಜನೋಪಕಾರಿ ಕಾರ್ಯಗಳನ್ನು ಕೈಗೊಂಡು ತನ್ನ ಪ್ರಜೆಗಳ ಪ್ರೀತಿಗೆ ಪಾತ್ರರಾಗಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಕಾರಣದಿಂದಾಗಿಯೇ ಪ್ರತಿಯೊಬ್ಬ ಅರಸರು ತಮ್ಮ ಸಾಮ್ರಾಜ್ಯದಲ್ಲಿ ದಕ್ಷ ರೀತಿಯ ಆಡಳಿತ ಸ್ಥಾಪನೆಗಾಗಿ ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯಾಗಿ ಆರ್ಥಿಕ ಅಭಿವೃದ್ಧಿಗಾಗಿ ಹಾಗೂ ಸಾಂಸ್ಕೃತಿಕ ಪ್ರಗತಿಗಾಗಿ ಶ್ರಮಿಸಿದ್ದಾರೆ.[೩೯] ಒಟ್ಟಿನಲ್ಲಿ ಆಳ್ವಿಕೆಗೆ ಬಂದ ಪ್ರತಿಯೊಂದು ರಾಜ ಮನೆತನಗಳು ಸಾಮ್ರಾಜ್ಯದ ವಿಸ್ತರಣೆಯ ಜೊತೆಗೆ ಆಕ್ರಮಿಸಿದ ಪ್ರದೇಶಗಳಲ್ಲಿ ಪ್ರಜಾಹಿತಾತ್ಮಕ ಸುಖ ಸಂತೋಷಕ್ಕಾಗಿ ಕೆರೆ–ಕಟ್ಟೆ–ಕಾಲುವೆ–ಬಾವಿಗಳನ್ನು ನಿರ್ಮಿಸಿ ನೀರಾವರಿ ವ್ಯವಸಾಯವನ್ನು ಅಭಿವೃದ್ಧಿಪಡಿಸಿದರು. ಹೀಗಾಗಿ ರಾಜಕೀಯ ಕಾರಣಗಳಿಂದಾಗಿ ಕೆರೆ–ಬಾವಿಗಳ ಅಭಿವೃದ್ಧಿಗೆ ಪೂರಕವಾಗಿದೆ.

**೩. ಸಾಮಾಜಿಕ ಕಾರಣಗಳು:**

ಭಾರತವು ಕೃಷಿ ಪ್ರಧಾನವಾದ ದೇಶ. ಕೃಷಿ ಇಲ್ಲಿನ ಜನರ ಪ್ರಮುಖ ಉದ್ಯೋಗಗಳಲ್ಲಿ ಒಂದು. ಪ್ರತಿಯೊಂದು ಅರಸು ಮನೆತನಗಳು ನೀರಾವರಿ ಬೆಳವಣಿಗೆಗೆ ಪ್ರಮುಖ ಆದ್ಯತೆ ಕೊಟ್ಟರು. ಈ ದಿಶೆಯಲ್ಲಿ ಅವರು ಎರಡು ಪ್ರಮುಖ ಕಾರ್ಯಗಳನ್ನು ಕೈಗೆತ್ತಿಕೊಂಡರು. ಮೊದಲನೆಯದಾಗಿ ಅಣೆಕಟ್ಟು, ಕೆರೆ–ಬಾವಿ, ಸರೋವರಗಳನ್ನು ನಿರ್ಮಿಸಿ ನೀರಾವರಿ ಆಧರಿತ ಕೃಷಿಯನ್ನು ಪ್ರೋತ್ಸಾಹಿಸಿದ್ದರು. ಎರಡನೆಯದಾಗಿ ಕಾಡುಗಳನ್ನು ಕಡಿದು ಆ ಭೂಮಿಯನ್ನು ವ್ಯವಸಾಯಕ್ಕೆ ಉಪಯೋಗಿಸಿಕೊಂಡದ್ದು, ಈ ಎಲ್ಲಾ ಕಾರ್ಯಗಳು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದವು ಎಂಬುದಕ್ಕೆ ಈ ನಿದರ್ಶನಗಳೇ ಸಾಕ್ಷಿ. ಮೌರ್ಯರಿಂದ ಹಿಡಿದು (ಕ್ರಿ.ಪೂ.೩೨೦), ಗುಪ್ತರ ಕಾಲ (ಕ್ರಿ.ಪೂ.೪೫೦)ವರೆಗಿನ ದೀರ್ಘ ಇತಿಹಾಸ ಹೊಂದಿದ ಸುದರ್ಶನ ತಟಾಕವನ್ನು ಕಾಲಕಾಲಕ್ಕೆ ದುರಸ್ತಿ ಮಾಡಿಸಿದ್ದದ್ದು ನೀರಾವರಿ ವ್ಯವಸಾಯಕ್ಕಾಗಿ. ಶಾಸನವೇ ಹೇಳುವಂತೆ

ಸುದರ್ಶನ ಸರೋವರ ಒಡೆದಿದ್ದರಿಂದ ಜನರು ಕಷ್ಟಕ್ಕೆ ಗುರಿಯಾದರು. ದನಕರುಗಳು, ಧರ್ಮಾವಲಂಬಿಯಾದ ಬ್ರಾಹ್ಮಣರು ದುಃಖಕ್ಕೆ ಈಡಾದರು. ಇದನ್ನು ಕಂಡ ರುದ್ರದಾಮನ್‌ನು ಯಾರಿಗೂ ತೊಂದರೆಯಾಗದಂತೆ ಶೀಘ್ರ ಪರಿಹಾರ ಕಾರ್ಯವನ್ನು ಕೈಗೆತ್ತಿಕೊಂಡನು. ಇದು ಅಂದಿನ ಅರಸರ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುತ್ತದೆ. ರುದ್ರದಾಮನ್ ಈ ಸಾಮಾಜಿಕ ಕಾರ್ಯಗಳಿಂದ ನಂತರದ ಅರಸರಿಗೆ ಮಾದರಿಯಾದನು. ಅಲ್ಲದೆ ಹೊಸದಾಗಿ ಕೆರೆಗಳನ್ನು ಕಟ್ಟಿಸುವುದು ಹಾಗೂ ಹಳೆಯವುಗಳನ್ನು ಜೀರ್ಣೋದ್ಧಾರಗೊಳಿಸುವುದು ಮಹಾಕಾರ್ಯವೆಂದು ಪರಿಗಣಿಸಲಾಯಿತು. ಇನ್ನೊಂದು ನಿದರ್ಶನವೆಂದರೆ ಕಳಿಂಗದ ಖಾರವೇಲ ಅರಸರು ಪ್ರಜಾಹಿತಕ್ಕಾಗಿ ಮತ್ತು ಅವರ ಸುಖ ಸಂತೋಷಕ್ಕಾಗಿ ತಾನು ಸಿಂಹಾಸನಕ್ಕೆ ಬಂದ ವರ್ಷದಿಂದಲೇ ಸರೋವರ ನಿರ್ಮಾಣ ಕಾರ್ಯಗಳನ್ನು ಕೈಗೆತ್ತಿಕೊಂಡಿದ್ದನ್ನು ಕಾಣಬಹುದು. ಚೋಳ ಪಾಂಡ್ಯ ಹಾಗೂ ಇತರ ಅರಸು ಮನೆತನಗಳ ರಾಜರು ನದಿಗಳಿಗೆ ಅಣೆಕಟ್ಟು ಕಟ್ಟಿಸಿ ಕಾಲುವೆಗಳ ಮುಖಾಂತರ ಭೂಮಿಗೆ ನೀರನ್ನು ಹಾಯಿಸುತ್ತಿದ್ದರು. ತಮ್ಮ ಪ್ರಜೆಗಳ ಸುಖಕ್ಕಾಗಿ ಈ ಎಲ್ಲಾ ಕಾರ್ಯಗಳು ಪ್ರಾಚೀನಕಾಲದ ಅರಸರುಗಳ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುತ್ತದೆ.[೪೦] ಇಂಥ ಕಾರ್ಯಗಳನ್ನು ನಂತರದ ಅರಸರು ಕೈಗೊಂಡ ನೀರಾವರಿ ವ್ಯವಸಾಯವನ್ನು ಅಭಿವೃದ್ಧಿಗೊಳಿಸಿದರು. ಕಾಡುಗಳನ್ನು ಕಡಿದು ಸಾಗುವಳಿ ಭೂಮಿಯನ್ನಾಗಿ ಮಾಡಿ ಕೆರೆಯನ್ನು ಕಟ್ಟಿಸಿ ನೀರಾವರಿಯನ್ನು ಅಭಿವೃದ್ಧಿಪಡಿಸಿದ ಪಲ್ಲವರನ್ನು ಕಾಡುವುಳ್ಳ ಅರಸ ಎಂದೇ ಕರೆಯಲಾಗಿದೆ. ಇಂಥ ಕಾರ್ಯಗಳನ್ನು ಕೈಗೊಳ್ಳಲು ಮುಂದೆ ಬಂದವರಿಗೆ ಅರಸರು ಪ್ರೋತ್ಸಾಹ ನೀಡಿ 'ಕರ'ಗಳಲ್ಲಿ ಕಡಿತ ಹಾಗೂ ಬಿರುದಾವಳಿಯನ್ನು ನೀಡುವ ಮತ್ತು ಅವರಿಗೆ ವಿಶೇಷ ಅಧಿಕಾರ ನೀಡುವ ಕ್ರಮಗಳನ್ನು ಕೈಗೆತ್ತಿಕೊಂಡಿದ್ದರು.[೪೧] ಇವು ಪ್ರಾಚೀನ ಕಾಲದಿಂದಲೂ ಅವ್ಯಾಹತವಾಗಿ ನಡೆದುಕೊಂಡು ಬಂದಿದ್ದವು. ಇವುಗಳ ಉದ್ದೇಶ ಕೇವಲ ವ್ಯವಸಾಯ ಉತ್ಪಾದನೆಯನ್ನು ಅಧಿಕಗೊಳಿಸುವುದಾಗಿತ್ತು. ಕ್ರಮೇಣ ಹೆಚ್ಚಾಗುತ್ತಿದ್ದ ಜನಸಂಖ್ಯೆಯ ಅವಶ್ಯಕತೆಗಳನ್ನು ಪೂರೈಸಲು ಪ್ರತಿಯೊಂದು ರಾಜ ಮನೆತನಗಳು ನೂತನ ನೀರಾವರಿಯನ್ನು ಪ್ರೋತ್ಸಾಹಿಸುವುದು ಅನಿವಾರ್ಯವಾಗಿತ್ತು. ಹೀಗಾಗಿ ಅವರು ವಿವಿಧ ನೀರಾವರಿ ಕಾರ್ಯಗಳಿಗೆ ಪ್ರೋತ್ಸಾಹ ನೀಡಿ ಜನತೆಯ ಆಶೋತ್ತರಗಳಿಗೆ ಸ್ಪಂದಿಸಿದರು. ಇಂಥ ಕಾರ್ಯಗಳಲ್ಲಿ ಶ್ರೀಮಂತರು, ಅಧಿಕಾರಿಗಳು ಮತ್ತು ಸಾಮಾನ್ಯ ಜನರು ಭಾಗಿಯಾಗಿದ್ದಾರೆಂದು ಬೇರೆ ಹೇಳಬೇಕಾಗಿಲ್ಲ.

ಈ ವ್ಯಾಪಾರಿ ವರ್ಗ ಧರ್ಮಾರ್ಜನೆಯನ್ನು ಹಾಗೂ ಸೌಖ್ಯವನ್ನು ಪಡೆಯಲು ತಾವೂ ವ್ಯಾಪಾರ ವಹಿವಾಟು ನಡೆಸುವ ಗ್ರಾಮ, ಪಟ್ಟಣಗಳಲ್ಲಿ ಸಂತೆ ಮಾಳಗಳಲ್ಲಿ ಬಂದು ಹೋಗುವ ವ್ಯಾಪಾರಿಗಳು, ಗ್ರಾಹಕರಿಗೆ ನೀರಿನ ಸಮಸ್ಯೆಯಾಗದಂತೆ ಕೆರೆ, ಅರವಟ್ಟಿಗೆ, ಆರವೆ(ಮಡಿಕೆ), ಛತ್ರಗಳನ್ನು ನಿರ್ಮಿಸುವ ಕಾರ್ಯವನ್ನು ಮಾಡಿದ್ದಾರೆ. ಇವರ ವ್ಯವಹಾರಿಕ ಚತುರತೆಯನ್ನಲ್ಲದೆ ಇದು ಅವರ ಸಾಮಾಜಿಕ ಕಾಳಜಿಗೂ ಉದಾಹರಣೆಯಾಗುತ್ತದೆ.

೪. ಆರ್ಥಿಕ ಕಾರಣಗಳು:

ಭಾರತದ ಇತಿಹಾಸಪೂರ್ವ ಕಾಲದಿಂದಲೂ ಬೆಳೆದು ಬಂದಿರುವ ವ್ಯವಸಾಯವು ಆರ್ಥಿಕ ವ್ಯವಸ್ಥೆಯ ಜೀವನಾಡಿಯಾಗಿ ಮುಖ್ಯ ಕಸುಬಾಗಿತ್ತು. ಈ ವ್ಯವಸಾಯ ವ್ಯಾಪಾರ, ಉದ್ಯೋಗ, ಕೈಗಾರಿಕೆಗಳನ್ನೊಳಗೊಂಡ ನಾಡಿನ ಮೂಲ ಕೇಂದ್ರಬಿಂದುವಾಗಿದ್ದಿತು. ಅದರಿಂದಾಗಿ ಒಕ್ಕಲುತನದ ಅಭಿವೃದ್ಧಿಗಾಗಿ ಒಂದು ನಾಡಿನ ಅಭಿವೃದ್ಧಿ ಎಂಬುದನ್ನು ನಮ್ಮ ಪ್ರಾಚೀನರು ಮನಗಂಡಿದ್ದರು. ಹೀಗಾಗಿ ಅಂದು ಹೊಸ ಗ್ರಾಮಗಳೊಂದಿಗೆ ಅದರ ಸುತ್ತಮುತ್ತ ವ್ಯವಸಾಯಯೋಗ್ಯ ಭೂಮಿಯ ನಿರ್ಮಾಣವಾಗುತ್ತಿತ್ತು. ಅದು ಆ ಊರುಗಳ ಜನರ ಆರ್ಥಿಕ ಪ್ರಗತಿಗೆ ಸಹಾಯಕವಾಗುತ್ತಿದ್ದವು. ಪ್ರಾಚೀನ ಕಾಲದ ಪ್ರತಿಯೊಂದು ರಾಜಮನೆತನಗಳ ಆರ್ಥಿಕ ಅಭ್ಯುದಯಕ್ಕಾಗಿ ವ್ಯವಸಾಯವನ್ನು ಆಶ್ರಯಿಸಿದ್ದರು. ಅದುವೇ ಸಮಸ್ತ ಆದಾಯಕ್ಕೆ ಕೇಂದ್ರಬಿಂದು ಎಂದೇ ತಿಳಿಯಲಾಗಿತ್ತು.

ಹೀಗಾಗಿ ಕಾಡು ಪ್ರದೇಶವನ್ನು ಕಡಿದು ಸಾಗುವಳಿ ಭೂಮಿಯನ್ನಾಗಿ ಮಾಡುವಲ್ಲಿ ಸದಾ ನಿರತರಾಗಿದ್ದದು ಕಂಡುಬರುತ್ತದೆ. ಜನಸಂಖ್ಯೆಯ ಆಹಾರ ಪೊರೈಕೆಗಾಗಿ ವ್ಯವಸಾಯದಲ್ಲಿ ನೀರಾವರಿಯನ್ನನುಸರಿಸುವುದು ಅನಿವಾರ್ಯವಾಯಿತು. ಅಲ್ಲದೆ ತಮ್ಮ ಪ್ರಜೆಗಳ ಸೌಲಭ್ಯಕ್ಕಾಗಿ ಹಾಗೂ ರಾಜ್ಯದ ರಕ್ಷಣೆಗಾಗಿ ವ್ಯವಸಾಯವನ್ನು ಅಭಿವೃದ್ಧಿಪಡಿಸಲೇಬೇಕಾಯಿತು. ಹೀಗಾಗಿ ಪ್ರತಿಯೊಂದು ರಾಜಮನೆತನಗಳು ತಮ್ಮ ಸಾಮ್ರಾಜ್ಯದಲ್ಲಿ ಹರಿಯುತ್ತಿದ್ದ ನದಿಗಳಿಗೆ, ಹಳ್ಳಗಳಿಗೆ ಅಣೆಕಟ್ಟನ್ನು ಕಟ್ಟಿ ಕಾಲುವೆಗಳ ಮೂಲಕ ನೀರನ್ನು ಹಾಯಿಸುವ, ನದಿಗಳಿದ್ದರೆ ಕೆರೆ, ಸರೋವರಗಳನ್ನು ಹಾಗೂ ಬಾವಿಗಳನ್ನು ನಿರ್ಮಿಸುವ ಕಾರ್ಯ ಕೈಗೊಳ್ಳುತ್ತಿದ್ದರು. ಒಟ್ಟಿನಲ್ಲಿ ತಾವು ಆರ್ಥಿಕವಾಗಿ ಪ್ರಬಲರಾಗಬೇಕಾದರೆ ವ್ಯವಸಾಯವನ್ನು ಅಭಿವೃದ್ಧಿಪಡಿಸುವುದು ಅನಿವಾರ್ಯವೆಂಬುದನ್ನು ಮನಗಂಡಿದ್ದರಿಂದ ನೀರಾವರಿ ವ್ಯವಸಾಯ ಕಾರ್ಯಗಳಿಗೆ ಅತಿ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರು. ಇತರ ಆದಾಯಗಳಿಗಿಂತಲೂ ಭೂಮಿಯ ಆದಾಯವು ಅಧಿಕ ಮತ್ತು ಪ್ರಮುಖವಾಗಿದ್ದರಿಂದ ಆರ್ಥಿಕ ಭದ್ರತೆಯನ್ನು ಒದಗಿಸುತ್ತಿತ್ತು ಎಂಬವುದು ಶಾಸನಗಳಿಂದ ತಿಳಿದುಬರುತ್ತದೆ. ಆಳರಸರು, ಅಧಿಕಾರಿಗಳು ನಂತರ ವ್ಯಾಪಾರಿಗಳು ಮತ್ತು ವರ್ತಕ ಸಂಘಗಳು ಕೆರೆ ನಿರ್ಮಾಣಕ್ಕೆ ಕೊಟ್ಟ ಕೊಡುಗೆ ಅಪಾರವಾಗಿದೆ.[೪೨] ಸೆಟ್ಟಿಗಳು ಹೆಸರಿನ ಗ್ರಾಮಗಳು ಮತ್ತು ಕೆರೆಗಳು ಗದಗ ಜಿಲ್ಲೆಯಲ್ಲಿವೆ. ಉದಾ : ಶೆಟ್ಟಿಗೇರಿ, ಕುಂಟೂಜಿಯ ಬಿ.ಚಿ.ಶೆಟ್ಟಿಯ ಕೆರೆ, ಸೋಮಕಟ್ಟಿಯ ಕೆರೆ. ಈ ಗ್ರಾಮಗಳು ಶೆಟ್ಟಿಗಳು ಮತ್ತು ಅವರ ಸಂಘಗಳು ಕೆರೆ ನಿರ್ಮಾಣ ನಿರ್ವಹಣೆಗೂ ವಿಶೇಷ ಗಮನ ನೀಡಿದ್ದಾರೆ. ಹೀಗಾಗಿ ಅಂದು ಹೊಸ ಊರುಗಳ ಸೃಷ್ಟಿಯೊಂದಿಗೆ ಅದರ ಸುತ್ತಮುತ್ತಲೂ ವ್ಯವಸಾಯಯೋಗ್ಯ ಭೂಮಿಯ ನಿರ್ಮಾಣವು ಆಗುತ್ತಿತ್ತು. ಅದು ಆ ಊರುಗಳ ಜನರ ಆರ್ಥಿಕ ಪ್ರಗತಿಗೆ ಸಹಾಯಕವಾಗುತ್ತಿತ್ತು.

ಗ್ರಾಮೀಣ ಆರ್ಥಿಕ ಜೀವನದಲ್ಲಿ ಕೃಷಿಯೇ ಮುಖ್ಯವಾದ ಘಟಕ. ಕೃಷಿಗೆ ಭೂಮಿಯಷ್ಟೇ ನೀರು ಕೂಡ ಅವಶ್ಯಕವಾಗಿದ್ದರಿಂದ ರಾಜರು ಕೆರೆ ಬಾವಿಗಳನ್ನು ಕಟ್ಟಿಸಲು ಮುಂದಾದರು. ಕದಂಬ ಮಯೂರಶರ್ಮನ ಚಂದ್ರವಳ್ಳಿ ಶಾಸನದಲ್ಲಿ ಮತ್ತು ಕಾಕುತ್ಸವರ್ಮನ ತಾಳಗುಂದ ಶಾಸನದಲ್ಲಿ ಕೆರೆ ನಿರ್ಮಾಣದ ಪ್ರಸ್ತಾಪವಿದೆ.[೪೩] ಚಾಲುಕ್ಯರು ಕೆರೆಗಳನ್ನು ಕಟ್ಟಿಸುವಲ್ಲಿ ಆಸಕ್ತಿ ತೋರಿದುದು ಶಾಸನಗಳಲ್ಲಿ ಕಂಡುಬರುತ್ತವೆ.

**೫. ಧಾರ್ಮಿಕ ಕಾರಣಗಳು:**

ಹಸಿದವರಿಗೆ ಅನ್ನ, ಬಾಯಾರಿದವರಿಗೆ ನೀರು ಕೊಡುವ ಧರ್ಮಕ್ಕಿಂತ ಬೇರೆ ಯಾವ ಧರ್ಮವೂ ದೊಡ್ಡದಲ್ಲ, ಸಮಸ್ತ ಜೀವರಾಶಿಗಳಿಗೆ ಸಹಾಯಕವಾಗುವ ಕೆರೆ, ಸರೋವರ, ದೇವಾಲಯಗಳನ್ನು ನಿರ್ಮಿಸುವುದೇ ಮಹಾಕಾರ್ಯ. ಜೀವನ ಕ್ಷಣಿಕವಾದುದು; ದಿನ ದಿನವೂ ಆಯಸ್ಸು ಕ್ಷೀಣಿಸಿ ಹೋಗುತ್ತದೆ. ಹೀಗಿರುವಾಗ ಮನುಷ್ಯನು ಧರ್ಮವನ್ನು ಅವಲಂಬಿಸಿ ಸದ್ಗತಿಯನ್ನು ಸಂಪಾದಿಸಿಕೊಳ್ಳಲೇಬೇಕು. ಧರ್ಮವು ಮೂರು ಲೋಕಗಳನ್ನು ಬೆಳಗುತ್ತಿರುವ ದೀಪ; ಕಲಿಯುಗವು ಬಹು ಕೆಟ್ಟದ್ದು ನಿಜವಾದ ಬಂಧುಗಳು ಈ ಕಾಲದಲ್ಲಿ ಸಿಗುವುದು ದುರ್ಲಭ; ಆದ್ದರಿಂದ ಧರ್ಮವೊಂದೇ ನಿಜವಾದ ಬಂಧುವು ಇಲ್ಲಿ ನಾವು ಮೊದಲು ಚಿಂತಿಸಬೇಕಾದುದು ಧರ್ಮವನ್ನು, ಇವು ಪ್ರಾಚೀನ ಕನ್ನಡದಲ್ಲಿ ಬೇರೂರಿದ್ದ ಕೆಲವು ಭಾವನೆಗಳು. ಇಲ್ಲೆಲ್ಲ ಧರ್ಮ ಎಂದರೆ ಶೈವ, ವೈಷ್ಣವ, ಬೌದ್ಧ ಧರ್ಮಗಳಲ್ಲಿ ಎಲ್ಲರಿಗೂ ಸಮಾನವಾದ ಎಲ್ಲ ಧರ್ಮಗಳು ಒತ್ತಿ ಹೇಳುವಂತೆ ದಾನ ಮಾಡುವುದು, ಕೆರೆಯನ್ನು ಕಟ್ಟಿಸುವುದು, ದೇವಸ್ಥಾನ ನಿರ್ಮಿಸುವುದು ಪುಣ್ಯ ಕಾರ್ಯವೊಂದೇ ಎಂದು ಧರ್ಮ ಹೇಳುತ್ತದೆ. ಇದೇ ಮಾತನ್ನು ಪುಷ್ಟೀಕರಿಸುವಂತೆ ಆಯಾ ಧರ್ಮಗಳ ಪ್ರಚಾರಕರೂ ಕೂಡ ಇದೇ ಕಾರ್ಯಗಳನ್ನು ಕುರಿತು ಒತ್ತಿ ಹೇಳಿದ್ದಾರೆ. ಒಟ್ಟಿನಲ್ಲಿ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಅನೇಕ ಧರ್ಮಗಳು ಇದ್ದರೂ ಅವೆಲ್ಲವುಗಳ ತಿರುಳು ಒಂದೇ ಆಗಿದೆ. ಪ್ರತಿಯೊಂದು ಧರ್ಮವು ಮಾನವನ ಮುಕ್ತಿ ಪಡೆಯುವ ಮಾರ್ಗಗಳಾಗಿದ್ದವು. ಸತ್ಕಾರ್ಯಗಳಾದ ಕೆರೆ, ಸರೋವರ, ಬಾವಿ ನೀರಾವರಿ ಕಾರ್ಯಗಳನ್ನು ಕೈಗೊಳ್ಳುವುದು ಪುಣ್ಯ ಕಾರ್ಯಕೈಗೊಳ್ಳುವುದು ಒಂದೇ ಎಂದು ಹೇಳಿದೆ.[೪೪] ಹೀಗಾಗಿ ಪ್ರಾಚೀನ ಕಾಲದಿಂದಲೂ ದಕ್ಷಿಣ ಭಾರತದ ಜನರು ತಮ್ಮ ವೈಯಕ್ತಿಕ ಧರ್ಮಗಳನ್ನು ಮರೆತು ಅರಸರು, ಅಧಿಕಾರಿಗಳು, ಶ್ರೀಮಂತರು, ಸ್ತ್ರೀಯರು ಮತ್ತು ಸಾಮಾನ್ಯ ಜನರು ಎಂದು ಬೇಧ-ಭಾವ ಮಾಡದೇ ಸತ್ಕಾರ್ಯಕ್ಕಾಗಿ ಶ್ರಮಿಸುವುದೇ ಶ್ರೇಷ್ಠವಾದ ಧರ್ಮ ಎಂದು ತಿಳಿದು ಜನಕಲ್ಯಾಣ ಕಾರ್ಯಗಳಾದ ಕೆರೆ, ಸರೋವರ ಮತ್ತು ದೇವಾಲಯಗಳ ನಿರ್ಮಾಣ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗಿಯಾಗಿ ಅವುಗಳ ಸಂಖ್ಯೆಯನ್ನು ಹೆಚ್ಚಿಸುವುದಲ್ಲದೇ ನೀರಾವರಿ ವ್ಯವಸಾಯದ ಅಭಿವೃದ್ಧಿಗೆ ಕಾರಣರಾದರು.

೬. ಸಾಂಸ್ಕೃತಿಕ ಕಾರಣಗಳು:

ನೀರು ಜಗತ್ತಿನಲ್ಲಿರುವ ಕೋಟ್ಯಾಂತರ ಜೀವರಾಶಿಗಳಿಗೆ ಅತ್ಯಂತ ಅವಶ್ಯವು. ಇಂತಹ ವಸ್ತುವು ದೈನಂದಿನ ಚಟುವಟಿಕೆಗಳಲ್ಲಿ ಪ್ರತಿ ಪ್ರಾಣಿಗಳಿಗೆ ಅತಿ ಮುಖ್ಯವು. ಮಾನವನು ಮೊಟ್ಟಮೊದಲು ಈ ಭೂಮಿಯ ಮೇಲೆ ಕಾಣಿಸಿಕೊಂಡಾಗಿನಿಂದ ಇಂದಿನವರೆಗೂ ಮಾನವನು ಎಲ್ಲಾ ಚಟುವಟಿಕೆಗಳು ನೀರಿನ ಸಮಿಪವೇ ಕೇಂದ್ರಿಕೃತವಗಿರುವುದನ್ನು ನಾವು ನೋಡಬಹುದು. ಕೆರೆಗಳನ್ನು ವ್ಯವಸಾಯಕ್ಕೆ ಉಪಯೋಗವಾಗುವಂತೆ ನಿರ್ಮಿಸಿಕೊಂಡವಾದರೂ ಅವುಗಳು ಜನರಿಗೆ ಸಮಾಜದಲ್ಲಿ ಹೇಗೆ ಉಪಯೋಗವನ್ನುಂಟು ಮಾಡಿದ ಎಂಬುವುದನ್ನು ತಿಳಿಯಬಹುದಾಗಿದೆ.

ಅರಸರು ಅರಮನೆಗಳಲ್ಲಿ ಜಲಸಂಗ್ರಹಕಗಳಿಂದ ಈಜು ಕೊಳವನ್ನು ಮನಸ್ಸಿಗೆ ಮುದ ನಿಡುವಂತಹ ಕಾರಂಜಿಗಳನ್ನು ನಿರ್ಮಿಸುತ್ತಿದ್ದರು. ವಿಜಯನಗರ ಅರಸರ ಆಳ್ವಿಕೆ ಅವಧಿಯಲ್ಲಿ ರಾಣಿಯ ಸ್ನಾನಗೃಹಗಳು ನಮಗೆ ಉದಾಹರಣೆಗಳಾಗಿವೆ. ಕೆರೆಗಳನ್ನು ನಿರ್ಮಿಸಿ ಅದರ ದಂಡೆಯಲ್ಲಿ ಉದ್ಯಾನವನ್ನು ನಿರ್ಮಿಸಿವುದು ಕಂಡುಬರುತ್ತದೆ. ಉದಾ; ಗದಗ ಭಿಷ್ಮಕೆರೆಯ ದಂಡೆಯಲ್ಲಿ ನಿರ್ಮಾಣವಾಗುತ್ತಿರುವ ಉದ್ಯಾನವನ ನಮಗೆ ಸಾಕ್ಷಿ. ಇದರಿಂದ ಜನರಿಗೆ ಉತ್ತಮ ಮನರಂಜನೆಗಳನ್ನು ನಿಡುತ್ತವೆ. ಆದರೆ ಇತ್ತೀಚಿನ ದಿನಗಳಲ್ಲಿ ಹೇಗೆ ಸಾಂಸ್ಕೃತಿಕವಾಗಿ ಉಪಯುಕ್ತವಾಗಿವೆ ಎಂಬುವುದನ್ನು ಈ ಕೆಳಗಿನ ಅಂಶಗಳಿಂದ ತಿಳಿಯಬಹುದು. ಸಾರ್ವಜನಿಕ ಉತ್ಸವಗಳಲ್ಲಿ ಅತ್ಯಂತ ವಿಜೃಂಭಣೆಯಿಂದ ಎಲ್ಲರೂ ಆಚರಿಸುವ ಹಬ್ಬವೆಂದರೆ ಗಣೇಶ ಉತ್ಸವ. ಗಣೇಶ ಚತುರ್ಥಿ ದಿನದಿಂದ ಹಿಡಿದು ೯,೧೧,೨೧ ದಿನಗಳವರೆಗೆ ಪ್ರತಿಷ್ಠಾಪಿಸಿ ಕೊನೆಯ ದಿನದಂದು ಅತ್ಯಂತ ವಿಜೃಂಭಣೆಯಿಂದ ಮರವಣಿಗೆ ಮಾಡಿಕೊಂಡು ಬಂದು ಕೆರೆಯಲ್ಲಿ ಗಣೇಶ ಮೊರ್ತಿಯನ್ನು ವಿಸರ್ಜನೆ ಮಾಡುತ್ತಾರೆ. ಇಂತಹ ಮನರಂಜನಾ ಹಬ್ಬಗಳನ್ನು ಆಚರಿಸುವುದನ್ನು ನಾವು ನೋಡಬಹುದು. ಇವುಗಳು ಮೊದಲಿನಿಂದಲೂ ನಡೆದ ಬಂದ ಸಂಪ್ರದಾಯಗಳಾಗಿವೆ. ಇನ್ನಿತರ ಕೆಲವು ಸಾಂಸ್ಕೃತಿಕ ಆಚರಣೆಗಳನ್ನು ನಾವು ನೋಡಬಹುದು ಅದು ತೆಪ್ಪೋತ್ಸವ ಹಾಗೂ ಗಂಗಾ ಪೂಜೆಯಂತಹ ಆಚರಣೆಗಳು ಕಂಡುಬರುತ್ತವೆ. ಇಂದಿಗೂ ಸಹ ತುಂಬಿ ಹರಿಯುವ ನದಿಗಳಿಗೆ ಬಾಗೀನ ಕೊಡುವ ವ್ಯವಸ್ಥೆಯನ್ನು ಕಾಣುತ್ತೇವೆ. ತೆಪ್ಪೋತ್ಸವವೆಂದರೆ ಹಣತೆಯನ್ನು ಬಾಳೆಎಲೆಯಲ್ಲಿರಿಸಿ ನೀರಿನಲ್ಲಿ ತೇಲಿ ಬಿಡುವ ಹಾಗೂ ಮುತ್ತಿಗೆ ಎಲೆಯಲ್ಲಿ ಗೋಧಿ ಹಿಟ್ಟಿನಿಂದ ತಾಯಾರಿಸಿದ ದೀಪಗಳನ್ನು ಇಟ್ಟು ನೀರಿನಲ್ಲಿ ತೇಲಿ ಬಿಡುವ ಒಂದು ವಿಶೇಷವಾದ ವಿಧಾನ. ಉದಾ; ಗದಗಿನ ಹಸಿರು ಕೆರೆಯಲ್ಲಿ ತೆಪ್ಪೋತ್ಸವ ಆಚರಣೆಗಳು ನಡೆಯುತ್ತಿದ್ದವು. ಆದರೆ ಈಗ ಆ ಕೆರೆಯಲ್ಲಿ ನೀರು ಸಂಗ್ರಹವಾಗಿಲ್ಲದರಿಂದ ಆ ಆಚರಣೆಗಳು ನಿಂತು ಹೋಗಿವೆ. ತುಂಬಿ ಹರಿಯುವ ಕೆರೆಗಳಿಗೆ(ಗಂಗೆ) ಬಾಗಿನ ಅರ್ಪಿಸುವಂತಹ ಕಾರ್ಯವನ್ನು ನೋಡಬಹುದು. ಜಿಲ್ಲೆಯ ಡಂಬಳ, ಚಿಕ್ಕಹಂದಿಗೋಳ, ಬಾಗೆವಾಡಿ, ತಾಮ್ರಗುಂಡಿ

ಕೆರೆಗಳು ತುಂಬಿದಾಗ ಜಿಲ್ಲೆಯ ಉಸ್ತುವಾರಿ ಸಚಿವರು ಹಾಗೂ ನೀರಾವರಿ ಸಚಿವರು ಬಂದು ಬಾಗೀನ ಅರ್ಪಿಸಿದ ಉದಾಹರಣೆಗಳು ದೊರೆಯುತ್ತವೆ.

ಕೆರೆಗಳಲ್ಲಿ ಬೋಟಿಂಗ್ ವ್ಯವಸ್ಥೆ ಕೂಡ ನಗರ ಜನರಿಗೆ ಸಂತೋಷವನ್ನು ಉಂಟುಮಾಡುತ್ತವೆ. ಇದಕ್ಕೆ ಉತ್ತಮ ನಿದರ್ಶನವೆಂದರೆ ಧಾರವಾಡ-ಹುಬ್ಬಳ್ಳಿ ನಗರದ ಮಧ್ಯದಲ್ಲಿರುವ ಉಣಕಲ್ಲ ಕೆರೆಯಲ್ಲಿ ಮತ್ತು ಬೆಳಗಾಂ ನಗರದ ಕೆರೆಯಲ್ಲಿ ಮಾಡಿದ ಬೋಟಿಂಗ ವ್ಯವಸ್ಥೆಯನ್ನು ಕಾಣಬಹುದು. ಅದೇ ರೀತಿ ಲಕ್ಕುಂಡಿಯ ಹಾಲಗುಂಡ ಬಸವಣ್ಣನ ಕೆರೆಯಲ್ಲಿ ಈ ವ್ಯವಸ್ಥೆ ಪ್ರಗತಿ ಹಂತದಲ್ಲಿದೆ. ಇದರಿಂದ ನಗರದ ಜನರೆಲ್ಲರೂ ತಮ್ಮ ಕೆಲಸದ ರಜಾದಿನಗಳಲ್ಲಿ ಇಲ್ಲಿಗೆ ಬಂದು ಸಂತೋಷದಿಂದ ಮನೆವರಲ್ಲರೂ ಕಾಲವನ್ನು ಕಳೆಯುತ್ತಾರೆ. ಹೀಗೆ ಇಂತಹ ಮನಸ್ಸಿಗೆ ಸಂತೋಷವನ್ನುಂಟು ಮಾಡುವ ಕಾರ್ಯಗಳನ್ನು ಕೆರೆಗಳು ಮಾಡುತ್ತವೆ.

**೩.೬. ಶಾಸನೋಕ್ತ ಕೆರೆಗಳು**

**ಪ್ರಾಚೀನ ಕಾಲ; ರಾಷ್ಟ್ರಕೂಟರ ಕಾಲದ ಕೆರೆಗಳು ;**

**ದಂಡಾಪುರದ ಕೆರೆ:**

| | |
|---|---|
| ಗ್ರಾಮ-ದಂಡಾಪುರ | ಅಚ್ಚುಕಟ್ಟು ಪ್ರದೇಶ - ೪೪.೯(ಹೆ) |
| ಜಲಾವೃತ ಪ್ರದೇಶ - ೩.೦೦(ಹೆ) | ಕೆರೆಯ ಸಾಮರ್ಥ್ಯ - ೧೩.೪೪(mcft)\ |
| ಏರಿಯ ಉದ್ದ - ೭೫೦ ಮೀ. | ಏರಿಯ ಎತ್ತರ - ೧೬ ಮೀ. |
| ಏರಿಯ ಮೇಲ್ಭಾಗದ ಅಗಲ -೩ ಮೀ. | |

ನರಗುಂದ ಪ್ರದೇಶಕ್ಕೆ ಐತಿಹಾಸಿಕ ಪರಂಪರೆಯಲ್ಲಿ ಒಂದು ವಿಶಿಷ್ಟವಾದ ಸ್ಥಾನವಿದೆ. ಹಿಂದೆ ಇದನ್ನು 'ಮಹಾಂತಗಡ'[೪೫] ಎಂದು ಕರೆಯುತ್ತಿದ್ದರು. ಭೌಗೋಳಿಕವಾಗಿ ನರಗುಂದ ವಿಶಿಷ್ಟವಾದ ನೆಲೆಯನ್ನು ಹೊಂದಿದ್ದು. ಕ್ರಿ.ಶ. ಸುಮಾರು ೧೧-೧೨ನೇ ಶತಮಾನದಲ್ಲಿ ಬೆಳ್ವೊಲ-೩೦೦ ಆಡಳಿತಕ್ಕೆ ಒಳಪಟ್ಟಿತ್ತು. ಸಮುದ್ರಮಟ್ಟದಿಂದ ೪೦೦ ಅಡಿ ಎತ್ತರದಲ್ಲಿರುವ ನರಗುಂದ ಮಲಪ್ರಭಾ, ಬೆಣ್ಣೆ ಹಳ್ಳಗಳ ವರದಾನದಿಂದ ಫಲವತ್ತಾದ ಕೃಷಿ ಭೂಮಿಯನ್ನು ಹೊಂದಿದೆ. ಇಲ್ಲಿ ಹೊಂದಿರುವ ಗುಡ್ಡ, ಪುಷ್ಕರಣಿ, ಕೋಟೆ, ಸುರಂಗ ಮಾರ್ಗ, ಸಮೃದ್ಧವಾಗಿ ಬೆಳೆಯುವ ಸೀತಾಫಲ, ಸಿದ್ದೇಶ್ವರ ಸನ್ನಿಧಿ ಅಲ್ಲದೇ ಕೆರೆ, ಬಾವಿಗಳು ಸಹಜ ಸೃಷ್ಟಿಯ ಸೊಬಗನ್ನು ಹೊಂದಿದ ನರಗುಂದಕ್ಕೆ ಐತಿಹಾಸಿಕ ಪರಂಪರೆಯನ್ನು ಸೃಷ್ಟಿಮಾಡಿವೆ.

ನರಗುಂದ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಸುಮಾರು ೨೨ಕ್ಕಿಂತ ಹೆಚ್ಚು ಶಿಲಾಶಾಸನಗಳು ಉಪಲಬ್ಧವಾಗಿವೆ. ಕ್ರಿ.ಶ. ೯೧೮ರ ನಾಲ್ಕನೇ ಗೋವಿಂದನ ಶಾಸನವು[೪೬] ಕೆರೆಯ ಬಗ್ಗೆ ಉಲ್ಲೇಖ ನೀಡುತ್ತದೆ. ಈ ಶಾಸನದ ಶೋಧನೆ ಪರಿಶೋಧನೆ ಕಾರ್ಯದಲ್ಲಿ ದಿ.

ಕೆ.ಜಿ. ಕುಂದಣಗಾರ, ಎಂ.ಎಂ. ಕಲಬುರ್ಗಿ, ಅ ಸುಂದರ ಮತ್ತು ಹನುಮಾಕ್ಷಿ ಗೋಗಿ ಮೊದಲಾದವರ ಶ್ರಮ ಬಹುದೊಡ್ಡದಾಗಿದೆ. ಹೆತ್ತ ತಾಯಿ, ಹೊತ್ತ ಭೂಮಿ ಸ್ವರ್ಗಕ್ಕಿಂತ ಶ್ರೇಷ್ಠ. ಹಾಗಾಗಿ ಇವುಗಳ ಸಲುವಾಗಿ ನರಗುಂದ ಜನತೆ ಮೊದಲಿನಿಂದಲೂ ಹೋರಾಡುತ್ತ ಬಂದಿದ್ದಾರೆ. ನರಗುಂದ ಹೋರಾಟದ ಪರಂಪರೆಗೆ ಮೂರು ಆಯಾಮಗಳಿವೆ. ನರಗುಂದ ಕಂಡ ಪ್ರಥಮ ಸ್ವಾಂತಂತ್ರ್ಯಕ್ಕಾಗಿ ೧೫೦ ವರ್ಷ ತಲುಪಿದೆ ಮತ್ತು ರೈತ ಬಂಡಾಯವು ೨೫ ವಸಂತಗಳನ್ನು ಪೂರೈಸಿದೆ.

ನರಗುಂದ ಕಂಡ ಎರಡನೇ ಬಂಡಾಯವೆಂದರೆ ೧೯೮೦ ಜುಲೈ ೨೧ರ ರೈತ ಬಂಡಾಯ. ಈ ಪ್ರದೇಶದ ಕೃಷಿ ಭೂಮಿ ಜವುಳುತ್ತಿದ್ದು ಒಂದೆಡೆಯಾದರೆ ಹತ್ತಿ ಬೆಲೆ ಒಮ್ಮೆಲೆ ಕುಸಿದು ರೈತರು ಸಂಕಷ್ಟಕ್ಕಿಡಾದ ಸಂದರ್ಭದಲ್ಲಿ ಬ್ಯಾಂಕುಗಳ ಸಾಲದ ವಿಷಯ, ನೀರಿನ ಕರ, ಅಭಿವೃದ್ಧಿ ಕರ ಮನ್ನಾ ಮಾಡುವಂತೆ ರೈತರು ಸರಕಾರಕ್ಕೆ ಮನವಿ ಸಲ್ಲಿಸಿದರು. ಅಧಿಕಾರಿಗಳು ಒರಟುತನ ರೈತರ ಹೋರಾಟಕ್ಕೆ ದಾರಿ ಮಾಡಿಕೊಟ್ಟಿತು. ಈ ಹೋರಾಟದಲ್ಲಿ ಚಿಕ್ಕನರಗುಂದದ ರೈತ ವೀರಪ್ಪ ಕಡ್ಲಿಕೊಪ್ಪ ಪ್ರಾಣ ಕಳೆದುಕೊಂಡು ಹುತಾತ್ಮನಾದನು. ನಂತರ ನರಗುಂದದ ಜನತೆ ಮೂರನೇ ಬಂಡಾಯಕ್ಕೆ ಸಜ್ಜಾಗುತ್ತಿದ್ದಾರೆ.[೪೭] ಕಳಸಾಬಂಡೂರಿ ನಾಲಾ ಯೋಜನೆಗಾಗಿ ರೈತಜನ ಹೋರಾಟದ ಹಾದಿ ತುಳಿಯುತ್ತಿದ್ದಾರೆ. ಆದರೆ ಮಹದಾಯಿ ನದಿ ಯೋಜನೆ ರಾಜಕೀಯಕ್ಕೆ ಒಳಗಾಗುತ್ತಿರುವುದು ಇಂದಿನ ಶೋಚನಿಯ ಸಂಗತಿಯಾಗಿದೆ.

ದಂಡಾಪೂರವು ನರಗುಂದದ ಒಂದು ಭಾಗವಾಗಿದ್ದು, ನರಗುಂದದ ಪಶ್ಚಿಮ ದಿಕ್ಕಿನಲ್ಲಿ ಈ ಕೆರೆಯು ಕಂಡುಬಂದಿದ್ದು, ಇದು ಅಲ್ಲಿನ ಜನರ ಜೀವನಾಡಿಯಾಗಿದೆ. ಕ್ರಿ.ಶ. ೯೧೮ರ ನಾಲ್ಕನೇ ಗೋವಿಂದನ ಶಾಸನದಲ್ಲಿ[೪೮] ಧೋರನ (ಪಲ್ಲಕೇತನ ವಂಶದ ಧೋರ) ವಿನಂತಿಯ ಮೇರೆಗೆ ೧೨ಮತ್ತರ ಭೂಮಿಯನ್ನು ಕೆರೆಗಾಗಿ ಮನ್ನಾವಿ ಕೊಡುತ್ತಾನೆ. ಬ್ರಾಹ್ಮಣರ ವಿವಾಹದ ಸಂದರ್ಭದಲ್ಲಿ ಈ ಕೆರೆಗೆ ಮೂರು ದ್ರಮ್ಮ, ಶೂದ್ರರ ಮದುವೆಯಲ್ಲಿ ಒಂದು ದ್ರಮ್ಮ, ಪ್ರಾಯಿಶ್ಚಿತವಾಗಿ ಇವೆಲ್ಲವುಗಳನ್ನು ಪೆರ್ಗರೆಗೆ ಆದಾಯವೆಂದು ನಿರ್ಧರಿಸಲಾಯಿತು. ಕೇಸಬ್ಬೆಯ ಎರಡು ಮತ್ತರ ಭೂಮಿಯನ್ನು ದಾನಬಿಟ್ಟ ಪ್ರಸ್ತಾಪವಿದೆ. ಈ ಕೆರೆ ನನ್ನವಿಡಂಗನಿಂದ ನಿರ್ಮಿಸಲ್ಪಟ್ಟಿದೆ. ಇದಲ್ಲದೇ ಬೇರೆ ಬೇರೆ ವರ್ಗದ ಜನರಿಂದ ಹಣದ ದಾನವನ್ನು ನೀಡಲಾಯಿತೆಂದು ಈ ಶಾಸನದಿಂದ ತಿಳಿದುಬರುತ್ತದೆ. ಈ ಕೆರೆಗೆ ದಕ್ಷಿಣ ದಿಕ್ಕಿನ ಗುಡ್ಡದ ಮೇಲೆ ಬಿದ್ದ ಮಳೆ ನೀರು ಇಳಿಜಾರಿನ ಪ್ರದೇಶದಡೆಗೆ ನೀರು ಹರಿದು ಬಂದು ನಿಲ್ಲುವಂತೆ ನಿರ್ಮಿಸಿದ್ದಾರೆ. ಕೆರೆಯ ದಕ್ಷಿಣ ದಿಕ್ಕಿಗೆ ನೀರು ಒಳಗೆ ಬರಲು ಕಲ್ಲಿನಿಂದ ಕಟ್ಟಡವನ್ನು ನಿರ್ಮಾಣ ಮಾಡಿರುತ್ತಾರೆ. ಏರಿಯ ಒಳಭಾಗವು ಕಲ್ಲಿನ ಕಟ್ಟಡವನ್ನು ಹೊಂದಿದ್ದು, ಹೊರಭಾಗವು ಮಣ್ಣಿನಿಂದ ನಿರ್ಮಿಸಿರುತ್ತಾರೆ. ಈ ಕೆರೆಯ ನೀರನ್ನು ಪೂರ್ವದಲ್ಲಿ ನೀರಾವರಿಗೆ ಉಪಯೋಗಿಸುತ್ತಿದ್ದಿರಬೇಕು, ಆದರೆ ಪ್ರಸ್ತುತವಾಗಿ ಈ ನೀರನ್ನು ಕುಡಿಯುವುದಕ್ಕೆ

ಮತ್ತು ದಿನನಿತ್ಯದ ಕಾರ್ಯಗಳಿಗೆ ಬಳಸುತ್ತಿದ್ದಾರೆ. ಕೆರೆಯ ನೈರುತ್ಯ ದಿಕ್ಕಿನ ದಂಡೆಯಲ್ಲಿ ಪ್ರಾಚೀನ ಕಾಲದ ಈಶ್ವರ ದೇವಾಲಯವು ಕಂಡುಬರುವುದರಿಂದ ಮತ್ತು ಶಾಸನ ಉಲ್ಲೇಖಗಳು ದೊರೆಯವುದರಿಂದ ಇದು ಪ್ರಾಚೀನ ಕೆರೆ ಎಂದು ಗುರುತಿಸಬಹುದು.

**ಚಿಂಚಲಿಯ ಗೋಸಾಸಿ ಕೆರೆ :**

ಗ್ರಾಮ – ಚಿಂಚಲಿ

ಅಚ್ಚುಕಟ್ಟು ಪ್ರದೇಶ – ೬.೦ (ಹೆ)

ಜಲಾವೃತ ಪ್ರದೇಶ – ೯.೫೦(ಹೆ)

ಕೆರೆಯ ಸಾಮರ್ಥ್ಯ – ೯.೦೨(mcft)

ಏರಿಯ ಉದ್ದ – ೩೮೫ ಮೀಟರ್.

ಏರಿಯ ಎತ್ತರ – ೩.೫ ಮೀಟರ್.

ಏರಿಯ ಮೇಲ್ಭಾಗದ ಅಗಲ – ೩.೦೦ ಮೀ.

ಚಿಂಚಲಿ ಗ್ರಾಮವು ಗದಗ ಜಿಲ್ಲೆಯ ಗದಗ ತಾಲೂಕಿನ ಒಂದು ಗ್ರಾಮ. ಮುಳಗುಂದ ದಿಂದ ಉತ್ತರಕ್ಕೆ ೦೮ ಕಿ.ಮೀ ಜಿಲ್ಲಾಕೇಂದ್ರದಿಂದ ನೈರುತ್ಯಕ್ಕೆ ೨೩ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮವನ್ನು ಪ್ರಾಚೀನ ಶಾಸನಗಳಲ್ಲಿ 'ಚಿಂಚಲ' ಎಂದು ಉಲ್ಲೇಖಗೊಂಡಿದ್ದು ಹಿಂದೆ ಬೆಳ್ವೊಲ–೩೦೦ಕ್ಕೆ ಸೇರಿದ್ದು ೫೬ ಮಹಾಜನರನ್ನು ಹೊಂದಿದ್ದ ಅಗ್ರಹಾರವಾಗಿತ್ತು. ಇಲ್ಲಿಂದ ಈವರೆಗೆ ಒಟ್ಟು ೬ ಶಾಸನಗಳು ವರದಿಯಾಗಿದ್ದು, ಇವುಗಳಲ್ಲಿ ರಾಷ್ಟ್ರಕೂಟ ಅಮೋಘವರ್ಷನ ಕ್ರಿ.ಶ. ೮೭೩ರ ಶಾಸನದಲ್ಲಿ ಗೋಸಹಸ್ರ ದಾನದ ಬಗ್ಗೆ ಮತ್ತು ಕೆರೆಯ ಬಗ್ಗೆ ತಿಳಿಸಿದರೆ. ಕ್ರಿ.ಶ. ೮೯೭ರ ವೀರಗಲ್ಲು ಶಾಸನದಲ್ಲಿ ಗೊಲ್ಲೆಯವರ ಮಗಳು ಕಾಳಬ್ಬೆ, ವೀರಗಲ್ಲು ನಿಲ್ಲಿಸಿದ ವಿಷಯವನ್ನು ತಿಳಿಸುತ್ತದೆ. ರಾಷ್ಟ್ರಕೂಟರ ಕಾಲದ ಇಮ್ಮಡಿ ಕೃಷ್ಣನ ಕ್ರಿ.ಶ. ೯೦೪ರ ಶಾಸನದಲ್ಲಿ ಬೆಳ್ವೊಲ–೩೦೦ನ್ನು ಆಳುತ್ತಿದ್ದಾಗ ದೇವಾಲಯಕ್ಕೆ ದಾನ ಬಿಟ್ಟ ವಿಷಯ ಹೇಳಿದರೆ,[೨೯] ಕರಿದೇವರ ಗುಡಿಯ ಮುಂದಿರುವ ಕ್ರಿ.ಶ. ೧೦೬೯ರ ಶಾಸನ[೩೦] ಮಣಸಂದ್ರದ ದೇವಣ್ಣನು ನಾಗೇಶ್ವರ ದೇವರಿಗೆ ತೋಟವನ್ನು ದಾನ ನೀಡಿದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ. ೭೯೫ರ ೧ನೇ ಅಮೋಘವರ್ಷನ ಶಾಸನದಲ್ಲಿ[೩೧] ಈ ಕೆರೆಯನ್ನು ಒಬ್ಬ ಖಾಸಗಿ ವ್ಯಕ್ತಿ ಮತ್ತು ೫೬ ಮಹಾಜನರಿಗೆ ಪಾದ ಪ್ರಕ್ಷಾಳವನ್ನು ಮಾಡಿ ಗೋಸಾಸವನ್ನು, ಕೆರೆಯನ್ನು ಮತ್ತು ಒಂದು ಉದ್ಯಾನವನ್ನು ನಿರ್ಮಿಸಿದ್ದನ್ನು ದಾಖಲಿಸುತ್ತದೆ. ಈ ಕೆರೆ ನೀರಿಗೆ ಸುಂಕವನ್ನು ಬಿಡಲಾಗಿದೆ. ಈ ಬೆಳ್ವೊಲ ಪ್ರದೇಶವು ದೇವಣ್ಣನ ಆಳ್ವಿಕೆಗೆ ಒಳಪಟ್ಟಿತ್ತು.

ಗ್ರಾಮದಿಂದ ಉತ್ತರ ದಿಕ್ಕಿಗೆ ಕೆರೆ ಕಂಡುಬಂದಿದ್ದು, ಇದು ಮೂರು ಕಡೆಗೆ ಗುಡ್ಡವನ್ನು ಆವರಿಸಿದ್ದು ಒಂದು ಕಡೆ ಮಾತ್ರ ಏರಿಯನ್ನು ಒಳಗೊಂಡಿದೆ. ಈ ಕೆರೆಗೆ ಪೂರ್ವಾಭಿಮುಖವಾಗಿ ತೂಬನ್ನು ಅಳವಡಿಸಿದ್ದು, ಈಗ ಕೆರೆ ಬಹಳ ಕನಿಷ್ಠ ಮಟ್ಟದಿಂದ ಕೂಡಿದೆ. ಇದರ ತಳಭಾಗವು ಕಲ್ಲಿನ ತಳಪಾಯ ಹೊಂದಿದ್ದರಿಂದ ಮತ್ತು ಪಕ್ಕದಲ್ಲಿ ಕಲ್ಲಿನ ಗುಡ್ಡವಿರುವುದರಿಂದ ಕೆರೆಯಲ್ಲಿಯೇ

ಕಲ್ಲಿನ ಗಣಿಗಾರಿಗೆ ನಡೆಯುತ್ತಿದೆ. ಇದರ ಏರಿಯು ಕಲ್ಲಿನಿಂದ ನಿರ್ಮಿಸಿದ್ದು ಅದೂ ಕೂಡ ಹಾಳಾಗಿದೆ. ಇದು ಸುಮಾರು ೧೦ ರಿಂದ ೧೫ ಎಕರೆ ಕ್ಷೇತ್ರವನ್ನು ಹೊಂದಿದೆ. ಈ ಕೆರೆಯು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಒಳಪಟ್ಟಿದ್ದು ಇದನ್ನು ಜೀರ್ಣೋದ್ಧಾರ ಮಾಡಿದರೆ ಇನ್ನೂ ಹೆಚ್ಚಿನ ಜಲಸಂಗ್ರಹ ಮಾಡಬಹುದು.

**ಕಲ್ಯಾಣ ಚಾಲುಕ್ಯರ ಕಾಲದ ಕೆರೆಗಳು :**

**ಪೇಠಾಲೂರ ಕೆರೆ :**

| | |
|---|---|
| ಗ್ರಾಮ - ಪೆಠಾಲೂರು | ಅಚ್ಚುಕಟ್ಟು ಪ್ರದೇಶ - ೩೬೪.೦೦(ಹೆ) |
| ಜಲಾವೃತ ಪ್ರದೇಶ - ೧೦೪.೦೦(ಹೆ) | ಕೆರೆಯ ಸಾಮರ್ಥ್ಯ - ೧೦೫.೦೦(mcft) |
| ಏರಿಯ ಉದ್ದ - ೭೦೦ ಮೀ. | ಏರಿಯ ಎತ್ತರ - ೪.೫ ಮೀ. |
| ಏರಿಯ ಮೇಲ್ಭಾಗದ ಅಗಲ - ೨.೦೫ಮೀ. | ತೂಬಿನ ಸಂಖ್ಯೆ - ೨ |
| ಎಡದಂಡೆ ಕಾಲುವೆ ಉದ್ದ - ೬.೦೦ ಮೀ. | ಬಲದಂಡೆ ಕಾಲುವೆ ಉದ್ದ - ೭.೦೦ ಮೀ, |

ಮುಂಡರಗಿ ತಾಲೂಕಿನ ಪೇಠಾಲೂರು ಗ್ರಾಮವು ತಾಲೂಕು ಕೇಂದ್ರದಿಂದ ವಾಯವ್ಯಕ್ಕೆ ೧೧ ಕಿ.ಮೀ ಮತ್ತು ಗದಗ ಜಿಲ್ಲಾಕೇಂದ್ರದಿಂದ ೩೧ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮವನ್ನು ಶಾಸನಗಳಲ್ಲಿ 'ಆಲೂರು', 'ಮಾಳದಾಲೂರು' ಎಂದು ಉಲ್ಲೇಖಿತಗೊಂಡಿದ್ದು, ಹಿಂದೆ ಮಾಸವಾಡಿ-೧೪೦ಕ್ಕೆ ಸೇರಿತ್ತು. ಈವರೆಗೆ ಆರು ಶಾಸನಗಳು ವರದಿಯಾಗಿದ್ದು, ಕ್ರಿ.ಶ. ೧೦೬೮ರ[೫೨] ಶಾಸನದಿಂದ ಇದು ಒಂದು ಅಗ್ರಹಾರವಾಗಿದ್ದು ೩೦೦ ಮಹಾಜನರನ್ನು ಹೊಂದಿತ್ತೆಂಬ ಅಂಶ ತಿಳಿದುಬರುತ್ತದೆ. ಈ ಕೆರೆಯು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ. ಕ್ರಿ.ಶ. ೧೧೯೧ರ[೫೩] ಶಾಸನವು ಲೆಂಕಸುರಿಗೆಯ ಮಹಾದೇವಯ್ಯ ಮಾಳದ ಆಲೂರಿನಲ್ಲಿ ತಾನೇ ನಿರ್ಮಿಸಿದ ತ್ರೈಪುರುಷ ದೇವಾಲಯಕ್ಕೆ ಬಿಟ್ಟ ೩೦೦ ಮತ್ತರ ಭೂಮಿಯನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಆಲೂರು ಕೆರೆಯ[೫೪] ಬಗ್ಗೆ ಮಾಹಿತಿ ನೀಡುವ ಆರನೇ ವಿಕ್ರಮಾದಿತ್ಯನ ಸಂಬಂಧಿಯೊಬ್ಬ ಭೂಮಿ ಮತ್ತು ಚಿನ್ನವನ್ನು ಹಾಗೂ ಮನೆಯ ನಿವೇಶನಗಳನ್ನು, ಛತ್ರ, ವಿದ್ಯಾಶಾಲೆಗಳ ಜೊತೆಯಲ್ಲಿಯೇ ಕೆರೆ ಮತ್ತು ಕೊಳದ ನಿರ್ವಹಣೆಗಾಗಿ ಮಹಾಜನರಿಗೆ ದಾನ ನೀಡಿರುವುದು ಕಂಡುಬಂದಿದೆ.

ಈ ಕೆರೆಯು ಒಟ್ಟು ೨೫೭ ಎಕರೆ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕೆರೆಯ ಒಟ್ಟು ಉದ್ದ ೪೨೦೦ ಅಡಿ ಹಾಗೂ ಕೋಡಿಯ ಉದ್ದ ೭೫೦ ಫೂಟು ಮತ್ತು ನೀರು ನಿಲ್ಲುವ ಸಾಮರ್ಥ್ಯ ೮೨೦೦ (ಎಂ.ಸಿ.ಎಫ್.ಟಿ) ಆಗಿದೆ. ಒಟ್ಟು ನೀರಿನಿಂದ ಕೆರೆ ಸುತ್ತಮುತ್ತಲ ೯೦೦ ಎಕರೆ ಕೃಷಿಗೆ ನೀರನ್ನು ಒದಗಿಸುತ್ತದೆ.

ಏರಿಯು ಕೆರೆಯಿಂದ ದಕ್ಷಿಣಕ್ಕೆ ಇದೆ. ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳಭಾಗವು ದಪ್ಪದಪ್ಪ ಕಲ್ಲುಗಳಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಯಾಗಿದೆ.

ಏರಿಗೆ ಹೊಂದಿಕೊಂಡಂತೆ ಎರಡು ತೂಬುಗಳಿದ್ದು ಏರಿಯಿಂದ ೪ ಮೀ. ದೂರದಲ್ಲಿ ೨ ತೂಬುಗಳನ್ನು ಇರಿಸಲಾಗಿದೆ. ಅವುಗಳನ್ನು ಗಚ್ಚುಗಾರೆ, ಸಿಮೆಂಟು ಮತ್ತು ಕಬ್ಬಿಣ ಲೋಹದ ವಸ್ತುಗಳಿಂದ ಅಳವಡಿಸಲಾಗಿದೆ. ತೂಬುಗಳಿಗೆ ಅನುಗುಣವಾಗಿ ಎರಡು ಕಾಲುವೆಗಳು ಇವೆ. ಇವುಗಳಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿಯುತ್ತದೆ. ಕೆರೆಯ ಏರಿಯ ಮೇಲೆ ಪೂರ್ವಾಭಿಮುಖವಾಗಿ ಒಂದು ಗರ್ಭಗೃಹವಿದ್ದು, ವಡಗಟ್ಟಿ ಹನುಮಪ್ಪ, ಈಶ್ವರ, ಬಸವಣ್ಣನ ಮೂರ್ತಿಶಿಲ್ಪಗಳನ್ನು ಇರಿಸಲಾಗಿದೆ. ಇವುಗಳಿಂದ ಈ ಕೆರೆಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ತಿಳಿದುಬರುತ್ತದೆ.

ಕೆರೆಯ ಪಕ್ಕದಲ್ಲಿ ಗೋವಿಂದಗೌಡರ ತೆಂಗಿನ ತೋಟವು ೨೦೦ ಎಕರೆಗಿಂತ ಮೇಲ್ಪಟ್ಟಿದೆ. ಈ ಕೆರೆಯು ಬತ್ತಿದಾಗ ಸುತ್ತಮುತ್ತಲಿನ ಗ್ರಾಮಗಳು ಕೆರೆ ಮಧ್ಯದಲ್ಲಿ ತಮ್ಮ ತಮ್ಮ ಜಾಗಗಳನ್ನು ಗುರುತಿಸಿಕೊಂಡು ಅಲಸಂದಿ, ಹೆಸರು ಬೆಳೆಗಳನ್ನು ಬೆಳೆದುಕೊಳ್ಳುತ್ತಾರೆ. ಹೀಗೆ ಈ ಕೆರೆಯಿಂದ ಇಲ್ಲಿನ ಜನರಿಗೆ ಆರ್ಥಿಕವಾಗಿ ಸದೃಢವಾಗಲು ಸಹಾಯಕವಾಗಿದೆ.

**ಸವಡಿ ಕೆರೆ :**

| | |
|---|---|
| | ಜಲಾವೃತ ಪ್ರದೇಶ - ೩.೦೦(ಹೆ) |
| ಗ್ರಾಮ - ಸವಡಿ | ಅಚ್ಚುಕಟ್ಟು ಪ್ರದೇಶ - ೪.೦೦ ಹೆಕ್ಟೇರ್ |
| ಜಲಾನಯನ ಪ್ರದೇಶ - ೪೦.೦೦ ಹೆಕ್ಟೇರ್ | ಕೆರೆಯ ಸಾಮರ್ಥ್ಯ - ೨೦.೭೦(mcft) |
| ಏರಿಯ ಉದ್ದ - ೧೧೦೦ ಮೀಟರ್. | ಏರಿಯ ಎತ್ತರ - ೬.೫ ಮೀಟರ್. |
| ಏರಿಯ ಮೇಲ್ಭಾಗದ ಅಗಲ - ೫ ಮೀಟರ್. | |

ರೋಣ ತಾಲೂಕಿನ ಸವಡಿಯು ಪ್ರಾಚೀನ ಶಾಸನಗಳಲ್ಲಿ 'ಸಯ್ಯಡಿ', 'ಸೈವಿಡಿ' ಎಂದೆಲ್ಲ ಉಲ್ಲೇಖಿತಗೊಂಡಿದ್ದು ರೋಣದಿಂದ ನೈರುತ್ಯಕ್ಕೆ ೭ ಕಿ.ಮೀ ದೂರದಲ್ಲಿದೆ. ಹಿಂದೆ ಇದು ಕಿಸುಕಾಡು-೭೦ಕ್ಕೆ ಸೇರಿದಂತೆ ಕಂಡುಬರುತ್ತದೆ. ಕ್ರಿ.ಶ. ೬೮೩ರ ಲಕ್ಷ್ಮೇಶ್ವರ ಶಾಸನದಲ್ಲಿ[೫೫] ಹಡಗಲಿ ಗ್ರಾಮದ ಸೀಮೆಯನ್ನು ಉಲ್ಲೇಖಿಸುವಾಗ ಸಯ್ಯಡಿಗೆ ಹೋದ ದಾರಿ ಎಂಬ ಪ್ರಯೋಗ ವಿರುವುದರಿಂದ ಈ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ಈವರೆಗೆ ಮೂರು ಶಾಸನಗಳು ವರದಿಯಾಗಿವೆ. ಈ ಗ್ರಾಮವನ್ನು ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಆಳ್ವಿಕೆ ಮಾಡಿದ ಬಗ್ಗೆ ನಮಗೆ ಶಾಸನಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ.

ಕೆರೆಯು ಗ್ರಾಮದಿಂದ ನೈರುತ್ಯ ದಿಕ್ಕಿಗೆ ಕಂಡುಬಂದಿದ್ದು, ಏರಿಯು ಕೆರೆಯಿಂದ ಪಶ್ಚಿಮಕ್ಕೆ ಇದೆ. ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳಭಾಗವು ದಪ್ಪದಪ್ಪ ಕಲ್ಲುಗಳಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆಯಾಗಿದೆ. ಇದು ಸರಣಿಕೆರೆಯಾಗಿದ್ದು, ಏರಿಯ

ಬಲಭಾಗದಲ್ಲಿ ೨.೫ ಮೀ. ಉದ್ದದ ಕೋಡಿಯನ್ನು ಏರಿಗೆ ಹೊಂದಿಕೊಂಡತೆ ಇದನ್ನು ಗಚ್ಚುಗಾರೆ, ಸಿಮೆಂಟುನಿಂದ ನಿರ್ಮಿಸಿದ್ದಾರೆ. ಇದರ ಮೂಲಕ ಹೆಚ್ಚಾದ ನೀರು ಹಳ್ಳಕ್ಕೆ ಸೇರಲ್ಪಡುತ್ತದೆ. ಮುಂದೆ ಇದೇ ನೀರು ರೋಣದ ಕೆರೆಗೆ ಬಂದು ಸೇರುತ್ತದೆ.

**ಕುಂಟೋಜಿ ಕೆರೆ :**

| | |
|---|---|
| ಗ್ರಾಮ - ಕುಂಟೋಜಿ | ಅಚ್ಚುಕಟ್ಟು ಪ್ರದೇಶ - ೧೭೪.೧೫ ಹೆಕ್ಟೇರ್ |
| ಜಲಾವೃತ ಪ್ರದೇಶ - ೨೨.೦೦ ಹೆಕ್ಟೇರ್ | ಕೆರೆಯ ಸಾಮರ್ಥ್ಯ - ೧೦.೧೧ (mcft) |
| ಏರಿಯ ಉದ್ದ - ೫೧೫.೦೦ ಮೀ. | ಏರಿಯ ಎತ್ತರ - ೭ ಮೀ. |
| ಏರಿಯ ಮೇಲ್ಭಾಗದ ಅಗಲ-೧.೮೦ ಮೀ. | ತೂಬಿನ ಸಂಖ್ಯೆ - ೨ |
| ನೀರಿನ ಹೊರಹರಿವು - ೧೨೬೪.೦೦ಕ್ಯೂಸೆಕ್ಸ್ | ಬಲದಂಡೆ ಕಾಲುವೆ ಉದ್ದ - ೨,೩೦ ಮೀ. |

ಗದಗದಿಂದ ಈಶಾನ್ಯಕ್ಕೆ ೭೦ ಕಿ.ಮೀ ದೂರದಲ್ಲಿ ಕುಂಟೋಜಿ ಕೆರೆಯಿದೆ. ಗ್ರಾಮದಿಂದ ನೈರುತ್ಯಕ್ಕೆ ೧.೫ ಕಿ.ಮೀ ಅಂತರದಲ್ಲಿದೆ. ಈ ಕೆರೆಯು ಕ್ರಿ.ಶ. ೧೦೭೨ರ ಶಾಸನದಲ್ಲಿ[೫೬] ೨ನೇ ಸೋಮೇಶ್ವರನ ಕಾಲವದಿಯಲ್ಲಿ ನಿರ್ಮಾಣಗೊಂಡಿದೆ. ಕೆರೆಯನ್ನು ನೀರಾವರಿಗಾಗಿ ನಿರ್ಮಿಸಿದ್ದು, ಅಲ್ಲಿರುವ ಭೌಗೋಳಿಕ ಪರಿಸರ ಮತ್ತು ಜಲಾನಯನ ಪ್ರದೇಶವನ್ನು ಗಮನಿಸಿ ಬೆಟ್ಟದ ಕೆಳಗೆ ಕೆರೆಯನ್ನು ನಿರ್ಮಿಸಿದ್ದು, ಈ ಬೆಟ್ಟದ ಮೇಲೆ ಬಿದ್ದ ನೀರು ಕೆರೆಯಲ್ಲಿ ಸಂಗ್ರಹವಾಗುವಂತೆ ನಿರ್ಮಿಸಿದ್ದಾರೆ. ಕೆರೆಯಿಂದ ಪೂರ್ವ ದಿಕ್ಕಿಗೆ ಏರಿ ಇದ್ದು, ಪಶ್ಚಿಮ ಹಾಗೂ ದಕ್ಷಿಣ ದಿಕ್ಕಿಗೆ ಗಜೇಂದ್ರಗಡ ಬೆಟ್ಟ ಇದೆ. ಕೆರೆಯ ಪ್ರದೇಶ ೨೨ ಹೆಕ್ಟೇರ್ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕೋಡಿಯ ಉದ್ದ ೧೪ ಮೀ. ಎತ್ತರ ೩ ಮೀ. ಆಗಿದೆ. ಒಟ್ಟು ೬೦೦ ಹೆಕ್ಟರ್ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ.

ಏರಿಯು ಕೆರೆಯ ಪೂರ್ವ ದಿಕ್ಕಿಗೆ ಇದ್ದು. ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳಭಾಗವನ್ನು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಏರಿಗೆ ಹೊಂದಿಕೊಂಡಂತೆ ಒಂದು ತೂಬು ಇದೆ. ಆದರೆ ಅದು ಈಗ ಬಿದ್ದು ಹೋಗಿದ್ದರಿಂದ ಅದರ ಕೆಲವು ಅವಶೇಷಗಳು ಮಾತ್ರ ಕಂಡುಬರುತ್ತವೆ. ಇದನ್ನು ಗಚ್ಚು ಗಾರೆ ಸಿಮೆಂಟನಿಂದ ಮತ್ತು ಕಬ್ಬಿಣ ಲೋಹದ ವಸ್ತುಗಳಿಂದ ತಯಾರಿಸಿರುತ್ತಾರೆ.

ತೂಬಿನ ಅನುಗುಣವಾಗಿ ಕಾಲುವೆ ಇದ್ದು, ಇದರಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿಯುತ್ತದೆ. ಕೆರೆಯ ಏರಿಯ ಮೇಲೆ ಚನ್ನಬಸವಣ್ಣನ ಗದ್ದುಗೆಯನ್ನು ಒಳಗೊಂಡು ಒಂದು ಗರ್ಭಗೃಹವನ್ನು ನಿರ್ಮಿಸಿದ್ದಾರೆ. ಇದರ ಬಲಭಾಗದಲ್ಲಿ ನಂದಿ ಮತ್ತು ನಾಗಶಿಲ್ಪಗಳು ಕಂಡುಬರುತ್ತವೆ. ಆದ್ದರಿಂದ ಈ ಸ್ಥಳ ಚಾರಿತ್ರಿಕವಾಗಿ ಪ್ರಸಿದ್ಧಿಯನ್ನು ಪಡೆದಿದೆ. ಕೆರೆಯ ದಂಡೆಯ

ಮೇಲೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ ಪ್ರಾಚ್ಯಾವಶೇಷಗಳು ಕಂಡುಬರುವುದರಿಂದ ಈ ಪ್ರದೇಶವನ್ನು ಇವರ ಕಾಲಘಟ್ಟಕ್ಕೆ ಹೋಲಿಸಬಹುದಾಗಿದೆ. ಶಾಸನಗಳಲ್ಲಿ ಈ ಕೆರೆಯನ್ನು ಬಿ.ಚಿ. ಶೆಟ್ಟಿಯ ಕೆರೆ ಎಂದು ಉಲ್ಲೇಖಗೊಂಡಿದೆ. ಈ ಕೆರೆ ಎರಡನೆಯ ಸೋಮೇಶ್ವರನ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುವುದು ಈ ಮೇಲಿನ ಶಾಸನ ಆಧಾರದಿಂದ ತಿಳಿದುಬರುತ್ತದೆ.

ಪ್ರಸ್ತುತವಾಗಿ ಇಲ್ಲಿಯ ರೈತರು ಕೆರೆಯ ನೀರನ್ನು ಹೊಲಗಳಿಗೆ ನೀರು ಹಾಯಿಸಲು ವಿದ್ಯುತ್ ಪಂಪ್‌ಸೆಟ್‌ಗಳನ್ನು ಅಳವಡಿಸಿಕೊಂಡಿರುತ್ತಾರೆ. ಇದರಿಂದ ಜೋಳ, ಶೇಂಗಾ, ಸೂರ್ಯಕಾಂತಿ, ತೊಗರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇದರಿಂದ ಅಲ್ಲಿನ ಜನರಿಗೆ ಆರ್ಥಿಕವಾಗಿ ಸಬಲರಾಗಲು ಈ ಕೆರೆಯು ಉಪಯುಕ್ತವಾಗಿದೆ. ಇಂದು ಈ ಕೆರೆಯು ದುರಸ್ತಿಯಾಗದೇ ಏರಿಯ ಮತ್ತು ತೂಬಿನ ಕಲ್ಲುಗಳು ಅಲ್ಲಲ್ಲಿ ಬಿದ್ದುಹೋಗಿವೆ. ಏರಿಯ ಮೇಲೆ ಓಡಾಡಲು ಸಾಧ್ಯವಾಗದಂತೆ ಮುಳ್ಳಿನ ಗಿಡಗಳು ಬೆಳೆದಿವೆ. ಈ ಕೆರೆಯು ನೀರಾವರಿ ಇಲಾಖಾ ವ್ಯಾಪ್ತಿಯಲ್ಲಿ ಬರುವುದರಿಂದ ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳು ಗಮನಹರಿಸಬೇಕು; ಇಲ್ಲದಿದ್ದರೆ ಮುಂದಿನ ಪೀಳಿಗೆಗೆ ಕೆರೆಯೇ ಇಲ್ಲದಂತಾಗುತ್ತದೆ. ಇಲ್ಲಿಯ ಜನರ ಕೃಷಿ ಜೀವನ ನಶಿಸಬಹುದು.

**ಉಣಚಗೇರಿ ಕೆರೆ :**

| | |
|---|---|
| ಗ್ರಾಮ – ಉಣಚಗೇರಿ | ಅಚ್ಚುಕಟ್ಟು ಪ್ರದೇಶ – ೪೦.೦೦ (ಹೆ) |
| ಜಲಾವೃತ ಪ್ರದೇಶ – ೫೫.೫೮ (ಹೆ) | ಕೆರೆಯ ಸಾಮರ್ಥ್ಯ – ೧೫.೦೦ (mcft) |
| ಏರಿಯ ಉದ್ದ – ೯೮೭ ಮೀ. | ಏರಿಯ ಎತ್ತರ – ೯.೨ ಮೀ. |
| ಏರಿಯ ಮೇಲ್ಭಾಗದ ಅಗಲ – ೨.೦೦ ಮೀ. | |

ಉಣಚಗೇರಿ ಗದಗ ಜಿಲ್ಲೆಯ ರೋಣ ತಾಲೂಕಿನ ಒಂದು ಗ್ರಾಮ. ಇದು ತಾಲೂಕಿನಿಂದ ದಕ್ಷಿಣಕ್ಕೆ ೫ ಕಿ.ಮೀ ಅಂತರದಲ್ಲಿದೆ. ಉಣಚಗೇರಿ ಕೆರೆಯು ಗ್ರಾಮದಿಂದ ಪೂರ್ವ ದಿಕ್ಕಿಗೆ ಕಂಡುಬಂದಿದ್ದು; ಕಲ್ಯಾಣ ಚಾಲುಕ್ಯರ ಎರಡನೇ ಸೋಮೇಶ್ವರನ ಕ್ರಿ.ಶ. ೧೦೭೨ರ ಶಾಸನದಲ್ಲಿ[೫೭] ಈ ಕೆರೆಯನ್ನು ರೊಳ್ಳದ ಕೆರೆ, ಅಕ್ಕನಕೆರೆ ಎಂದು ಕರೆಯಲಾಗಿದೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಮುಖವಾಗಿ ನೀರನ್ನು ಕುಡಿಯುವುದಕ್ಕೆ ಬಳಸುತ್ತಿರಬಹುದು. ಈ ಕೆರೆಯ ನಾಲ್ಕು ಕಡೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಪೂರ್ವ ದಿಕ್ಕಿನಲ್ಲಿ ಏರಿಯನ್ನು ಸೀಳು ಮಾಡಿ ನೀರು ಒಳಗೆ ಬರಲು ಮಾರ್ಗವನ್ನು ನಿರ್ಮಿಸಿದ್ದಾರೆ. ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳಭಾಗ ದಪ್ಪದಪ್ಪ ಕಲ್ಲುಗಳನ್ನು ಅಳವಡಿಸಿ ಕಟ್ಟಲಾಗಿದೆ. ಕೆರೆಯ ಉತ್ತರ ಭಾಗಕ್ಕೆ ಒಂದು ಸಣ್ಣ ಕೋಡಿ ಇದ್ದು, ಅದರ ಮೂಲಕ ಹೆಚ್ಚುವರಿಯಾದ ನೀರು ಹೊರ ಹರಿದು ಹೋಗುತ್ತದೆ. ಕೆರೆಯ ನೀರು ಹೆಚ್ಚಾಗಿ ಮೀನು ಸಾಕಾಣಿಕೆಗೆ, ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಬಳಕೆಯಾಗುತ್ತಿದೆ.

ಕೆರೆಯ ಈಗಿನ ಸ್ಥಿತಿಯು ಕನಿಷ್ಠವಾಗಿದ್ದು, ಏರಿಯ ಕಲ್ಲುಗಳು ಅಲ್ಲಲ್ಲಿ ಬಿದ್ದು ಹೋಗಿವೆ. ಪಶ್ಚಿಮ ದಿಕ್ಕಿನ ಏರಿಯ ಮೇಲೆ ಓಡಾಡಲು ಸಾಧ್ಯವಾಗದಷ್ಟು ಮಟ್ಟಿಗೆ ಮುಳ್ಳಿನ ಕಂಟಿಗಳು ಬೆಳೆದಿವೆ. ಈ ಕೆರೆಯು ನೀರಾವರಿ ವ್ಯಾಪ್ತಿಯಲ್ಲಿ ಬರುವುದರಿಂದ ಸಂಬಂಧಪಟ್ಟ ಅಧಿಕಾರಿಗಳು ಗಮನಹರಿಸಬೇಕು ಇಲ್ಲದಿದ್ದರೆ ಇದು ಅವನತಿಯತ್ತ ಸಾಗುತ್ತಿದೆ.

**ಕೋಟುಮಚಗಿ ಕೆರೆ :**

| | |
|---|---|
| ಗ್ರಾಮ – ಕೋಟುಮಚಗಿ | ಅಚ್ಚುಕಟ್ಟು ಪ್ರದೇಶ – ೨೦೦.೦೦ (ಹೆ) |
| ಜಲಾವೃತ ಪ್ರದೇಶ – ೧೬.೦೦ (ಹೆ) | ಕೆರೆಯ ಸಾಮರ್ಥ್ಯ – ೪೦.೦೦ (mcft) |
| ಏರಿಯ ಉದ್ದ – ೩೪೦ ಮೀ. | ಏರಿಯ ಎತ್ತರ – ೯.೨ ಮೀ. |
| ಏರಿಯ ಮೇಲ್ಭಾಗದ ಅಗಲ – ೨.೬ ಮೀ. | |

ಕೋಟುಮಚಗಿ ಗ್ರಾಮವು ಗದಗ ಜಿಲ್ಲೆಯ ಗದಗ ತಾಲೂಕಿನ ಒಂದು ಗ್ರಾಮ. ಇದು ತಾಲೂಕು ಕೇಂದ್ರದಿಂದ ಪೂರ್ವಕ್ಕೆ ೨೨ ಕಿ.ಮೀ ಅಂತರದಲ್ಲಿದೆ. ಈ ಗ್ರಾಮಕ್ಕೆ ಸಂಬಂಧಿಸಿದ ಕ್ರಿ.ಶ. ೧೬ನೇ ಶತಮಾನದ ಶಾಸನಗಳಲ್ಲಿ ಉಮಚಗಿ ಎಂದಷ್ಟೆ ಉಲ್ಲೇಖಿತಗೊಂಡಿದ್ದು, ನಂತರದಲ್ಲಿ ಕೋಟೆ ಕೂಡಿಕೊಂಡು ಕೋಟುಮಚಗಿ ರೂಢಿಗೆ ಬಂದಿರಬಹುದು. ಉಂಚಗ್ಯೆ, ಉಮಚಗೆಯ್, ಉಮಚಗಿ ಆಗಿರುವಂತೆ ತೋರುತ್ತದೆ. ಉಂಚಗೆಯ್ ಎಂದರೆ ಎತ್ತರವಾದ ಸ್ಥಳ ಎಂದರ್ಥ.[೫೮] ಈ ಗ್ರಾಮದ ಎತ್ತರದ ಸ್ಥಳದಲ್ಲಿ ಇರುವುದರಿಂದ ಈ ಹೆಸರು ಬಂದಿರಬಹುದು. ಪ್ರಾಚೀನ ಕಾಲದಲ್ಲಿ ನರೇಗಲ್ಲ-೧೨ಕ್ಕೆ ಸೇರಿದ ಈ ಊರು ೧೦೪ ಮಹಾಜನರನ್ನು ಒಳಗೊಂಡ ಪ್ರಮುಖ ವಿದ್ಯಾಕೇಂದ್ರವಾಗಿತ್ತೆಂಬ ಅಂಶ ಅನೇಕ ಶಾಸನಗಳಿಂದ ತಿಳಿದುಬಂದಿದೆ. ಒಟ್ಟು ೬ ಶಾಸನಗಳು ಈವರೆಗೆ ಪ್ರಕಟಗೊಂಡಿದ್ದು, ಅವುಗಳಲ್ಲಿ ಮುಖ್ಯವಾಗಿ ಕ್ರಿ.ಶ. ೧೦೯೯ರ ಶಾಸನದಲ್ಲಿ ಮಹಾಸಾಮಂತ ಅನಂತ ಪಾಳ ಅರಸನು ಸ್ವಯಂಭೂ ಸೋಮೇಶ್ವರ ದೇವರಿಗೆ ದಾನ ನೀಡಿದ ವಿಷಯದ ಪ್ರಸ್ತಾಪವಿದೆ. ಕ್ರಿ.ಶ. ೧೧೪೨ರ ಮತ್ತೊಂದು ಶಾಸನದಲ್ಲಿ ದಂಡನಾಯಕ ಕೆಸಿರಾಜರಯ್ಯನು ಸ್ವಯುಂಭು ಸೋಮೇಶ್ವರ ದೇವರಿಗೆ ಸ್ಥಳದ ಸುಂಕವನ್ನು ದಾನಬಿಟ್ಟ ಅಂಶವನ್ನು ತಿಳಿಸುತ್ತದೆ. ಕ್ರಿ.ಶ. ೧೬ನೇ ಶತಮಾನದ ಶಾಸನವೊಂದು ಉಮಚಗಿ ಗ್ರಾಮವನ್ನು ಸದಾಶಿವರಾಯ ಸಮುದ್ರ ಎಂದು ಪುನರ್‌ನಾಮಕರಣ ಮಾಡಿದ ವಿಷಯವನ್ನು ತಿಳಿಸುತ್ತದೆ.[೫೯] ಕ್ರಿಶ ೧೧೫೪ರ ಶಾಸನದಲ್ಲಿ[೬೦] ಈ ಕೆರೆಯು ಎರಡನೆಯ ತೈಲಪನ ಕಾಲದಲ್ಲಿ ನಿರ್ಮಾಣಗೊಂಡಿದ್ದು, ಶಾಸನಗಳಲ್ಲಿ ಇದನ್ನು ದೇವಿಂಗೆರೆ ಎಂದು ಉಲ್ಲೇಖವಾಗಿದೆ. ದೇವಾಲಯದ ಮುಂದೆ ವಿಶಾಲವಾದ ಸರಣಿ ಕೆರೆಗಳು ಉಂಟು.

ಗ್ರಾಮದಿಂದ ವಾಯುವ್ಯ ದಿಕ್ಕಿಗೆ ಕೆರೆ ಕಂಡುಬಂದಿದ್ದು, ಅತ್ಯಂತ ವಿಶಾಲವಾದ ಮೂರು ಸರಣಿ ಕೆರೆಗಳಿಂದ ಚೌಕಾಕಾರವಾಗಿವೆ. ಈಗ ಕೆರೆಯು ಒತ್ತುವರಿಯಾಗುತ್ತಿದ್ದು, ಹೂಳೆತ್ತುವ

೯೦

ಕಾರ್ಯ ಮಾಡದೇ ತನ್ನ ಆಳ ಮತ್ತು ಅಗಲವಾದ ವಿಸ್ತೀರ್ಣವನ್ನು ಕಳೆದುಕೊಳ್ಳುತ್ತಿದೆ. ಕೆರೆಯ ತೂಬು ಕಸಕಡ್ಡಿ ಮತ್ತು ಗಿಡಗಳಿಂದ ಬೆಳೆದಿದ್ದು ಕೆರೆಯನ್ನು ಜೀರ್ಣೋದ್ಧಾರ ಮಾಡಿದರೆ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಸಾರವಾಗಿ ಹೆಚ್ಚುತ್ತಿರುವ ಅಚ್ಚುಕಟ್ಟು ಪ್ರದೇಶಕ್ಕೆ ಸಮರ್ಪಕವಾದ ನೀರನ್ನು ಒದಗಿಸಲು ಸಹಾಯಕವಾಗುತ್ತದೆ. ಮತ್ತು ಆರ್ಥಿಕವಾಗಿ ತೊಂದರೆಗೊಳಗಾದ ಜನರ ಕೃಷಿ ಉತ್ಪಾದನೆಯನ್ನು ಹೆಚ್ಚಿಸಿಕೊಂಡು ಜೀವನವನ್ನು ಸುಧಾರಿಸಿಕೊಳ್ಳಲು ಸಹಾಯಕವಾಗುತ್ತದೆ. ಈ ಕೆರೆಯ ನೀರು ಮೀನುಗಾರಿಕೆ, ಬಟ್ಟೆ ತೊಳೆಯಲು ಮತ್ತು ಜಾನುವಾರುಗಳಿಗೆ ಬಳಕೆಯಾಗುತ್ತಿದ್ದು, ಇದರ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ಇಲಾಖೆಯವರು ಮತ್ತು ಗ್ರಾಮಸ್ಥರು ಇದರ ಕಡೆಗೆ ಗಮನಹರಿಸಬೇಕು.

**ಲಕ್ಕುಂಡಿ ಸೋಮನ ಕೆರೆ:**

| | |
|---|---|
| ಗ್ರಾಮ–ಲಕ್ಕುಂಡಿ | ಅಚ್ಚುಕಟ್ಟು ಪ್ರದೇಶ–೮೦೦.೦೦ (ಹೆ) |
| ಜಲಾವೃತ ಪ್ರದೇಶ–೨೫.೦೦ (ಹೆ) | ಕೆರೆಯ ಸಾಮರ್ಥ್ಯ–೫೦.೦೦ (mcft) |
| ಏರಿಯ ಉದ್ದ– ೫೪೦ ಮೀ. | ಏರಿಯ ಎತ್ತರ–೮.೨ ಮೀ. |
| ಏರಿಯ ಮೇಲ್ಭಾಗದ ಅಗಲ–೪.೬ ಮೀ. | |

ಗದಗದಿಂದ ಆಗ್ನೇಯಕ್ಕೆ ೧೨ ಕಿ.ಮೀ ದೂರದಲ್ಲಿರುವ ಲಕ್ಕುಂಡಿಯು ಐತಿಹಾಸಿಕ ಗ್ರಾಮವಾಗಿದೆ. ಇದು ೧೪,೨೨೦ ಎಕರೆಗಳಷ್ಟು ವಿಸ್ತೀರ್ಣವಾಗಿದ್ದು ೧೮,೦೦೦ ಜನಸಂಖ್ಯೆಯನ್ನು ಹೊಂದಿದೆ. ಇದು ಕಪ್ಪು ಹಾಗೂ ಕೆಂಪುಮಣ್ಣಿನಿಂದ ಕೂಡಿದ ಭೂಮಿ ಆಗಿದೆ. ವಾರ್ಷಿಕ ಸರಾಸರಿ ೪೫ರಿಂದ ೧೦೫ ಸೆಂ.ಮೀ ಮಳೆಯಾಗುತ್ತದೆ. ಪ್ರಾಚೀನ ಕಾಲದಲ್ಲಿ ಲಕ್ಕುಂಡಿಯು ಪ್ರಮುಖ ಧಾರ್ಮಿಕ ಹಾಗೂ ಶಿಕ್ಷಣ ಕೇಂದ್ರವಾಗಿತ್ತು. ಇದು ದಕ್ಷಿಣ ಭಾರತದ ಶಿಲ್ಪಕಲಾ ಮುಕುಟಮಣಿ ಎಂದು ಹೆಸರಾಗಿದೆ. ಹೀಗಾಗಿ ಪ್ರಾಚೀನ ಘನತೆಯನ್ನು ಹಾಗೂ ಪರಂಪರೆಯನ್ನು ಎತ್ತಿ ತೋರಿಸುವ ಪ್ರದೇಶವಾಗಿದೆ. ಲಕ್ಕುಂಡಿಗೆ 'ಲೊಕ್ಕಿಗುಂಡಿ' ಎಂಬ ಹೆಸರು ಇತ್ತು; ಲೊಕ್ಕಿ (ಲಕ್ಕಿ) ಎಂಬ ಸಸ್ಯ ಇಲ್ಲಿ ಹೆಚ್ಚಾಗಿ ಬೆಳೆಯುತ್ತಿತ್ತು. ಹಾಗೆಯೇ ಇಲ್ಲಿ ಗುಂಡಿಗಳು (ತಗ್ಗು ಪ್ರದೇಶ) ಕೂಡ ಹೆಚ್ಚಾಗಿದ್ದುದರಿಂದ 'ಲೊಕ್ಕಿಗುಂಡಿ' ಎಂಬ ಹೆಸರು ಬಂದಿದೆ. ಬೆಳ್ವೊಲ–೩೦೦ ಹಾಗೂ ಮಾಸವಾಡಿ–೧೪೦ರ ಆಡಳಿತದ ಪ್ರಾಂತ್ಯಗಳಲ್ಲಿ ಇದು ಜನಪ್ರಿಯವಾಗಿತ್ತು. ಲಕ್ಕುಂಡಿಗೆ 'ಲೊಕ್ಕಿಗೊಂಡಿ' ಎಂಬ ಹೆಸರಿತ್ತು ಎಂಬುದಕ್ಕೆ ಇಲ್ಲಿಯ ಶಾಸನಗಳೇ ಸಾಕ್ಷಿ. ಕ್ರಿ.ಶ. ೧೧೭೪ರ ಶಾಸನದಲ್ಲಿ[೧೧] ರಾಯಮುರಾರಿ ಸೋವಿದೇವನ ಕಾಲದ ಶಾಸನವೊಂದು ಈ ಗ್ರಾಮವನ್ನು ಶ್ರೀ ರಾಮನ ದತ್ತಿ ಅಗ್ರಹಾರ ಹಾಗೂ ಪ್ರಾಚೀನ ಹೆಸರು ಲೊಕ್ಕಿಗುಂಡಿ ಎಂಬ ಬಗ್ಗೆ ಸ್ಪಷ್ಟವಾದ ಉಲ್ಲೇಖಗಳಿವೆ.

ಕಲ್ಯಾಣ ಚಾಲುಕ್ಯರ ಕಾಲವು ಸಂಪತ್ತಿಗೆ ಶ್ರೀಮಂತ ಸಾಮ್ರಾಜ್ಯವಾಗಿತ್ತು. ಆರ್ಥಿಕವಾಗಿ ಸದೃಡರಾಗಲು ಅಂತರ್ಜಲದ ಕೊರತೆ ಮತ್ತು ಅವಶ್ಯಕತೆಯ ಬಗ್ಗೆ ದೂರದೃಷ್ಟಿ ಹೊಂದಿದ್ದ

ಚಾಲುಕ್ಯ ಚಕ್ರವರ್ತಿಗಳು ಸಾಮಾಂತರಸರು, ಸಚಿವರು ಹಾಗೂ ವರ್ತಕರು ಲಕ್ಕುಂಡಿಯಲ್ಲಿ ಬಾವಿ, ಸತ್ರ, ಅರವಟ್ಟಿಗೆ, ಕೆರೆ ಹಾಗೂ ಕಾಲುವೆಗಳನ್ನು ನಿರ್ಮಿಸಿ ಕೃಷಿಯನ್ನು ಅಭಿವೃದ್ಧಿಪಡಿಸಿ ಸಬಲರಾಗುವ ಈ ನಿಟ್ಟಿನಲ್ಲಿ ಸಾಗಿದ ಚಾಲುಕ್ಯರು ಲಕ್ಕುಂಡಿಯಲ್ಲಿ ನೂರೊಂದು ದೇಗುಲಗಳನ್ನು ನಿರ್ಮಿಸಿದಂತೆ ನೂರೊಂದು ಬಾವಿಗಳನ್ನು, ಮೂರು ಕೆರೆಗಳನ್ನು ನಿರ್ಮಿಸಿದ್ದಾರೆ. ಇದು ರಾಜ್ಯಾಧೀನ ಕೃಷಿಕ ರೈತವರ್ಗಕ್ಕೆ ಹಾಗೂ ರಾಜ್ಯದ ಏಳಿಗೆಗೆ ಅನುಕೂಲವಾಗಿತ್ತು. ಪ್ರಸ್ತುತ ಉಳಿದಿರುವ ಕೆರೆಗಳ ಬಗ್ಗೆ ಈ ಕೆಳಗಿನಂತೆ ವಿವರಿಸಲಾಗಿದೆ.

ಲಕ್ಕುಂಡಿಯಲ್ಲಿರುವ ಕೆರೆ ಈಗ ಸುಸ್ಥಿತಿಯಲ್ಲಿದ್ದರೂ ಅದು ಪ್ರಾಚೀನ ಕೆರೆಯಾಗಿದೆ. ಇದನ್ನು ಅತ್ತಿಮಬ್ಬೆಯು ನಿರ್ಮಾಣ ಮಾಡಿರುವ ಸಾಧ್ಯತೆ ಇದೆ. ಸೋಮನ ಕೆರೆಯು ಲಕ್ಕುಂಡಿಯಿಂದ ವಾಯುವ್ಯ ಭಾಗದಲ್ಲಿ ಇದೆ. ಕೆರೆಯ ಏರಿಯ ಕಟ್ಟಡವನ್ನು ಕಟ್ಟಿಸಲು ಸೋಮಯಾಜಿಯು ಐದು ಗದ್ಯಾಣಗಳನ್ನು ದಾನ ನೀಡಿದ ಬಗ್ಗೆ ಉಲ್ಲೇಖವಿದೆ.[೬] ಈ ಕೆರೆಯ ಏರಿಯು ಪೂರ್ವ ಪಶ್ಚಿಮ ಮತ್ತು ದಕ್ಷಿಣ ದಿಕ್ಕಿಗೆ ಇದ್ದು ಪೂರ್ವ ದಿಕ್ಕಿನ ಏರಿಯು ಕನಗಿನಹಾಳಕ್ಕೆ ರಸ್ತೆಯಾಗಿ ಮಾರ್ಪಟ್ಟಿದೆ. ದಕ್ಷಿಣದ ಏರಿಯು ರಾಷ್ಟ್ರೀಯ ಹೆದ್ದಾರಿ ೬೩ರ ಪಕ್ಕದಲ್ಲಿ ನಿರ್ಮಿಸಲ್ಪಟ್ಟಿದೆ. ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳಭಾಗವನ್ನು ಪಾಲಿಸ್ ಮಾಡಿದ ಉದ್ದವಾದ ಕಲ್ಲುಗಳನ್ನು ಅಳವಡಿಸಿ ಕಟ್ಟಲಾಗಿದೆ. ಕೆರೆಯ ಉತ್ತರ ಭಾಗಕ್ಕೆ ಒಂದು ಸಣ್ಣ ಕೋಡಿ ಇದ್ದು, ಅದರ ಮೂಲಕ ಹೆಚ್ಚುವರಿಯಾದ ನೀರು ಹರಿದುಹೋಗುತ್ತದೆ. ಕೆರೆಯ ನೀರು ಹೆಚ್ಚಾಗಿ ಮೀನು ಸಾಕಾಣಿಕೆಗೆ, ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಬಳಕೆಯಾಗುತ್ತಿದೆ. ಕೆರೆಯ ಈಗಿನ ಸ್ಥಿತಿಯು ಕನಿಷ್ಠವಾಗಿದ್ದು ಏರಿಯ ಕಲ್ಲುಗಳು ಅಲ್ಲಲ್ಲಿ ಬಿದ್ದು ಹೋಗಿವೆ. ಪಶ್ಚಿಮ ದಿಕ್ಕಿನ ಏರಿಯ ಮೇಲೆ ಓಡಾಡಲು ಸಾಧ್ಯವಾಗದಷ್ಟು ಮಟ್ಟಿಗೆ ಮುಳ್ಳಿನ ಕಂಟಿಗಳು ಬೆಳೆದಿವೆ. ಈ ಕೆರೆಯು ನೀರಾವರಿ ವ್ಯಾಪ್ತಿಯಲ್ಲಿ ಬರುವುದರಿಂದ ಸಂಬಂಧಪಟ್ಟ ಅಧಿಕಾರಿಗಳು ಗಮನಹರಿಸಬೇಕು ಇಲ್ಲದಿದ್ದರೆ ಕೆರೆ ಅವನತಿಯತ್ತ ಸಾಗುತ್ತದೆ.

**ಲಕ್ಕುಂಡಿಯ ಹಾಲ್ಕುಂಡ ಬಸವಣ್ಣನ ಕೆರೆ ಹಾಗೂ ಕಬಲಗಿತ್ತಿ ಕೆರೆ:**

ಗ್ರಾಮ–ಲಕ್ಕುಂಡಿ

ಅಚ್ಚುಕಟ್ಟು ಪ್ರದೇಶ–೮.೫ (ಹೆ)

ಜಲಾನಯನ ಪ್ರದೇಶ–೨೦.೦೦ ಹೆಕ್ಟೇರ್‌ಗಳು.

ಕೆರೆಯ ಸಾಮರ್ಥ್ಯ–೧೦.೦೦

ಏರಿಯ ಉದ್ದ– ೪೦೦ ಮೀಟರ್

ಏರಿಯ ಎತ್ತರ –೧೦.೦ ಮೀಟರ್.

ಏರಿಯ ಮೇಲ್ಭಾಗದ ಅಗಲ–೨.೫ ಮೀಟರ್.

ಈ ಕೆರೆಯನ್ನು ಕ್ರಿ.ಶ. ೧೧೭೪ರ ಶಾಸನದಲ್ಲಿ[೭] ರಾಜಯ್ಯನೆಂಬುವನು ಮಾಡಿಸಿದನೆಂದು ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರ ವ್ಯಕ್ತ ಕೆರೆಗಳಿಂದ ಪ್ರತಿಯೊಂದು ಬಾವಿಗಳಿಗೆ ನಾಲೆಯನ್ನು

ಜೋಡಿಸಿ ಬಾವಿಗಳು ಬತ್ತದಂತೆ ನೋಡಿಕೊಳ್ಳುತ್ತಿದ್ದರು. ಇವರು ಅಂತರ್ಜಲ ರಕ್ಷಣೆಯ ನೀತಿಯಲ್ಲಿ ಬಹು ಖ್ಯಾತಿಯನ್ನು ಹೊಂದಿದ್ದರು. ಮತ್ತು ಆರ್ಥಿಕವಾಗಿ ಸದೃಢರಾಗಿದ್ದರು. ಪ್ರಸ್ತುತವಾಗಿ ಇದು ಜೀರ್ಣೋದ್ಧಾರದಲ್ಲಿದ್ದು, ಕೆರೆಯ ಪೂರ್ವ ಮತ್ತು ಉತ್ತರ ದಿಕ್ಕಿನ ಏರಿಗಳಿಗೆ ಗ್ರಾನೈಟ್ ಕಲ್ಲುಗಳನ್ನು ಬಳಸಿ ಕೆರೆ ಸುತ್ತಲೂ ಕಬ್ಬಿಣದ ತಂತಿಬೇಲಿಯನ್ನು ಅಳವಡಿಸಿ, ಕೆರೆಯ ಸುತ್ತೂಲು ಸೋಲಾರ ದೀಪಗಳಿಂದ ಅಲಕೃತಗೊಳಿಸಿದ್ದಾರೆ. ಬೋಟಿಂಗ್ ವ್ಯವಸ್ಥೆ ಕೂಡ ಪ್ರಗತಿ ಹಂತದಲ್ಲಿದೆ. ಕೆರೆಯ ಸುತ್ತಲಿನ ಪ್ರದೇಶವು ಒಕ್ಕಲಿಗ, ಲಿಂಗಾಯತ, ಕುರುಬ ಮತ್ತು ಗಾಣಿಗ ಸಮುದಾಯದವರಿಗೆ ಸೇರಿದ್ದು ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿದೆ. ಹಾಗೆಯೇ ಈ ಕೆರೆಯು ಜಾನುವಾರುಗಳಿಗೆ ಮತ್ತು ಮೀನು ಸಾಕಾಣಿಕೆಗೆ ಉಪಯುಕ್ತವಾಗಿದೆ. ಕೆರೆಯ ಬಲಗಡೆಯ ಏರಿಯ ಮೇಲೆ ಕಲ್ಯಾಣ ಚಾಲುಕ್ಯರ ಕಾಲದ ಹಾಲ್ಗುಂಡ ಬಸವಣ್ಣನ ದೇವಾಲಯವು ಇದೆ. ಇದು ಪೂರ್ವಾಭಿಮುಖವಾಗಿದ್ದು, ಗರ್ಭಗೃಹದಲ್ಲಿ ಲಿಂಗು ನವರಂಗದಲ್ಲಿ ೬ ಅಡಿಯ ಎತ್ತರದ ಮಲಗಿದ ನಂದಿಯ ಶಿಲ್ಪವಿದೆ. ಕೆರೆಯ ನೀರಿನಿಂದ ಗ್ರಾಮದ ಜನರು ದಿನನಿತ್ಯದ ಕೆಲಸಕಾರ್ಯಗಳಿಗೆ ಮತ್ತು ಜಾನುವಾರುಗಳಿಗೆ ಕುಡಿಸಲು ಉಪಯೋಗಿಸುತ್ತಾರೆ. ಇದರ ಸಮೀಪದಲ್ಲಿರುವ ಮಾಳಿ ಬಾವಿ, ಕನ್ಯಾರ ಬಾವಿ ಮತ್ತು ಮಜ್ಜನ ಬಾವಿಗಳು ಸದಾ ಅಂತರ್ಜಲದಿಂದ ಕೂಡಿರುತ್ತವೆ.

**ಗದುಗಿನ ಹಸಿರು ಕೆರೆ**

ಗ್ರಾಮ– ಗದಗ

ಅಚ್ಚುಕಟ್ಟು ಪ್ರದೇಶ–೮.೫ (ಹೆ)

ಜಲಾನಯನ ಪ್ರದೇಶ–೧೯.೦೦ ಹೆಕ್ಟೇರ್‌ಗಳು.

ಕೆರೆಯ ಸಾಮರ್ಥ್ಯ–೧೦.೦೦

ಏರಿಯ ಉದ್ದ– ೩೦೦ ಮೀಟರ್

ಏರಿಯ ಎತ್ತರ–೧೦.೦ ಮೀಟರ್.

ಏರಿಯ ಮೇಲ್ಭಾಗದ ಅಗಲ–೨.೮ ಮೀಟರ್.

ಗದಗ ಪಟ್ಟಣವು ಗದಗ ಜಿಲ್ಲೆಯ ಗದಗ ತಾಲೂಕಿನ ಒಂದು ಪಟ್ಟಣ. ಈ ಕೆರೆಯು ತ್ರಿಕೋಟೇಶ್ವರ ದೇವಸ್ಥಾನದ ಹಿಂದಿನ ಭಾಗದಲ್ಲಿ ಕಂಡುಬರುತ್ತದೆ. ಈ ಕೆರೆಯ ದಂಡೆಯ ಮೇಲೆ ಶ್ರೀ ಭಲ್ಲೇಶ್ವರ, ಲಕ್ಷ್ಮೀನಾರಾಯಣ, ಹನುಮಂತ ದೇವಾಲಯಗಳು ಕಂಡುಬರುತ್ತವೆ. ಇವುಗಳ ವಾಸ್ತುಶೈಲಿಯನ್ನು ಗಮನಿಸಿದಾಗ ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣವಾಗಿದೆ. ಈ ಕೆರೆಯ ಒಳಭಾಗದಲ್ಲಿ ನಾಲ್ಕು ಕಡೆಗೆ ಕಲ್ಲಿನ ಕಟ್ಟಡವನ್ನು ಒಳಗೊಂಡಿದ್ದು, ಹೊರಭಾಗವು ಮಾತ್ರ ಮಣ್ಣಿನ ಏರಿಯನ್ನು ಒಳಗೊಂಡಿದೆ. ಇಲ್ಲಿ ವಿಜಯದಶಮಿಯ ದಿವಸ ಈ ಕೆರೆಯಲ್ಲಿ ಲಕ್ಷ್ಮೀನಾರಾಯಣ ಜಲ ರಥೋತ್ಸವ ನಡೆಯುತ್ತಿತ್ತು. ಇದನ್ನು ಪಂಚ ಕಮೀಟಿಯವರು ನಡೆಸಿಕೊಂಡು ಬರುತ್ತಿದ್ದರು. ಆದರೆ ಪ್ರಸ್ತುತ ದಿನಮಾನಗಳಲ್ಲಿ ಈ ಕೆರೆಗೆ ನೀರು ಸಂಗ್ರಹವಾಗದೇ ಇರುವುದರಿಂದ ಯಾವುದೇ ಆಚರಣೆಗಳು ನಡೆಯುತ್ತಿಲ್ಲ. ಆದರೆ ಈ ಕೆರೆ ಇಂದು ಬಹಳ ಕನಿಷ್ಟ ಮಟ್ಟದಲ್ಲಿದೆ. ಇದರ ಯಾವುದೇ ಭಾಗಗಳು ಉಳಿದುಕೊಂಡು ಬಂದಿಲ್ಲ. ಇದು ಸುಮಾರು ೪ ರಿಂದ ೫ ಎಕರೆ ವಿಸ್ತೀರ್ಣವನ್ನು ಹೊಂದಿರಬಹುದು.

## ಬೆಟಗೇರಿ ಕೆರೆ

ಬೆಟಗೇರಿ ಗದಗ ಜಿಲ್ಲೆಯ ಅವಳಿ ನಗರಗಳಲ್ಲಿ ಒಂದಾದ ಉಪನಗರ. ಗದಗ ಪ್ರದೇಶದಲ್ಲಿನ ಶಾಸನಗಳು ಗದಗದೊಂದಿಗೆ ಬೆಟಗೇರಿಯನ್ನು ಉಲ್ಲೇಖಿಸುತ್ತವೆ. ಕ್ರಿ.ಶ. ೯೧೮ರ ಶಾಸನದಲ್ಲಿ ಗದಗಗಿಂತಲೂ ಬೆಟಗೇರಿಯ ದೊಡ್ಡ ಅಗ್ರಹಾರವಾಗಿದ್ದು, ಮತ್ತು ಗದುಗಿನಲ್ಲಿ ೭೨ ಜನ ವಿದ್ವಾಂಸರಿದ್ದರೆ ಬೆಟಗೇರಿಯಲ್ಲಿ ೨೦೦ ಜನ ವಿದ್ವಾಂಸರಿದ್ದರೆಂದು ಉಲ್ಲೇಖಿಸುತ್ತದೆ. ಹಳೆಯ ಕಾಲದ ಬೆಟಗೇರಿಯ ವರ್ಣನೆಯನ್ನು ಕ್ರಿ.ಶ. ೧೧೦೬ರ ಶಿಲಾಶಾಸನದಲ್ಲಿ[೬೪]

ವನಧಿಪರೀತಿ ಭೂತಳದೊಳಪ್ಪುವ ಬೆಳ್ವೊಲ ದೇಶವೆಂಬ ಕಾ
ಮಿನಿಯ ಘನೋನ್ನಿತ ಸ್ತನಮನೋಹರ ಹಾರಮಾಬ್ರಹ್ಮನಿತಂ
ಬನಿಯ ಕಟೀಕ ಸ್ಥಿತ ವಿರಾಜಿತ ಶಾಂತಿಯನೆಯ್ದು ಸೇರಿತ್ತಮ
ಟ್ಟನೆ ನೆರೆತಾಳ್ದ ಬಟ್ಟಗೆರೆ ನೆಟ್ಟನೆಕಣ್ಣೆಸದೊಪ್ಪ ತೋರುಗುಂ

ಅಂದರೆ ಕಡಲು ಒಡೆಯದಾದ ಭೂ ಮಂಡಲದಲ್ಲಿ ಬೆಳ್ವಲ ದೇಶ ಎಂಬುದೊಂದು ಸುಂದರ ಕನ್ಯಾರತ್ನ. ಅವಳ ವಿನಿತ ಕೂಚಾಗ್ರಹಾರವೆಂಬಂತೆ, ಅವಳ ಜಘನಕ್ಕೆ ಅಲಂಕೃತವಾದ ಕಟಿಸೂತ್ರದಂತೆ, ಬಟ್ಟಕೆರೆ ನೋಡುವವರ ಕಣ್ಮನ ಶೋಭಿಸುತ್ತಿತ್ತು ಎಂದು ಉಲ್ಲೇಖವಾಗಿದೆ. ಒಟ್ಟಿನಲ್ಲಿ ಬೆಟಗೇರಿ ಕೆರೆ ನೆಲ-ಜಲ ಸೂಚಕ ಸ್ಥಳವಾಗಿದ್ದು ನೀರಿನ ಸೌಲಭ್ಯ ಒದಗಿಸುವ ಪ್ರದೇಶವಾಗಿತ್ತೆಂದು ತಿಳಿದುಬರುತ್ತದೆ. ಆದರೆ ಇಂದು ಇದು ಜನವಸತಿ ಪ್ರದೇಶವಾಗಿದ್ದರಿಂದ ಕೆರೆಯ ಕುರುಹುಗಳು ಕಂಡುಬರುವುದಿಲ್ಲ.

ಇತ್ತೀಚಿನ ದಶಕಗಳಲ್ಲಿ ಬೆಟಗೇರಿಯಲ್ಲಿ ಕೈಮಗ್ಗದ ಕೆಲಸ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದರಿಂದ ಬಟ್ಟೆಯ ನೇಯ್ಗೆಯ ಹಿನ್ನೆಲೆಯಲ್ಲಿ ಬಟ್ಟಗೇರಿ ಬೆಟಗೇರಿ ಎಂದು ಕರೆಯಲ್ಪಡುತ್ತಿರುವ ಈ ಊರು ಗದುಗಿನೊಂದಿಗೆ ಸೇರಿ ಗದಗ-ಬೆಟಗೇರಿ ಎಂಬ ಸಂಯುಕ್ತ ಪದವಾಗಿದೆ.

ಭಟ್ಟಕೆರೆ>ಭಟ್ಟರಕೆರೆ ಅಂದರೆ ಬ್ರಾಹ್ಮಣರ ಕೆರೆಯಾಗಿದ್ದಿರಬಹುದು. ಇನ್ನೊಂದು ವಾದದ ಪ್ರಕಾರ ಈ ಕೆರೆಯನ್ನು ನೋಡಲು ಬಟ್ಟಲು ಆಕಾರದಂತೆ ದುಂಡಾಗಿದ್ದರಿಂದ ಬಟ್ಟಲುಕೆರೆ ಅಥವಾ ಭಟ್ಟಕೆರೆ>ಬೆಟಗೇರಿ ಎಂದು ಹೆಸರು ಬಂದಿರಬಹುದು. ಇದು ಬಟ್ಟೆಗಳನ್ನು ಸ್ವಚ್ಛಗೊಳಿಸುವ ಕೆರೆಯಾಗಿತ್ತೆಂದು ಅಲ್ಲಿಯ ಜನರ ಅಭಿಪ್ರಾಯವಾಗಿದೆ.[೬೫]

ಆರನೇ ವಿಕ್ರಮಾದಿತ್ಯನ ಕ್ರಿ.ಶ. ೧೧೧೬ರ ಶಾಸನವು[೬೬] ಬಟ್ಟಕೆರೆಯನ್ನೇ ಉಲ್ಲೇಖಿಸಿದೆ. ಬಟ್ಟಕೆರೆಯಲ್ಲಿ ೨೦೦ ಮಹಾಜನರು ಧರ್ಮವನ್ನೇ ಸುರಕ್ಷಿತವಾಗಿ ಮಾಡುತ್ತಿದ್ದರೆಂದೇ ತಿಳಿದುಬರುತ್ತದೆ. ಗದುಗಿನ ಜೊತೆಯಲ್ಲಿ ಉಚ್ಚರಿಸುವ ಬೆಟಗೇರಿಯನ್ನು ಬಟ್ಟಕೆರೆ ಎಂದು ಕ್ರಿ.ಶ. ೮೯೩ರ ರಾಷ್ಟ್ರಕೂಟರ ಎರಡನೇ ಕೃಷ್ಣನ ಕಾಲದ ಶಾಸನದಲ್ಲಿ 'ಬಟ್ಟಕೆರೆ' ಎಂದರೆ ವೃತ್ತಾಕಾರವಾದ ಕೆರೆ ಎಂದು

ಅರ್ಥೈಸಬಹುದು. ಇನ್ನೊಂದು ರಾಷ್ಟ್ರಕೂಟರ ಇಂದ್ರನ ಕ್ರಿ.ಶ. ೯೧೮ರ ಶಾಸನದಲ್ಲಿ[೬೬] ಬೆಟಗೇರಿಯನ್ನು 'ಬಟ್ಟಕೆರೆ' ಎಂದೇ ಉಲ್ಲೇಖಿತಗೊಂಡಿದೆ.

**ರಾಜೂರು ಕೆರೆ;**

ಗ್ರಾಮ–ರಾಜೂರು

ಅಚ್ಚುಕಟ್ಟು ಪ್ರದೇಶ–೯.೫ (ಹೆ)

ಜಲಾನಯನ ಪ್ರದೇಶವು–೭೧.೫೦ ಹೆಕ್ಟೇರ್

ಕೆರೆಯ ಸಾಮರ್ಥ್ಯ–೬೫.೦೦ (mcft)

ಏರಿಯ ಉದ್ದ–೫೭೯.೦೦ ಮೀಟರ್.

ಏರಿಯ ಎತ್ತರ–೯.೦೦ ಮೀಟರ್.

ಏರಿಯ ಮೇಲ್ಭಾಗದ ಅಗಲ–೨.೪ ಮೀಟರ್.

ರಾಜೂರು ಗ್ರಾಮವು ಗದಗ ಜಿಲ್ಲೆಯ ರೋಣ ತಾಲೂಕಿನ ಐತಿಹಾಸಿಕ ಗ್ರಾಮ. ಇದು ತಾಲೂಕು ಕೇಂದ್ರದಿಂದ ಪೂರ್ವಕ್ಕೆ ೨೫ ಕಿ.ಮೀ ಅಂತರದಲ್ಲಿದೆ. ಇದರ ಗ್ರಾಮ ನಿಷ್ಪತ್ತಿ ಶಾಸನಗಳಲ್ಲಿ ರಾಜುರು, ರಾಜೂರು ಹಾಗೂ ರಾಜಪೂರು ಎಂದೆಲ್ಲಾ ಉಲ್ಲೇಖಿತಗೊಂಡಿದೆ. ಈ ಊರು ಗಜೇಂದ್ರಗಡದಿಂದ ಪಶ್ಚಿಮಕ್ಕೆ ೫ ಕಿ.ಮೀ. ದೂರದಲ್ಲಿ ರೋಣ–ಗಜೇಂದ್ರಗಢ ರಸ್ತೆಯಲ್ಲಿದೆ. ಹಿಂದೆ ಇದು ಕಿಸುಕಾಡು–೭೦ಕ್ಕೆ ಸೇರಿದ ಗ್ರಾಮವಾಗಿದ್ದು, ಇಲ್ಲಿಂದ ಈವರೆಗೆ ೭ ಶಾಸನಗಳು ವರದಿಯಾಗಿವೆ. ಇವುಗಳಲ್ಲಿ ಕಲ್ಯಾಣದ ಚಾಲುಕ್ಯ ಅರಸನಾದ ಒಂದನೆಯ ಜಗದೇಕಮಲ್ಲನ ಕಾಲದ ೧೦೩೩ರ ಶಾಸನ[೬೭] ರಾಜೂರಲ್ಲಿ ಜೋಗಗಾವುಂಡನು ಜೋಗೇಶ್ವರ ದೇವರ ಪ್ರತಿಷ್ಠೆ ಮಾಡಿಸಿ, ಊರ ಐನೂರ್ವರನ್ನು ಕರೆಸಿ, ದಾನ ಬಿಟ್ಟರೆಂದು ಹೇಳುತ್ತದೆ. ೨ನೇ ಜಗದೇಕಮಲ್ಲನ ೧೧೪೪ರ ಶಾಸನದಲ್ಲಿ[೬೮] ರಾಜಪೂರು ಪನ್ನಾಯದ ಕೇಣಿಕಾರ ಹೆಗ್ಗಡೆ ಚಂದಪ್ಪಯ್ಯ ನಾಯಕನು ಅಲ್ಲಿನ ಸ್ವಯಂಭು ಮೂಲಸ್ಥಾನ ದೇವರಿಗೆ ದಾನ ಬಿಟ್ಟ ವಿಚಾರ ಹೇಳುತ್ತದೆ. ಕ್ರಿ.ಶ. ೧೧೫೩–೫೪ರ ೨ನೇ ಜಗದೇಕಮಲ್ಲನ ಶಾಸನದಲ್ಲಿ[೬೦]

ಶ್ರೀ ಗವೇಶ್ವರದಥೆವರ್ಗ್ಗೆ ರಾಜರ ಅರವ ಅರವತ್ತೊಕ್ಕಲು ಮುಖ್ಯವಾಗಿ
ಜೋಗಗಾವುಂಡ ದೇವರ ಅಂಗಭೋಗ ಜಿರ್ನೋದ್ಧಾರರೆ ಕೂಟ್ಟ ವಿಲೆ
ಜನಬನ ಕೆರೆಂ ತೆಂಕ ಮತ್ತರು ೪ ಛತ್ರಗೆಯ ಮುಂಜಗೆರೆಯ
ದಾರಿಯಂ ಬಡಗಲು ಶ್ರೀ ಗವೇಶ್ವರದೇವರ ಕೆಇಯಂ.

ಕೆರೆಯ ಉತ್ತರ ದಿಕ್ಕಿಗೆ ಏರಿ ಇದ್ದು, ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಏರಿಯ ಒಟ್ಟು ಉದ್ದ ೫೭೯.೦೦ ಮೀಟರ್, ಎತ್ತರ ೯ಮೀ, ಏರಿಯ ಮೇಲ್ಭಾಗದ ಅಗಲ ೨.೪ ಮೀಟರ್ ಆಗಿದೆ. ಏರಿಗೆ ಹೊಂದಿಕೊಂಡಂತೆ ಒಂದು ತೂಬು ಇದೆ. ಏರಿಯಿಂದ ತೂಬಿನ ಉದ್ದ ೬ಮೀ. ನೆಲಮಟ್ಟದಿಂದ ತೂಬಿನ ಎತ್ತರ ೮ಮೀ. ತೂಬಿನ ಸುತ್ತಳತೆ ೧.೮ಮೀ. ಆಗಿದೆ. ಇದನ್ನು

ಗಚ್ಚು ಗಾರೆ ಸಿಮೆಂಟನಿಂದ ಮತ್ತು ಕಬ್ಬಿಣ ಲೋಹದ ವಸ್ತುಗಳಿಂದ ತಯಾರಿಸಿರುತ್ತಾರೆ. ತೂಬಿಗೆ ಅನುಗುಣವಾಗಿ ಕಾಲುವೆ ಇದ್ದು ಇದರಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಪರಿಯುತ್ತದೆ.

**ರೋಣ ಕೆರೆ:**

| | |
|---|---|
| ಗ್ರಾಮ-ರೋಣ | ಅಚ್ಚುಕಟ್ಟು ಪ್ರದೇಶ-೮.೫ (ಹೆ) |
| ಜಲಾನಯನ ಪ್ರದೇಶ-೭೪.೫೦ ಹೆಕ್ಟೇರ್. | ಕೆರೆಯ ಸಾಮರ್ಥ್ಯ-೮೫.೦೦ (mcft) |
| ಏರಿಯ ಉದ್ದ-೧೨೦೦.೦೦ ಮೀಟರ್ | ಏರಿಯ ಎತ್ತರ-೧೨.೦೦ ಮೀಟರ್ |
| ಏರಿಯ ಮೇಲ್ಭಾಗದ ಅಗಲ-೩.೦೦ ಮೀಟರ್ | |

ರೋಣ ಗ್ರಾಮವು ಗದಗ ಜಿಲ್ಲೆಯ ರೋಣ ತಾಲೂಕಿನ ಐತಿಹಾಸಿಕವಾದ ಪಟ್ಟಣ. ಇದು ಜಿಲ್ಲಾಕೇಂದ್ರದಿಂದ ಈಶ್ಯಾನಕ್ಕೆ ೪೦ ಕಿ.ಮೀ ಅಂತರದಲ್ಲಿದೆ. ಪ್ರಾಚೀನ ಕಾಲದಲ್ಲಿ ಪುಲಿಗೇರಿ-೩೦೦ಕ್ಕೆ ಸೇರಿದ್ದ ಇದು ೧೦೪ ಮಹಾಜನರನ್ನು ಒಳಗೊಂಡಿದ್ದ ಒಂದು ಅಗ್ರಹಾರವಾಗಿತ್ತು. ಬಾದಾಮಿಯ ಅರೇರ್ ಓಣಿ ಬಳಿಯಿರುವ ಬಂಡೆಗಲ್ಲಿನ ಮೇಲೆ ಸುಮಾರು ಕ್ರಿ.ಶ. ೭-೮ನೇ ಶತಮಾನದ ಶಾಸನದಲ್ಲಿ 'ಶ್ರೀ ರೋಣದ ಶಿವಾಲಯ' ಎಂಬ ಉಲ್ಲೇಖವಿದೆ. ಈ ಊರಿನ ಪ್ರಾಚೀನ ಹೆಸರು ದ್ರೋಣಾಪುರವೆಂದೂ, ದ್ರೋಣರು ಇಲ್ಲೇ ಗುರುಕುಲ ನಡೆಸುತ್ತಿದ್ದರೆಂದು, ದ್ರೋಣಾಚಾರ್ಯ ಗುಡಿಯಲ್ಲಿರುವ ಮೂರ್ತಿಯು ದ್ರೋಣರೆಂದು, ಅದರಿಂದ ಈ ಊರಿಗೆ ರೋಣ ಎಂಬ ಹೆಸರು ಬಂದಿರಬಹುದು.[೯]

ಈ ಕೆರೆ ಗ್ರಾಮದಿಂದ ಪಶ್ಚಿಮ ದಿಕ್ಕಿಗೆ ಇದ್ದು, ಹುಬ್ಬಳ್ಳಿಗೆ ಹೋಗುವ ರಸ್ತೆಯ ಎಡಭಾಗದಲ್ಲಿ ಇದೆ. ಈ ಕೆರೆಗೆ ನೀರು ದಕ್ಷಿಣ ದಿಕ್ಕಿನಿಂದ ಒಳಗಡೆ ಪ್ರವೇಶಿಸುತ್ತದೆ. ಇದು ಸರಣಿ ಕೆರೆಯಾಗಿದ್ದು, ಎರಡು ಕೆರೆಗಳ ಮಧ್ಯ ಎತ್ತರಮಟ್ಟದಲ್ಲಿ ಕೋಡಿಯನ್ನು ಅಳವಡಿಸಿದ್ದು ಒಂದು ಕೆರೆಯ ನೀರು ತುಂಬಿದ ಬಳಿಕ ಇನ್ನೊಂದು ಕೆರೆಗೆ ನೀರು ಬರುವ ಹಾಗೆ ನಿರ್ಮಿಸಿರುತ್ತಾರೆ. ಈಗ ಈ ಕೆರೆಯನ್ನು ಗ್ರಾಮ ಪಂಚಾಯತಿ ಮೂಲಕ ಜೀರ್ಣೋದ್ಧಾರದ ಹಂತದಲ್ಲಿದೆ. ಈ ಕೆರೆಯ ಏರಿಯು ಮಣ್ಣಿನಿಂದ ಕೂಡಿದ್ದು ಒಳಭಾಗ ದಪ್ಪ ದಪ್ಪ ಕಲ್ಲುಗಳಿಂದ ಜೋಡಿಸಿರುತ್ತಾರೆ. ಹೊರಭಾಗವು ಮಣ್ಣಿನಿಂದ ಕೂಡಿದೆ. ಕೆರೆಯ ನೀರಿನ ಆಳಕ್ಕೆ ಪ್ರವೇಶಿಸಲು ದಕ್ಷಿಣಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಪ್ರವೇಶಿಸಬಹುದು. ಕೆರೆಯ ದಂಡೆಯ ಮೇಲೆ ರಾಷ್ಟ್ರಕೂಟರ ಕಾಲದ ರಾಮಲಿಂಗ ದೇವಾಲಯವಿದ್ದು, ಇದು ಗರ್ಭಗೃಹ ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಕಾಕಾರದ ಲಿಂಗವಿದ್ದು ಅದನ್ನು ನಿತ್ಯವೂ ಪೂಜಿಸುತ್ತಾರೆ. ಚಿಕ್ಕದಾದ ಗರ್ಭಗೃಹ ಸಾದಾ ಬಾಗಿಲವಾಡವನ್ನು ಹೊಂದಿದೆ. ಅದರಲ್ಲಿ ತ್ರಿಪಟ್ಟಿಕೆಗಳನ್ನು ಕಂಡರಿಸಿದ್ದಾರೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬು ಶಿಲ್ಪವಿದೆ. ತೆರೆದ ಅಂತರಾಳವು ಚಿಕ್ಕದಾಗಿದ್ದು ಹಾಗೂ ಅದು ಎರಡು ಕಂಭಗಳನ್ನು ಹೊಂದಿರುವುದು. ಪ್ರಾಚೀನ ದ್ರೋಣಾಪುರವು (ರೋಣ) ಮಹಾ ಅಗ್ರಹಾರದ ಬಗ್ಗೆ

ಶಾಸನದಲ್ಲಿ ಉಲ್ಲೇಖಗಳು ದೊರೆಯುವುದರಿಂದ ಇದು ಬಹುಶಃ ಅಗ್ರಹಾರದ ಮಹಾಜನಗಳಿಗೆ ನಿರ್ಮಾಣ ಮಾಡಿರಬಹುದೆಂದು ಊಹಿಸಬಹುದಾಗಿದೆ.

**ಚಿಕ್ಕಹಂದಿಗೋಳ ಕೆರೆ :**

| | |
|---|---|
| ಗ್ರಾಮ- ಚಿಕ್ಕಹಂದಿಗೋಳ | ಅಚ್ಚುಕಟ್ಟು ಪ್ರದೇಶ- ೮೧೮.೦೦(ಹೆ) |
| ಜಲಾವೃತ ಪ್ರದೇಶ- ೯೯.೯೫ (ಹೆ) | ಕೆರೆಯ ಸಾಮರ್ಥ್ಯ- ೯೯.೯೯(mcft) |
| ಏರಿಯ ಉದ್ದ- ೯೮೭ ಮೀ | ಏರಿಯ ಎತ್ತರ- ೧೭ ಅಡಿ |
| ಏರಿಯ ಮೇಲ್ಭಾಗದ ಅಗಲ- ೬ ಅಡಿ | ತೂಬಿನ ಸಂಖ್ಯೆ- ೨ |
| ಎಡದಂಡೆ ಕಾಲುವೆ ಉದ್ದ-೭ ಮೀ. | ಬಲದಂಡೆ ಕಾಲುವೆ ಉದ್ದ-೪ ಮೀ. |

ಚಿಕ್ಕಹಂದಿಗೋಳ ಗದಗ ನಗರದಿಂದ ಪಶ್ಚಿಮಕ್ಕೆ ೧೬ ಕಿ.ಮೀ ದೂರದಲ್ಲಿದೆ. ಕ್ರಿ.ಶ. ೧೦೯೯ರ ಆರನೇ ವಿಕ್ರಮಾದಿತ್ಯನು ಚಿಕ್ಕಹಂದಿಗೋಳ ಶಾಸನದಲ್ಲಿ[೨] ಅಧಿಕಾರಿ ಮಾಧವನ ಮಗ ಪ್ರತಿಕಾಂತ ಚಂದನು ಕಿರಿಯ ಹಂದಿಗೋಳದಲ್ಲಿ (ಚಿಕ್ಕಹಂದಿಗೋಳ) ಕೆರೆಯನ್ನು ಕಟ್ಟಿಸಿ ಭೂಮಿ ದಾನ ನೀಡಿದ ಬಗ್ಗೆ ಉಲ್ಲೇಖ ದೊರೆಯುತ್ತದೆ,

ಈ ಕೆರೆಯು ಊರಿನಿಂದ ದಕ್ಷಿಣಕ್ಕೆ ಇದ್ದು ಇದು ಆ ಭಾಗದಲ್ಲಿ ಬೃಹತ್ತಾದ ಮತ್ತು ನೀರಾವರಿ ಸೌಲಭ್ಯಕ್ಕೆ ಅನುಕೂಲಕರವಾಗಿದೆ. ಏರಿಯು ಕೆರೆಯಿಂದ ಉತ್ತರ ದಿಕ್ಕಿಗೆ ಇದ್ದು, ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವನ್ನು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಈ ಕೆರೆಗೆ ಎರಡು ತೂಬುಗಳನ್ನು ಇರಿಸಲಾಗಿದೆ. ಅವುಗಳಿಗೆ ಗಚ್ಚು, ಗಾರೆ ಸಿಮೆಂಟ್ ಮತ್ತು ಕಬ್ಬಿಣದ ಲೋಹದ ವಸ್ತುಗಳನ್ನು ಅಳವಡಿಸಲಾಗಿದೆ. ತೂಬುಗಳಿಗೆ ಅನುಗುಣವಾಗಿ ಎರಡು ಕಾಲುವೆಗಳನ್ನು ಒಳಗೊಂಡಿದ್ದು ಇವುಗಳಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿಯುತ್ತದೆ.ತೂಬಿನ ಎತ್ತರ ೨೦ ಅಡಿ, ಏರಿಯಿಂದ ತೂಬಿನ ಉದ್ದ ೧೫ ಅಡಿ ಆಗಿದೆ. ಬಲಗಡೆ ದಂಡೆಯ ಕಾಲುವೆಯ ಉದ್ದ ೪ ಕಿ.ಮೀ. ಇದರಿಂದ ಒಟ್ಟು ೮೦೦ ಎಕರೆ ಪ್ರದೇಶಕ್ಕೆ ನೀರು ಒದಗಿಸುತ್ತದೆ. ಎಡದಂಡೆ ಕಾಲುವೆಯ ಉದ್ದ ೫ ಕಿ.ಮೀ.; ಇದು ಒಟ್ಟು ೧೨೦೦ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ.

**ಮ್ಯಾಕಲ್‌ಝುರಿ ಕೆರೆ**

| | |
|---|---|
| ಗ್ರಾಮ-ಮ್ಯಾಕಲ್‌ಝುರಿ | ಅಚ್ಚುಕಟ್ಟು ಪ್ರದೇಶ-೧೯೮.೦೦(ಹೆ) |
| ಜಲಾವೃತ ಪ್ರದೇಶ-೨೫.೦೦(ಹೆ) | ಕೆರೆಯ ಸಾಮರ್ಥ್ಯ-೨೨.೦೦(mcft) |
| ಏರಿಯ ಉದ್ದ-೯೮ ಮೀ. | ಏರಿಯ ಎತ್ತರ-೧೨ ಮೀ |
| ಏರಿಯ ಮೇಲ್ಭಾಗದ ಅಗಲ-೪ ಮೀ. | ತೂಬಿನ ಸಂಖ್ಯೆ-೨ |

ಗದಗದಿಂದ ಈಶಾನ್ಯಕ್ಕೆ ೭೨ ಕಿ.ಮೀ ದೂರದಲ್ಲಿದೆ. ಈ ಕೆರೆಯು ಮ್ಯಾಕಲ್‌ಝುರಿ ಯಿಂದ ಪೂರ್ವದಿಕ್ಕಿಗೆ ಕಂಡುಬರುತ್ತದೆ. ಈ ಕೆರೆಯು ಒಟ್ಟು ಸುಮಾರು ೧೮ ಎಕರೆ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಈ ಕೆರೆಯ ಎಡಗಡೆಯಲ್ಲಿ ಕೋಡಿಯು ಕಂಡು ಬರುತ್ತದೆ. ಒಟ್ಟು ನೀರಿನಿಂದ ಕೆರೆಯ ಸುತ್ತಮುತ್ತಲು ೮೦೦ ಎಕರೆಗೆ ಕೃಷಿಗೆ ನೀರನ್ನು ಒದಗಿಸುತ್ತಿತ್ತು ಎಂದು ಅಲ್ಲಿನ ಜನರ ಅಭಿಪ್ರಾಯ.

ಏರಿಯು ಕೆರೆಯ ದಕ್ಷಿಣ ದಿಕ್ಕಿಗೆ ಇದ್ದು, ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವನ್ನು ದಪ್ಪ ದಪ್ಪ ಕಲ್ಲುಗಳಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಏರಿಗೆ ಹೊಂದಿಕೊಂಡಂತೆ ಒಂದು ತೂಬು ಇದೆ. ಏರಿಯಿಂದ ತೂಬಿನ ಉದ್ದ ೨೦ ಅಡಿ; ನೆಲಮಟ್ಟದಿಂದ ತೂಬಿನ ಎತ್ತರ ೧೦ ಅಡಿ, ತೂಬಿನ ಸುತ್ತಳತೆ ೬ ಅಡಿ ಆಗಿದೆ. ಇದನ್ನ ಗಚ್ಚು ಗಾರೆ ಕಲ್ಲಿನಿಂದ ತಯಾರಿಸಿರುತ್ತಾರೆ. ತೂಬಿನ ಬಲಗಡೆ ಮತ್ತು ಎಡಗಡೆಯಲ್ಲಿ ಶಾಸನ ಕಂಡುಬರುತ್ತದೆ. ತೂಬಿನ ಮಧ್ಯೆ ಗಣೇಶನ ಶಿಲ್ಪ ಇದೆ. ಪ್ರಸ್ತುತ ಈ ಕೆರೆಯಲ್ಲಿ ನೀರು ಕಂಡುಬರುವುದಿಲ್ಲ.

**ಕುರ್ತಕೋಟೆಯ ಕಡಲಗೆರೆ :**

| | |
|---|---|
| ಕೆರೆ-ಕುರ್ತಕೋಟೆಯ | ಅಚ್ಚುಕಟ್ಟು ಪ್ರದೇಶ-೧೯೮.೦೦(ಹೆ) |
| ಜಲಾನಯನ ಪ್ರದೇಶ-೪೬.೦೦ ಹೆಕ್ಟೇರ್‌ಗಳು. | ಕೆರೆಯ ಸಾಮರ್ಥ್ಯ-೨೨.೦೦(mcft) |
| ಏರಿಯ ಉದ್ದ-೧೫೦೦ ಮೀಟರ್. | ಏರಿಯ ಎತ್ತರ-೭ ಮೀಟರ್. |
| ಏರಿಯ ಮೇಲ್ಭಾಗದ ಅಗಲ-೫ ಮೀಟರ್. | ತೂಬಿನ ಸಂಖ್ಯೆ-೨. |

ಗದಗ ತಾಲೂಕಿನ ಪ್ರಾಚೀನ ಸ್ಥಳವಾದ ಕುರ್ತಕೋಟೆಯು ಗದಗದಿಂದ ನೈರುತ್ಯ ದಿಕ್ಕಿಗೆ ೧೬ ಕಿ.ಮೀ ದೂರದಲ್ಲಿದೆ. ಕ್ರಿ.ಶ. ೧೦೮೨ರ ಶಾಸನದಲ್ಲಿ[೨] 'ಶ್ರೀಮದ್ ಅಗ್ರಹಾರಂ ಕುರ್ತಕೋಟಿ' ಎಂದು ಉಲ್ಲೇಖಗೊಂಡಿದೆ. ಈ ಗ್ರಾಮದ ಪ್ರಾಚೀನ ಶಾಸನಗಳಲ್ಲಿ ಕುರುತ್ತಕುಂಟೆ, ಕುರುತ್ತಕೊಟ್ಟೆ, ಅಗ್ರಹಾರ ಕುರ್ತಕೊಂಟೆ ಎಂದೆಲ್ಲಾ ಉಲ್ಲೇಖಿತಗೊಂಡಿದ್ದೆ, ಹಿಂದೆ ಬೆಳ್ವಲ ३೦೦ರ ಆಡಳಿತ ವಿಭಾಗಕ್ಕೆ ಸೇರಿತ್ತು. ಈವರೆಗೆ ೭ ಶಾಸನಗಳು ವರದಿಯಾಗಿದ್ದು, ಕುರ್ತಕೋಟೆಯ ಕ್ರಿ.ಶ. ೧೦೮೨ರ ಶಾಸನದಲ್ಲಿ ಬೀರ ನೋಳಂಬ ಪಲ್ಲವ ಪೆರ್ಮಾಡಿ ಜಯಸಿಂಗದೇವನು ಆಳುತ್ತಿದ್ದಾಗ ಆ ಊರಿನ ಪ್ರಮುಖ ೨೦೦ ಮಹಾಜನರ ಮತ್ತು ಮನೆವೆರ್ಗ್ಗಡೆ ದಂಡನಾಯಕ ವಾಮದೇವಯ್ಯನು ಧಾರಾಪೂರ್ವಕವಾಗಿ ಕಡಲಗೆರೆಗೆ ಪೂರ್ವದೊಳ್ನಡೆದ ದಣ್ಣ ದೋಷ, ಕೊಳ ಜೋಳಮುಮಂ ಪುನರ್ದತ್ತಿ ಮಾಡಿ ಬಿಟ್ಟು ಇರಿದೆಡೆ ಪೆನ್ನೆರಡು ಪಣಂ ಕಳ್ದ ಬನ್ದು ಪೊಯ್ದು ದಾರು ಪಣಮ ದಂಡಂ ನೆರೆ ಬಯ್ದಡೆ ಮೂರು ಪಣಂ ಕರದನ್ತುಂ ದಣ್ಣಮಾಹಿ ನಡೆವುದು ನಿಯತ ಎನಿತೊನ್ತು ಕೊಳಧಾನ್ಯಮವನಿತುಂ ತರೆಯ, ವಾರಿಧಿಯಂ ದಿಕ್ಕರಿಸ್ವುದೆನೆ ನೆಗಳ್ದೇ ಕಡಲಗೆರೆಗೆ ನಡೆವುದೆದನು

ದಾನವಾಗಿ ನಾಲ್ಕು ಗೇಣು ಕೊಲೊಳ್ಳದ್ದು ಅಳತೆ ಕೋಲಿನಿಂದ ಅಳೆದು ಭೂ ದಾನ ಮಾಡಿ, ದ್ರವ್ಯವನ್ನು ಕೊಟ್ಟು ಪ್ರತಿಪಾಳಿಸುವದರಾ ತಟಾಕಮು ರಕ್ಷಿಸುವಂತೆ ಹೇಳಿದೆ. ಈ ಶಾಸನದಲ್ಲಿ ಕೆರೆಯನ್ನು ರಕ್ಷಿಸುವಂತೆ ಮತ್ತು ಹಾಳು ಮಾಡಬಯಸಿದವರಿಗೆ ದಂಡ ಹಾಕಿ ಶಿಕ್ಷಿಸಿ ಅಂತವರು ಅರ್ಹರಾಗುತ್ತಾರೆಂದು ವಿಧಿ ಮತ್ತು ನಿಷೇದ ಹೇರಿರುವುದನ್ನು ತಿಳಿಸುತ್ತದೆ. ಭೂ ದಾನವನ್ನು ದ್ರವ್ಯದಾನ ಮಾಡಿದವರನ್ನು ಆ ತಾಟಾಕವೇ ರಕ್ಷಿಸುವುದೆಂದು ಹೇಳಿದೆ ಈ ಶಾಸನವನ್ನು ರಚಿಸಿದ ಕವಿ ಕಡಲಗೆರೆಯನ್ನು ಸುಂದರವಾಗಿ ಮತ್ತು ಕಾವ್ಯಮಯವಾಗಿ ನಿರೂಪಿಸಿದ್ದಾರೆ. ಕವಿಯ ಕಾವ್ಯ ಸೌಂದರ್ಯದ ಜೊತೆಗೆ ಅನೇಕ ಜನರಿಗೆ ಜಿವನಾಧಾರವಾಗಿರುವ ಕೆರೆಯ ಬಗೆಗೆ ಕೃತಜ್ಞತೆಯನ್ನು ಕವಿ ಅಭಿವ್ಯಕ್ತಿಸಿದ್ದಾನೆ.

ಕಲ್ಯಾಣ ಚಾಲುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಕ್ರಿ.ಶ. ೧೧೮೨ರ ಶಾಸನದಲ್ಲಿ[೬೪] ದಂಡನಾಯಕ ವಾಮದೇವಯ್ಯನು ಕೆರೆಗೆ ನೀಡಿದ ಭೂದಾನವನ್ನು ತಿಳಿಸುತ್ತದೆ. ಇದನ್ನು ಅಗ್ರಹಾರ ಕುರುತ್ತಕೊಂಟೆಯ ೨೦೦ ಮಹಾಜನರಿಗೆ ಮಹಾಪ್ರಧಾನ ವಾಮದೇವನು ತಪ್ಪು ದಂಡವಾಗಿ ಬರುವ 'ಇರಿದಡೆಯಿಂದ ೧೨ ಪಣ', 'ಬೈದರೆ ೬ ಪಣ', 'ನೇರ ಬೈದರೆ ೩ ಪಣ' ಇದರಿಂದ ಬಂದ ದಂಡವನ್ನು ಕಡಲಗೆರೆಗೆ ವಿನಿಯೋಗಿಸುವಂತೆ ಕೋರಿ ದಾನ ಬಿಟ್ಟನು. ಕ್ರಿ.ಶ. ೧೧೮೭ರ ಶಾಸನದಲ್ಲಿ[೬೫] ಅಪರಾಧಿಗಳಿಂದ ವಸೂಲಿಯಾದ ದಂಡದ ಹಣವನ್ನು ಕಡಲಗೆರೆಯ ನಿರ್ವಹಣೆಗಾಗಿ ನೀಡಿರುವ ಉಲ್ಲೇಖ ಕಂಡುಬರುತ್ತದೆ. (ಆರನೇ ವಿಕ್ರಮಾದಿತ್ಯನ ದಂಡನಾಯಕ ವಾಮದೇವನು ಕೆರೆಯ ಸಂರಕ್ಷಣೆಗಾಗಿ ಅಗ್ರಹಾರದಲ್ಲಿ ಯಾರಾದರೂ ಬೈದರೆ, ಕೊಲೆ ಮಾಡಿದರೆ, ಜಗಳವಾಡಿದರೆ, ಅವರಿಗೆ ದಂಡ ಹಾಕಿ ಅದರಿಂದ ಬಂದ ಹಣ ಕೆರೆಯ ಸಂರಕ್ಷಣೆಗಾಗಿ ಮತ್ತು ದುರಸ್ತಿಗಾಗಿ ವಿನಿಯೋಗಿಸುತ್ತಿದ್ದನು) ಕ್ರಿ.ಶ. ೧೧೮೨ರ ಶಾಸನದಲ್ಲಿ[೬೬] ಆರನೇ ವಿಕ್ರಮಾದಿತ್ಯನ ಆಡಳಿತ ಅವಧಿಯ ಅಗ್ರಹಾರದ ಮಹಾಜನರ ನಿರ್ವಹಣೆಗಾಗಿ ಬೆಳ್ಳಿಕೆಯ ಎರಗನು ಕೆರೆಯನ್ನು ಮತ್ತು ಒಂದು ಬಾವಿಯನ್ನು ಶಿರಗುಪ್ಪದಲ್ಲಿ ಕಟ್ಟಿಸಿದ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

ಕಡಲಗೆರೆಯು ಕುರ್ತಕೋಟೆಯ ದಕ್ಷಿಣ ಭಾಗದಲ್ಲಿ ಕಂಡುಬಂದಿದ್ದು, ಈ ಕೆರೆಗೆ ಪೂರ್ವ ಮತ್ತು ದಕ್ಷಿಣ ಭಾಗಕ್ಕೆ ತೂಬು ಇದೆ. ಇದರ ಉದ್ದ ೪ ಮೀ. ದಕ್ಷಿಣದ ಏರಿಯು ಹೊಂದಿಕೊಂಡಂತೆ ಎರಡು ಚಿಕ್ಕದಾದ ತೂಬುಗಳಿದ್ದು ಅವುಗಳನ್ನು ಗಚ್ಚು, ಗಾರೆ, ಸಿಮೆಂಟ್ ಮತ್ತು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಲಾಗಿದೆ. ತೂಬಿಗೆ ಅನುಗುಣವಾಗಿ ಕಾಲುವೆಗಳನ್ನು ಜೋಡಿಸಲಾಗಿದೆ. ಇದರಿಂದ ಆಯಕಟ್ಟಿನ ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿದು ಬಂದು ಕಬ್ಬು, ಶೇಂಗಾ, ಹುರುಳಿ, ತರಕಾರಿ ಮತ್ತು ಇನ್ನಿತರ ಬೆಳೆಗಳನ್ನು ಬೆಳೆಯುತ್ತಾರೆ. ಕೆರೆಯ ದಂಡೆಯ ಮೇಲೆ ಪರಸ್ಪರ ಅಭಿಮುಖವಾಗಿ ಈಶ್ವರ, ನರಸಿಂಹ ದೇವಾಲಯಗಳಿವೆ. ಈಶ್ವರ ದೇವಾಲಯ ಗರ್ಭಗೃಹ ಮತ್ತು ಮುಖಮಂಟಪವನ್ನು ಹೊಂದಿದ್ದು ಗರ್ಭಗೃಹವು ಆಯತಾಕಾರವಾಗಿದ್ದು ಇದರಲ್ಲಿ ಶಿವಲಿಂಗವಿದೆ.

ಕೆರೆಯ ದಕ್ಷಿಣ ದಿಕ್ಕಿಗೆ ಏರಿಯ ಮೇಲೆ ವಿರೂಪಾಕ್ಷ ದೇವಾಲಯವು ಚೌಕಾಕಾರವಾಗಿದ್ದು ಗರ್ಭಗೃಹ ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಇತ್ತೀಚೆಗೆ ಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಮೂಲ ಲಿಂಗವನ್ನು ದೇವಾಲಯದ ಹೊರಭಾಗದಲ್ಲಿ ಅರಳಿ ಮರದ ಕೆಳಗಡೆ ಇಟ್ಟಿದ್ದಾರೆ. ಮುಚ್ಚಿಗೆದ್ವಾರ ಮತ್ತು ಲಲಾಟಗಳು ಸರಳವಾಗಿವೆ. ನವರಂಗದಲ್ಲಿ ನಾಲ್ಕು ಕಂಬಗಳು ಇದ್ದು ಮುಚ್ಚಿಗೆಯಲ್ಲಿ ಅರಳಿದ ಕಮಲದ ಶಿಲ್ಪವಿದೆ. ನವರಂಗವನ್ನು ಪ್ರವೇಶಿಸಲು ಪೂರ್ವದ ಕಡೆ ದ್ವಾರವಿದ್ದು ಇದರ ಹೊಸ್ತಿಲು ಪ್ರಾಚೀನವಾಗಿದೆ. ನವರಂಗದಲ್ಲಿ ಎರಡು ವೀರಗಲ್ಲು, ಒಂದು ನಾಗರಕಲ್ಲು ಹಾಗೂ ಎರಡು ಶಾಸನಗಳು ಕಂಡುಬರುತ್ತವೆ.

**ಡಂಬಳದ ಗೋಣ ಸಮುದ್ರ ಕೆರೆ :**

| | |
|---|---|
| ಗ್ರಾಮ-ಡಂಬಳದ ಗೋಣಸಮುದ್ರ ಕೆರೆ | ಅಚ್ಚುಕಟ್ಟು ಪ್ರದೇಶ- ೧೧೭೫.೦೫ (ಹೆ) |
| ಜಲಾವೃತ ಪ್ರದೇಶ- ೧೮೦.೧೬(ಹೆ) | ಕೆರೆಯ ಸಾಮರ್ಥ್ಯ-೨೦೫.೦೦ (mcft) |
| ಏರಿಯ ಉದ್ದ- ೧೧೦೦ ಮೀ | ಏರಿಯ ಎತ್ತರ-೧೫ ಮೀ |
| ಏರಿಯ ಮೇಲ್ಭಾಗದ ಅಗಲ-೩.೦ ಮೀ. | ತೂಬಿನ ಸಂಖ್ಯೆ- ೩ |
| ಕೋಡಿಯ ಉದ್ದ - ೪೫ ಮೀ. | ಕೋಡಿಯ ಎತ್ತರ - ೪ ಮೀ. |
| ಎಡದಂಡೆ ಕಾಲುವೆ ಉದ್ದ-೫.೦ ಮೀ. | ಬಲದಂಡೆ ಕಾಲುವೆ ಉದ್ದ-೧೦.೮ ಮೀ. |

ಡಂಬಳ ಗ್ರಾಮವು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಐತಿಹಾಸಿಕ ಗ್ರಾಮ. ಇದು ತಾಲೂಕು ಕೇಂದ್ರದಿಂದ ಪೂರ್ವಕ್ಕೆ ೨೦ ಕಿ.ಮೀ ಅಂತರದಲ್ಲಿದೆ. ಇದನ್ನು ಶಾಸನಗಳಲ್ಲಿ 'ಧರ್ಮವೊರಲು' 'ಧರ್ಮ್ಮವೊಳಲ್' 'ಧರ್ಮ್ಮಪುರ' 'ಧರ್ಮಪುರ' 'ಧರ್ಮಾಪುರ ಎಂದು ಕರೆಯಲಾಗಿದೆ. ಇದು ಧರ್ಮದಪೊರಲ್>ಧರ್ಮವೊರಲ್> ಧರ್ಮ್ಮವೊಳಲ್> ಧರ್ಮಪುರ>ಧರ್ಮಪುರ>ಡಂಬಳ ಎಂದಾಗಿದೆ.[೭೭]

ಬೌದ್ಧ ಧರ್ಮದ ನೆಲೆಬೀಡು ಡಂಬಳ ಆಗಿತ್ತೆಂದು ಲಭ್ಯವಾದ ಶಾಸನಗಳ ಮೂಲಕ ಗುರುತಿಸಬಹುದು. ಈ ಮತದ ಮುಖ್ಯ ಗ್ರಂಥ 'ದಮ್ಮಪದ' ಈ ದಮ್ಮದ ಪೊರಲೇ 'ಧರ್ಮ್ಮಪೊರಲ್' ಅಥವಾ 'ಧರ್ಮ್ಮಪೊಳಲ್' ಆಗಿರಬಹುದು. ದಮ್ಮದ ಸಂಸ್ಕೃತ ರೂಪವೇ ಧರ್ಮವಾದರೆ, ಪೊಳಲಿನ ಸಂಸ್ಕೃತ ರೂಪವೇ ಪುರ ಎಂದಾಗಿದೆ. ಹೀಗಾಗಿ ಇದು ಧರ್ಮಪುರ, ಧರ್ಮಾಪುರವೆಂದೇ ಉಲ್ಲೇಖಗೊಂಡಿದೆ. ಜೊತೆಗೆ ಧರ್ಮಯ್ಯ ಅಥವಾ ಧರ್ಮರಾಜ ಹೆಸರಿನ ವ್ಯಕ್ತಿ ಕಟ್ಟಿಸಿದ ಅಥವಾ ಅವನ ಹೆಸರಿನಲ್ಲಿ ಕಟ್ಟಿಸಿದ ಧರ್ಮೇಶ್ವರ ದೇವಾಲಯ ಇರುವ ಕಾರಣ ಇದು ಧರ್ಮಪೊಳಲ್ ಎಂದೇ ಆಗಿರಬಹುದು. ಅಂದರೆ ಶಾಸನಗಳು ಮಹಾಪಟ್ಟಣ, ಮಹಾನಗರ ಎಂದು ಈ ಗ್ರಾಮವನ್ನು ವರ್ಣಿಸುತ್ತವೆ.[೭೮] ಈ ಧರ್ಮಪುರದಲ್ಲಿ ನೆಲೆ ನಿಂತ ಈಶ್ವರನೇ ಧರ್ಮೇಶ್ವರ. ಈ

ಧರ್ಮೇಶ್ವರನ ಆಲಯವೇ ಇಂದು ಡಬ್ಬುಗೊಳ್ಳಿ ಗುಡಿ ಎಂದು ಕರೆಸಿಕೊಂಡಿರುವ ಸೋಮೇಶ್ವರ ದೇವಸ್ಥಾನ ಇಲ್ಲಿ ಕಂಡುಬರುತ್ತದೆ.

ಇತಿಹಾಸ ಪ್ರಸಿದ್ಧ ಡಂಬಳದಲ್ಲಿ ದೊರೆತ ಶಾಸನಗಳು ಒಟ್ಟು ೧೭. ಈ ಎಲ್ಲಾ ಶಾಸನಗಳ ಆಧಾರದ ಮೇಲೆ ಈ ಗ್ರಾಮದ ಇತಿಹಾಸವನ್ನು ತಿಳಿಯಬಹುದು. ಧರ್ಮವೊಳಲಿನ ಬಗ್ಗೆ ಹೇಳುವಾಗ ಚಂಪೂಕಾವ್ಯಗಳ ಮಾದರಿಯಲ್ಲಿ ಅದರ ಸ್ಥಾನ ನಿರ್ದೇಶನವನ್ನು ಶಾಸನವೊಂದು[4] ಸಮುದ್ರ ವರ್ಣನೆಯೊಂದಿಗೆ ಆರಂಭಿಸುತ್ತದೆ.

ಕನಕಂ ರತ್ನ ಚಂದನ
ವೆನಿಸಿದ ಪಲವುಂ ಪದಾರ್ತ್ಥ ಜನಿತ ದ್ವೀಪಂ
ತನುವಿನೊರಡಂಗೆ ತಾಂ ತ್ರಿಭು
ವನ ಜೀವನಮೆನಸಿ ನೆಗಳ್ದ ಲವಣ ಸಮುದ್ರಂ ॥
ಆ ಲವಣ ಸಮುದ್ರ ವೇಷ್ಠಿತ ಮಧ್ಯದೋಳು
ಮೇರುಪರ್ವತವಿರ್ಪುದದರಿ ಸಾಮರ್ಥ್ಯಮೆಂತೆನೆ ॥

ಅಂದರೆ ಕನಕ, ರತ್ನ, ಚಂದನ ಮುಂತಾದ ಪದಾರ್ಥಗಳು ಹುಟ್ಟುವಂತಹ ರೂಪಗಳನ್ನು ತನ್ನೊಡಲಿನಲ್ಲಿ ಅಡಗಿಸಿಕೊಂಡು ತ್ರಿಭುವನಕ್ಕೆಲ್ಲ ಜೀವನವೆನಿಸಿತ್ತು ಅದೇ ಲವಣ ಸಮುದ್ರ, ಅದರ ಉತ್ತರ ದಿಕ್ಕಿಗೆ ಮೇರು ಪರ್ವತದ ದಕ್ಷಿಣ ದಿಸೆಯಲ್ಲಿ ಜಂಬೂದ್ವೀಪ, ಜಂಬೂದ್ವೀಪದ ದಕ್ಷಿಣ ಭಾಗಕ್ಕೆ ಕುಂತಳ ದೇಶವಿತ್ತು. ಆ ದೇಶದಲ್ಲಿ ಮಾಸವಾಡಿ ನಾಡಿತ್ತು. ಈ ಮಾಸವಾಡಿ–೧೪೦ರಲ್ಲಿ ಧರ್ಮಪುರವು ಪ್ರಸಿದ್ಧಿಯನ್ನು ಹೊಂದಿತ್ತು.

ಸಾರ್ವಕಾಲಿಕ ಮೌಲ್ಯವನ್ನು ಎತ್ತಿ ಹಿಡಿಯುವ ರೀತಿಯಲ್ಲಿ ಧರ್ಮವೋಳವಿನಲ್ಲಿ ಗೋಣ ಸಮುದ್ರವೆಂಬ ದೊಡ್ಡ ಕೆರೆಯೊಂದನ್ನು ಮಾಡಿಸಿದ್ದನ್ನು ಕಾಣುತ್ತೇವೆ. ಅದು ಬರಿ ಕೆರೆಯಾಗಿರಲಿಲ್ಲ. ಸಮುದ್ರದಷ್ಟು ವಿಸ್ತಾರವಾಗಿತ್ತು. ಮೇಲಿನ ಶಾಸನದಲ್ಲಿ ಉಲ್ಲೇಖಿಸಿದಂತೆ[೮೦] ಈ ಕೆರೆಯನ್ನು

"ಉದಧಿಪನು ತಂನ ಗಾಂಭೀ
ರ್ಯ್ಯದ ಪೆಂಪಂ ರತ್ನಜಳದ ಸಮೂದಿತಮನಿದಂ
ವಿದಿತಂ ಚಯನೆನೆಲುಕೆಂ
ಬುದು ಧರ್ಮಪುರದಲೇಸವ ಗೋನಸಮುದ್ರಂ"

ಇದರ ತಾತ್ಪರ್ಯ ಹೀಗಿದೆ; ಗಾಂಭೀರ್ಯದಿಂದ ಕೂಡಿದ ಸಾರದ ಖ್ಯಾತಿಯನ್ನು ಕೀರ್ತಿಸುವಂತೆ ರತ್ನ ಜಳದಂತೆ ಗೋಣಸಮುದ್ರ ಧರ್ಮಪುರದಲ್ಲಿ ಶೋಭಿಸುತ್ತಿತ್ತು ಎಂದು ತಿಳಿಸುತ್ತದೆ.

ಕೆರೆಯನ್ನು ಯಾರೇ ಕಟ್ಟಿಸಿರಲಿ ಅದರ ಯೋಗಕ್ಷೇಮದ ಹೊಣೆಯನ್ನು ಆ ಊರಿನ ಜನರೇ ಹೊರುತ್ತಿದ್ದರು. ಕೆರೆಯಲ್ಲಿ ಸೇರಿಕೊಳ್ಳುತ್ತಿದ್ದ ಹೂಳನ್ನು ಅಥವಾ ಬಂಡನ್ನು ತೆಗೆಯಿಸುವುದೇ ಕೆರೆಗೆ ಮಾಡಬೇಕಾಗಿದ್ದ ಮುಖ್ಯ ದುರಸ್ತಿ ಕಾರ್ಯವಾಗಿತ್ತು. ಕಲ್ಯಾಣ ಚಾಲುಕ್ಯರ ನಾಲ್ಕನೇ ಸೋಮೇಶ್ವರನ ಕಾಲದಲ್ಲಿ ಡಂಬಳದ ಗೋಣಸಮುದ್ರದ ತೂಬು ಮತ್ತು ಇತರೆ ದುರಸ್ತಿ ಕಾರ್ಯವನ್ನು ೧೬ ಜನ ಶೆಟ್ಟಿಯರು ಮಾಡಿಸಿದುದರ ಉಲ್ಲೇಖವಿದೆ.

ಕಲ್ಯಾಣ ಚಾಲುಕ್ಯರು, ಕಳಚೂರ್ಯರು, ಯಾದವ ಚಕ್ರವರ್ತಿಗಳು, ಮಹಾಮಂಡಳೇಶ್ವರರು, ದಂಡನಾಯಕರು, ಹೆಗ್ಗಡೆಗಳು ಮತ್ತು ಗಾವುಂಡರು ಈ ಗ್ರಾಮವನ್ನು ಆಳ್ವಿಕೆ ಮಾಡಿದ್ದಾರೆ. ಪದಿನರುವರು, ಶೆಟ್ಟಿಗಳು ಇಲ್ಲಿ ದಾನ ನೀಡುವ, ದಾನ ಸ್ವೀಕರಿಸುವ ಆಡಳಿತ ನಡೆಸುವ ಕ್ರಮ ಕೈಗೊಂಡಿದ್ದಾರೆ. ದೇವಾಲಯ ನಿರ್ಮಾಣ, ಮೂರ್ತಿ ಪ್ರತಿಷ್ಠಾಪನೆ ಅವುಗಳ ಪೂಜಾ ಕೈಂಕರ್ಯಗಳಿಗಾಗಿ ಭೂಮಿದಾನ, ಹಣದಾನ, ಸುಂಕದಾನಗಳನ್ನು ನೀಡಿದ್ದಾರೆ. ಇದು ಬೌದ್ಧ ಕೇಂದ್ರಗಳಲ್ಲಿ ಒಂದಾಗಿತ್ತು. ಇಲ್ಲಿಯವರೆಗೂ ಮುಂಡರಗಿ ಪೇಟಾಲೂರ ಮುಖ್ಯಸ್ಥಾನವು ಡಂಬಳದಲ್ಲಿ ಇತ್ತು. ಈ ಸ್ಥಳವು ಮಾಸವಾಡಿ ೧೪೦ರ ಆಡಳಿತ ವಿಭಾಗಕ್ಕೆ ಒಳಪಟ್ಟಿದ್ದು, ಕ್ರಿ.ಶ. ೧೦೯೫ರಲ್ಲಿ ಡಂಬಳ ಶಾಸನದಲ್ಲಿ[೪೧] ಉಲ್ಲೇಖಗೊಂಡಿರುವಂತೆ ಆರನೆಯ ವಿಕ್ರಮಾದಿತ್ಯನ ಹಿರಿಯರಸಿ ಲಕ್ಷ್ಮೀದೇವಿಯು ಲೊಕ್ಕಿಗುಂಡಿಯ ೧೬ ವರ್ತಕರ ದೇಣಿಗೆಯಿಂದ ಧರ್ಮಪೊಳಲಿನಲ್ಲಿ ತಾರಾಭಗವತಿ ವಿಹಾರವೊಂದನ್ನು ನಿರ್ಮಿಸಿದಳೆಂದು ತಿಳಿದುಬರುತ್ತದೆ. ಈ ಪ್ರದೇಶವು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿರುವುದಕ್ಕೆ ಐತಿಹಾಸಿಕ ಆಧಾರಗಳಿವೆ. ಇಲ್ಲಿ ಚಾಲುಕ್ಯರು ಕ್ರಿ.ಶ. ೫೪೦ರಿಂದ ಕ್ರಿ.ಶ. ೭೫೩ರವರೆಗೆ ವಾತಾಪಿಪುರ (ಬಾದಾಮಿಯನ್ನು) ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದ ಎರಡನೆಯ ಪುಲಕೇಶಿಯ ಕಾಲದಲ್ಲಿ ಡಂಬಳವು ಪ್ರಸಿದ್ಧಿಯನ್ನು ಪಡೆದಿತ್ತು.

ಚಾಲುಕ್ಯರ ಸಾಮಂತರಾಗಿದ್ದ ರಾಷ್ಟ್ರಕೂಟರು ಮುಂದೆ ಸ್ವತಂತ್ರರಾಗಿ ಕ್ರಿ.ಶ. ೭೫೩ ರಿಂದ ೯೭೩ರವರೆಗೆ ಆಳ್ವಿಕೆ ಮಾಡಿದರು. ಈ ಪಟ್ಟಣವು ಕರ್ನಾಟಕ ಭೂಮಿ ಎಂಬ ಸ್ತ್ರಿ ನಡುವಿನ ಶ್ರೇಷ್ಠ ಮುತ್ತಿನಹಾರದಂತಿತ್ತೆಂಬುದನ್ನು ಇದರ ಹೊರವಲಯದಲ್ಲಿ ಭತ್ತ ಕಾಲುವೆಯಲ್ಲಿ ಆಡುವ ಹಂಸಗಳು, ಕೇಕೆ ಹಾಕುವ ನವಿಲುಗಳು, ರಾಜ ಗಿಳಿಗಳು ಶೋಭಾಯಮಾನವಾಗಿದ್ದವೆಂಬುದನ್ನು ಶಾಸನದಲ್ಲಿ ವರ್ಣಿಸಿದ್ದಾರೆ. ಶಕ ೧೧೦೬ರ ಕ್ರೋಧಿನಾಮ ಸಂವತ್ಸರದಲ್ಲಿ ಪಶ್ಚಿಮ ಚಾಲುಕ್ಯ ಚಕ್ರವರ್ತಿ ಸೋಮೇಶ್ವರದ ಮಹಾಪ್ರಧಾನ ತೇಜಿಮಯ್ಯನು ದಂಡನಾಯಕನಾಗಿದ್ದ ದೇವರಸ ಸ್ವಂಯಭೂ ದೇವರ ಎದುರಿಗಿರುವ ಗೋಣಸಮುದ್ರ[೪೨] ಎಂದು (ಈಗಿನ ಡಂಬಳ ಕೆರೆ) ಕರೆಯಲ್ಪಡುವ ಕೆರೆಗೆ ಕೋಡಿ ನಿರ್ಮಿಸಿದ ಸಂಗತಿಯನ್ನು ದೊಡ್ಡಬಸಪ್ಪನ ಗುಡಿಯಲ್ಲಿರುವ ಶಾಸನದಿಂದ ತಿಳಿದುಬರುತ್ತದೆ.

ಈ ಕೆರೆಯ ಕೋಟೆ ಪ್ರದೇಶಕ್ಕೆ ಅಂಟಿಕೊಂಡಿದ್ದು, ಕೋಟೆ ಪ್ರದೇಶದಲ್ಲಿ ಸಂಪೂರ್ಣವಾಗಿ ಬಿದ್ದುಹೋಗಿರುವ ಈಶ್ವರ ದೇವಾಲಯ. ಬಹುಶಃ ಇದನ್ನು ಕಲ್ಮೇಶ್ವರ ದೇವಾಲಯವೆಂದು ಕೂಡ ಕರೆದಿದ್ದಿರಬಹುದು. ಈ ಗುಡಿಯ ಮುಂಭಾಗದಲ್ಲಿ ಶಾಸನ ಕಂಡುಬರುತ್ತದೆ. ಕೆರೆಯ ದಂಡೆಯ ಮೇಲೆ ಪ್ರಾಚೀನ ಕಾಳಮ್ಮನ ಗುಡಿಯಿದೆ. ಇದು ಬಿದ್ದುಹೋದ ನಂತರ ಇದನ್ನು ೦೧-೦೬-೧೯೮೮ ರಲ್ಲಿ ಹೊಸದಾಗಿ ನಿರ್ಮಿಸಿದ್ದಾರೆ. ಇದರ ಪ್ರಾಚೀನ ಅವಶೇಷಗಳು ದೇವಾಲಯದ ಮುಂಭಾಗದಲ್ಲಿ ಕಂಡುಬರುತ್ತವೆ. ಇದರಷ್ಟು ಹಳೆಯದಾದ ಡಂಬಳ ಕೆರೆಯಾಗಿದೆ. ಈ ಕೆರೆಯು ಡಂಬಳ ಸುತ್ತಮುತ್ತಲಿನ ಹತ್ತಾರು ಹಳ್ಳಿಗಳಿಗೆ ಕೃಷಿಗಾಗಿ ನೀರನ್ನು ಒದಗಿಸುವುದರಿಂದ ಇದನ್ನು ಡಂಬಳದ ಜೀವನಾಡಿ ಎಂದು ಕರೆಯಲಾಗುತ್ತದೆ. ಕ್ರಿ.ಶ. ೧೧೪೭ರ ಶಾಸನ[೮೩] "ತಂನ ಪೊಗರ್ತೆಯನನ್ವರ್ಥಂ ಮಾಡಲುಂ ನಿಜಭುಜಾವಷ್ಟಂಬುದಿಂ ನ್ಯಾಯೋಪಾರ್ಜಿತವಿತ್ತಮಂ ಪವಿತ್ರಂ ಮಾಡಲೆಂದು ಧರ್ಮವೊಳಲಲ್ಲಿ ಅಜ್ಜಮಯ್ಯನು ಅಜ್ಜಮೇಶ್ವರ ಶಿವಭವನ ಮಾಡಿಸಿದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೧೮೪ರ ಶಾಸನದಲ್ಲಿ ತೋಟಗಳಲ್ಲಿನ ಪನ್ನಾಯ ತೆರಿಗೆಯಿಂದ ಬರುವ ಆದಾಯವನ್ನು ಸರ್ವಮಾನ್ಯದತ್ತಿಗಳನ್ನು ಹೊರತುಪಡಿಸಿ ಸ್ಥಳೀಯ ಗೇಣಿ ಸಮುದ್ರದ ಕೆರೆಯ ತೂಬಿನಲ್ಲಿ ಹೂಳನ್ನು ತೆಗೆದು ಕಲ್ಲು ಮತ್ತು ಮರದ ತುಂಡನ್ನು ಬಳಸಿ ತೂಬನ್ನು ದುರಸ್ತಿಗೊಳಿಸಿದ್ದಕ್ಕಾಗಿ ಅದರ ಜವಾಬ್ದಾರಿಯನ್ನು ೧೬ ಜನ ಶೆಟ್ಟರಿಗೆ ವಹಿಸಲಾಗಿದ್ದಿತು ಎಂದು ಈ ಶಾಸನದಲ್ಲಿ ಮಾಹಿತಿ ಉಂಟು.[೮೪] ಡಂಬಳ ಕೆರೆಯು ಅತೀ ಪ್ರಾಚೀನವಾದ ಕೆರೆ. ಕ್ರಿ.ಶ. ೧೧೮೪ರ ಶಾಸನದಲ್ಲಿ[೮೫] ಕಲ್ಯಾಣಿ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಮಹಾಪ್ರಧಾನ ಸೇನಾಧಿಪತಿ ತೇಜಿಮಯ್ಯ ದಂಡನಾಯಕರಿಂದ ಧರ್ಮಪುರದ ಗೋಣ ಸಮುದ್ರಕ್ಕೆ (ಡಂಬಳ ಕೆರೆ) ಭೂಮಿಯನ್ನು ದಾನ ಮಾಡಿರುವ ಉಲ್ಲೇಖವಿದೆ.

ಡಂಬಳ ಕೆರೆಯು ಕಪ್ಪತ್ತಗುಡ್ಡ ಮತ್ತು ಹೀರೆವಡ್ಡಟ್ಟಿಯ ನಿರ್ಮಿಸಲಾಗಿದೆ. ಇದು ಸುಮಾರು ೩೫ ಎಕರೆ ಗುಡ್ಡದ ಕಣಿವೆಯಿಂದ ಬರುವ ನೀರನ್ನೇ ಆಧರಿಸಿ ವಿಸ್ತಾರವುಳ್ಳ ಬೃಹತ್ ಕೆರೆಯಾಗಿದೆ. ಕೆರೆಯ ಎರಡು ಬದಿಯ ಗುಡ್ಡಗಳಿಗೆ ಹೊಂದಿಕೊಂಡಂತಿದೆ. ಈ ಕೆರೆಗೆ ಒಟ್ಟು ೩ ತೂಬುಗಳಿದ್ದು, ಒಂದು ತೂಬು ಅತೀ ಚಿಕ್ಕದಾಗಿದ್ದು ಇದು ಪೂರ್ವಾಭಿಮುಖವಾಗಿದೆ. ೧.೫ ಕೀ.ಮೀ ವಿಸ್ತಾರವುಳ್ಳ ಕಾಲುವೆಯನ್ನು ಒಳಗೊಂಡಿದೆ. ಇನ್ನೆರಡು ತೂಬುಗಳು ದಕ್ಷಿಣಾಭಿಮುಖವಾಗಿದ್ದು ನೆಲಮಟ್ಟದಿಂದ ೧೦ ಮೀಟರ್ ಎತ್ತರದಲ್ಲಿದ್ದು ಏರಿಗೆ ೧೫ ಮೀಟರ್ ಅಂತರದಲ್ಲಿವೆ. ನೀರಿನ ಹೊರಹರಿವು ಕಾಲುವೆಗಳ ಮೂಲಕ ಹಂಚಿಕೆ ಆಗುತ್ತದೆ. ಈ ಕೆರೆಯ ಕೋಡಿಯು ಈಶಾನ್ಯ ದಿಕ್ಕಿನಲ್ಲಿದ್ದು ಇದನ್ನು ಸಿಮೆಂಟ್ ಮತ್ತು ಗಾರೆಗಚ್ಚುಗಳಿಂದ ನಿರ್ಮಿಸಿದ್ದಾರೆ. ಈ ಕೆರೆಯು ಒಟ್ಟು ನಾಲ್ಕು ಸಲ ಜೀರ್ಣೋದ್ಧಾರಗೊಂಡಿದೆ. ಕೆರೆಯಲ್ಲಿ ಹೂಳು ತುಂಬಿಕೊಂಡಿದ್ದರಿಂದ ೧೮೭೪ರಲ್ಲಿ ೭೭೪ ಜನರು ೧೪ ತಿಂಗಳ ಪರ್ಯಂತ ಕಾಮಗಾರಿ ನಡೆಸಿ ಪುನರ್‌ರಚಿಸಿದರು.

೧೮೪೯, ೧೮೬೦ ಮತ್ತು ೧೮೭೬ ರಲ್ಲಿ ಬ್ರಿಟಿಷ್ ಸಾಮ್ರಾಜ್ಞೆ ವಿಕ್ಟೋರಿಯಾ ರಾಣಿ ಹೆಚ್ಚಿನ ಕಾಳಜಿವಹಿಸಿ ಇದರ ನಿರ್ವಹಣೆಗಾಗಿ ಸಕಲ ಸೌಲಭ್ಯಗಳನ್ನು ಒದಗಿಸಿ ಇದಕ್ಕೊಂದು ಹೊಸರೂಪ ಕೊಟ್ಟಿರುವ ದಾಖಲೆಗಳು ಸಿಗುತ್ತವೆ.[೬೬]

೧೮೭೭ರಲ್ಲಿ ಈ ಕೆರೆಯ ನೀರಿನ ಸಂಗ್ರಹಣ ಸಾಮರ್ಥ್ಯವನ್ನು ೧೦೮ ದಶ ಲಕ್ಷ ಘನ ಅಡಿಗಳಿಗೆ ಹೆಚ್ಚಿಸಲಾಯಿತು. ಏರಿಯ ಒಟ್ಟು ಉದ್ದ ಸುಮಾರು ೬೦೦೦ ಅಡಿಗಳಾಗಿದ್ದು, ಏರಿಯ ಮೇಲ್ಭಾಗದ ಅಗಲ ೪.೦೦ ಮೀ. ಹಾಗೂ ಎತ್ತರ ೧೯ ಮೀ. ಆಗಿದೆ. ನೀರಿನ ಸಂಗ್ರಹಣಾ ಸಾಮರ್ಥ್ಯ ೯೬.೭ ದಶಲಕ್ಷ ಘನ ಅಡಿಗಳು, ನೀರಿನ ಕಾಲುವೆ ಉದ್ದ ೫ ಕಿ.ಮೀ. ಆಗಿದ್ದು, ಸುಮಾರು ೧೦೦೦ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸುತ್ತದೆ.

**ಐತಿಹ್ಯ (ಡಂಬಳ ಕೆರೆ) :**

ಕೆಂಚಮ್ಮಳು ಮದಗ ಮಾಸೂರ ಗ್ರಾಮದ ಮುತ್ತಿನ ವ್ಯಾಪಾರಸ್ಥರ ಮಗಳು. ಇವಳನ್ನು ಒಬ್ಬ ವ್ಯಾಪಾರಸ್ಥನಿಗೆ ಮದುವೆ ಮಾಡಿಕೊಟ್ಟಿದ್ದರು. ಮದಗ ಮಾಸೂರಿನ ಜನ ಬರಗಾಲ ಬಿದ್ದಾಗ ಊರಿನಲ್ಲಿ ಒಂದು ಕೆರೆ ಕಟ್ಟಿಸಬೇಕೆಂದು ನಿಶ್ಚಯಿಸಿ ಅದರಂತೆ ಕೆರೆಯನ್ನು ಕಟ್ಟಿಸಿದರು. ಆದರೆ ಆ ಕೆರೆಗೆ ನೀರೇ ಬರಲಿಲ್ಲ. ಆಗ ಜನ ಊರಿನ ಜ್ಯೋತಿಷಿಗಳನ್ನು ಕರೆಸಿ ನೀರು ಏಕೆ ಬರುವುದಿಲ್ಲ ಎಂದು ಕೇಳಿದಾಗ ಜೋಯಿಸರು ಕೆರೆಗೆ ಹಾರವನ್ನು ಕೊಡಬೇಕು; ಅಂದಾಗ ಮಾತ್ರ ನೀರು ನಿಲ್ಲುತ್ತದೆ ಎಂದು ಹೇಳಿದರು. ಊರಿನ ಪ್ರಮುಖರು ಊರಲ್ಲಿ ಯಾರನ್ನು ಹಾರ ಕೊಡಬೇಕೆಂದು ಯೋಚಿಸಿಕೊಂಡು ಊರ ಹಿರಿಯರೆಲ್ಲರೂ ಸೇರಿ ಕೆಂಚಮ್ಮಳನ್ನು ಕಳುಹಿಸಲು ಕೋರಿಕೊಂಡರು. ಕೆಂಚಮ್ಮನಿಗೆ ಕೆರೆಯಲ್ಲಿ ಮುತ್ತಿನ ಆರತಿಯನ್ನು ಬಿಟ್ಟು ಬಂದಿದ್ದಾರೆ ಎಂದು ಹೇಳಿ ಅವಳನ್ನು ಕೆರೆಯಲ್ಲಿರುವ ಗುಡಿಗೆ ಕಳುಹಿಸುತ್ತಾರೆ. ಆಗ ಕೆಂಚಮ್ಮ ಗರ್ಭಗುಡಿಯನ್ನು ಪ್ರವೇಶ ಮಾಡಿ ಆರತಿ ಎತ್ತಿಕೊಂಡು ಹೊರಟಳು. ಆಗ ಕ್ಷಣಾರ್ಧದಲ್ಲಿ ಮೋಡ ಕವಿದು ಮಳೆ ಜೋರಾಗಿ ಸುರಿಯಿತು, ಕೆಂಚಮ್ಮ ಕೆರೆಗೆ ಬಲಿಯಾದಳು ಎಂದು ಅಲ್ಲಿಯ ಜನರ ನಂಬಿಕೆ. ನಂತರ ಕೆರೆಗೆ ನೀರು ಬಂದಿತು ಎಂದು ಜನರು ಹೇಳುತ್ತಾರೆ.

**ಅಬ್ಬಿಗೇರಿ ಕೆರೆ :**

ಗ್ರಾಮ–ಅಬ್ಬಿಗೇರಿ

ಅಚ್ಚುಕಟ್ಟು ಪ್ರದೇಶ–೧೮೮.೦೦(ಹೆ)

ಜಲಾನಯನ ಪ್ರದೇಶ–೪೫.೦೦ ಹೆಕ್ಟೇರ್‌ಗಳು.

ಕೆರೆಯ ಸಾಮರ್ಥ್ಯ–೨೧.೦೦ (mcft)

ಏರಿಯ ಉದ್ದ–೧೩೫೦ ಮೀಟರ್.

ಏರಿಯ ಎತ್ತರ–೬.೫ ಮೀಟರ್.

ಏರಿಯ ಮೇಲ್ಭಾಗದ ಅಗಲ–೪.೫ ಮೀಟರ್.

ಅಬ್ಬಿಗೇರಿ ಗ್ರಾಮವು ರೋಣ ತಾಲೂಕಿನ ಒಂದು ಐತಿಹಾಸಿಕ ಗ್ರಾಮ. ರೋಣದಿಂದ ಆಗ್ನೇಯಕ್ಕೆ ೧೨ ಕಿ.ಮೀ. ಗದಗದಿಂದ ಈಶಾನ್ಯಕ್ಕೆ ೩೫ ಕಿ.ಮೀ. ಅಂತರದಲ್ಲಿದೆ. ಈ ಊರು

ಪ್ರಾಚೀನ ಶಾಸನಗಳಲ್ಲಿ ಅಬ್ಬಿಯಗೆರೆ, ಅಬ್ಬಿಗೇರಿ ಎಂದು ಉಲ್ಲೇಖಿತಗೊಂಡಿದ್ದು, ಬೆಳ್ವೊಲ-೩೦೦, ಒಳಗಣ ನರೇಗಲ್ಲ-೧೨ಕ್ಕೆ ಸೇರಿತ್ತು. ಇಲ್ಲಿಂದ ಈವರೆಗೆ ೧೧ ಶಾಸನಗಳು ವರದಿಯಾಗಿವೆ. ಅವುಗಳಲ್ಲಿ ಕ್ರಿ.ಶ. ೧೧೧೩ರ ಶಾಸನವು ಅತ್ಯಂತ ಹಳೆಯದಾಗಿದ್ದು ಮಹಾಮಂಡಳೇಶ್ವರ ಸಿಂಧ್ ಆಚ ಅರಸನು ಅಬ್ಬಿಗೆರೆಯ ದೇವಿಂಗೆರೆಗೆ ೨೪ ಮತ್ತರ ಭೂಮಿ ದಾನ ಮಾಡಿದ ಬಗ್ಗೆ ಮತ್ತು ಅವನ ರಾಣಿ ದೇವಲಾದೇವಿ ಚೆನ್ನಕೇಶವ ದೇವರಿಗೆ ಬಿಟ್ಟ ಹೂದೋಟ ತಿಳಿಸುತ್ತದೆ. ಬಸಪ್ಪನ ಗುಡಿಯ ಮುಂದೆ ಇರುವ ಕ್ರಿ.ಶ. ೧೧೨೫ರ ಶಾಸನ ಸೋಮೇಶ್ವರ ದೇವರಿಗೆ ನೀಡಿದ ಭೂ ದಾನದ ಬಗ್ಗೆ ತಿಳಿಸಿದರೆ, ೧೧೭೪ರ ಶಾಸನದಲ್ಲಿ[೭೭] ಮಾಣಿಕೇಶ್ವರ ಕುಪ್ಪೇಶ್ವರ ದೇವರಿಗೆ ಅಬ್ಬಿಗೆರೆ ಕೆರೆಗೆ 'ಎಂಟು ಜನ ಗಾವುಂಡರು ಹನ್ನಸು ಕಿರಿವಿಟ್ಟು ಅರವತ್ತೊಕ್ಕಲ್' ಎಲ್ಲರೂ ಕೂಡ ಆಚರಸನಿಗೆ ಭೂದಾನ ಕೊಟ್ಟ ದತ್ತಿಯನ್ನು ಪುನರ್‌ಭರಣ ಮಾಡಿಸಿದ ಬಗ್ಗೆ ತಿಳಿಸುತ್ತದೆ.

ಈ ಗ್ರಾಮದ ಮೂಲನಾಮ ಅಬ್ಬಿಯಗೆರೆ. ಇದು ಕಾಲಕ್ರಮೇಣ ಅಬ್ಬಿಯಗೆರೆ ಹೋಗಿ ಅಬ್ಬಿಗೆರೆ>ಅಬ್ಬಿಗೇರಿ ಎಂದಾಗಿದೆ. ಮಹಿಳೆಯೊಬ್ಬಳು ಕೆರೆ ನಿರ್ಮಿಸಿದ್ದರಿಂದ ಅಬ್ಬಿಗೆರೆ ಎಂದು ಹೆಸರು ಬಂದಿರಬೇಕು. ಗ್ರಾಮದ ಮಧ್ಯದಲ್ಲಿ ಕೆರೆ ಕಂಡುಬಂದಿದ್ದು, ಇದು ಇಲ್ಲಿಯ ಜನರ ಜೀವಾಳವಾಗಿದೆ. ಈ ನೀರನ್ನು ಕುಡಿಯುವುದಕ್ಕೆ ಮತ್ತು ಬೇರೆ ಕೆಲಸ ಕಾರ್ಯಗಳಿಗೆ ಉಪಯೋಗಿಸುತ್ತಾರೆ. ಕೆರೆಯು ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗ ದಪ್ಪ ದಪ್ಪವಾದ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ಪೂರ್ವಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಈ ಕೆರೆಯು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಒಳಪಟ್ಟಿದ್ದು ಇದನ್ನು ಜೀರ್ಣೋದ್ಧಾರ ಮಾಡಿದರೆ ಇನ್ನೂ ಹೆಚ್ಚಿನ ಜಲಸಂಗ್ರಹದ ವ್ಯವಸ್ಥೆ ಆಗುತ್ತದೆ.

**ಸೋಮಾಪುರ ಕೆರೆ :**

| | |
|---|---|
| ಗ್ರಾಮ-ಸೋಮಾಪುರ ಕೆರೆ | ಅಚ್ಚುಕಟ್ಟು ಪ್ರದೇಶ-೪೭.೦೦(ಹೆ) |
| ಜಲಾವೃತ ಪ್ರದೇಶ- ೧೪.೩೪(ಹೆ) | ಕೆರೆಯ ಸಾಮರ್ಥ್ಯ- ೧೨.೫೬(mcft) |
| ಏರಿಯ ಉದ್ದ- ೮೫೬ ಮೀ | ಏರಿಯ ಎತ್ತರ-೩.೫ ಮೀ |
| ಏರಿಯ ಮೇಲ್ಭಾಗದ ಅಗಲ- ೧.೫ ಮೀ. | ತೂಬಿನ ಸಂಖ್ಯೆ-೧ |

ಸೋಮಾಪುರ ನರಗುಂದ ಒಂದು ಭಾಗವಾಗಿದ್ದು, ನರಗುಂದವು ಒಂದು ಐತಿಹಾಸಿಕ ಗ್ರಾಮ. ಗದಗ ಜಿಲ್ಲಾಕೇಂದ್ರದಿಂದ ದಕ್ಷಿಣಕ್ಕೆ ೪೨ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಿಂದ ಪೂರ್ವಕ್ಕೆ ಕೆರೆಯು ಕಂಡುಬಂದಿದ್ದು, ಇದು ಅಲ್ಲಿಯ ಜನರ ಜೀವಾಳವಾಗಿದೆ. ಕ್ರಿ.ಶ. ೧೦೮೦ರ ಶಾಸನದಲ್ಲಿ[೭೮] ಈ ಕೆರೆಯನ್ನು ಆರನೇ ವಿಕ್ರಮಾದಿತ್ಯನ ರಾಯಭಾರಿ ಈಶ್ವರ ದೇವನು ನಿರ್ಮಿಸಿದನು

ಎಂದು ತಿಳಿಸಿದೆ. ಈ ಕೆರೆಯ ನೀರು ಉಪಯೋಗಕ್ಕೆಬಾರದೇ ಚರಂಡಿಯ ಕೊಳಚೆ ನೀರು ಸಂಗ್ರಹವಾಗುತ್ತಿತ್ತು. ಹಿಂದೆ ಇದೇ ಕೆರೆಯ ನೀರನ್ನು ಕುಡಿಯಲು ಜನರು ಬಳಸುತ್ತಿದ್ದರು. ಆದರೆ ಈಗ ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ ಬರುವುದರಿಂದ ಜಿಲ್ಲಾ ಪಂಚಾಯತಿ ಯೋಜನೆಯಡಿ ಜೀರ್ಣೋದ್ಧಾರದ ಕಾರ್ಯವನ್ನು ಕೈಗೆತ್ತಿಕೊಂಡಿದ್ದಾರೆ.

ಈ ಮೆಲ್ಕಂಡ ಶಾಸನದಿಂದ ಕೆರೆ ನಿರ್ಮಾಣ, ನಿರ್ವಹಣೆ, ಬಾವಿಗಳ ನಿರ್ಮಾಣಕ್ಕೆ ಅನೇಕ ಜನರು ದಾನ ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಕೆರೆಗಳು ಗ್ರಾಮೀಣ ಪ್ರದೇಶದ ಅಭಿವೃದ್ಧಿಗೆ ಅಂತರ್ಜಲದ ವೃದ್ಧಿಗೆ ಕಾರಣವಾಗಿದೆ. ಈ ಅಂತರ್ಜಲದ ಉಳಿವಿಕೆಗೆ ನಮ್ಮ ಪ್ರಾಚೀನರು ಯಾವ ನೀತಿಯನ್ನು ಅನುಸರಿಸುತ್ತಿದ್ದರು ಎಂಬುವುದನ್ನು ತಿಳಿಯಬಹುದು. ಆದರೆ ಶಾಸನಗಳಲ್ಲಿ ಉಲ್ಲೇಖಿತವಾದ ಬಹುಪಾಲು ಕೆರೆಗಳು ಇಂದು ಜನವಸತಿ ಪ್ರದೇಶವಾಗಿದ್ದು, ಕಾಂಕ್ರೀಟ್ ಕಟ್ಟಡಗಳ ತಾಣವಾಗಿದೆ. ಇದರಿಂದ ಅಂತರ್ಜಲ ಮಟ್ಟ ಕುಸಿಯುತ್ತಿರುವುದನ್ನು ಕಾಣಬಹುದು.

ಹೊಸದಾಗಿ ಕೆರೆಗಳನ್ನು ನಿರ್ಮಿಸಿದ ನಂತರ ಅದು ಶಾಶ್ವತವಾಗಿ ಉಳಿಯುವುದಕ್ಕೆ ಕೆರೆಗೆ ನರಬಲಿ ನೀಡುತ್ತಿದ್ದರೆಂದು ಸಾಮಾನ್ಯ ಜನರ ನಂಬಿಕೆಯಾಗಿತ್ತು. ಇಂತಹ ನರಬಲಿಯ ಉಲ್ಲೇಖಗಳು ಈ ಭಾಗದಲ್ಲಿ ಅತ್ಯಂತ ವಿರಳವಾಗಿವೆ.

**ಚಿಕ್ಕವಡ್ಡಟ್ಟಿ ಕೆರೆ :**

| | |
|---|---|
| ಗ್ರಾಮ-ಚಿಕ್ಕವಡ್ಡಟ್ಟಿ | ಅಚ್ಚುಕಟ್ಟು ಪ್ರದೇಶ-೪೦.೦೦(ಹೆ) |
| ಜಲಾವೃತ ಪ್ರದೇಶ-೧೨.೩೪(ಹೆ) | ಕೆರೆಯ ಸಾಮರ್ಥ್ಯ-೧೦.೨೫(mcft) |
| ಏರಿಯ ಉದ್ದ-೭೫೦ ಮೀ. | ಏರಿಯ ಎತ್ತರ-೨.೫ ಮೀ. |
| ಏರಿಯ ಮೇಲ್ಭಾಗದ ಅಗಲ-೧.೫ ಮೀ. | ತೂಬಿನ ಸಂಖ್ಯೆ-೧ |
| ಎಡದಂಡೆ ಕಾಲುವೆ ಉದ್ದ-೨.೦೦ ಮೀ. | |

ಚಿಕ್ಕವಡ್ಡಟ್ಟಿ ಮುಂಡರಗಿ ತಾಲೂಕಿನ ಒಂದು ಚಿಕ್ಕ ಗ್ರಾಮ. ಇದು ತಾಲೂಕು ಕೇಂದ್ರದಿಂದ ಪೂರ್ವಕ್ಕೆ ೧೮ ಕಿ.ಮೀ ಗದಗದಿಂದ ೨೮ ಕಿ.ಮೀ. ಅಂತರದಲ್ಲಿದೆ. ಇಂದಿನ ಚಿಕ್ಕವಡ್ಡಟ್ಟಿ ಪ್ರಾಚೀನ ಕಾಲದಲ್ಲಿ ವಡವಡ್ಡಿಯೆಂಬ ಹೆಸರಿನಿಂದ ಕರೆಯಲ್ಪಟ್ಟು ಮಹಾ ಮಂಡಳೇಶ್ವರನಾದ ಕಕ್ಕರಸನ ರಾಜಧಾನಿಯಾಗಿ ಮೆರೆದಿತ್ತು. ಈ ಕಕ್ಕರಸನು ಸರಕು-೧೨ ಅನಗವಾಡಿ-೧೨ ಮುಂತಾದ ಪ್ರದೇಶಗಳನ್ನು ಚಿಕ್ಕವಡ್ಡಟ್ಟಿಯಿಂದ ಆಳುತ್ತಿದ್ದಾಗ ಇಲ್ಲಿಯ ಕಲಿದೇವಸ್ವಾಮಿಗೆ ಭೂದಾನ ಮಾಡಿದ್ದು, ಈ ದಾನವನ್ನು ಬ್ರಹ್ಮಮರಿ ನಾಗಭಟ್ಟ ಹಾಗೂ ರೂವಾರಿ ಬಮ್ಮೋಜ ಪಡೆದುಕೊಂಡಿದ್ದರ ಬಗ್ಗೆ ಕ್ರಿ.ಶ. ೧೧೨೭ರ ಶಾಸನದಲ್ಲಿ⁰⁰ ಶಿವ, ಗಣಪತಿ, ಸೂರ್ಯ, ಸರಸ್ವತಿ ದೇವತೆಗಳಿಗೆ ನಮಸ್ಕಾರ ಹೇಳುವ ಸುಂದರವಾದ ಪಟ್ಟಣಗಳಿಂದ ಕೂಡಿದ್ದ ಈ ವಡವಡ್ಡಿಗೆ ಕೋಟೆ ಇತ್ತೆಂದು; ಈ ಊರು

ಇಂದಿನ ಅಮರಾವತಿಗೆ ಸಮವಾಗಿತ್ತೆಂದು ಬಣ್ಣಿಸಲಾಗಿದೆ. ಕ್ರಿ.ಶ. ೧೧೪೫ರ ಎರಡನೆಯ ಜಗದೇಕಮಲ್ಲನ ಶಾಸನದಲ್ಲಿ[೯೦] ಶ್ರೀ ಪ್ರತಾಪ ಚಕ್ರವರ್ತಿ ಜಗದೇಕಮಲ್ಲ ಕ್ರೋಧನಾಮ ಸಂವತ್ಸರ ವೈಶಾಖ ಶುದ್ಧ ಆದಿವಾರಂ ಶ್ರೀ ಮಹಾಮಂಡಳೇಶ್ವರ ಹೊಲ್ಲ ಅರಸನ ಸಮಸ್ತ ಪರಿಗ್ರಹಂ ಧರ್ಮಂ ಶ್ರೀ ಕಲಿದೇವರ್ಗೆಗೆ ಸ್ಥಾನದ ಭೋಗ ನೈವೇದ್ಯಕ್ಕೆ ಹಿರಿಯ ಕೆರೆಯ ಕೋಡಿಯ ತೆಂಕಲಮತ್ತರ ಒಂದು ಎಂದು ಉಲ್ಲೇಖವಾಗಿದೆ. ಕ್ರಿ.ಶ. ೧೧೪೫ರ ಶಾಸನದಲ್ಲಿ[೯೧] ಮಹಾಮಂಡಳೇಶ್ವರನಾದ ಹೊಲ್ಲ ಅರಸನು ಕಲಿದೇವರ ಸ್ನಾನಭೋಗಕ್ಕೆ ಮತ್ತು ನೈವೇದ್ಯಕ್ಕೆ ಕೋಡಿಯ ದಕ್ಷಿಣದಲ್ಲಿ ತೆಕ್ಕಲು ಮತ್ತರು ಭೂಮಿಯನ್ನು ದಾನ ಕೊಟ್ಟ ಬಗ್ಗೆ ಉಲ್ಲೇಖವಿದೆ. ದ್ರೋಣಗೆರೆ ತಟಾಕದಲ್ಲಿ ಅನೇಕ ದಿವ್ಯ ತೀರ್ಥಗಳಿದ್ದವು. ಇಲ್ಲಿ ಉಕ್ತನಾದ ಕಕ್ಕರಸನು ಶ್ರೀ ದ್ರೋಣಿಕಾದೇವಿಯಿಂದ ವರ ಪಡೆದಿದ್ದನೆಂದು ತಿಳಿಸಿದೆ. ಈ ಕೆರೆಯು ಗ್ರಾಮದಿಂದ ಪಶ್ಚಿಮ ದಿಕ್ಕಿನಲ್ಲಿದ್ದು ಇದು ಮಳೆಯಾಶ್ರಿತ ಕೆರೆಯಾಗಿದ್ದು, ಗ್ರಾಮದಿಂದ ಉತ್ತರಕ್ಕೆ ದ್ರೋಣಗಿರಿ (ಡೋಣಿ) ಪಕ್ಕದಲ್ಲಿಯೆ ತಟಾಕ (ಕೆರೆ) ಇರುವ ಬಗೆಗೆ ಹಾಗೂ ಈ ಊರಿನಲ್ಲಿ ನೆಲೆಸಿರುವ ಕಲಿದೇವಸ್ವಾಮಿ ಶ್ರೀಪರ್ವತ (ಶ್ರೀಶೈಲ) ಹಾಗೂ ವಾರಣಾಸಿ (ಕಾಶಿ)ಗಳಿಗಿಂತ ಹೆಚ್ಚಿನ ಮಹತ್ವ ಪಡೆದಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಈ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ ಸೋಮೇಶ್ವರ, ಕಲ್ಮೇಶ್ವರ, ಭಲ್ಲೇಶ್ವರ ದೇವಾಲಯಗಳು ಮತ್ತು ಕೋಟೆಗಳು ಬಹಳ ಪ್ರಸಿದ್ಧವಾಗಿವೆ.

**ಗದುಗಿನ ಭೀಷ್ಮಕೆರೆ:**

| | |
|---|---|
| ಗ್ರಾಮ-ಗದಗ | ಅಚ್ಚುಕಟ್ಟು ಪ್ರದೇಶ-೪೦.೦೦(ಹೆ) |
| ಜಲಾವೃತ ಪ್ರದೇಶ-೯.೦೦(ಹೆ) | ಕೆರೆಯ ಸಾಮರ್ಥ್ಯ-೬.೦೦(mcft) |
| ಏರಿಯ ಉದ್ದ-೧೨೦೦ ಮೀ. | ಏರಿಯ ಎತ್ತರ-೬.೦ ಮೀ. |
| ಏರಿಯ ಮೇಲ್ಭಾಗದ ಅಗಲ-೩.೫ ಮೀ. | |

ಗದಗ ನಗರ ಐತಿಹಾಸಿಕ, ಸಾಂಸ್ಕೃತಿಕ ಕೇಂದ್ರವಾಗಿರುವಂತೆ ಮತ್ತು ಉನ್ನತ ವ್ಯಾಪಾರ ವಾಣಿಜ್ಯ ಕೇಂದ್ರವಾಗಿದ್ದು, ಕುಂತಳ ದೇಶದ ಬೆಳ್ವಲ ನಾಡಿನ ಮಹಾಅಗ್ರಹಾರವಾಗಿತ್ತು.[೯೨] ಪ್ರಸ್ತುತ ಗದಗ ಜಿಲ್ಲೆಯಲ್ಲಿ ಮಾಸವಾಡಿ-೧೪೦, ಬೆಳ್ವಲ-೩೦೦, ಪುಲಿಗೆರೆ-೩೦೦ ಈ ಮೂರು ಪ್ರಾಚೀನ ಆಡಳಿತದ ವಿಬಾಗಗಳ ಸಮಾವೇಶಗೊಳ್ಳುತ್ತವೆ. ರಾಷ್ಟ್ರಕೂಟರ ಆಡಳಿತ ಅವಧಿಯಿಂದ ವಿಜಯನಗರ ಅರಸರ ಆಳ್ವಿಕೆಯ ಕಾಲದವರೆಗೆ ಅನೇಕ ಮನೆತನಗಳ ಆಳ್ವಿಕೆಗೆ ಒಳಪಟ್ಟ ಗದಗ ಸುಮಾರು ಸಾವಿರ ವರ್ಷಗಳ ಇತಿಹಾಸವನ್ನೇ ಹೊಂದಿದೆ. ಶಾಸನಗಳಲ್ಲಿ ಇದನ್ನು ಕರ್ತುಕ, ಕೃತಪುರ, ಕರ್ದುಗ, ಕಳ್ದುಗ, ಗಲದುರ್ಗ, ಗದುಗ್ ಎಂದು ಉಲ್ಲೇಖಿಸಲಾಗಿದೆ. ಪುರಾಣಗಳ ಕಾಲದಲ್ಲಿ ಜನಮೇಜಯ ರಾಜನು ಇಲ್ಲಿ ಸರ್ಪಯಾಗವನ್ನು ಮಾಡಿದ್ದರಿಂದ ಕೃತಪುರ ಎಂಬ ಹೆಸರು ಬಂದಿರಬಹುದೆಂಬ ಅಂಶ ಗೊತ್ತಾಗುತ್ತದೆ.

ಕುರುಕ್ಷೇತ್ರದಲ್ಲಿನ ಬ್ರಹ್ಮ ಸರೋವರ, ಜ್ಯೋತಿ ಸರೋವರಗಳ ಸೌಂದರ್ಯವನ್ನೇ ಹೋಲುವ ಭೀಷ್ಮಕೆರೆ ಇಂದಿಗೂ ಗದುಗಿನ ಆಕರ್ಷಣೆಗಳಲ್ಲಿ ಒಂದಾಗಿದೆ. ಇಂದು ಭೀಷ್ಮಕೆರೆ ಇರುವ ಪ್ರದೇಶದಲ್ಲಿ ಮಹಾಭಾರತದ ಮಹಾನಾಯಕನಾದ ಭೀಷ್ಮಾಚಾರ್ಯರು ಯಜ್ಞ ಮಾಡುತ್ತಿದ್ದರೆಂದು ಹೇಳಲಾಗಿದೆ. ಇದರಿಂದ ಇದಕ್ಕೆ ಭೀಷ್ಮಕೆರೆ ಎಂಬ ಹೆಸರು ಬಂದಿರಬಹುದು.[೯೩] ಈ ಕೆರೆಯನ್ನು ಕಲ್ಯಾಣದ ಚಾಲ್ಯುಕರ ರಾಜನಾದ ಆರನೇ ವಿಕ್ರಮಾಧಿತ್ಯನ ದಂಡನಾಯಕ ಅಮೀತದಂಡನಾಯಕನು ಈ ಕೆರೆಯನ್ನು ನಿರ್ಮಿಸಿದನೆಂದು ಹೇಳಬಹುದು.

ಈ ಕೆರೆಯು ಗ್ರಾಮದಿಂದ ದಕ್ಷಿಣ ದಿಕ್ಕಿಗೆ ಕಂಡುಬಂದಿದ್ದು, ಈಗ ಇದು ಸಾಧಾರಣ ಮಟ್ಟದಿಂದ ಕೂಡಿದ್ದು, ಇದನ್ನು ಕಲ್ಯಾಣ ಚಾಲುಕ್ಯರ ಕಾಲದ ಆರನೆಯ ವಿಕ್ರಮಾದಿತ್ಯನ ದಂಡನಾಯಕ ಅಮಿತನು ನಿರ್ಮಾಣ ಮಾಡಿದನು. ಈ ಕೆರೆ ಒಟ್ಟು ೧೦೩ ಎಕರೆಯಲ್ಲಿ ವ್ಯಾಪಿಸಿದ್ದು, ಹೂಳು ತೆಗೆಯುವ ಕಾರ್ಯ ಇತ್ತೀಚೆಗೆ ಕೈಗೊಂಡಿದ್ದು, ಈಗಾಗಲೇ ೪೪ ಎಕರೆ ಕ್ಷೇತ್ರದಲ್ಲಿ ಹೂಳೆತ್ತುವ ಕಾರ್ಯ ಮುಗಿದಿದೆ. ಕೆರೆಯ ದಂಡೆಯಲ್ಲಿ ೧.೯೦ ಕಿ.ಮೀ. ಜಾಗಿಂಗ್ ಪಥ ನಿರ್ಮಾಣ ಮಾಡಲಾಗಿದೆ. ಕೆರೆಯ ಮಧ್ಯದಲ್ಲಿ ಪಕ್ಷಿಗಳನ್ನು ರಕ್ಷಿಸಲು ಎರಡು ನಡುಗಡ್ಡೆಗಳನ್ನು ನಿರ್ಮಾಣ ಮಾಡಿದ್ದು, ೧೧೧ ಅಡಿ ಎತ್ತರದ ಬಸವೇಶ್ವರ ಮೂರ್ತಿಯ ಅನಾವರಣ ಸಧ್ಯದಲ್ಲಿ ಪೂರ್ತಿಗೊಳ್ಳುತ್ತದೆ. ಕೆರೆಯ ದಂಡೆಯ ಸುತ್ತಲೂ ಹೂ ಗಿಡಗಳಿಂದ ಕೂಡಿದ ಉದ್ಯಾನವನ್ನು ಒಳಗೊಂಡಿದೆ. ಕೆರೆಯ ಸುತ್ತಲೂ ದೀಪಗಳಿರುವುದರಿಂದ ಕೆರೆ ನಯನಮನೋಹರವಾಗಿ ಕಂಡು ಬರುತ್ತದೆ.

**ಮುಳಗುಂದದ ಕೊರಲಕೊಬ್ಬ ಕೆರೆ:**

| | |
|---|---|
| ಗ್ರಾಮ–ಮುಳಗುಂದ | ಒಟ್ಟು ವಿಸ್ತೀರ್ಣ – ಸು. ೨೫ ಎಕರೆ |
| ಅಚ್ಚುಕಟ್ಟು ಪ್ರದೇಶ–೪೬.೦೦(ಹೆ) | ಜಲಾವೃತ ಪ್ರದೇಶ–೧೩.೯೭(ಹೆ) |
| ಕೆರೆ ಸಾಮರ್ಥ್ಯ– ೧೨.೩೨ (mcft) | ಏರಿ ಉದ್ದ– ೫೦೦ ಮೀ. |
| ಏರಿ ಎತ್ತರ–೬.೫ ಮೀ. | ಏರಿ ಮೇಲ್ಭಾಗದ ಅಗಲ–೫.೨ ಮೀ. |

ಗದಗ ತಾಲೂಕಿನ ಮುಳಗುಂದವು ತಾಲೂಕು ಕೇಂದ್ರದಿಂದ ೧೫ ಕಿ.ಮೀ. ಅಂತರದಲ್ಲಿದೆ. 'ಮುಳು' ಎಂಬುದರ ಮೂಲ' ಎಂದಿದ್ದು ಇದರ ಪ್ರಾಚೀನ ಹೆಸರು ಮುಳಗುಂದ ಇದ್ದಿರಬಹುದು. ಕ್ರಿ.ಶ. ೧೧ನೇ ಶತಮಾನದಲ್ಲಿ ಈ ನಾಡಿನ ಮಲ್ಲಶಯನನೆಂಬ ಕವಿ ಈ ನಾಡನ್ನು ಮೂಲಗುಂನ್ದ ಎಂದು ಕರೆದಿದ್ದಾನೆ. ಶಾಸನಗಳಲ್ಲಿ ಈ ಪದ ಪ್ರಯೋಗವಿಲ್ಲ. ಇಲ್ಲಿ ಸಂಸ್ಕೃತದ 'ಲ' ಕಾರ 'ಳ' ಕಾರವಾಗಿದೆ. ಇಂಗ್ಲೀಷ್ ಭಾಷೆಯ 'la'ಕಾರ ಉಚ್ಚಾರದಲ್ಲಿ 'ಳ' ಕಾರವಾಗಬಹುದು. ಈ ರೀತಿಯ ಉಚ್ಚಾರ ಸಾಮ್ಯತೆಯ ಪರಿಣಾಮವಾಗಿ ಮೂಲ> ಮೂಳ>ಮುಳ ಎಂದಾಗಿದೆ.[೯೪]

ಮುಳಕುಂದ>ಮುಳಗುಂದ ಎಂಬ ಸಂಯುಕ್ತ ಪದವಾಗಿದೆ. ಈಗಿನ ಮುಳಗುಂದ ಭೌಗೋಳಿಕ ಹಿನ್ನೆಲೆ ನೋಡಿದಾಗ ಸುತ್ತಲೂ ಮುಳ್ಳು ಕಂಟಿಗಳಿಂದ ಕೂಡಿದ ಬಂಡೆಕಲ್ಲುಗಳ ಗುಡ್ಡವಿದೆ. ನೈಸರ್ಗಿಕವಾದ ಈ ಪರಿಸರದಿಂದಾಗಿ ಈ ಗ್ರಾಮಕ್ಕೆ ಮುಳಗುಂದ ಎಂದು ಹೆಸರು ಬಂದಿರಬಹುದು.[೯೫] ಆದರೆ ಮುಳಕುಂದ>ಮುಳಗುಂದ ಎಂಬುದೇ ಹೆಚ್ಚು ಸೂಕ್ತ. ಈ ಚಿಕ್ಕ ಬೆಟ್ಟ ಯಾವುದಕ್ಕೆ ಮೂಲ ಎಂಬ ಪ್ರಶ್ನೆ ಉಂಟಾಗುತ್ತದೆ. ಇಲ್ಲಿ ಮುನಿಗಳ ಶಿಷ್ಯಮಂಡಳಿ ನೀರಗುಂದ, ಒಕ್ಕುಂದ, ನವಲಗುಂದ, ನರಗುಂದ ಮುಂತಾದ ಊರುಗಳಲ್ಲಿ ಹಬ್ಬಿಕೊಂಡಿರಬೇಕು. ಗುಂದ ಎಂದು ಅಂತ್ಯವಾಗುವ ಈ ಊರುಗಳಲ್ಲಿ ಚಿಕ್ಕ ಬೆಟ್ಟದಂತಿರುವ ಗುಡ್ಡಗಳಿವೆ. ಈ ಮುನಿಗಳ ಶಾಖೆಗಳಿಗೆ ಮುಳಗುಂದವೇ ಮೂಲವಾಗಿರಬಹುದು; ಆದ್ದರಿಂದ ಮುಳಗುಂದ ಎಂದು ಆಗಿರಬಹುದು.

ಇದನ್ನು ಮುಳಗುಂದ ಎಂದು ಕರೆದಿರುವ ಮಲ್ಲಶೇಣನ ಕಾಲಕ್ಕಾಗಲೇ ಮುಳಗುಂದ ಜೈನರ ತೀರ್ಥಕ್ಷೇತ್ರವಾಗಿತ್ತು. ಆ ಕಾಲದ ಜೈನ ಬಸದಿಗಳು ಶಿಲ್ಪಾವಶೇಷಗಳು ಶಾಸನಗಳು ಈ ಮಾತಿಗೆ ನಿದರ್ಶನಗಳಾಗಿವೆ. ಆದ್ದರಿಂದ ಬಹುಜನ ವಿದ್ವಾಂಸರು ಈ ಮುನಿಗಳ ಕಾರಣವಾಗಿ ಇದಕ್ಕೆ ಮುಳಗುಂದ ಹೆಸರು ಬಂದಿರುವುದನ್ನು ಒಪ್ಪಿಕೊಂಡಿರುವುದು ಸಾಬೀತಾಗುತ್ತದೆ. ಕ್ರಿ.ಶ. ೧ನೇ ಶತಮಾನದ ಗ್ರೀಕ್ ಭೌಗೋಳಿಕ ಕಾಲ ಟಾಲ್ಮಿಯ ಬರವಣಿಗೆಯಲ್ಲಿ ಮೊರಂಡ್ ಮುಳಗುಂದವೆಂದು ತಿಳಿಯಲಾಗಿದೆ.[೯೬] ಇದು ನಿಜವಾದ ಇದರ ಪ್ರಾಚೀನತೆ ೧ನೇ ಶತಮಾನಕ್ಕೆ ಒಯ್ಯಬಹುದು.

ಮುಳಗುಂದ ಪಟ್ಟಣದಿಂದ ಉತ್ತರ ದಿಕ್ಕಿಗೆ ಕೆರೆ ಕಂಡುಬಂದಿದ್ದು, ಕ್ರಿ.ಶ. ೧೦೧೯ರ ಶಾಸನದಲ್ಲಿ 'ಕೊರಲಕಬ್ಬೆ ಕೆರೆ' ಎಂದು ಕರೆಯಲಾಗಿದೆ. ಕೊರಲಕಬ್ಬೆ ಎಂಬ ಹೆಸರು ಬರಲು ಈ ಸ್ವಯಂಭೂದೇವಾಲಯದ ಈಶಾನ್ಯ ದಿಕ್ಕಿಗೆ ಕೊರಲಕಬ್ಬೆ ದೇವಾಲಯದ ಬಗ್ಗೆ ಈ ಶಾಸನದಲ್ಲಿ ಮಾಹಿತಿ ಇದೆ.[೯೭] ಬಹುಶ: ಅದು ಪೂರ್ಣ ನಾಶವಾದಂತೆ ಕಾಣುತ್ತದೆ. ಆದರೆ ಇತ್ತೀಚೆಗೆ ಈ ದೇವಾಲಯವಿದ್ದ ಸ್ಥಳದಲ್ಲಿ ಮೇಲ್ಛಾವಣಿಯಿಲ್ಲದೆ ನಾಲ್ಕು ಕಡೆ ಸರಳ ಗೋಡೆ ನಿರ್ಮಿಸಿ ಮಧ್ಯದಲ್ಲಿ ಕೊರಲಮ್ಮನ ಮೂರ್ತಿಯಿಟ್ಟು ಪೂಜಿಸುತ್ತಿದ್ದಾರೆ. ಈ ದೇವಾಲಯದಿಂದ ಇದಕ್ಕೆ ಕೊರಲಕಬ್ಬೆ ಕೆರೆ ಎಂದು ಹೆಸರು ಬಂದಿರಬೇಕು. ಆದ್ದರಿಂದ ಈ ಕೆರೆ ಮುಳಗುಂದ ಬಹಳ ಮುಖ್ಯವಾದ ಮತ್ತು ಪ್ರಾಚೀನವಾದ ಕೆರೆ. ಸ್ವಯಂಭೂದೇವಾಲಯದ ಈಶಾನ್ಯ ದಿಕ್ಕಿಗಿರುವ ಇಲ್ಲಿಯ ಈ ಕೆರೆಗೆ ದೊಡ್ಡದೊಡ್ಡ ಬಂಡೆಗಲ್ಲುಗಳಿಂದ ಸುತ್ತಲುಗೋಡೆ ನಿರ್ಮಿಸಲಾಗಿದೆ; ಎಂದೂ ಬತ್ತದ ಈ ಕೆರೆಯ ಮಧ್ಯದಲ್ಲಿ ಪುಟ್ಟ ದ್ವಿಪದಂತೆ ಕಾಣುವ ಗಿಡಮರಗಳಿಂದ ಕೂಡಿದ ಒಂದು ದಿಬ್ಬವಿದೆ. ಕೆರೆಯ ಅರ್ಧಭಾಗದ ಸುತ್ತಲೂ ಮನೆಗಳಿದ್ದು, ಇನ್ನರ್ಧ ಭಾಗ ಬಯಲಿನಿಂದ ಕೂಡಿದೆ. ಸ್ಥಳೀಕರು ಈಗ ಈ ಕೆರೆಯನ್ನು 'ಅಬ್ಬಿಗೆರೆ' ಎಂದು ಕರೆಯುತ್ತಾರೆ.[೯೮] ಈ ಕೆರೆಯ ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿರುವ ಕಾಲುವೆಯ ಮೂಲಕ ಹೊಲಗಳಿಗೆ ನೀರನ್ನು ಪೂರೈಸುವ ವ್ಯವಸ್ಥೆ ಹೊಂದಿದೆ. ಪ್ರಸ್ತುತ ಕೆರೆಯ ದಂಡೆಯ ಮೇಲೆ ಮನೆಗಳು ನಿರ್ಮಾಣವಾಗಿ ಕೆರೆ ಪ್ರದೇಶವನ್ನು ಒತ್ತುವರಿ

ಮಾಡುತ್ತಿದ್ದಾರೆ. ಈ ಕೆರೆಯ ಮಧ್ಯದಲ್ಲಿ ದ್ವೀಪದ ಮಾದರಿಯಲ್ಲಿ ಪುಟ್ಟ ನಡುಗಡ್ಡೆ ಇದ್ದು ಕೆರೆಯ ಸೌಂದರ್ಯವನ್ನು ಹೆಚ್ಚಿಸಿದೆ. ಇಲ್ಲಿನ ಹುಣಸೆ ಮರ ಹಾಗೂ ಗಿಡಗಂಟೆಗಳಲ್ಲಿ ಪಕ್ಷಿಗಳು ನೆಲೆಸುವ ತಾಣವಾಗಿದೆ.

ಇಂದು ಈ ಕೆರೆಯ ನೀರು ಬಳಕೆಗೆ ಬಾರದ ರೀತಿಯಲ್ಲಿ ಮಲೀನಗೊಂಡಿದ್ದು, ಪಟ್ಟಣದ ಚರಂಡಿಯ ಕೊಳಚೆ ನೀರು ಸೇರುತ್ತಿದೆ. ಕೆರೆಯ ಸುತ್ತಮುತ್ತಲೂ ಮನೆಗಳಿದ್ದು ಶೌಚಾಲಯದ ನೀರು ಕೆರೆಯನ್ನು ಸೇರುವುದರಿಂದ ನೀರು ಕಲುಷಿತಗೊಂಡಿದೆ. ಒಂದು ಕಾಲದಲ್ಲಿ ಗ್ರಾಮದ ಜನರ ಕುಡಿಯುವ ನೀರಿನ ಬವಣೆಯನ್ನು ನೀಗಿಸುವ ಕೆರೆ ಇದಾಗಿತ್ತು. ಈಗ ಮಳೆಗಾಲದಲ್ಲಿ ಅಬ್ಬಿಕೆರೆಯ ನೀರು ತುಂಬಿಕೊಂಡಿದ್ದರೂ ಅದರಲ್ಲಿ ಕೈತೊಳೆಯಲು ಆಗದಷ್ಟು ಮಲೀನಗೊಂಡಿದೆ.

ಮುಳಗುಂದದ ಸುತ್ತಲೂ ನಾಗರಕೆರೆ, ಮಾಲಕೆರೆ, ಹಾಲಕೆರೆ, ಬಳ್ಳಕೆರೆಗಳಿದ್ದವು. ಈ ಪ್ರದೇಶವು ಚಿಕ್ಕ ಬೆಟ್ಟ ಗುಡ್ಡಗಳ ಸಾಲುಗಳಿಂದ, ಏರಿಳಿತವಾದ ದಿನ್ನೆಗಳಿಂದ ಕೂಡಿರುವುದರಿಂದ ನೈಸರ್ಗಿಕವಾಗಿ ಕೆಲವು ಜಲಾಶಯಗಳಾಗಿ ನಿರ್ಮಾಣಗೊಂಡಿರುತ್ತವೆ. ಶಾಸನಗಳಲ್ಲಿ ಅವುಗಳನ್ನು ಕೊಳಗಳೆಂದು ಕರೆಯಲಾಗಿದೆ. ಬೆಳ್ಗೊಳ,[೯೯] ಕೋಡಿಹಳ್ಳ[೧೦೦] ಎಂಬ ಹೆಸರಿನ ನೀರಾವರಿಯ ಮೂಲಗಳಿದ್ದವು ಎಂದು ಕಂಡುಬರುತ್ತದೆ. ಮುಳಗುಂದದ ಸುತ್ತಲೂ ನಾಗರಕೆರೆ, ಮಾಲಕೆರೆ, ಆಲಕೆರೆ, ಬಳ್ಳಕೆರೆಗಳು ಇದ್ದವು. ಇದರಿಂದ ಈ ಭಾಗವು ನೀರಾವರಿಗೆ ಮೂಲ ಕೆರೆಗಳೇ ಆಧಾರವಾಗಿತ್ತೆಂದು ತಿಳಿದುಬರುತ್ತದೆ.

**ಮುಳಗುಂದದ ದಾವಲ್ ಮಲ್ಲಿಕ್ ದರ್ಗಾದ ಹಾಲರ್ತಿ ಕೊಳ:**

ಮುಳಗುಂದದಿಂದ ದಕ್ಷಿಣಕ್ಕೆ ಒಂದು ಕಿ.ಮೀ. ಅಂತರದಲ್ಲಿ ಹಿಂದೂ–ಮುಸ್ಲಿಂ ಭಾವೈಕ್ಯತೆಯ ಸಂಕೇತವಾಗಿರುವ ದಾವಲ್‌ಮಲ್ಲಿಕ್ ದರ್ಗಾ ಇದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಲ್ಲಿಕಾರ್ಜುನಸ್ವಾಮಿಗಳು ಇದ್ದ ಉಲ್ಲೇಖ ನಗರೇಶ್ವರ ದೇವಾಲಯದಲ್ಲಿ ಇತ್ತೀಚಿಗೆ ದೊರೆತ ಶಾಸನದಲ್ಲಿದೆ. ಈ ಸ್ವಾಮಿಗಳ ಪರಮಶಿಷ್ಯ ದಾವಲ್. ಈತ ಅವರ ಸೇವೆಮಾಡಿಕೊಂಡಿದ್ದನು. ಇವರ ಮರಣಾನಂತರ ಶಿಷ್ಯ ಗುರುಗಳ ಅನ್ಯೋನ್ಯತೆಯ ಸಂಕೇತವಾಗಿ ಬೆಟ್ಟದ ಮೇಲೆ ದಾವಲಮಲಿಕ ಮಸೀದಿ ನಿರ್ಮಿತವಾಗಿದೆ. ಈ ಬೆಟ್ಟದ ಕೆಳಗೆ ಮಲ್ಲಿಕಾರ್ಜುನ ದೇವಾಲಯವಿದೆ. ಪ್ರಕೃತಿ ಸೌಂದರ್ಯದಿಂದ ಕಂಗೊಳಿಸುತ್ತಿರುವ ಈ ಬೆಟ್ಟದ ಮೇಲಿನ ದಾವಲ್‌ಮಲಿಕನ ಮಸೀದಿಗೆ ಬಾಗಿಲಿಲ್ಲ. ಈ ದೇವರಿಗೆ ಪ್ರತಿ ಗುರುವಾರ ಮತ್ತು ಅಮಾವ್ಯಾಸೆ ದಿನ ವಿಶೇಷ ಪೂಜೆ ಸಲ್ಲುತ್ತದೆ. ಸಕ್ಕರೆ, ಮಾದಲಿಯನ್ನು ನೈವೇದ್ಯಕ್ಕೆ ಬಳಸುತ್ತಾರೆ. ದೇವರದರ್ಶನ ಪೂರ್ವದಲ್ಲಿ ಇಲ್ಲಿಯ ಬೆಟ್ಟದ ಕೆಳಗಿರುವ ಹಾಲರ್ತಿ ಕೊಳದಲ್ಲಿ ಪವಿತ್ರವೆಂದು ನಂಬುತ್ತಾರೆ.[೧೦೧] ಆದ್ದರಿಂದ ಈ ಕೊಳದಲ್ಲಿ ಸ್ನಾನ ಮಾಡಿ ಹೋಗುತ್ತಾರೆ. ಇದರಿಂದ ತಮ್ಮ ಮನಸ್ಸಿನ ಆಸೆ ಪೂರೈಸುತ್ತದೆಂದೂ, ರೋಗಗಳು ನಿವಾರಣೆಯಾಗುವೆಂದು ನಂಬಿಕೆಯಿದೆ.

ಈ ಕೂಳ ಮಳೆಯಾಶ್ರಿತವಾಗಿದ್ದು, ಬೆಟ್ಟದ ಎಡಬದಿಗೆ ಇದು ಕಂಡುಬರುತ್ತದೆ. ಈ ಕೆರೆಗೆ ನಾಲ್ಕು ಕಡೆಗೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗದಲ್ಲಿ ಮಾತ್ರ ಅಲಲ್ಲಿ ಕಲ್ಲುಗಳನ್ನು ಇಳಿಜಾರುಯಾಗಿ ಜೋಡಿಸಿರುತ್ತಾರೆ. ಕೂಳದ ಆಶ್ರಯದಲ್ಲಿ ಚಿಕ್ಕದಾದ ಗ್ರಾಮ ನಿರ್ಮಾಣವಾಗಿದೆ. ಈ ಗ್ರಾಮದಲ್ಲಿ ಕೇವಲ ಮುಸ್ಲಂ ಸಮುದಾಯದವರು ಮಾತ್ರ ವಾಸಿಸುತ್ತಾರೆ. ಈ ದಾವಲ್ ಮಲ್ಲಿಕ್ ಜನರಿಗೆ ಈ ಕೂಳದ ನೀರು ಜೀವಜಲವಾಗಿದೆ ಎಂದು ಹೇಳಬಹುದು.

**ಕೌಜಗೇರಿ ಕೆರೆ :**

| | |
|---|---|
| ಗ್ರಾಮ–ಕೌಜಗೇರಿ | ಅಚ್ಚುಕಟ್ಟು ಪ್ರದೇಶ– ೮೦೦.೦೦ (ಹೆ) |
| ಜಲಾವೃತ ಪ್ರದೇಶ– ೧೮.೦೦ (ಹೆ) | ಕೆರೆಯ ಸಾಮರ್ಥ್ಯ–೪೨.೦೦ (mcft) |
| ಏರಿಯ ಉದ್ದ– ೪೪೦ ಮೀ | ಏರಿಯ ಎತ್ತರ– ೧೦.೨ ಮೀ. |
| ಏರಿಯ ಮೇಲ್ಭಾಗದ ಅಗಲ– ೨.೨ ಮೀ. | |

ಪ್ರಾಚೀನ ಶಾಸನಗಳಲ್ಲಿ ಕೋವುಜಗೆರೆ, ಕವುಜಗೆರೆ, ಕವಜಗೆರೆ ಎಂದೇ ಉಲ್ಲೇಖವಾಗಿರುವ ಈ ಗ್ರಾಮವು ರೋಣ–ಧಾರವಾಡ ಮಾರ್ಗದಲ್ಲಿರುವ ಬೆಳವಣಿಕಿ ಗ್ರಾಮದಿಂದ ಉತ್ತರಕ್ಕೆ ಎರಡೂವರೆ ಕಿ.ಮೀ ದೂರದಲ್ಲಿದೆ. ಜಿಲ್ಲಾಕೇಂದ್ರದಿಂದ ೩೮ ಕಿ.ಮೀ ಅಂತರದಲ್ಲಿದೆ. ಈ ಗ್ರಾಮ ನಿಷ್ಪತ್ತಿಗೆ ಸಂಬಂಧಿಸಿದಂತೆ ಎರಡು ಐತಿಹ್ಯಗಳುಂಟು. ಕೊವುಜ ಎಂಬುವನಿಂದ ನಿರ್ಮಿಸಲ್ಪಟ್ಟ ಕೆರೆಯ ಸಮೀಪ ಅತೀ ಎತ್ತರ ನೆಲೆಯಾಗಿ ಈ ಗ್ರಾಮಕ್ಕೆ ಕೌವುಜಗೆರೆ ಎಂಬ ಹೆಸರು ಬಂದಿತು. ಕ್ರಮೇಣವಾಗಿ ಅದೇ ಕೌಜಗೇರಿಯಾಗಿ ರೂಪಾಂತರಗೊಂಡಿರಬೇಕು ಎಂದು ಎಂ. ಎಂ. ಕಲಬುರ್ಗಿಯವರ ಅಭಿಪ್ರಾಯ. ಕವುಜ/ಕೌಜಗ ಪಕ್ಷಿಗಳು ಈ ಪರಿಸರದಲ್ಲಿ ಇಂದಿಗೂ ಅಧಿಕ ಸಂಖ್ಯೆಯಲ್ಲಿದ್ದು ನೀರು ಕುಡಿಯುಲು ಕೆರೆಗೆ ಬರುತ್ತವೆ. ಕೌಜ ಪಕ್ಷಿಗಳು ನೀರು ಕುಡಿಯುವ ಕೆರೆ ಕೌಜ ಕೆರೆಯಾಗಿಸಿ ನಂತರದಲ್ಲಿ ಅಲ್ಲೇ ನೆಲೆ ನಿಂತ ಜನ ತಮ್ಮ ತಂಗುದಾಣ ಕೌಜಗೆರೆ ಎಂದು ಸುತ್ತಮುತ್ತಲಿನ ಗ್ರಾಮಗಳ ನಿವಾಸಿಗಳಿಗೆ ಹೇಳಲಾರಂಭಿಸಿದ್ದರಿಂದ ಇದಕ್ಕೆ ಕೌಜಗೆರೆ ಎಂಬ ಹೆಸರು ಬಂದಿರಬೇಕು.[೧೦೨] ಸುಮಾರು ೪೦೦ ಮನೆ, ೪೦೦೦ ಜನಸಂಖ್ಯೆಯುಳ್ಳ ಈ ಗ್ರಾಮ ೨೫೦೦ ಹೆಕ್ಟೇರ್ ಭೂ ಕ್ಷೇತ್ರವನ್ನು ಹೊಂದಿದೆ. ಕಪ್ಪು ಮಣ್ಣಿನಿಂದ ಕೂಡಿದ ಈ ಗ್ರಾಮ ಸಮರ್ಪಕವಾಗಿ ಮಳೆ ಆದಲ್ಲಿ ಸಮೃದ್ಧವಾದ ಫಸಲನ್ನು ಪಡೆದು ಜನರು ಶ್ರೀಮಂತರನ್ನಾಗಿ ಇರಿಸಬಲ್ಲದ್ದಾಗಿದೆ.

ಕೆರೆ ಗ್ರಾಮದಿಂದ ಈಶಾನ್ಯ ದಿಕ್ಕಿಗೆ ಕಂಡುಬಂದಿದ್ದು, ಅತ್ಯಂತ ವಿಶಾಲವಾದ ಮೂರು ಸರಣಿ ಕೆರೆಗಳಿಂದ ಚೌಕಾಕಾರವಾಗಿವೆ. ಈಗ ಈ ಕೆರೆಯು ಒತ್ತುವರಿಯಾಗುತ್ತಿದ್ದು, ಹೂಳೆತ್ತುವ ಕಾರ್ಯ ಮಾಡದೇ ಕೆರೆಯು ತನ್ನ ಆಳ ಮತ್ತು ಅಗಲವಾದ ವಿಸ್ತೀರ್ಣವನ್ನು ಕಳೆದುಕೊಳ್ಳುತ್ತಿದೆ. ಈ ಕೆರೆಯ ನೀರನ್ನು ಕುಡಿಯಲು, ಮೀನುಗಾರಿಕೆ ಮತ್ತು ಬಟ್ಟೆ ತೊಳೆಯಲು, ಜಾನುವಾರುಗಳಿಗೆ

ಬಳಕೆಯಾಗುತ್ತಿದ್ದು, ಇದರ ವ್ಯಾಪ್ತಿಯಲ್ಲಿ ಬರುವ ಇಲಾಖೆಯವರು ಗ್ರಾಮಸ್ಥರು ಇದರ ಕಡೆಗೆ ಗಮನಹರಿಸಬೇಕು.

**ಜಕ್ಕಲಿ ಕೆರೆ:**

ಗ್ರಾಮ–ಜಕ್ಕಲಿ ಅಚ್ಚುಕಟ್ಟು ಪ್ರದೇಶ–೬೦೦.೦೦ (ಹೆ)

ಜಲಾವೃತ ಪ್ರದೇಶ–೧೬.೦೦ (ಹೆ) ಕೆರೆಯ ಸಾಮರ್ಥ್ಯ–೩೨.೦೦ (mcft)

ಏರಿಯ ಉದ್ದ–೩೪೦ ಮೀ. ಏರಿಯ ಎತ್ತರ–೮.೨ ಮೀ.

ಏರಿಯ ಮೇಲ್ಭಾಗದ ಅಗಲ–೨.೫೦ ಮೀ.

ಜಕ್ಕಲಿ ಗ್ರಾಮವು ರೋಣ ತಾಲೂಕಿನ ಒಂದು ಗ್ರಾಮ. ರೋಣದಿಂದ ಆಗ್ನೇಯಕ್ಕೆ ೧೦ ಕಿ.ಮೀ ಗದಗ ಜಿಲ್ಲೆಯಿಂದ ಈಶಾನ್ಯಕ್ಕೆ ೩೩ ಕಿ.ಮೀ. ಅಂತರದಲ್ಲಿದೆ. ನರೇಗಲ್ಲಿನಿಂದ ವಾಯುವ್ಯಕ್ಕೆ ೫ ಕಿ.ಮಿ ದೂರದಲ್ಲಿರುವ ರೋಣ–ನರೇಗಲ್ಲ ರಸ್ತೆಯಲ್ಲಿರುವ ಈ ಗ್ರಾಮವು ಪ್ರಾಚೀನ ಶಾಸನಗಳಲ್ಲಿ ಜಕ್ಕಲಿಯೆಂದೇ ಉಲ್ಲೇಖಿತಗೊಂಡಿದ್ದು ಹಿಂದೆ ಇದು ಬೆಳ್ವೊಲ–೩೦೦ಕ್ಕೆ ಸೇರಿದ ಮತ್ತು ನರೇಗಲ್ಲ–೧೨ ಸೇರಿದ್ದು, ೨೦೦ ಮಹಾಜನರಿಂದ ಕೂಡಿದ ಅಗ್ರಹಾರವಾಗಿತ್ತು. ಚಾರಿತ್ರಿಕವಾಗಿ ಬಾದಾಮಿ ಚಾಲುಕ್ಯರಷ್ಟೇ ಪ್ರಾಚೀನವಾದ ಈ ಊರಿನ ೫ ಶಾಸನಗಳು ವರದಿಯಾಗಿದ್ದು, ಅವುಗಳಲ್ಲಿ ಬಾದಾಮಿ ಚಾಲುಕ್ಯರ ಅರಸ ವಿಜಯಾದಿತ್ಯನ ಕಾಲದ ಸುಮಾರು ಕ್ರಿ.ಶ. ೮ನೇ ಶತಮಾನದ ವೀರಗಲ್ಲು ಪ್ರಾಚೀನದ್ದಾಗಿದೆ. ಕಲ್ಮೇಶ್ವರ ಗುಡಿಯ ಮುಂದೆ ಇರುವ ೬ನೇ ವಿಕ್ರಮಾದಿತ್ಯನ ಕ್ರಿ.ಶ. ೧೧೧೭ರ ಶಾಸನವು ಬಹಳ ಹಾಳಾಗಿದ್ದು, ಉಳಿದಿರುವ ಭಾಗದಿಂದ ಇದು ಜಿನಾಲಯಕ್ಕೆ ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ. ಸಂಗಮೇಶ್ವರ ಗುಡಿಯ ಮುಂದೆ ಇರುವ ಕ್ರಿ.ಶ. ೧೧೨೦ರ ಶಾಸನ[೧೦೩] ಕುಮಾರ ಚಾಲುಕ್ಯ ಸೋವಿದೇವರಸ (ಮೂರನೇ ಸೋಮೇಶ್ವರ) ಊರ ಹೊರಗೂ ಮಠದ ಶ್ರೀ ಸೋಮೇಶ್ವರ ದೇವರಿಗೆ ಸಂಬಂಧಿಸಿದ ಭೂಮಿಯ 'ಅರವಣ' ಎಂಬ ತೆರಿಗೆಯನ್ನು ಊರಿನ ೨೦೦ ಮಹಾಜನರಿಗೆ ದತ್ತಿ ಬಿಟ್ಟ ವಿಷಯವನ್ನು ತಿಳಿಸಿದರೆ, ಕ್ರಿ.ಶ. ೧೧೩೯ರ ಶಾಸನ[೧೦೪] ದಂಡನಾಯಕ ಮಹಾದೇವಯ್ಯನು ಜಕ್ಕಲಿ ಕೆರೆಗೆ "ವಚ್ಚರದ(ಲು) ಬಿಟ್ಟಧರ್ಮಂ ಬಣ್ಣಿಗದರೆಯ ದಂಡನಾಯಕ ಮೊರಗು... ಬನ್ನಗದರೆಯ ಇನ್ನ ಧರ್ಮಂ ಪ್ರತಿಪಾಳಿಸುವ ಜಕ್ಕಲಿ ಕೆರೆ ಇನ್ನೊಬ್ಬರ ಕೀತಿಯನ್ನಂದಡೆ ಸ್ವಸ್ತಿ ಕೆರೆಯ ತೋಟ ಬಿಟ್ಟ" ವಿವರವಿದೆ. ೩ನೆಯ ಸೋಮೆಶ್ವರನ ದಂಡನಾಯಕ ಮಹಾದೇವನು ಜಕ್ಕಲಿ ಕೆರೆಗೆ 'ಬಣ್ಣಗ ದೆರೆ' ತೆರಿಗೆಯನ್ನು ಹಾಕುತ್ತಿದ್ದನು. ಇದರಿಂದ ಬಂದ ಹಣದಿಂದ ಕೆರೆಯನ್ನು ದುರಸ್ತಿಗೊಳಿಸುತ್ತಿದ್ದನು. ಈ ಕೆರೆಗೆ ಭೂ ದಾನ ನೀಡಿದನೆಂದು ಈ ಶಾಸನದಿಂದ ತಿಳಿದುಬರುತ್ತದೆ.

ಜಕ್ಕಲಿ ಗ್ರಾಮವು ಜಾಣ ಜಕ್ಕಲಿಯೆಂದೇ ಕರೆಯಿಸಿಕೊಂಡ ಗ್ರಾಮ ಜಕಣಾಚಾರ್ಯರಿಂದ ನಿರ್ಮಿಸಿದ ಸೋಮೇಶ್ವರ ದೇವಾಲಯ ಅನೇಕ ಮಠಮಾನ್ಯಗಳು ಇಲ್ಲಿ ಇವೆ. ಕರ್ನಾಟಕ

ಏಕೀಕರಣದ ರೂವಾರಿ ಸ್ವಾತಂತ್ರ್ಯ ಹೋರಾಟಗಾರ ದಿ. ಅಂದಾನಪ್ಪ ದೊಡ್ಡಮೇಟಿ ಇವರು ಜಕ್ಕಲಿ ಗ್ರಾಮದವರಾಗಿದ್ದು, ಇವರಿಂದ ಈ ಗ್ರಾಮಕ್ಕೆ ಹೆಚ್ಚಿನ ಮಹತ್ವ ಬಂದಿದೆ. ಗ್ರಾಮದ ಮಧ್ಯದಲ್ಲಿ ಕೆರೆ ಕಂಡುಬಂದಿದ್ದು, ಇದು ಇಲ್ಲಿಯ ಜನರ ಜೀವಾಳವಾಗಿದೆ. ಈ ನೀರನ್ನು ಕುಡಿಯುವುದಕ್ಕೆ ಮತ್ತು ಬೇರೆ ಕೆಲಸ ಕಾರ್ಯಗಳಿಗೆ ಉಪಯೋಗಿಸುತ್ತಾರೆ. ಈ ಕೆರೆಯು ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗ ದಪ್ಪ ದಪ್ಪವಾದ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ಪೂರ್ವಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಈ ಕೆರೆಯು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಒಳಪಟ್ಟಿದ್ದು ಇದನ್ನು ಜೀರ್ಣೋದ್ಧಾರ ಮಾಡಿದರೆ ಇನ್ನೂ ಹೆಚ್ಚಿನ ಜಲಸಂಗ್ರಹದ ವ್ಯವಸ್ಥೆ ಆಗುತ್ತದೆ.

**ಯಳವತ್ತಿ ಕೆರೆ :**

| | |
|---|---|
| ಗ್ರಾಮ-ಯಳವತ್ತಿ | ಅಚ್ಚುಕಟ್ಟು ಪ್ರದೇಶ-೪೧.೦೦ (ಹೆ) |
| ಜಲಾವೃತ ಪ್ರದೇಶ-೧೧.೦೦(ಹೆ) | ಕೆರೆಯ ಸಾಮರ್ಥ್ಯ-೧೦.೩೪ (mcft) |
| ಏರಿಯ ಉದ್ದ-೫೦೦ ಮೀ | ಏರಿಯ ಎತ್ತರ-೬ ಅಡಿ |
| ಏರಿಯ ಮೇಲ್ಭಾಗದ ಅಗಲ-೫ ಅಡಿ | ತೂಬಿನ ಸಂಖ್ಯೆ-ಇಲ್ಲಾ |

ಈ ಗ್ರಾಮವು ಗದಗದಿಂದ ನೈರುತ್ಯಕ್ಕೆ ೨೬ ಕಿ.ಮೀ ದೂರದಲ್ಲಿದೆ. ಯಳವತ್ತಿಯು ಇತಿಹಾಸ ಪ್ರಸಿದ್ಧ ಗ್ರಾಮವಾಗಿದ್ದು ಸುಮಾರು ೧೦ನೇ ಶತಮಾನದಲ್ಲಿ ಅಗ್ರಹಾರ ಕೇಂದ್ರವಾಗಿ ಮೆರೆದಿತ್ತು. ಇದರ ಪೂರ್ವ ಹೆಸರು 'ಮೃದುಪುರ'. ಈ ಅಗ್ರಹಾರಗಳು ಪ್ರಾಚೀನ ಕಾಲದ ವಿಶ್ವವಿದ್ಯಾಲಯಗಳಂತೆ ಕಾರ್ಯನಿರ್ವಹಿಸುತ್ತಿದ್ದವು. ಬಿಜಾಪುರ ಜಿಲ್ಲೆಯ ಸಾಲೋಟಗಿಯು ಪ್ರಾಚೀನ ಕರ್ನಾಟಕದ ಅಗ್ರಹಾರವೆಂಬುದು ಅಧ್ಯಯನದಿಂದ ಗೊತ್ತಾಗುತ್ತದೆ. ಸಾಲೋಟಗಿ ಮತ್ತು 'ಮೃದಪುರ' (ಯಳವತ್ತಿ) ಅಗ್ರಹಾರಗಳಲ್ಲಿ ವೇದ ಅಧ್ಯಯನ ಮತ್ತು ಧರ್ಮಶಾಸ್ತ್ರ ಗ್ರಂಥಗಳ ಸೂಪ್ತಿಗಳನ್ನು ಪಠಣ ಮಾಡುವ ಮೌಲ್ಯಯುತ ಶಿಕ್ಷಣ ಪ್ರಸಾರವು ನಡೆಯುತ್ತಿತ್ತು. ಈ ದೃಷ್ಟಿಯಿಂದ ಮೃದಪುರದ ಅಗ್ರಹಾರ ಕೇಂದ್ರಕ್ಕೆ ವಿದ್ಯಾಕಾಂಕ್ಷಿಗಳು ದೂರದ ಊರಿನಿಂದ ಬರುತ್ತಿದ್ದರೆಂದು ಯಳವತ್ತಿ ಗ್ರಾಮದಲ್ಲಿ ದೊರಕಿದ ಪ್ರಾಚೀನ ಶಾಸನಗಳ ಮುಖಾಂತರ ಗೊತ್ತಾಗುತ್ತದೆ. ಕ್ರಿ.ಶ. ೧೮೪೬ನೇ ಇಸ್ವಿಯ ಈಸ್ಟ್ ಇಂಡಿಯಾ ಕಂಪನಿಯು ಬ್ರಿಟಿಷ್ ಅಧಿಕಾರಶಾಹಿ ಆಡಳಿತದಲ್ಲಿ ಯಳವತ್ತಿ ಮತ್ತು ಪಕ್ಕದ ಹೊಳಲಾಪೂರ ಗ್ರಾಮಗಳನ್ನು ಸಾಂಗಲಿ ಮಹಾರಾಜರಿಗೆ ಇನಾಂ ಆಗಿ ಕೊಡಲಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ದೊರಕುವವರೆಗೂ ಈ ಗ್ರಾಮದ ಆಡಳಿತವು ಸಾಂಗಲಿ ಸಂಸ್ಥಾನಕ್ಕೆ ಒಳಪಟ್ಟಿತ್ತು.[೧೦೪]

ಮೃದಪುರವಾಗಿದ್ದ ಯಳವತ್ತಿಯನ್ನು ಕಾಲಕ್ರಮೇಣ ಶಿರಹಟ್ಟಿ ಖಾನಗೌಡ್ರ ದೇಸಾಯಿ ಇವರು ವಿಪರೀತ ಬರಗಾಲಕ್ಕೆ ತುತ್ತಾಗಿ ಕಂದಾಯ ಕಟ್ಟದಂತಹ ಸ್ಥಿತಿಯಲ್ಲಿದ್ದಾಗ ಒತ್ತೆರೂಪದಲ್ಲಿ

ಪಡೆದುಕೊಂಡರು. ಅಂದಿನಿಂದ ಮೃದಪುರದ ಬದಲಾಗಿ ಯಳವತ್ತಿ ಎಂದು ಹೆಸರು ಬದಲಾಯಿಸಿದರು. ಈ ಗ್ರಾಮದಲ್ಲಿ ಐತಿಹಾಸಿಕ ಕುರುಹು ಆಗಿ ಒಂದು ಕೋಟೆ ಇದೆ.[೧೦೫] ಈ ಶಿರಹಟ್ಟಿಯ ಖಾನಗೌಡ್ರ ದೇಸಾಯಿಯವರೇ ನಿರ್ಮಿಸಿದ್ದಾರೆಂದು ಗ್ರಾಮದ ಇತಿಹಾಸದಿಂದ ತಿಳಿಯುತ್ತದೆ. ಬಾದಾಮಿ ಚಾಲುಕ್ಯರು, ಹೊಯ್ಸಳರು, ಚೇಳರ ಅಡಳಿತ ಕಾಲದಲ್ಲಿ ಇಲ್ಲಿನ ಶಿವಗುಂಡಲಿಂಗೇಶ್ವರ ದೇವಾಲಯವು ಜಾಗೃತಿ ಸ್ಥಳವೆಂದು ಪ್ರಸಿದ್ಧಿ ಪಡೆದಿತ್ತು.

ಕ್ರಿ.ಶ.೧೧೫೭ರ ಶಾಸನದಲ್ಲಿ[೧೦೬] ಈ ಕೆರೆಯ ಕುರಿತು "ಶ್ರೀಮತ್ತ್ರೈಲೋಕತಿಳಕ ಭೂಮಹೀರನುಮಾವರಂ ಸ್ವಯಂಭು ಪ್ರಭುವೀ ಗ್ರಾಮಾಧಿಪಗ್ಗೃಳ್ದಿ ಶಂ ಕಾಮಹರಂ ಶಂಕರಂಗೆ ಕುಡುಗಭಿಮತಮಂ॥ವೃತ್ತ॥ಬೆಳೆದೆರೆಗಿರ್ದ್ದ ಶಾಳಿ ಪರಿ ಪೂರ್ಣ್ನತಟಾಕಮನೂರನ ದೇವತಾನಿಳಯವಪಾರ ಸಾರಸಹಕಾರ ವನಾವಳಿ ಪೂಗ ನಾಗಸತ್ಥಳವನರಾಜಿಯಿಂದವೆಸೆದೊಪ್ಪವದಿಂತಿದೆನಲ್ಕೆ ಬಣಿಸಲ್ಕಳವೆ ಫಣೀಶ್ವರಂ" ಈ ಕೆರೆಗೆ ಶಂಕರಯ್ಯ ನಾಯಕನು ದಾನ ನೀಡಿದ ಬಗ್ಗೆ ಮಾಹಿತಿ ಇದೆ. ಶ್ರೀ ಮಹಾಮಹಿಮ ಗುಂಡೇಶ್ವರ ದೇವಾಲಯ ಮತ್ತು ಕೆರೆ ಗ್ರಾಮದಿಂದ ಪಶ್ಚಿಮದಿಕ್ಕಿಗೆ ಕಂಡುಬಂದಿದ್ದು, ಇದು ಇಲ್ಲಿಯ ಜನರ ಜೀವಾಳವಾಗಿದೆ. ಈ ಕೆರೆಯ ಪಶ್ಚಿಮ ದಿಕ್ಕಿನ ದಂಡೆಯ ಮೇಲೆ ಪ್ರಾಚೀನವಾದ ಗುಂಡೇಶ್ವರ ದೇವಾಲಯ ಮತ್ತು ಕಟ್ಟೆಯ ಮೇಲೆ ದೀಪಸ್ಥಂಭವನ್ನು ಕಾಣಬಹುದು. ಈ ದೇವಾಲಯವು ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದ್ದರಿಂದ ಕೆರೆಯು ಇವರ ಕಾಲದಲ್ಲಿ ನಿರ್ಮಾಣಗೊಂಡಿದೆ. ಈ ಕೆರೆ ಬಹು ಪ್ರಾಚೀನವಾಗಿದೆ ಎಂಬುದು ಜನರ ಅಭಿಪ್ರಾಯವಾಗಿದೆ. ಇಂದಿಗೂ ಊರಿನ ಜನರು ಈ ಕೆರೆಯ ನೀರನ್ನು ಬಳಸುತ್ತಿದ್ದಾರೆ.

**ಕಣವಿಯ ನಾಗನ ಕೆರೆ :**

| | |
|---|---|
| ಗ್ರಾಮ-ಕಣವಿ | ಅಚ್ಚುಕಟ್ಟು ಪ್ರದೇಶ-೩೬.೯೯(ಹೆ) |
| ಜಲಾವೃತ ಪ್ರದೇಶ-೧೦.೩೪(ಹೆ) | ಕೆರೆಯ ಸಾಮರ್ಥ್ಯ- ೦೯.೮೮(mcft) |
| ಏರಿಯ ಉದ್ದ- ೪೫೪ ಮೀ. | ಏರಿಯ ಎತ್ತರ- ೨.೦೦ ಮೀ. |
| ಏರಿಯ ಮೇಲ್ಭಾಗದ ಅಗಲ-೧.೫೦ ಮೀ. | |

ಕಣವಿ ಗ್ರಾಮವು ಗದಗ ತಾಲೂಕಿನ ಒಂದು ಚಿಕ್ಕ ಗ್ರಾಮ. ಗದಗನಿಂದ ೧೫ ಕಿ.ಮೀ, ಮುಳಗುಂದದಿಂದ ೭ ಕಿ.ಮೀ ದೂರದಲ್ಲಿರುವ ಇದನ್ನು ಶಾಸನಗಳಲ್ಲಿ ಕಣಿ, ಕಣಿವೂರು, ಕಣಿಯ, ಕಣವಿ ಎಂದು ಕರೆಯಲಾಗಿದೆ. ಈ ಗ್ರಾಮವು ನೈಸರ್ಗಿಕವಾಗಿ ಇಳಿಜಾರಾದ ಕಣವಿಯಂತಿರುವ ತಗ್ಗು ಪ್ರದೇಶದಲ್ಲಿ ಇರುವುದರಿಂದ ಸಹಜವಾಗಿಯೇ ಈ ಹೆಸರು ಬಂದಿರಬೇಕು. ಇದು ಪ್ರಾದೇಶಿಕ ವೈಲಕ್ಷಣದಿಂದ ಬಂದಂಥ ಸ್ಥಳನಾಮ ಎಂಬುದು ಸ್ಪಷ್ಟ. ಕಣಿ>ಕಣಿಯ>ಕಣಿವಿ>ಕಣಿವೂರು ಎಂದಾಗಿರುವಲ್ಲಿ ಯ>ವ ಕಣಿವೂರು ಎಂಬುವುದನ್ನು ಈಗ ಕಣವಿ ಎಂದು ಕರೆಯುತ್ತಾರೆ. ಕ್ರಿ.ಶ.

೧೧೦೫ರ ಶಾಸನದಲ್ಲಿ[೧೦೭] ಕಣವಿಯ ಬಗ್ಗೆ ಈ ರೀತಿ ಉಲ್ಲೇಖವಿದೆ. ಕಣವಿ ಚೆಲುವಿನ ಆಗರವಾಗಿತ್ತೆಂದೂ, ಅದನ್ನು ಹೋಲುವ ಊರು ಈ ಧರಣಿಯಲ್ಲಿಯೇ ಮತ್ತೊಂದಿಲ್ಲವೆಂದು ಬಲ್ಲವರು ಮೆಚ್ಚಿ ಬಣ್ಣಿಸುತ್ತಿದ್ದಾರೆಂಬುದು ಅತಿಶಯೋಕ್ತಿಯ ಮಾತಲ್ಲ. ಈಗಲೂ ಗಿಡ-ಮರ, ತೋಟ-ಪಟ್ಟಿಗಳಿಂದ, ಹಳ್ಳ-ಕೊಳ್ಳ, ಕೆರೆ-ಬಾವಿಗಳಿಂದ ಚೆಲುವಿನ ಕಣವಿಯಾಗಿದೆ. ಮತ್ತು ಇಲ್ಲಿಯ ಜನ ತನ್ನವರು, ಮಾನ್ಯರು, ಮಿಕ್ಕವರು, ಗಣಿಗಳು ಆದ ಏಳನೂರು ಒಕ್ಕಲು ಮಕ್ಕಳೆಂದು ಶೋಭಾಯಮಾನವಾಗಿದ್ದರು. ಇಂತಹ ಹಿರಿಮೆಯಿಂದಿರುವ ಕಣಿವೆಯನ್ನು ಬಣ್ಣಿಸುವುದು ಅಸಾಧ್ಯವಾದುದು ಎಂದು ಹೇಳುವುದು ಈ ಜನಗಳ ಸಂಸ್ಕೃತಿ ಮತ್ತು ಕೃಷಿಯೇ ಪ್ರಾಧಾನ್ಯತೆಯನ್ನು ಎತ್ತಿಹೇಳುವುದರಿಂದ ಇಲ್ಲಿಯ ಕೆರೆ ಬಾವಿಗಳಿಂದ ನೀರಾವರಿ ಇದ್ದಿರಬಹುದೆಂದು ಸ್ಪಷ್ಟವಾಗುತ್ತದೆ. ಕಣವಿಯ ಕೆರೆಯ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ಈಶ್ವರ ದೇವಾಲಯವು ಕಂಡುಬರುತ್ತದೆ. ಇದರ ಮೂಲ ಹೆಸರು ಈಶ್ವರ ದೇವಾಲಯವೆಂದು ಕ್ರಿ.ಶ. ೧೧೦೫ರ ಶಾಸನದಲ್ಲಿ ಉಲ್ಲೇಖವಾಗಿದೆ.[೧೦೮] ಆದರೆ ಸ್ಥಳೀಕರು ಇದನ್ನು ಕಲ್ಗುಡಿ, ಕಲ್ಮೇಶ್ವರ ದೇವಾಲಯವೆಂದು ಕರೆಯುತ್ತಿದ್ದಾರೆ. ಇದು ಗರ್ಭಗೃಹ, ಸುಖನಾಶಿ, ನವರಂಗ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ಕಣಿವೆಯ ಈಶ್ವರ ದೇವಾಲಯದ ಮುಂದೆ ಗ್ರಾಮದಿಂದ ದಕ್ಷಿಣ ದಿಕ್ಕಿಗೆ ಕೆರೆ ಕಂಡುಬರುತ್ತದೆ. ಕೆರೆಯ ಪಕ್ಕದಲ್ಲಿ ಕಲ್ಯಾಣ ಚಾಲುಕ್ಯರ ಶೈಲಿಯ ಈಶ್ವರ ದೇವಾಲಯ ಇರವುದರಿಂದ ಮತ್ತು ಕ್ರಿ.ಶ. ೧೧೦೫ರ ಶಾಸನದಲ್ಲಿ[೧೦೯] ಇದನ್ನು ನಾಗನಕೆರೆ ಎಂದು ಉಲ್ಲೇಖಿಸಲಾಗಿದೆ. ಕೋರಿಯವರ ಹೊಲದಲ್ಲಿ ದೊರೆತ ಅಪ್ರಕಟಿತ ಕ್ರಿ.ಶ. ೧೧೪೧ರ ಶಾಸನದಲ್ಲಿ ನಾಗರಸನ ಉಲ್ಲೇಖವಿರುವುದರಿಂದ. ಈ ಕೆರೆಯನ್ನು ನಾಗರಸನೇ ನಿರ್ಮಾಣ ಮಾಡಿದ್ದರಿಂದ ನಾಗನ ಕೆರೆ ಎಂದು ಹೆಸರಿಟ್ಟಿರಬಹುದು.

**ನೀಲಗುಂದ ಕೆರೆ** :

| | |
|---|---|
| ಗ್ರಾಮ-ನೀಲಗುಂದ | ಅಚ್ಚುಕಟ್ಟು ಪ್ರದೇಶ-೨೬.೦೦(ಹೆ) |
| ಜಲಾವೃತ ಪ್ರದೇಶ-೧೦.೩೪(ಹೆ) | ಕೆರೆಯ ಸಾಮರ್ಥ್ಯ- ೧೦.೮೮(mcft) |
| ಏರಿಯ ಉದ್ದ- ೪೫೪ ಮೀ. | ಏರಿಯ ಎತ್ತರ- ೭.೦೦ ಮೀ. |
| ಏರಿಯ ಮೇಲ್ಭಾಗದ ಅಗಲ-೧.೦೫ ಮೀ. | |

ನೀಲಗುಂದ ಗ್ರಾಮವು ಗದಗ ತಾಲೂಕಿನ ಒಂದು ಚಿಕ್ಕ ಗ್ರಾಮ. ಮುಳಗುಂದದಿಂದ ಉತ್ತರಕ್ಕೆ ೮ ಕಿ.ಮೀ, ಗದಗ ಜಿಲ್ಲಾಕೇಂದ್ರದಿಂದ ದಕ್ಷಿಣಕ್ಕೆ ೨೬ ಕಿ.ಮೀ ಅಂತರದಲ್ಲಿದೆ. ಇದೊಂದು ಅನಾದಿ ಅಗ್ರಹಾರವಾಗಿತ್ತೆಂದು ತಿಳಿಯುತ್ತದೆ. ಈವರೆಗೆ ೫ ಶಾಸನಗಳು ವರದಿಯಾಗಿದ್ದು, ಪ್ರಸ್ತುತ ೫ ಹೊಸ ಶಾಸನಗಳನ್ನು ಇತ್ತೀಚೆಗೆ ಪತ್ತೆ ಮಾಡಿದ್ದಾರೆ. ರಾಷ್ಟ್ರಕೂಟರ ಕಾಲದಿಂದಲೂ ಇದೊಂದು ರಾಜಕೀಯ ನೆಲೆಯಾಗಿದ್ದಿತು.[೧೧೦] ಈ ಗ್ರಾಮದಲ್ಲಿ ಪ್ರಾಚೀನ ಕಾಲದ ವೀರನಾರಾಯಣ,

ಕಲ್ಮೇಶ್ವರ, ಸೋಮೇಶ್ವರ ಮತ್ತು ಈಶ್ವರ ದೇವಾಲಯಗಳಿವೆ. ಇವುಗಳಲ್ಲಿ ವೀರನಾರಾಯಣ ದೇವಾಲಯವು ವಾಸ್ತು ರಚನಾತ್ಮಕ ಮತ್ತು ಕಲಾತ್ಮಕ ದೃಷ್ಟಿಯಿಂದ ಪ್ರಸಿದ್ಧವಾದುದಾಗಿದೆ.

ಶಾಸನಗಳಲ್ಲಿ ನೀಲಗುಂದ ಎಂದಿದೆ. ಕಾಲಾಂತರಲ್ಲಿ ಇದು ಭಾಷಿಕ ಬದಲಾವಣೆ ಪ್ರಕ್ರಿಯೆಗೆ ಒಳಗಾಗಿ ನೀಲಿ ಅಥವಾ ಕಪ್ಪು ಬಣ್ಣಗಳಿಂದ ಅರ್ಥೈಸಿದರೆ 'ಗುಂದ' ಎಂಬುದು ಇಲ್ಲಿಯ ಬೆಟ್ಟ ಗುಡ್ಡಗಳನ್ನು ಸೂಚಿಸುತ್ತದೆ. ಈ ಗ್ರಾಮದ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಬೃಹತ್ತಾದ ಬಂಡೆಗಲ್ಲುಗಳ ಗುಡ್ಡಗಳಿವೆ; ಇವುಗಳಿಂದಾಗಿ ಈ ಗ್ರಾಮಕ್ಕೆ ನೀಲಗುಂದ ಎಂಬ ಹೆಸರು ಬಂದಂತೆ ತೋರುತ್ತದೆ.[೧೧೧] ಇದು ನಿಸರ್ಗದ ಮೂಲದಿಂದ ಬಂದ ಸ್ಥಳನಾಮವಾಗಿದೆ.

ಕೆರೆಯು ಊರಿನ ಮಧ್ಯಭಾಗದಲ್ಲಿ ಕಂಡುಬಂದಿದ್ದು ದಕ್ಷಿಣ ದಿಕ್ಕಿಗೆ ಕಲ್ಯಾಣ ಚಾಲುಕ್ಯರ ಕಾಲದ ಕಲ್ಮೇಶ್ವರ ದೇವಾಲಯವು ಕಂಡುಬರುವುದರಿಂದ ಇದು ಬಹುಶಃ ಇವರ ಕಾಲದಲ್ಲಿ ನಿರ್ಮಾ್ಣವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದ್ದು ದೇವಾಲಯ ಪೂರ್ವಾಭಿಮುಖವಾಗಿದೆ. ಎತ್ತರವಾದ ಅಧಿಷ್ಠಾನದ ಮೇಲಿರುವ ಈ ಗುಡಿಯ ಗರ್ಭಗೃಹದಲ್ಲಿ ಶಿವಲಿಂಗವಿದ್ದು ಪಂಚಶಾಖಾ ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮಿಯಿದೆ. ಅಂತರಾಳದಲ್ಲಿ ನಂದಿ ಇದ್ದು, ಇದರ ಬಾಗಿಲವಾಡ ಜಾಲಂದ್ರವನ್ನು ಒಳಗೊಂಡಿದೆ. ನವರಂಗದ ನಡುವೆ ಚಾಳುಕ್ಯ ಶೈಲಿಯ ದುಂಡಾದ ಅಡ್ಡಕೊಯ್ತದ ನಾಲ್ಕು ಅಲಂಕೃತ ಕಂಬಗಳಿದ್ದು (ಒಂದರಲ್ಲಿ ಇಮ್ಮಡಿ ಬಲ್ಲಾಳನ  ಶಾಸನವಿದೆ) ನವರಂಗಕ್ಕೆ ಪೂರ್ವ-ದಕ್ಷಿಣದಿಂದ ಪ್ರವೇಶವಿದೆ. ಈ ದೇವಾಲಯದ ಅದಿಷ್ಠಾನದ ಮೇಲೆ ಶಾಸನವಿರುವುದು ಗಮನಾರ್ಹವಾಗಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸ್ಥಾಪಿತವಾದ ಅಗ್ರಹಾರದ ಹಿನ್ನೆಲೆಯಲ್ಲಿ ಈ ಕೆರೆ ನಿರ್ಮಾಣವಾಗಿರಬೇಕು. ಈ ಕೆರೆಯು ನಾಲ್ಕು ಕಡೆಗೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗವು ದಪ್ಪ ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದೆ. ಹೊರಭಾಗವು ಮಣ್ಣಿನ ಏರಿ ಒಳಗೊಂಡಿದೆ. ಇದು ಕೂಡ ಮಳೆಯಾಶ್ರಿತ ಕೆರೆಯಾಗಿದ್ದು ಪ್ರಾಚೀನ ಕಾಲದಲ್ಲಿ ಈ ಕೆರೆಯ ನೀರನ್ನು ದೇವಸ್ಥಾನದ ಪೂಜಾ ವಿಧಿ ವಿಧಾನಗಳಿಗೆ ಮತ್ತು ಕುಡಿಯುವುದಕ್ಕೆ ಬಳಸುತ್ತಿದ್ದರು. ಆದರೆ ಈಗ ಕೆರೆಯ ನೀರು ಕಲುಷಿತಗೊಂಡಿದ್ದು ಈ ನೀರನ್ನು ದಿನನಿತ್ಯದ ಕಾರ್ಯಗಳಿಗೆ ಬಳಸುತ್ತಾರೆ. ನಿರ್ದಿಷ್ಟ ಪ್ರದೇಶದಲ್ಲಿ ನಿರ್ಮಾಣ ಮಾಡಿರುವ ಕೆರೆಯ ಪಶ್ಚಿಮ ದಿಕ್ಕಿನಲ್ಲಿರುವ ಗುಡ್ಡದ ಮೇಲೆ ಬಿದ್ದ ಮಳೆಯ ನೀರು ಸರಾಗವಾಗಿ ಹರಿದುಕೊಂಡು ಕೆರೆಗೆ ಸೇರುವುದು ವಿಶೇಷವಾಗಿದೆ.

**ಮಲ್ಲಾಪೂರ ಕೆರೆ:**

ಗ್ರಾಮ–ಮಲ್ಲಾಪೂರ

ಅಚ್ಚುಕಟ್ಟು ಪ್ರದೇಶ–೩೬.೯೯(ಹೆ)

ಜಲಾವೃತ ಪ್ರದೇಶ–೧೦.೩೪(ಹೆ)

ಕೆರೆಯ ಸಾಮರ್ಥ್ಯ– ೧೧.೮೮(mcft)

ಏರಿಯ ಉದ್ದ– ೪೫೪ ಮೀ.

ಏರಿಯ ಎತ್ತರ– ೬.೦೦ ಮೀ.

ಏರಿಯ ಮೇಲ್ಭಾಗದ ಅಗಲ–೨.೦೦ ಮೀ.

ಮಲ್ಲಾಪೂರ ಗದಗ ಜಿಲ್ಲೆಯ ರೋಣ ತಾಲೂಕಿನಲ್ಲಿದೆ. ರೋಣದಿಂದ ಪಶ್ಚಿಮಕ್ಕೆ ೨೨ ಕಿ.ಮೀ ಗದಗದಿಂದ ಉತ್ತರಕ್ಕೆ ೪೩ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು ಗ್ರಾಮದ ಪೂರ್ವ ದಿಕ್ಕಿಗೆ ಕಂಡು ಬರುತ್ತದೆ. ಇದು ಮಲಪ್ರಭಾ ನದಿಯ ಆಶ್ರಯ ಕೆರೆಯಾಗಿದ್ದು ಈ ನೀರನ್ನು ಕುಡಿಯುವುದಕ್ಕೆ ಮತ್ತು ಇನ್ನಿತರ ಕೆಲಸಕಾರ್ಯಗಳಿಗೆ ಉಪಯೋಗಿಸುತ್ತಾರೆ. ಗದಗ ಜಿಲ್ಲೆಯಲ್ಲಿ ಕುಡಿಯುವ ನೀರಿನ ಕೆರೆಗಳಲ್ಲಿ ಅತ್ಯಂತ ದೊಡ್ಡದಾದ ಕೆರೆ ಎಂದರೆ ಮಲ್ಲಾಪೂರ ಕೆರೆ.

ಈ ಕೆರೆಯು ಪಂಚಾಯಿತಿ ವ್ಯಾಪ್ತಿಗೆ ಒಳಪಟ್ಟ ಸುಮಾರು ೨೫೦೦ ಜನಸಂಖ್ಯೆಯುಳ್ಳ ಚಿಕ್ಕ ಗ್ರಾಮ. ಗ್ರಾಮದ ಜನರ ಜೀವನಾಡಿ ಈ ಕೆರೆಯಾಗಿದೆ. ಪ್ರಸ್ತುತವಾಗಿ ಕೆರೆಯು ಉತ್ತಮ ಸ್ಥಿತಿಯಲ್ಲಿದ್ದು ಉಪಯೋಗದಲ್ಲಿದೆ. ಕೆರೆಯ ಪತ್ತಿರದಲ್ಲಿ ಪ್ರಾಚೀನಕಾಲಕ್ಕೆ ಸಂಬಂಧಪಟ್ಟ ಕೆಲವೊಂದು ಮೂರ್ತಿಶಿಲ್ಪಗಳು ಕಂಡುಬರುತ್ತವೆ.

ಕ್ರಿ.ಶ. ೧೧೫೬ರ ಮೂರನೇ ತೈಲಪನ ಶಾಸನದಲ್ಲಿ[೧೧೨] "ಜೋಗಗಾವುಂಡನು ನಾವಿದಿಗೆಯ ಕೆರೆಗೆ ಬೆಳುವಣಿಗೆಯ ದಾರಿಯ ತೆಂಕ ಕೆರೆಯಲ ಮೋಡಲು ಸರ್ವನಮಸ್ಯಸವಾಗಿ ಬಿಟ್ಟ ಅಣ್ಣಿಗೇರಿಯ ಹಿರಿಯ ಕೋಲ ಮತ್ತರು ಕೂಟ್ಟ ಕಮ್ಮ ಮ್ಯಾಗೇರಿಯಪ್ಪತ್ತಯ್ದು ನಾವಿದಿಗೆ ಜೋಗಗಾವುಂಡ ಸಹಿತ ತಮ್ಮ ಕೆರೆಯ ಕೆಯ್ಯೆ ತಾವೆ ಮಾಡಿ ಕೆರೆಗಿರುವಂಡ ಕಮ್ಮಾರ, ಮೂರು ಮನೆಯ ಮಣ್ಣನು ಕೆಯ್ಯ ಕೊಟ್ಟರು. ಇದನ್ನು ವಾರಣಾಸಿ ಧರ್ಮ ಗುರುಗಳು ಪ್ರತಿಪಾಳಿಸಿರ್ದಂ"

ಅಂದರೆ ಈ ಕೆರೆಗೆ ಕರ್ನಾಡ ಜೋಗಗಾವುಂಡನು ಬಳವಣಿಗೆ (ಬೆಳವಣಿಕೆ)ಯ ೮೪ ಮಹಾಜನರ ಸಮ್ಮುಖದಲ್ಲಿ ಅಣ್ಣಿಗೇರಿಯ ಕೋಲಿನ ಪ್ರಕಾರ ಅಳತೆ ಮಾಡಿ ಬೂಮಿಯನ್ನು ದಾನ ಮಾಡಿದ ಬಗ್ಗೆ ಮತ್ತು ಈ ಪ್ರದೇಶವು ಬೆಳ್ವೊಳ ಎರಡಾರನೂರು ಆಳ್ವಿಕೆ ಒಳಪಟ್ಟಿತ್ತು ಎಂಬುದು ಸ್ಪಷ್ಟವಾಗುತ್ತದೆ.[೧೧೩]

ಕೆರೆಯು ಮೊದಲು ಮಳೆಯ ನೀರಿನಿಂದ ಕೂಡಿದ್ದು, ಇತ್ತಿಚೀಗೆ ಮಲಪ್ರಭಾ ನಾಲೆಯ ನೀರು ಹರಿದು ಬರುತ್ತದೆ. ಇದು ಸರಣಿ ಕೆರೆಯಾಗಿದ್ದು ಮೊದಲ ಕೆರೆ ನೀರು ತುಂಬಿದ ಬಳಿಕ ಈ ಕೆರೆಗೆ ನೀರು ಹರಿದು ಬರುತ್ತದೆ. ಇದು ನಾಲ್ಕು ಕಡೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು ಸುಮಾರು ೧೫ ಮೀ. ಆಳವನ್ನು ಹೊಂದಿದೆ. ಈ ಕೆರೆಗೆ ಪೂರ್ವಾಭಿಮುಖವಾಗಿ ಕೆರೆಯ

ನೀರನ್ನು ಮೇಲಕ್ಕೆ ಎತ್ತಲು ಕಬ್ಬಿಣದ ಚಕ್ರಗಳನ್ನು ಅಳವಡಿಸಿರುತ್ತಾರೆ. ಇವುಗಳಿಗೆ ಹಗ್ಗ ಹಾಕಿ ನೀರನ್ನು ಎತ್ತಿ ಉಪಯೋಗಿಸುತ್ತಾರೆ.

**ಬೆಳಹೋಡ ಕೆರೆ:**

ಗ್ರಾಮ-ಬೆಳಹೋಡ ಅಚ್ಚುಕಟ್ಟು ಪ್ರದೇಶ-೩೬.೯(ಹೆ)

ಜಲಾವೃತ ಪ್ರದೇಶ-೧೧.೩೪(ಹೆ) ಕೆರೆಯ ಸಾಮರ್ಥ್ಯ- ೧೧.೮೮(mcft)

ಏರಿಯ ಉದ್ದ- ೪೫೩ ಮೀ. ಏರಿಯ ಎತ್ತರ- ೫.೦೦ ಮೀ.

ಏರಿಯ ಮೇಲ್ಭಾಗದ ಅಗಲ-೧.೮೦ ಮೀ.

ಬೆಳಹೋಡ ಗದಗ ಜಿಲ್ಲೆಯ ಗದಗ ತಾಲೂಕಿನಲ್ಲಿದೆ. ಗದಗದಿಂದ ಪಶ್ಚಿಮಕ್ಕೆ ೧೮ ಕಿ.ಮೀ ಗದಗದಿಂದ ಉತ್ತರಕ್ಕೆ ೨೭ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು ಗ್ರಾಮದ ಪೂರ್ವ ದಿಕ್ಕಿಗೆ ಕಂಡು ಬರುತ್ತದೆ.

ಕ್ರಿ.ಶ.೧೧೭೮ರ ಸಂಕಿಮದೇವನ ಶಾಸನದಲ್ಲಿ[೧೧೪] "ಬುಜಬಲ ಚಕ್ರವರ್ತಿ ಸಂಕಿಮದೇವ ವರ್ಷದ ೩ನೇ ವಿಳಂಬ ಸಂವತ್ಸರದ ವೈಶಾಖ ಸು ೧೩ನೇ ಸುಮಾರು ಶ್ರೀ ಮನ್ನ ಮಹಾಪ್ರಧಾನ ಸೇನಾಧಿಪತಿ ಬೆಳ್ವೊಲನಾಡಿನ ಪೆರ್ಗ್ಗಡೆ ದಂಡನಾಯಕ ದಣ್ಣುಗಿ ದೇವನಗೆ ಪ್ರೀತಿಗೆ ಪಾತ್ರನಾದ ಮಲ್ಲುಗಿದೇವನು ಪ್ರಮುಖ ಕಂಣಗಳು ಬೆಲುವಡೆಯ ದೇವಿಂಗರೆಗೆ ಆ ವೂರ ಬಣ್ಣಿಗದೆರೆಯ ಸರ್ವನಮಸ್ಯೆವಾಗಿ ಬಿಟ್ಟ ಧರ್ಮಧಿಕಾರಿಗಳು ಪ್ರತಿಪಾಳಿಸುವರು.

ಗ್ರಾಮದ ಮಧ್ಯದಲ್ಲಿ ಕೆರೆ ಕಂಡುಬಂದಿದ್ದು, ಇದು ಇಲ್ಲಿಯ ಜನರ ಜೀವಾಳವಾಗಿದೆ. ಈ ನೀರನ್ನು ಕುಡಿಯುವುದಕ್ಕೆ ಮತ್ತು ಬೇರೆ ಕೆಲಸ ಕಾರ್ಯಗಳಿಗೆ ಉಪಯೋಗಿಸುತ್ತಾರೆ. ಈ ಕೆರೆಯು ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗ ದಪ್ಪ ದಪ್ಪವಾದ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ಪೂರ್ವಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಈ ಕೆರೆಯು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಒಳಪಟ್ಟಿದ್ದು ಇದನ್ನು ಜೀರ್ಣೋದ್ಧಾರ ಮಾಡಿದರೆ ಇನ್ನೂ ಹೆಚ್ಚಿನ ಜಲಸಂಗ್ರಹದ ವ್ಯವಸ್ಥೆ ಆಗುತ್ತದೆ.

**ಹೈತಾಪೂರ ಕೆರೆ**

ಗ್ರಾಮ- ಹೈತಾಪುರ ಅಚ್ಚುಕಟ್ಟು ಪ್ರದೇಶ-೫.೦ (ಹೆ)

ಜಲಾವೃತ ಪ್ರದೇಶ- ೯.೦೦(ಹೆ) ಕೆರೆಯ ಸಾಮರ್ಥ್ಯ-೮.೦೨ (mcft)

ಏರಿಯ ಉದ್ದ-೨೯೯ ಮೀಟರ್. ಏರಿಯ ಎತ್ತರ- ೨.೫ ಮೀಟರ್.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಹೈತಾಪೂರ ಗ್ರಾಮವು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಒಂದು ಗ್ರಾಮ. ತಾಲೂಕು ಕೇಂದ್ರದಿಂದ ಉತ್ತರಕ್ಕೆ ೧೧ ಕಿ.ಮೀ. ಮತ್ತು ಜಿಲ್ಲಾಕೇಂದ್ರ ಗದಗದಿಂದ ಆಗ್ನೇಯಕ್ಕೆ

೩೮ ಕಿ.ಮೀ. ಅಂತರದಲ್ಲಿದೆ. ಈ ಕೆರೆ ಗ್ರಾಮದಿಂದ ದಕ್ಷಿಣ ದಿಕ್ಕಿಗೆ ಇದ್ದು, ಮುಂಡರಗಿಗೆ ಹೋಗುವ ರಸ್ತೆಯ ಎಡಭಾಗದಲ್ಲಿ ಇದೆ. ಇಲ್ಲಿಯ ಹನುಮಂತ ದೇವರ ಗುಡಿಯ ಕಂಬದ ಮೇಲಿನ ಶಾಸನವು ಕ್ರಿ.ಶ. ೯ನೇ[೧೧೫] ಶತಮಾನದ ಶಾಸನದಲ್ಲಿ ಕಲಚೂರಿಗಳ ವಂಶಾವಳಿ ಹಾಗೂ ಇದರಲ್ಲಿ ಕೋವುರೂರು (ಕವಲೂರ) ಮತ್ತು ಮೊರಿವಳು (ಮೆವುಂಡಿ)ಗಳ ಮಧ್ಯೆ ಮಹಾಸಾಮಂತ ಬಿಜ್ಜಳನ ಹೆಂಡತಿ ಬೆಗೆಬ್ಬೆ ಕೆರೆಯನ್ನು ಕಟ್ಟಿಸಿದ ಬಗ್ಗೆ ಉಲ್ಲೇಖವಿದೆ. ಅದೇ ಈ ಕೆರೆಯಾಗಿರಬಹುದೆಂದು ಸ್ಪಷ್ಟವಾಗುತ್ತದೆ. ಈ ಕೆರೆಗೆ ನೀರು ಪೂರ್ವ ದಿಕ್ಕಿನಿಂದ ಒಳಗಡೆ ಪ್ರವೇಶಿಸುತ್ತದೆ. ಇದು ಸರಣಿ ಕೆರೆಯಾಗಿದ್ದು, ಎರಡು ಕೆರೆಗಳ ಮಧ್ಯ ಎತ್ತರ ಮಟ್ಟದಲ್ಲಿ ಕೋಡಿಯನ್ನು ಅಳವಡಿಸಿದ್ದು ಒಂದು ಕೆರೆಯ ನೀರು ತುಂಬಿದ ಬಳಿಕ ಇನ್ನೊಂದು ಕೆರೆಗೆ ನೀರು ಬರುವ ಹಾಗೆ ನಿರ್ಮಿಸಿರುತ್ತಾರೆ. ಈಗ ಈ ಕೆರೆ ಗ್ರಾಮ ಪಂಚಾಯತಿ ವ್ಯಾಪ್ತಿಯ ಜೀರ್ಣೋದ್ಧಾರದ ಹಂತದಲ್ಲಿದೆ. ಕೆರೆಯ ಏರಿಯು ಮಣ್ಣಿನಿಂದ ಕೂಡಿದ್ದು ಒಳಭಾಗವನ್ನು ದಪ್ಪ ದಪ್ಪ ಕಲ್ಲುಗಳಿಂದ ಜೋಡಿಸಿರುತ್ತಾರೆ. ಹೊರಭಾಗವು ಮಣ್ಣಿನಿಂದ ಕೂಡಿದೆ. ಕೆರೆಯ ನೀರಿನ ಆಳಕ್ಕೆ ಪ್ರವೇಶಿಸಲು ದಕ್ಷಿಣಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಪ್ರವೇಶಿಸಬಹುದು. ಕೆರೆಯ ದಂಡೆಯ ಮೇಲೆ ಪ್ರಾಚ್ಯಾವಶೇಷಗಳಾದ ನಾಗಶಿಲ್ಪ ಮತ್ತು ಹೆಣ್ಣು ದೇವತೆಗಳ ಶಿಲ್ಪಗಳನ್ನು ಕಾಣಬಹುದು. ಈ ಕೆರೆಯ ನೀರನ್ನು ಗ್ರಾಮಸ್ಥರು ಕುಡಿಯುವುದಕ್ಕೆ ಮತ್ತು ಇನ್ನಿತರ ಕೆಲಸಕಾರ್ಯಗಳಿಗೆ ಉಪಯೋಗಿಸುತ್ತಾರೆ.

ಇನ್ನೊಂದು ಕೆರೆ ಗ್ರಾಮದಿಂದ ನೈರುತ್ಯ ದಿಕ್ಕಿಗೆ ಕಂಡುಬರುತ್ತದೆ. ಇದು ಕನಿಷ್ಠ ೧೫ ಎಕರೆ ವಿಸ್ತೀರ್ಣವುಳ್ಳದ್ದಾಗಿದೆ. ಈಗ ಇದರ ಸ್ಥಿತಿ ಹಾಳಾಗಿದ್ದರಿಂದ ದಕ್ಷಿಣ ದಿಕ್ಕಿನಲ್ಲಿ ಮಾತ್ರ ಏರಿಯನ್ನು ಕಾಣಬಹುದು. ಪಶ್ಚಿಮ ದಿಕ್ಕಿನಲ್ಲಿ ಭರಮದೇವರ ಗುಡಿಯನ್ನು ಕಾಣಬಹುದು. ಮಳೆಯಾದರೂ ನೀರು ನಿಲ್ಲುವ ಸ್ಥಿತಿ ಇದಕ್ಕಿಲ್ಲ.

**ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಕೆರೆಗಳು :**

**ಯಾವಗಲ್ಲ ಕೆರೆ**

ಗ್ರಾಮ-ಯಾವಗಲ್ಲ

ಜಲಾವೃತ ಪ್ರದೇಶ-೧೩.೩೪(ಹೆ)

ಏರಿಯ ಉದ್ದ- ೬೫೪ ಮೀ.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಅಚ್ಚುಕಟ್ಟು ಪ್ರದೇಶ-೪೬.೯(ಹೆ)

ಕೆರೆಯ ಸಾಮರ್ಥ್ಯ- ೧೨.೮೮(mcft)

ಏರಿಯ ಎತ್ತರ- ೯.೦೦ ಮೀ.

ಈ ಗ್ರಾಮವು ಗದಗದಿಂದ ಉತ್ತರಕ್ಕೆ ೬೨ ಕಿ.ಮೀ ದೂರದಲ್ಲಿದೆ. ಗ್ರಾಮದಿಂದ ಪೂರ್ವ ದಿಕ್ಕಿನಲ್ಲಿ ಕೆರೆಯು ಕಂಡುಬರುತ್ತದೆ. ರೋಣದಿಂದ ಪಶ್ಚಿಮಕ್ಕೆ ೨೨ ಕಿ.ಮೀ ದೂರದಲ್ಲಿ ಹಳ್ಳದ ಮೇಲಿದೆ. ಶಾಸನಗಳಲ್ಲಿ ಈ ಗ್ರಾಮ 'ಎವಂಗಲ್ಲು', 'ಯಾವಂಗಲ್ಲ' ಎಂದು

ಉಲ್ಲೇಖಿತಗೊಂಡಿದೆ.[೧೧೬] ಇದು ಹಿಂದೆ ಬೆಳವಣಿಕಿ-೧೨ಕ್ಕೆ ಸೇರಿದ ಗ್ರಾಮವಾಗಿದ್ದು, ನೆರೆಯ ಕೌಜಗೇರಿ ಗ್ರಾಮದ ಕ್ರಿ.ಶ. ೯೩೪ರ ರಾಷ್ಟ್ರಕೂಟರ ಶಾಸನದಲ್ಲಿ ಉಲ್ಲೇಖವಿದ್ದು, ಯಾವಗಲ್ಲಿನಲ್ಲಿದ್ದ ಆದಿತ್ಯ, ಈಶ್ವರ ದೇವಾಲಯಗಳ ಬಗ್ಗೆ ಮಾಹಿತಿ ನೀಡುತ್ತದೆ. ಇಲ್ಲಿಯವರೆಗೆ ಮೂರು ಶಾಸನಗಳು ವರದಿಯಾಗಿದ್ದು, ಕ್ರಿ.ಶ. ೧೫೫೫ರ ಶಾಸನ[೧೧೭] ಮಹಾರಾಜ ಮಲ್ಲಿಕ್ ಸಾಹೇಬನು ಏತ ನೀರಾವರಿ ವ್ಯವಸ್ಥೆಯನ್ನು ಹದಲಿ-ಯಾವಗಲ್ಲ ರಸ್ತೆಯಲ್ಲಿ ಸ್ಥಾಪಿಸಿ, ಅದರಿಂದ ಗ್ರಾಮಕ್ಕೆ ನೀರೆತ್ತಿಕೊಂಡು ಇರಬೇಕೆಂದು ಆದೇಶಿಸಿ, ಆ ಸಂಬಂಧ ಭೂಮಿಯನ್ನು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ.

ಗ್ರಾಮದಿಂದ ಪೂರ್ವ ದಿಕ್ಕಿಗೆ ಕೆರೆ ಕಂಡುಬಂದಿದ್ದು, ಕೆರೆಯ ದಂಡೆಯ ಮೇಲೆ ಪ್ರಾಚೀನ ಲಿಂಗ, ನಂದಿ ಮತ್ತು ಆದಿತ್ಯನ ಪೀಠವು ಕಂಡುಬರುತ್ತದೆ. ಕೆರೆಗೆ ಹತ್ತಿದಂತೆ ಇರುವ ಹೇಮಲಿಂಗೇಶ್ವರ ಗುಡಿಯಲ್ಲಿರುವ ಲಿಂಗವು ಸುಮಾರು ಕ್ರಿ.ಶ. ೧೦ನೇ ಶತಮಾನದ್ದಾಗಿದೆ. ಇದರ ಬಳಿಯಲ್ಲಿಯೇ ಮಳೆಯಪ್ಪಜ್ಜನ ಮಠವಿದೆ. ಹೇಮಲಿಂಗೇಶ್ವರನಿಂದಾಗಿ ಈ ಊರಿಗೆ 'ಹೇಮಗಲ್ಲು', 'ಯಾವಗಲ್ಲು' ಎಂದು ಹೆಸರು ಬಂದಿತೆಂದು ಸ್ಥಳೀಯರ ಅಭಿಪ್ರಾಯ.

ಈ ಕೆರೆಯ ದಕ್ಷಿಣಕ್ಕೆ ಕೋಡಿ ಇದ್ದು, ಇದು ೨೫ ಅಡಿ ಉದ್ದ; ಎತ್ತರ ೪ ಅಡಿ ಆಗಿದೆ. ಕೆರೆಯ ಸುತ್ತಮುತ್ತಲೂ ಮಣ್ಣಿನ ಏರಿಯನ್ನು ಒಳಗೊಂಡಿದೆ. ಈ ಕೆರೆಯನ್ನು ವಿಜಯನಗರದ ಮಂಗೋಜ ಪಂಡಿತನು ಕ್ರಿ.ಶ. ೧೬ನೇ ಶತಮಾನದಲ್ಲಿ ನಿರ್ಮಾಣ ಮಾಡಿದನೆಂದು ಮಾಹಿತಿ ದೊರೆಯುತ್ತದೆ.

**ಚ್ಯಾಗೀನಗೆರೆ ಕೆರೆ :**

| | |
|---|---|
| ಗ್ರಾಮ-ಚ್ಯಾಗೀನಗೆರೆ | ಅಚ್ಚುಕಟ್ಟು ಪ್ರದೇಶ-೨೪೫.೦೦ (ಹೆ) |
| ಜಲಾವೃತ ಪ್ರದೇಶ-೩೬.೦೦ (ಹೆ) | ಕೆರೆಯ ಸಾಮರ್ಥ್ಯ-೧೬.೦೦ (mcft) |
| ಏರಿಯ ಉದ್ದ-೮೦೦ ಮೀ. | ಏರಿಯ ಎತ್ತರ-೪ ಮೀ. |
| ಏರಿಯ ಮೇಲ್ಭಾಗದ ಅಗಲ-೨.೦೦ ಮೀ. | |

ಚ್ಯಾಗೀನಗೆರೆ ಗದಗದಿಂದ ದಕ್ಷಿಣಕ್ಕೆ ೬೮ ಕಿ.ಮೀ. ದೂರದಲ್ಲಿದೆ. ಗ್ರಾಮದಿಂದ ಪೂರ್ವ ದಿಕ್ಕಿನಲ್ಲಿ ಕೆರೆಯು ಕಂಡುಬರುತ್ತದೆ. ಈ ಗ್ರಾಮವು ಮುಂಡರಗಿಯಿಂದ ಪಶ್ಚಿಮಕ್ಕೆ ೨೫ ಕಿ.ಮೀ ದೂರದಲ್ಲಿದೆ. ಶಾಸನಗಳಲ್ಲಿ ಉಲ್ಲೇಖವಾಗಿರುವ ಗೋಪಣ್ಣ ಎಂಬುವನು ವಿಜಯನಗರ ಅರಸನಾದ ಇಮ್ಮಡಿ ಹರಿಹರನ ಅಧಿಕಾರಿಯಾಗಿದ್ದಿರಬಹುದು. ಏಕೆಂದರೆ ಮೊದಲಿಗೆ ಬುಕ್ಕರಾಯನು ಅಧಿಕಾರದಲ್ಲಿದ್ದಾಗ ಇವನ ಮಗನಾದ ಕಂಪಣನು ಮುಧುರೈಗೆ ಮುತ್ತಿಗೆ ಹಾಕಿದಾಗ ಸಾಳ್ವ ಮಂಗೂಮಂತ್ರಿಯಾದ ಗೋಪಣ್ಣ ಅವನಿಗೆ ನೆರವಾದನು. ಗೋಪಣ್ಣ ಇಮ್ಮಡಿ ಹರಿಹರನ ಅವಧಿಯಲ್ಲಿ ಮಂತ್ರಿಯಾಗಿದ್ದಿರಬಹುದು. ಆದ್ದರಿಂದ ಕ್ರಿ.ಶ. ೧೩೭೯ರ ತಾಮ್ರಪಟ ಶಾಸನದ[೧೧೮]

ಪ್ರಕಾರ ಡಂಬಳ ಹಾಗೂ ಇತರೆ ೬೬ ಗ್ರಾಮಗಳು ವಿಜಯನಗರದ ಎರಡನೇ ಹರಿಹರ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿಯುತ್ತದೆ.

ಈ ಕೆರೆಯ ಏರಿಯು ಉತ್ತರ ಮತ್ತು ಪಶ್ಚಿಮಾಭಿಮುಖವಾಗಿದ್ದು ಕೆರೆಯಿಂದ ದಕ್ಷಿಣ ದಿಕ್ಕಿಗಿದೆ. ಈ ಕೆರೆಯಲ್ಲಿ ಎರಡು ತೂಬುಗಳು ಒಂದು ಕೋಡಿ ಇದೆ. ತೂಬುಗಳಿಗೆ ಅನುಗುಣವಾಗಿ ಎರಡು ಕಾಲುವೆಗಳನ್ನು ಜೋಡಿಸಲಾಗಿದೆ. ಇವುಗಳ ಮೂಲಕ ಸಮತಟ್ಟಾದ ಕೃಷಿ ಪ್ರದೇಶಕ್ಕೆ ನೀರನ್ನು ಹರಿಸಲಾಗುತ್ತದೆ. ಕೆರೆಯ ತೂಬುಗಳು ಪೂರ್ವ ದಿಕ್ಕಿನ ಏರಿಯಿಂದ ೧೦ ಅಡಿ ದೂರದಲ್ಲಿವೆ. ಕೆರೆಯ ಈಶಾನ್ಯ ದಿಕ್ಕಿಗೆ ಇದರ ಅಕ್ಕಪಕ್ಕದ ಗೋಡೆಗಳು ೧೦ ಮೀಟರ್ ಎತ್ತರದಲ್ಲಿದ್ದು ೫೦೦ ಮೀ. ವರೆಗೆ ಉದ್ದವಾಗಿವೆ. ಕೆರೆಯ ಹೆಚ್ಚುವರಿಯಾದ ನೀರು ಇದರ ಮೂಲಕ ಹರಿದುಹೋಗುತ್ತದೆ. ಈ ಕೆರೆಯಿಂದ ರೈತರು ಜೋಳ, ಗೋದಿ, ಶೇಂಗಾ, ಹತ್ತಿ, ಕಬ್ಬು ಬೆಳೆಯುತ್ತಾರೆ. ಇವು ಪ್ರಮುಖ ವಾಣಿಜ್ಯ ಬೆಳೆಗಳಾಗಿದ್ದರಿಂದ ರೈತರು ಆರ್ಥಿಕವಾಗಿ ಬಲಿಷ್ಠರಾಗಿದ್ದಾರೆ.

**ಇಟಗಿ ಕೆರೆ**

| | |
|---|---|
| ಗ್ರಾಮ-ಇಟಗಿ | ಅಚ್ಚುಕಟ್ಟು ಪ್ರದೇಶ-೩೦.೯೯(ಹೆ) |
| ಜಲಾವೃತ ಪ್ರದೇಶ-೧೦.೩೪(ಹೆ) | ಕೆರೆಯ ಸಾಮರ್ಥ್ಯ- ೧೦.೮೮(mcft) |
| ಏರಿಯ ಉದ್ದ- ೬೫೪ ಮೀ. | ಏರಿಯ ಎತ್ತರ- ೧೦.೦೦ಮೀ. |
| ಏರಿಯ ಮೇಲ್ಭಾಗದ ಅಗಲ-೨.೦೦ ಮೀ. | |

ಇಟಗಿ ಗದಗ ಜಿಲ್ಲೆಯ ರೋಣ ತಾಲೂಕಿನ ಒಂದು ಐತಿಹಾಸಿಕ ಗ್ರಾಮ. ರೋಣದಿಂದ ಪೂರ್ವಕ್ಕೆ ೭ ಕಿ.ಮೀ ಗದಗದಿಂದ ಪೂರ್ವಕ್ಕೆ ೪೫ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮ ಇಟಗಿ ಭೀಮಾಂಬಿಕೆಯಿಂದ ಪವಿತ್ರಕ್ಷೇತ್ರವಾಗಿ ಹೆಸರು ಪಡೆದಿದೆ. ಇಲ್ಲಿ ಪ್ರತಿ ತಿಂಗಳ ಅಮವಾಸ್ಯೆಗೆ ಎರಡು ಲಕ್ಷಕ್ಕೂ ಹೆಚ್ಚು ಭಕ್ತ ಸಮೂಹ ಅಮ್ಮನ ಗದ್ದುಗೆಗೆ ಬಂದು ದರ್ಶನ ಪಡೆಯತ್ತಾರೆ. ಅನನ್ಯ ಭಕ್ತಿಯಿಂದ ಧರ್ಮದ ಪ್ರಸಾದ ಸ್ವೀಕರಿಸಿ ಸಂಕಟ ಕಳೆದುಕೊಳ್ಳುತ್ತಾರೆ. ದೀಪಾವಳಿಯ ಬಲಿಪಾಡ್ಯದಂದು ಜರುಗುವ ಧರ್ಮದ ರಥೋತ್ಸವಕ್ಕೆ ೫ ಲಕ್ಷಕ್ಕೂ ಮಿಕ್ಕಿದ ಭಕ್ತ ಪರಿವಾರ ಅಲ್ಲಿ ಸೇರುತ್ತದೆ. ದೂರದ ಉತ್ತರ ಪ್ರದೇಶ, ಬಿಹಾರ, ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ರಾಜ್ಯಗಳಿಂದ ಅಪಾರ ಭಕ್ತರು ಇಲ್ಲಿಗೆ ಆಗಮಿಸುತ್ತಾರೆ.

ಈ ಗ್ರಾಮವನ್ನು ಪ್ರಾಚೀನ ಶಾಸನಗಳಲ್ಲಿ 'ಯಿಟ್ಟಿಗೆ', 'ಇಟ್ಟಿಗೆ' ಎಂದೇ ಉಲ್ಲೇಖಿತಗೊಂಡಿದ್ದು, ಹಿಂದೆ ಕಿಸುಕಾಡು-೭೦ಕ್ಕೆ ಸೇರಿದ ಮಹಾಅಗ್ರಹಾರವಾಗಿತ್ತು. ಈ ವರೆಗೆ ಎರಡು ಶಾಸನಗಳು ವರದಿಯಾಗಿದ್ದು ಅವುಗಳಲ್ಲಿ ಕ್ರಿ.ಶ. ೧೦೫೪ರ ಶಾಸನ ಮಹಾಅಗ್ರಹಾರ 'ಇಟ್ಟಿಗೆಯಲ್ಲಿ ಸ್ಥಳಿಕನಾದ ಶ್ರೀಪತಿ ಚಮೂಪನು ಶ್ರೀ ಸ್ವಯಂಭೂ ದೇವಾಲಯವನ್ನು ನಿರ್ಮಿಸಿ ಅದಕ್ಕೆ ಭೂದಾನ ಮಾಡಿದ ಸಂದರ್ಭದಲ್ಲಿ ನಾಡೊಡೆಯ ವಿಕ್ಕಅರಸ, ಗ್ರಾಮದ ಪೆರ್ಗಡೆ ಬಲ್ಲಯ್ಯ ನೆರೆಯ ಹೊನ್ನಿಂಗನೂರು

ಜನಗಳು ವಿವಿಧ ದಾನಮಾಡಿದ ಅಂಶಗಳನ್ನು ತಿಳಿಸಿದೆ. ೧೯೯೨ರಲ್ಲಿ ಎಸ್.ರಾಜೇಂದ್ರಪ್ಪ ಅವರು ಪತ್ತೆ ಹಚ್ಚಿ ವರದಿಮಾಡಿರುವ ಸುಮಾರು ೧೧ನೇ ಶತಮಾನದ ಶಾಸನದಿಂದ ಇದೊಂದು ಜೈನಕೇಂದ್ರವಾಗಿತ್ತೆಂದು ತಿಳಿಸುತ್ತಾರೆ. 'ಇಟಗಿ' ಯಲ್ಲಿ ಶಂಭೂಲಿಂಗ ದೇವಾಲಯವು ಪ್ರಾಚೀನ ದೇವಾಲಯವಾಗಿದೆ. ಈ ದೇವಾಲಯದ ಮುಂದೆ ಒಂದು ಕೆರೆ ಕಂಡು ಬರುತ್ತದೆ. ಕ್ರಿ.ಶ. ೧೦೫೪ರಲ್ಲಿ ಶ್ರೀಧರ ದಂಡನಾಯಕನಿಂದ ನಿರ್ಮಾಣಗೊಂಡಿದ್ದ ಚಾಲುಕ್ಯಶೈಲಿಯ ಸುಂದರ ದೇವಾಲಯ ಇದಾಗಿದೆ.[೧೯] ಕೆರೆಯ ದಂಡೆಯ ಮೇಲಿರುವ ಈ ಗುಡಿ ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ, ನವರಂಗ ಹಾಗೂ ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ಇದರ ಬಾಗಿಲವಾಡವು ತ್ರಿ ಶಾಖಾಲಂಕೃತವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮೀಯಿದೆ ಅಂತರಾಳದ ದ್ವಾರಬಂಧ ಪಂಚಶಾಖಾಲಂಕಾರವನ್ನು ಹೊಂದಿದ್ದು ಇಕ್ಕಲದಲ್ಲಿ ಜಾಲಾಂಧ್ರವಿದೆ. ನವರಂಗದಲ್ಲಿರುವ ದೇವಕೋಷ್ಟಕಗಳಲ್ಲಿ ಶಿವ-ಪಾರ್ವತಿ, ಮಹಿಷಮರ್ಧಿನಿ, ಕಾರ್ತಿಕೇಯ ಮತ್ತು ಆದಿತ್ಯನ ಸುಂದರ ಶಿಲ್ಪಗಳಿವೆ. ನವರಂಗದ ಪ್ರವೇಶದ್ವಾರವು ಪಂಚಶಾಖಾಲಂಕೃತವಾಗಿದ್ದು ಆಕರ್ಷಕವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮೀ ಇದೆ. ನಕ್ಷತ್ರಆಕಾರದಲ್ಲಿರುವ ಈ ಗುಡಿಯ ಸಭಾ ಮಂಟಪವನ್ನು ಆರು ಮಾದರಿಯ ಸ್ತಂಭಗಳು ಹೊತ್ತುನಿಂತಿದ್ದು ಇಳಿಜಾರಾದ ಛಾವಣಿಯನ್ನು ಹೊಂದಿದೆ. ಸಭಾ ಮಂಟಪಕ್ಕೆ ಮೂರು ದಿಕ್ಕಿನಿಂದಲೂ ಮುಖಮಂಟಪವಿರುವ ಪ್ರವೇಶದ್ವಾರಗಳಿವೆ. ಗುಡಿಯ ಹೊರಭಿತ್ತಿ ನಿರಾಡಂಬರವಾಗಿದ್ದು ಗರ್ಭಗೃಹಕ್ಕೆ ಸುಂದರವಾದ ಕದಂಬನಾಗರ ಶಿಖರವಿದೆ.

ಇಟಗಿ ಕೆರೆ ಚೌಕಾಕಾರವಾಗಿದ್ದು, ಒಟ್ಟು ಸುಮಾರು ೧೪ ಎಕರೆ ವಿಸ್ತೀರ್ಣವನ್ನು ಹೊಂದಿದೆ. ಈ ಕೆರೆ ನಾಲ್ಕು ಕಡೆಗೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗದಲ್ಲಿ ದಪ್ಪ ಕಲ್ಲುಗಳನ್ನು ಜೋಡಿಸಲಾಗಿದ್ದು, ಹೊರಭಾಗ ಮಣ್ಣಿನಿಂದ ಕೂಡಿರುತ್ತದೆ. ಏರಿಯ ಎತ್ತರ ೧೨ ಅಡಿ ಮೇಲ್ಭಾಗದ ಅಗಲ ೫ ಅಡಿ ಆಗಿದೆ. ಈ ಕೆರೆಗೆ ಪೂರ್ವ ದಿಕ್ಕಿನಲ್ಲಿ ಕೋಡಿಯನ್ನು ಅಳವಡಿಸಿದ್ದು ಇದರ ಮೂಲಕ ನೀರು ಒಳಗಡೆ ಪ್ರವೇಶಿಸುತ್ತದೆ. ಇದು ಸುಮಾರು ೩ ಅಡಿ ಎತ್ತರ ಉದ್ದ ೫ ಅಡಿ ಆಗಿದೆ. ಈ ಕೆರೆಗೆ ದಕ್ಷಿಣಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಕೋಡಿ ಮತ್ತು ಮೆಟ್ಟಿಲುಗಳನ್ನು ಗ್ರಾನೈಟ್ ಕಲ್ಲು, ಸಿಮೆಂಟ್ ಮತ್ತು ಗಾರೆ ಬಳಸಿ ಜೀರ್ಣೋದ್ಧಾರ ಮಾಡಿರುತ್ತಾರೆ.

**ಹೆಬ್ಬಾಳ ಕೆರೆ:**

ಗ್ರಾಮ-ಹೆಬ್ಬಾಳ

ಅಚ್ಚುಕಟ್ಟು ಪ್ರದೇಶ-೩೦.೯೯(ಹೆ)

ಜಲಾವೃತ ಪ್ರದೇಶ-೧೦.೩೪(ಹೆ)

ಕೆರೆಯ ಸಾಮರ್ಥ್ಯ-೧೦.೮೮ (mcft)

ಏರಿಯ ಉದ್ದ- ೬೫೪ ಮೀ.

ಏರಿಯ ಎತ್ತರ- ೧೦.೦೦ ಮೀ.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಹೆಬ್ಬಾಳ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಒಂದು ಐತಿಹಾಸಿಕ ಗ್ರಾಮ. ಶಿರಹಟ್ಟಿಯಿಂದ ದಕ್ಷಿಣಕ್ಕೆ ೩೦ ಕಿ.ಮೀ ಗದಗದಿಂದ ದಕ್ಷಿಣಕ್ಕೆ ೫೫ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ರಾಷ್ಟ್ರಕೂಟರಿಂದ ಕಲ್ಯಾಣ ಚಾಲುಕ್ಯರ ಕಾಲದವರೆಗಿನ ಶಾಸನಗಳು ನಮಗೆ ದೊರೆಯುತ್ತವೆ. ಪ್ರಮುಖವಾಗಿ ಕ್ರಿ.ಶ. ೯೭೫ರ ರಾಷ್ಟ್ರಕೂಟ ಶಾಸನದಲ್ಲಿ[೨೨] ಅರಸ ಎರಡನೇ ಕೃಷ್ಣನ ಕಾಲದಲ್ಲಿ ಬುಜ್ಜಬ್ಬರಸಿಯು ಶಿವ ದೇವಾಲಯವನ್ನು ನಿರ್ಮಿಸಿ ದಾನ ನೀಡಿದ ವಿಷಯವನ್ನು ದಾಖಲಿಸಿದೆ. ಗಂಗ ಅರಸ ಮನೆತನದ ಮಾರಸಿಂಗನ ಅಜ್ಜಿ ಜುಜ್ಜಬ್ಬರಸಿಯು ಇಲ್ಲಿ ಒಂದು ಕೆರೆಯನ್ನು ನಿರ್ಮಿಸಿ ತೂಬನ್ನು ಅಳವಡಿಸಿದ ಉಲ್ಲೇಖ ಈ ಶಾಸನದಲ್ಲಿದೆ.

ಗ್ರಾಮದಿಂದ ದಕ್ಷಿಣಕ್ಕೆ ಕೆರೆ ಇದ್ದು, ಇದು ಈಗ ಸಾಧಾರಣ ಸ್ಥಿತಿಯಲ್ಲಿದ್ದು ಈ ಗ್ರಾಮದ ಜೀವನಾಡಿಯಾಗಿದೆ. ಇದು ರಾಷ್ಟ್ರಕೂಟರ ಕಾಲದಿಂದ ಉಳಿದುಕೊಂಡು ಬಂದಿರುವುದೇ ವಿಶೇಷವಾಗಿದೆ. ಕೆರೆ ಚೌಕಾಕಾರವಾಗಿದ್ದು, ಸುಮಾರು ೧೮ ಎಕರೆ ವಿಸ್ತೀರ್ಣವನ್ನು ಹೊಂದಿದೆ. ಕೆರೆ ನಾಲ್ಕು ಕಡೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು ಒಳಭಾಗಕ್ಕೆ ದಪ್ಪ ಕಲ್ಲುಗಳನ್ನು ಜೋಡಿಸಲಾಗಿದ್ದು, ಹೊರಭಾಗ ಮಣ್ಣಿನಿಂದ ಕೂಡಿರುತ್ತದೆ. ಏರಿಯ ಎತ್ತರ ೮ ಅಡಿ, ಮೇಲ್ಭಾಗದ ಅಗಲ ೪ ಅಡಿ ಆಗಿದೆ. ಈ ಕೆರೆಗೆ ಪೂರ್ವ ದಿಕ್ಕಿನಲ್ಲಿ ಕೋಡಿಯನ್ನು ಅಳವಡಿಸಿದ್ದು ಇದರ ಮೂಲಕ ನೀರು ಒಳಗಡೆ ಪ್ರವೇಶಿಸುತ್ತದೆ. ಇದು ಸುಮಾರು ೩ ಅಡಿ ಎತ್ತರ, ಉದ್ದ ೬ ಅಡಿ ಆಗಿದೆ. ಈ ಕೆರೆಗೆ ಪಶ್ಚಿಮಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಕೋಡಿ ಮತ್ತು ಮೆಟ್ಟಿಲುಗಳನ್ನು ಗ್ರಾನೈಟ್ ಕಲ್ಲು, ಸಿಮೆಂಟ್ ಮತ್ತು ಗಾರೆ ಬಳಸಿ ನಿರ್ಮಾಣ ಮಾಡಿರುತ್ತಾರೆ.

**ಡೋಣಿ ಕೆರೆ:**

ಮುಂಡರಗಿ ತಾಲೂಕಿನ ಡೋಣಿಯು ಮುಂಡರಗಿಯಿಂದ ವಾಯವ್ಯಕ್ಕೆ ೨೮ ಕಿಮೀ. ಗದಗ ಜಿಲ್ಲಾ ಕೇಂದ್ರದಿಂದ ಆಗ್ನೇಯಕ್ಕೆ ೧೭ ಕಿ.ಮೀ ದೂರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ ಈ ಗ್ರಾಮ 'ದ್ರೋಣಾಪುರ', 'ದ್ರೋಣಿಪುರ', 'ದೋಣಿಕಾಗ್ರಾಮ', 'ದೋಣಿ', ಎಂದೆಲ್ಲ ಉಲ್ಲೇಖಿತಗೊಂಡಿದ್ದು ಹಿಂದೆ ಇದು ಮಾಸವಾಡಿ-೧೪೦ಕ್ಕೆ ಸೇರಿದ ಅಗ್ರಹಾರವಾಗಿದ್ದು ೬೦ ಮಹಾಜನರನ್ನು ಒಳಗೊಂಡಿತ್ತು. ಈವರೆಗೆ ೧೦ ಶಾಸನಗಳು ವರದಿಯಾಗಿದ್ದು ಅವುಗಳಲ್ಲಿ ಕಲ್ಯಾಣ ಚಾಲುಕ್ಯರ ಅರಸ ೬ನೇ ವಿಕ್ರಮಾದಿತ್ಯನ ಕ್ರಿ.ಶ. ೧೦೮೦ರ ಶಾಸನದಿಂದ ಈ ಗ್ರಾಮವನ್ನು ಪಿರಿಯರಸಿ ಲಕ್ಷ್ಮೀಮಹಾದೇವಿ ಆಳುತ್ತಿದ್ದಳೆಂದು ತಿಳಿದುಬರುತ್ತದೆ. ಅಗ್ರಹಾರದ ೬೦ ಮಹಾಜನರು, ಸೆಟ್ಟಿಯರು ಕೂಡಿ ಸಿದ್ಧೇಶ್ವರ ದೇವರಿಗೆ ದಾನಬಿಟ್ಟ ವಿಷಯಗಳನ್ನು ತಿಳಿಸುತ್ತದೆ. ಕ್ರಿ.ಶ. ೧೨೨೭ರ ಶಾಸನದಿಂದ ಇಲ್ಲಿ ೭೭೦ ವರ್ಷ ಇಲ್ಲದ ಸಿಬಾರವನ್ನೇ ಮಡವರಿ ಬಸಯ್ಯ ಮಾಡಿಸಿದನೆಂದು ಅಪರೂಪದ ಮಾಹಿತಿಯನ್ನು ತಿಳಿಸುತ್ತದೆ.[೨೩] ಹನುಮಂತನ ಗುಡಿ ಮುಂದಿರುವ ಜೀರ್ಣಪಾದ ಪೀಠವು ತಿಪ್ಪರಾಜನು ಆಳುತ್ತಿದ್ದಾಗ ಶಿಂಕರಣದ ಬೊಪ್ಪಣ್ಣನು ಬಸದಿಗೆ ಪಾರ್ಶ್ವನಾಥ ವಿದ್ಯಾದಾನಕೊಟ್ಟ

ವಿಷಯವನ್ನು ತಿಳಿಸುತ್ತದೆ. ಊರ ಹೊರಗೆ ದೂರದಲ್ಲಿರುವ ದೋಣಿಕವ್ವ ಗುಡಿ ಮತ್ತು ಅದರ ಬಳಿ ಸಿಬಾರಕಟ್ಟೆ ಇದೆ. ಈ ಸಿಬಾರಕಟ್ಟೆ ಸಮೀಪದಲ್ಲೇ ಕೆರೆ ಕಂಡು ಬಂದಿದ್ದು ಆದರೆ ಅದರ ಅವಶೇಷಗಳು ಯಾವು ಗೋಚರಿಸುವುದಿಲ್ಲ. ಆದರೆ ಇದಕ್ಕೆ ಸಂಬಂಧಿಸಿದಂತೆ ಒಂದು ಐತಿಹ್ಯ ಇದೆ.

ಡೋಣಿ ಗ್ರಾಮದ ಹೊರವಲಯದಲ್ಲಿ ಈ ದೇವತೆ ನೆಲೆಸಿರುವಳು. ಹೊಲೆಯರ ಕರಿಕೆಂಚವ್ವ ವಂಶದವಳು, ಆದ್ದರಿಂದಾಗಿ ಹೊಲೆಯರ ಕೇರಿಯ ಜನರು ತಮ್ಮ ಮನೆಯಲ್ಲಿ ಶುಭ ಕಾರ್ಯಗಳು ನಡೆದರೆ ತಪ್ಪದೇ ಪೂಜಿಸುವರು. ಹಿಂದೆ ಬ್ರಿಟಿಷರು ಡೋಣಿ ಗ್ರಾಮದಲ್ಲಿ ಕೆರೆಯನ್ನು ಕಟ್ಟಿಸಿದರು. ಅದರಲ್ಲಿ ನೀರು ನಿಲ್ಲಲಾರದೆ ಒಡೆದು ಹೋಗುತ್ತಿತ್ತು. ಊರ ಪ್ರಮುಖರು ಕೂಡಿಕೊಂಡು ಜೋಯಿಸರನ್ನು ಕೇಳಿಸಿದಾಗ ಕೆರೆಗೆ ಹಾರವನ್ನು ಕೊಡಬೇಕು, ಆಗ ನೀರು ನಿಲ್ಲುತ್ತದೆ ಎಂದು ಹೇಳಿದಾಗ ಊರಿನ ಪ್ರಮುಖರು ಊರಲ್ಲಿ ಯಾರನ್ನು ಹಾರ ಕೊಡಬೇಕೆಂದು ಯೋಚಿಸಿಕೊಂಡು ಹೊಲೆಯರ ಕೇರಿಯಲ್ಲಿ ಹಾಯ್ದು ಬರುತ್ತಿರಲು ಅಲ್ಲಿ ಒಬ್ಬಳು ದೇವದಾಸಿ ಹೆಣ್ಣು ಮಗಳು ಅದೇ ಒಂದು ವಾರದ ಹಿಂದೆ ಹೆರಿಗೆಗಾಗಿ ಯಾವುದೋ ಸಂದರ್ಭಕ್ಕಾಗಿ ಹೊರಗೆ ಬಂದಾಗ ಅವಳನ್ನು ಕರೆದುಕೊಂಡು ಹೋಗಿ ಕೆರೆಯಲ್ಲಿ ಬಿಡಲು ಅವಳು ಕೆರೆಯಲ್ಲಿ ಮುಳುಗದೇ ನೀರ ಮೇಲೆ ಕುಳಿತಳು. ಆಗ ಊರ ಪ್ರಮುಖರು ಯಾಕವ್ವ ನಿನಗೆ ಏನು ಬೇಕು ಎಂದಾಗ ಆಕೆ ನನ್ನ ಒಂದಿಷ್ಟು ಬೇಡಿಕೆಗಳಿವೆ ಅವುಗಳನ್ನು ನೀವು ನಡೆಸಿಕೊಟ್ಟರೆ ಸಂತೋಷದಿಂದ ಹಾರವಾಗಲು ಸಿದ್ಧ ಎಂದಾಗ, ಅವಳ ಕೋರಿಕೆಯನ್ನು ಕೇಳಿದಾಗ ಅವಳು ನನ್ನ ಜಾತಿಯವರು ಊರ ಹತ್ತಿರ ಇರಲು ನನಗೆ ಮಾನೆ(ಗದ್ದೆ)ಯನ್ನು ಕೊಡಬೇಕು ಮತ್ತು ಕೇರಿಯಲ್ಲಿ ಯಾರದೇ ಮನೆಯಲ್ಲಿ ಶುಭಕಾರ್ಯ ನಡೆದಾಗ ನನಗೆ ಐದು ತರಹದ ಸಿಹಿ ಅಡುಗೆಯನ್ನು ತಂದು ಒಪ್ಪಿಸಬೇಕೆಂದು ಹೇಳಿದಳು. ಅದಕ್ಕೆ ಗ್ರಾಮಸ್ಥರು ಒಪ್ಪಿದಾಗ ಅವಳು ಕೆರೆಯಲ್ಲಿ ಮುಳುಗಿ ಕೆರೆಗೆ ಹಾರವಾದಳೆಂದು ಅಲ್ಲಿಯ ಜನರು ಹೇಳುತ್ತಾರೆ. ಅವಳು ಹೇಳಿದ ಮಾತನ್ನು ಇಂದಿಗೂ ಆ ಕೇರಿಯಲ್ಲಿ ಪ್ರತಿಯೊಬ್ಬರ ಮನೆಯಲ್ಲಿ ಕಾರ್ಯ ನಡೆದರೆ ಕೆರಿಕೆಂಚವ್ವನಿಗೆ ಐದು ತರಹದ ಅಡುಗೆಯನ್ನು ಮಾಡಿ ನೈವೇದ್ಯ ಹಿಡಿದು ಅವಳ ಮುಂದೆ ಇಟ್ಟು ಬರುವರು. ಹೊಲೆಯರ ಕೇರಿಯಲ್ಲಿ ಎಂಟು ಮನೆಗಳಿಗೆ ಮಾನೆದ(ದೇವರಿಗಾಗಿ ಬಿಟ್ಟ ದಾನ) ಹೊಲವನ್ನು ಕೊಟ್ಟಾಗ ಅವುಗಳನ್ನು ನಾವೇ ಉತ್ತಿ-ಬಿತ್ತಿ ಬೆಳೆಯನ್ನು ತೆಗೆದುಕೊಳ್ಳುತ್ತೇವೆಂದು ಹೇಳಿ ಕೆರೆ ಕೆಂಚವ್ವ ನಮ್ಮ ಕೇರಿಯವಳೆಂದು ಹೇಳುತ್ತಾರೆ.

**ಶಾಸನೋಕ್ತಲ್ಲದ ಕೆರೆಗಳು**

**ಗೋಜನೂರಿನ ಸಿದ್ದನ ಕೆರೆ:**

ಗೋಜನೂರಿನ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನಲ್ಲಿದೆ. ಶಿರಹಟ್ಟಿ ತಾಲ್ಲೂಕಿನಿಂದ ಪಶ್ಚಿಮಕ್ಕೆ ೧೨ ಕಿ.ಮೀ ಗದಗದಿಂದ ಉತ್ತರಕ್ಕೆ ೨೩ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು

ಗ್ರಾಮದ ಪೂರ್ವ ದಿಕ್ಕಿಗೆ ಕಂಡು ಬರುತ್ತದೆ. ಪ್ರತಿಯೊಂದು ಊರಿಗೂ ಅದರದೇ ಆದ ಇತಿಹಾಸವಿರುವಂತೆ ಗೊಜನೂರಿಗೂ ಸಹ ವಿಶೇಷವಾದ ಇತಿಹಾಸವಿದೆ. ಇದರ ಸ್ಥಳನಾಮ ಬಗ್ಗೆ ವಿಚಾರಸಿದಾಗ ಗೊಜನೂರು ಗ್ರಾಮದಲ್ಲಿ ಒಂದು ವಿಶಾಲವಾದ ಗುಡ್ಡವಿದೆ. ಶತಮಾನದಷ್ಟು ಹಿಂದೆ ಈ ಗ್ರಾಮಕ್ಕೆ ಪಶುಪತಿಹಾಳ, ಗೋವನಾಳ, ಯರೇಬೂದಿಹಾಳ ಮುಂತಾದ ಸುತ್ತಮುತ್ತಲಿನ ಗ್ರಾಮಗಳಿಂದ ಗೋವುಗಳು ಬರುತ್ತಿದ್ದವಂತೆ ಈ ಗುಡ್ಡದಲ್ಲಿ ಕೆಲವು ಸಿದ್ಧಿಪುರಷರು ವಾಸಿಸುತ್ತಿದ್ದರಂತೆ. ಗುಡ್ಡದ ಇಳಿಜಾರಿನಲ್ಲಿ ಒಂದು ಕೆರೆ ಇತ್ತಂತೆ. ಅದಕ್ಕೆ 'ಸಿದ್ದನ ಕೆರೆ' ಎಂದು ಕೆರೆಯುತ್ತಾರೆ. ಈ ಕೆರೆಯಲ್ಲಿಯೇ ಹಸಿರು ಹುಲ್ಲು ಮೇಯ್ದು ಗೋವುಗಳು ನೀರು ಕುಡಿದು ಅಲ್ಲಿಯೇ ಸಮೀಪದಲ್ಲಿದ್ದ ಮರಗಳ ನೆರಳಿನಲ್ಲಿ ಮಲಗಿ ವಿಶ್ರಾಂತಿಯನ್ನು ಪಡೆದುಕೊಳ್ಳುತ್ತಿದ್ದವಂತೆ. ಗುಡ್ಡಕ್ಕೂ ಮತ್ತು ನೂರಾರು ಗೋವುಗಳಳಿಗೂ ನಿತ್ಯ ಸಂಪರ್ಕವಿತ್ತಂತೆ.[೧೨] ಆನರ ಆಡನುಡಿಯ ಪರಿಭಾಷೆಯಲ್ಲಿ ಗೋವುಗಳು+ಊರು=ಗೊಜನೂರು ಆಯಿತೆಂದು ಸ್ಥಳೀಯರ ಅಭಿಪ್ರಾಯ.

ಪ್ರಸ್ತುತವಾಗಿ ಈ ಕೆರೆ ಪಳೆಯುಳಿಕೆಯಂತಿರುವ ನೀರಿಲ್ಲದ ಜಾಲಿಯ ಕಂಟಿಗಳು ಬೆಳೆದಿರುವ ಗ್ರಾಮದ ಜನರ ನಿರ್ಲಕ್ಷ್ಯದ ಕೆರೆ ಎಂದರೂ ತಪ್ಪೆನಿಸದು. ಹಿಂದೊಂದು ಕಾಲದಲ್ಲಿ ವೈಭವದಿಂದ ಮೆರೆವ ಸಿದ್ದನಕೆರೆಯು ಇಂದು ನೀರಿಲ್ಲದ ಪರದೇಶಿಯಾಗಿದೆ. ಗೊನೂರು ಗುಡ್ಡದಲ್ಲಿ ಸಿದ್ಧಿಪುರುಷರು ತಪೋನಿಷ್ಠರಾಗಿ ಕೆರೆಯ ನೀರನ್ನು ಸ್ನಾನ ಮಾಡಿ ಅನುಷ್ಠಾನಕ್ಕೆ ಕುಳಿತು ಸಿದ್ಧಿಯನ್ನು ಪಡೆದುಕೊಳ್ಳುತ್ತಿದ್ದುರಿಂದಲೇ ಇದಕ್ಕೆ 'ಸಿದ್ದನ ಕೆರೆ' ಎಂದು ಹೆಸರು ಬಂತು ಈ ಕೆರೆ ಗೊಜನೂರಿನ ಏಕೈಕ ಕೆರೆಯಾಗಿದೆ.

ಗೊಜನೂರು ಗ್ರಾಮವನ್ನು ಸುತ್ತಮುತ್ತಲಿನ ವಿವಿಧ ಗ್ರಾಮಗಳಿಗೆ ಹೋಲಿಸಿಲಾಗಿ ಇದು 'ದೇವಾಲಯಗಳ ತವರು ಮನೆ' ಎಂದರೆ ತಪ್ಪಾಗಲಾರದು. ಏಕೆಂದರೆ ಈ ಗ್ರಾಮದಲ್ಲಿ ಒಟ್ಟು ೧೬ ದೇವಾಲಯಗಳು ಇವೆ. ಅವು ಯಾವುವೆಂದರೆ ದಾಮವ್ವ ದೇವಿ, ಮಾರುತಿ, ಮೈಲಾರಲಿಂಗಶ್ವರ, ಗುರುಮಠ, ಬಸವಣ್ಣನ ಗುಡಿ, ದುರುಗಮ್ಮ, ಈಶ್ವರ, ಉಡಚಮ್ಮ, ಅಂಬಾಶಾವಲಿ, ಗ್ವಾಲಕಂಬ ಮುಂತಾದ ದೇವಾಲಯಗಳು ಕಂಡುಬರುತ್ತವೆ.

**ಬಾಗೇವಾಡಿ ಕೆರೆ :**

| | |
|---|---|
| ಗ್ರಾಮ–ಬಾಗೇವಾಡಿ | ಅಚ್ಚುಕಟ್ಟು ಪ್ರದೇಶ–೨೫೫.೦೦ (ಹೆ) |
| ಜಲಾವೃತ ಪ್ರದೇಶ–೩೮.೦೦ (ಹೆ) | ಕೆರೆಯ ಸಾಮರ್ಥ್ಯ–೧೯.೦೦ (mcft) |
| ಏರಿಯ ಉದ್ದ– ೯೦೦ ಮೀ. | ಏರಿಯ ಎತ್ತರ–೦೪ ಮೀ. |
| ಏರಿಯ ಮೇಲ್ಭಾಗದ ಅಗಲ–೨ ಮೀ. | ತೂಬಿನ ಸಂಖ್ಯೆ –೨ |

ಬಾಗೇವಾಡಿ ಗ್ರಾಮವು ಮುಂಡರಗಿ ತಾಲೂಕು ಕೇಂದ್ರದಿಂದ ೧೪ ಕಿ.ಮೀ ದೂರದ ಈ ಕೆರೆಯು ಬಾಗೇವಾಡಿಯಿಂದ ೧.೫ ಕಿ.ಮೀ ಉತ್ತರ ದಿಕ್ಕಿನಲ್ಲಿದೆ. ಈ ಗ್ರಾಮದಲ್ಲಿ ಪ್ರಾಚೀನ

ಕಾಲದ ಈಶ್ವರ, ಮಾರುತಿ, ಬೀರಪ್ಪ, ದ್ಯಾಮವ್ವ, ಕಾಳಿಕಾದೇವಿ ದೇವಾಲಯಗಳು ಪ್ರಮುಖವಾಗಿ ಕಂಡು ಬರುವುದರಿಂದ ಇದು ಕೂಡ ಚಾರಿತ್ರಿಕವುಳ್ಳ ಗ್ರಾಮವಾಗಿದೆ. ಈ ಗ್ರಾಮಕ್ಕೆ ಸಂಬಂಧಿಸಿದಂತೆ ವೀರಪ್ಪ. ಮಾಚನೂರು ಅವರ ಹೊಲದಲ್ಲಿ ದೊರೆತ ಶಾಸನದಲ್ಲಿ[೧೫] ಪರಸನಾಯಕರಿಂದ ಕೂಲ ಬಾಗೇವಾಡಿಯ ಬಸವಣ್ಣ ಗೌಡರಿಗೆ ಭೂದಾನ ಮಾಡಿದ್ದನ್ನು ಈ ಶಾಸನದಿಂದ ತಿಳಿದುಬರುತ್ತದೆ.

ಈ ಗ್ರಾಮದ ಉತ್ತರ ದಿಕ್ಕಿಗೆ ಕೆರೆ ಕಂಡುಬಂದಿದ್ದು, ಮುಂಡರಗಿ ತಾಲೂಕಿನಲ್ಲಿ ಅತಿ ದೊಡ್ಡದಾದ ಅತೀ ಹೆಚ್ಚು ನೀರಾವರಿಗೆ ಒಳಪಟ್ಟ ಕೆರೆಯಾಗಿದೆ. ಈ ಕೆರೆಯನ್ನು ನಿರ್ಮಿಸಲು ಬಹಳ ತಾಂತ್ರಿಕತೆಯನ್ನೇ ಉಪಯೋಗಿಸಿದ್ದಾರೆ. ಈ ಕೆರೆಯಲ್ಲಿ ನೀರು ಸಂಗ್ರಹವಾಗಲು ಗುಡ್ಡದ ಬಳಿ ನಿರ್ಮಿಸಿದ್ದು ಅದರ ಮೇಲೆ ಬಿದ್ದ ಮಳೆಯ ನೀರು ಸರಾಗವಾಗಿ ಕೆರೆಗೆ ಬಂದು ನಿಲ್ಲುವಂತೆ ನಿರ್ಮಿಸಿದ್ದಾರೆ. ಈ ಕೆರೆಗೆ ಹೆಚ್ಚಿಗೆ ನೀರು ಬರುವುದರಿಂದ ಇದಕ್ಕೆ ಎತ್ತರವಾದ ಕೋಡಿ ಮತ್ತು ತೂಬನ್ನು ಅಳವಡಿಸಿದ್ದಾರೆ. ಕೋಡಿಯ ಗೋಡೆಯು ಸುಮಾರು ಉದ್ದ ೧೫೦ ಮೀಟರ್‌ವರೆಗೆ ವ್ಯಾಪಿಸಿದೆ. ಇದನ್ನು ಸಿಮೆಂಟು, ಗಚ್ಚು, ಗಾರೆ ಬಳಸಿ ನಿರ್ಮಿಸಿದ್ದಾರೆ. ತೂಬಿಗೆ ಕಬ್ಬಿಣದ ಸಲಕರಣೆಗಳನ್ನು ಬಳಸಿ ಕಾಲುವೆಗೆ ಹರಿದು ಬಿಡಲು ಜಾಕ್‌ವೆಲ್‌ನ್ನೇ ನಿರ್ಮಿಸಿದ್ದಾರೆ.

ಈ ಕೆರೆಯ ಏರಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿದ್ದು, ಈ ಕೆರೆಯಲ್ಲಿ ಎರಡು ತೂಬುಗಳು ಮತ್ತು ಒಂದು ಕೋಡಿ ಇದೆ. ತೂಬುಗಳಿಗೆ ಅನುಗುಣವಾಗಿ ಎರಡು ಕಾಲುವೆಗಳನ್ನು ಜೋಡಿಸಲಾಗಿದೆ. ಇವುಗಳ ಮೂಲಕ ಸಮತಟ್ಟಾದ ಕೃಷಿ ಪ್ರದೇಶಕ್ಕೆ ನೀರನ್ನು ಹರಿಸಲಾಗುತ್ತದೆ. ಕೆರೆಯ ತೂಬುಗಳು ಪೂರ್ವ ದಿಕ್ಕಿನ ಏರಿಯಿಂದ ೧೨ ಅಡಿ ದೂರದಲ್ಲಿವೆ. ಕೆರೆಯ ಈಶಾನ್ಯ ದಿಕ್ಕಿಗೆ ಇದರ ಅಕ್ಕಪಕ್ಕದ ಗೋಡೆಗಳು ೧೫ ಮೀಟರ್ ಎತ್ತರದಲ್ಲಿದ್ದು, ೫೦೦ ಮೀ ವರೆಗೆ ಉದ್ದವಾಗಿವೆ. ಕೆರೆಯ ಹೆಚ್ಚುವರಿಯಾದ ನೀರು ಇದರ ಮೂಲಕ ಹರಿದುಹೋಗುತ್ತದೆ.

ಈ ಕೆರೆಯಿಂದ ರೈತರು ಜೋಳ, ಗೋದಿ, ಶೇಂಗಾ, ಹತ್ತಿ, ಕಬ್ಬು ಬೆಳೆಯುತ್ತಾರೆ. ಇವು ಪ್ರಮುಖ ವಾಣಿಜ್ಯ ಬೆಳೆಗಳಾಗಿದ್ದರಿಂದ ರೈತರು ಆರ್ಥಿಕವಾಗಿ ಬಲಿಷ್ಟರಾಗಿದ್ದಾರೆ. ಇದರ ಸ್ಥಳನಾಮವನ್ನು ಗಮನಿಸಿದಾಗ ಇದು ಜಲಸೂಚಿ ಪದವಾಗಿದ್ದರಿಂದ ಈ ಗ್ರಾಮವು ಮೊದಲು ನೀರಿನ ತಾಣ ಇತ್ತು ಅಥವಾ ಇಲ್ಲಿ ಕೆರೆಯಿತ್ತೆಂಬುದು ಸ್ಪಷ್ಟವಾಗುತ್ತದೆ.

**ವೆಂಕಟಾಪುರದ ಕೆರೆ :**

ಗ್ರಾಮ-ವೆಂಕಟಾಪುರ

ಜಲಾವೃತ ಪ್ರದೇಶ-೧೩.೨೦ ಹೆಕ್ಟೇರ್

ಏರಿಯ ಉದ್ದ- ೯೦೯ ಮೀ.

ಏರಿಯ ಮೇಲ್ಭಾಗದ ಅಗಲ-೩.೦೦ ಮೀ.

ಅಚ್ಚುಕಟ್ಟು ಪ್ರದೇಶ-೪೩.೦೦ (ಹೆ)

ಕೆರೆಯ ಸಾಮರ್ಥ್ಯ-೧೫.೦೦(mcft)

ಏರಿಯ ಎತ್ತರ-೪.೫೦ ಮೀ.

ವೆಂಕಟಾಪುರ ಗ್ರಾಮವು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಒಂದು ಗ್ರಾಮ. ಮುಂಡರಗಿ ತಾಲೂಕು ಕೇಂದ್ರದಿಂದ ಉತ್ತರಕ್ಕೆ ೨೨ ಕಿ.ಮೀ ಗದಗದಿಂದ ಆಗ್ನೇಯಕ್ಕೆ ೩೪ ಕಿ.ಮೀ. ಅಂತರದಲ್ಲಿದೆ. ಇದು ಐತಿಹಾಸಿಕ ಗ್ರಾಮವಾಗಿದ್ದು, ಪ್ರಾಚೀನ ಕಾಲದ ಬಸವೇಶ್ವರ, ಗೋಣಿ ಬಸವೇಶ್ವರ, ಮಾರುತಿ, ಈಶ್ವರ ದೇವಾಲಯಗಳಿವೆ. ವಾಸ್ತುಶಿಲ್ಪದ ಆಧಾರದ ಮೇಲೆ ಇವುಗಳನ್ನು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಹೋಲಿಸಬಹುದಾಗಿದೆ. ಈ ಗ್ರಾಮವು ಎರೆ ಮಣ್ಣಿನಿಂದ ಕೂಡಿದ್ದರಿಂದ ನೀರಿನ ಬವಣೆ ಕಾಡುತ್ತಿದೆ. ಈ ಗ್ರಾಮಕ್ಕೆ ಮೊದಲಿಗೆ ಕುಡಿಯಲು ಮತ್ತು ಬಳಸಲು ಕೆರೆಯ ನೀರನ್ನೇ ಅವಲಂಬಿಸಿದ್ದರು.

ಈಗ ಈ ಕೆರೆಯು ಎರಡು ಕೆರೆಗಳನ್ನು ಒಳಗೊಂಡಿದ್ದು ಒಂದು ಕೆರೆಯ ನೀರು ಕುಡಿಯಲಿಕ್ಕೆ ಉಪಯೋಗಿಸುತ್ತಾರೆ. ಇನ್ನೊಂದು ಕೆರೆಯ ನೀರನ್ನು ಜಾನುವಾರುಗಳಿಗೆ ಹಾಗೂ ಬಟ್ಟೆ ತೊಳೆಯಲು ಉಪಯೋಗಿಸುತ್ತಾರೆ. ಈ ಕೆರೆಗಳಿಗೆ ಪೂರ್ವದಿಂದ ನೀರು ಒಳಗೆ ಪ್ರವೇಶಿಸಿ ಸಂಗ್ರಹವಾಗುತ್ತದೆ. ಸಮತಟ್ಟಾದ ಪ್ರದೇಶದಲ್ಲಿ ಈ ಕೆರೆಯನ್ನು ನಿರ್ಮಿಸಿದ್ದು ಗ್ರಾಮದಿಂದ ಒಂದು ಕಿ.ಮೀ. ದೂರದಲ್ಲಿದೆ. ಈ ಕೆರೆಯ ಏರಿಯು ನಾಲ್ಕು ದಿಕ್ಕಿನಲ್ಲಿ ಒಳ ಭಾಗವು ಕಲ್ಲಿನಿಂದ ನಿರ್ಮಿಸಿದ್ದು ಹೊರಭಾಗವು ಮಣ್ಣಿನಿಂದ ಕೂಡಿರುತ್ತದೆ.

ಒಟ್ಟಾರೆ ಈ ಕೆರೆ ಗ್ರಾಮಕ್ಕೆ ಜೀವಸೆಲೆಯೆಂದರೆ ತಪ್ಪಾಗಲಾರದು. ಇದು ಮಳೆಯಾಶ್ರಿತ ಕೆರೆಯಾಗಿದ್ದರಿಂದ ಮಳೆಯಾಗದಿದ್ದರೆ ಈ ಗ್ರಾಮಕ್ಕೆ ನೀರಿನ ತೊಂದರೆ ತಪ್ಪಿದ್ದಲ್ಲ. ಇವರು ಬೇರೆ ಗ್ರಾಮಗಳಿಗೆ ನೀರನ್ನು ತರಲು ಹೋಗಬೇಕಾಗಿದ್ದಿತು. ಪ್ರಸ್ತುತ ತುಂಗಭದ್ರ ಕಾಲುವೆ ಮೂಲಕ ನೀರನ್ನು ಗ್ರಾಮಕ್ಕೆ ಒದಗಿಸಿದ್ದಾರೆ.

**ನಾಗರಶಿಕೊಪ್ಪ ಕೆರೆ :**

| | |
|---|---|
| ಗ್ರಾಮ–ನಾಗರಶಿಕೊಪ್ಪ | ಅಚ್ಚುಕಟ್ಟು ಪ್ರದೇಶ–೨೫೫.೦೦(ಹೆ) |
| ಜಲಾವೃತ ಪ್ರದೇಶ– ೨೮.೦೨(ಹೆ) | ಕೆರೆಯ ಸಾಮರ್ಥ್ಯ–೧೮.೩೭(mcft) |
| ಏರಿಯ ಉದ್ದ– ೮೫೦ ಮೀಟರ್. | ಏರಿಯ ಎತ್ತರ– ೧೧.೦೦ ಮೀ. |
| ಏರಿಯ ಮೇಲ್ಭಾಗದ ಅಗಲ–೨.೦೦ ಮೀ. | ತೂಬಿನ ಸಂಖ್ಯೆ – ೨ |

ನಾಗರಶಿಕೊಪ್ಪ ಗ್ರಾಮವು ಗದಗದಿಂದ ಪೂರ್ವಕ್ಕೆ ೬೦ ಕಿ.ಮೀ, ರೋಣ ತಾಲೂಕು ಕೇಂದ್ರದಿಂದ ೧೪ ಕಿ.ಮೀ ದೂರದಲ್ಲಿದೆ. ಈ ಕೆರೆಯು ನಾಗರಶಿಕೊಪ್ಪ ಗ್ರಾಮದಿಂದ ೧. ಕಿ.ಮೀ ಉತ್ತರ ದಿಕ್ಕಿನಲ್ಲಿದೆ. ಈ ಗ್ರಾಮದ ಆಗ್ನೇಯಕ್ಕೆ ಕೆರೆ ಕಂಡುಬಂದಿದ್ದು, ಇದು ಇಲ್ಲಿಯ ಜನರ ಜೀವಾಳವಾಗಿದೆ. ಈ ಕೆರೆಯನ್ನು ಯಾರು ಕಟ್ಟಿದರು ಎಂಬುದಕ್ಕೆ ದಾಖಲೆಗಳು ಇಲ್ಲ; ಈ ಕೆರೆಯು ಮೂರು ಕಡೆಗೆ ಸಮತಟ್ಟಾದ ಪ್ರದೇಶದಿಂದ ಇಳಿಜಾರಿನ ಪ್ರದೇಶಕ್ಕೆ ನೀರು ಬಂದು

ನಿಲ್ಲುತ್ತದೆ. ಈ ಕೆರೆಗೆ ದಕ್ಷಿಣ ದಿಕ್ಕಿಗೆ ಏರಿಯನ್ನು ನಿರ್ಮಿಸಿದ್ದು, ಏರಿಯ ಒಳಭಾಗದಲ್ಲಿ ದಪ್ಪ ದಪ್ಪ ಕಲ್ಲುಗಳನ್ನು ಮಣ್ಣಿನಲ್ಲಿ ಜೋಡಿಸಿರುತ್ತಾರೆ. ಹೊರಭಾಗದಲ್ಲಿ ಮಣ್ಣಿನಿಂದ ನಿರ್ಮಿಸಿದ್ದಾರೆ. ಕೆರೆಯ ನೈರುತ್ಯ ದಿಕ್ಕಿಗೆ ಕೋಡಿ ಇದ್ದು ೩೦ ಅಡಿ ಉದ್ದ ಹಾಗೂ ಮೂರು ಅಡಿ ಎತ್ತರವಾಗಿದೆ. ಏರಿಯ ಬಲಗಡೆ ಒಂದು ತೂಬನ್ನು ಒಳಗೊಂಡಿದ್ದು ಇದು ೧೫ ಅಡಿ ಎತ್ತರ ಅಗಲ ೧೦ ಅಡಿ ಏರಿಯಿಂದ ತೂಬಿನ ಉದ್ದ ೧೫ ಅಡಿ. ಈ ಕೆರೆ ನೀರಿನಿಂದ ರೈತರು ಜೋಳ, ಗೋದಿ, ಶೇಂಗಾ, ಹತ್ತಿ ಮತ್ತು ಕಬ್ಬು ಬೆಳೆಯುತ್ತಾರೆ. ಇವು ಪ್ರಮುಖ ವಾಣಿಜ್ಯ ಬೆಳೆಗಳಾಗಿದ್ದರಿಂದ ರೈತರು ಆರ್ಥಿಕವಾಗಿ ಸಬಲರಾಗಿದ್ದಾರೆ. ಇದರ ಸ್ಥಳನಾಮವನ್ನು ಗಮನಿಸಿದಾಗ ಇದು ಜಲಸೂಚಿ ಪದವಾಗಿದ್ದರಿಂದ ಈ ಗ್ರಾಮದಲ್ಲಿ ಮೊದಲು ನೀರಿನ ತಾಣ ಇತ್ತು ಎಂಬುದು ಸ್ಪಷ್ಟವಾಗುತ್ತದೆ.

**ಜೀಗೇರಿ ಕೆರೆ :**

| | |
|---|---|
| ಗ್ರಾಮ–ಜೀಗೇರಿ | ಅಚ್ಚುಕಟ್ಟು ಪ್ರದೇಶ–೧೮೨.೦೦(ಹೆ) |
| ಜಲಾವೃತ ಪ್ರದೇಶ– ೩೪.೮೭(ಹೆ) | ಕೆರೆಯ ಸಾಮರ್ಥ್ಯ–೨೭.೦೦ (mcft) |
| ಏರಿಯ ಉದ್ದ– ೯೯೦ ಮೀ. | ಏರಿಯ ಎತ್ತರ– ೧೨.೦೦ ಮೀ. |
| ಏರಿಯ ಮೇಲ್ಭಾಗದ ಅಗಲ–೨.೫೦ಮೀ. | ತೂಬಿನ ಸಂಖ್ಯೆ–೨ |
| ಎಡದಂಡೆ ಕಾಲುವೆ ಉದ್ದ–೨.೫೦ ಮೀ. | ಬಲದಂಡೆ ಕಾಲುವೆ ಉದ್ದ–೨.೩೦ ಮೀ. |

ಗದಗದಿಂದ ಈಶಾನ್ಯಕ್ಕೆ ೭೨ ಕಿ.ಮೀ ದೂರದಲ್ಲಿದೆ. ರೋಣ ತಾಲೂಕು ಕೇಂದ್ರದಿಂದ ೨೪ ಕಿ.ಮೀ ದೂರದಲ್ಲಿದೆ. ಈ ಕೆರೆಯು **ಜೀಗೇರಿ** ಗ್ರಾಮದಿಂದ ೧. ಕಿ.ಮೀ ಪಶ್ಚಿಮ ದಿಕ್ಕಿನಲ್ಲಿದೆ. ಕೆರೆಯ ದಂಡೆಯ ಮೇಲೆ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿರುವ ಹನುಮಂತ ದೇವಾಲಯವಿದೆ. ದಕ್ಷಿಣಾಭಿಮುಖವಾಗಿರುವ ಇದು ಗರ್ಭಗೃಹ, ಅಂತರಾಳ ಹಾಗೂ ಪೂರ್ತಿಯಾಗಿ ಬಿದ್ದುಹೋಗಿರುವ ನವರಂಗದ ಭಾಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಹನುಮಂತನ ಶಿಲ್ಪವಿದೆ. ಗುಡಿಯ ಹಿಂಭಾಗದಲ್ಲಿ ಇದ್ದು, ಅದು ಬತ್ತಿ ಹೋಗಿರುವುದರಿಂದ ಅದನ್ನು ಮುಚ್ಚಲಾಗಿದೆ. ಇದರ ಸಮೀಪದಲ್ಲಿಯೆ ಒಂದು ಪುಡೇವು ಇದ್ದು, ಈ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದ ಆದಿ ಪಳೆಶಿಲಾಯುಗದ ಅಶ್ಯುಲಿಯನ್ ಮಾದರಿಯ ಉಪಕರಣಗಳು ದೊರೆತಿದ್ದರಿಂದ ಇದು ಚಾರಿತ್ರಿಕವಾದ ಗ್ರಾಮವಾಗಿದೆ.

ಜೀಗೇರಿ ಕೆರೆ ಒಟ್ಟು ೧೮೨.೦೦ ಹೆಕ್ಟೇರ್ ಪ್ರದೇಶ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕರೆಯ ಬಲಭಾಗದಲ್ಲಿ ಕೋಡಿಯನ್ನು ನಿರ್ಮಿಸಿದ್ದು, ಅದು ಈಗ ನೀರಿನ ರಭಸಕ್ಕೆ ಕೊಚ್ಚಿಕೊಂಡು ಹೋಗಿದೆ. ಈ ಕೆರೆಯ ಒಟ್ಟು ನೀರು ನಿಲ್ಲುವ ಸಾಮರ್ಥ್ಯ ೨೭.೦೦ ಎಂ.ಸಿ. ಎಫ್.ಟಿ. ಆಗಿದೆ. ಕೆರೆಯು ಸುತ್ತಮುತ್ತಲೂ ೬೦೦ ಎಕರೆ ಭೂಮಿಗೆ ನೀರನ್ನು ಒದಗಿಸುತ್ತದೆ.

ಏರಿಯು ಕೆರೆಯ ಉತ್ತರ ದಿಕ್ಕಿಗೆ ಇದ್ದು, ಏರಿಯ ಒಳಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಏರಿಗೆ ಹೊಂದಿಕೊಂಡಂತೆ ಒಂದು ತೂಬು ಇದೆ. ಏರಿಯಿಂದ ತೂಬಿನ ಉದ್ದ ೧೫ ಅಡಿ. ನೆಲಮಟ್ಟದಿಂದ ತೂಬಿನ ಎತ್ತರ ೨೫ ಅಡಿ, ತೂಬಿನ ಸುತ್ತಳತೆ ೬ ಅಡಿ ಆಗಿದೆ. ಇದನ್ನ ಗಚ್ಚು ಗಾರೆ ಸಿಮೆಂಟಿನಿಂದ ಮತ್ತು ಕಬ್ಬಿಣ ಲೋಹದ ವಸ್ತುಗಳಿಂದ ತಯಾರಿಸಿರುತ್ತಾರೆ. ತೂಬಿನ ಅನುಗುಣವಾಗಿ ಕಾಲುವೆ ಇದ್ದು ಇದರಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿಯುತ್ತದೆ. ಕೆರೆಯ ದಂಡೆಯ ಮೇಲೆ ವಿಜಯನಗರೋತ್ತರ ದೇವಾಲಯಾವು ನಿರ್ಮಾಣವಾಗಿರಬಹುದೆಂದು ತಿಳಿದುಬರುತ್ತದೆ.

ಒಟ್ಟಾರೆ ಗ್ರಾಮಕ್ಕೆ ಈ ಕೆರೆ ನೀರೇ ಆಧಾರ; ಇದನ್ನು ಇಲ್ಲಿನ ರೈತರು ಆರ್ಥಿಕವಾಗಿ ಮುನ್ನಡೆಯನ್ನು ಸಾಧಿಸಿದ್ದಾರೆಂದರೆ ತಪ್ಪಾಗಲಾರದು. ಈ ಕೆರೆಯು ಸಣ್ಣ ನೀರಾವರಿ ಇಲಾಖೆಗೆ ಒಳಪಟ್ಟಿರುತ್ತದೆ. ಇಂದು ಈ ರೀತಿಯ ನೀರಾವರಿ ವ್ಯವಸ್ಥೆಯಿಂದ ಕೆರೆಯ ನೀರು ಬಳಕೆಯಾಗದೇ ಹೂಳು ತುಂಬಿಕೊಂಡಿದೆ. ಮುಂದಿನ ಪೀಳಿಗೆಗೆ ಕೆರೆಯು ಇಲ್ಲದಂತೆ ಆಗುತ್ತದೆ. ಕೆರೆಗೆ ಸಂಬಂಧಿಸಿದ ಇಲಾಖೆಗಳು ಅಥವಾ ತಾಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿ ಇತ್ತ ಗಮನಹರಿಸಬೇಕು. ಇಲಾಖೆಗಳು ಕೆರೆಯಲ್ಲಿನ ಹೂಳು ಎತ್ತಿಸಿ ಕೆರೆಗೆ ತುಂಗಭದ್ರ ಮತ್ತು ಮಲಪ್ರಭಾ ನಾಲೆಯ ನೀರನ್ನು ಹರಿಸಬೇಕು. ಇದರಿಂದ ಅಧಿಕವಾಗುತ್ತಿರುವ ಆಯಕಟ್ಟು ಪ್ರದೇಶಗಳಿಗೆ ನೀರನ್ನು ಸಮರ್ಪಕವಾಗಿ ಪೂರೈಸಲು ಸಹಾಯಕವಾಗುತ್ತದೆ ಎನ್ನಬಹುದು.

**ವಾಸನ ಕೆರೆ :**

| | |
|---|---|
| ಗ್ರಾಮ-ವಾಸನ | ಅಚ್ಚುಕಟ್ಟು ಪ್ರದೇಶ-೩೩.೦೦ (ಹೆ) |
| ಜಲಾವೃತ ಪ್ರದೇಶ-೧೨.೨೦ ಹೆಕ್ಟೇರ್ | ಕೆರೆಯ ಸಾಮರ್ಥ್ಯ-೧೩.೦೦(mcft) |
| ಏರಿಯ ಉದ್ದ- ೭೦೯ ಮೀ. | ಏರಿಯ ಎತ್ತರ-೩.೫೦ ಮೀ |
| ಏರಿಯ ಮೇಲ್ಭಾಗದ ಅಗಲ-೨.೦೦ ಮೀ. | |

ವಾಸನ ಗ್ರಾಮವು ಗದಗದಿಂದ ವಾಯುವ್ಯಕ್ಕೆ ೪೫ ಕಿ.ಮೀ ದೂರದಲ್ಲಿದೆ. ನರಗುಂದದಿಂದ ಈಶಾನ್ಯಕ್ಕೆ ೨೨ ಕಿ.ಮೀ ದೂರದಲ್ಲಿ ಮತ್ತು ಕೊಣ್ಣೂರಿನಿಂದ ವಾಯವ್ಯಕ್ಕೆ ೨ ಕಿ.ಮೀ ದೂರದಲ್ಲಿ ಮಲಪ್ರಭಾ ನದಿಯ ದಂಡೆಯ ಮೇಲಿದೆ. ಈ ಗ್ರಾಮ ಇಂದು ಒಳನಾಡಿಗೆ ಸ್ಥಳಾಂತರಗೊಂಡಿದ್ದು, ಹಳೆಯ ವಾಸನ ಹಾಳು ಬಿದ್ದು ಮುಳ್ಳು ಕಂಟಿ ಬೆಳೆದು ನಿಂತಿದೆ. ೧೯೮೦ರ ದಶಕದ ಇಲ್ಲಿ ನಡೆಸಿದ ಉತ್ಖನನದಲ್ಲಿ ಶಾತವಾಹನರ ಶಾಸನ, ದೇವಾಲಯದ ತಳಪಾಯ ಹಾಗೂ ಮೂರ್ತಿಗಳು ಲಭಿಸಿವೆ. ಶೈವ ದೇವಾಲಯವನ್ನೇ ಪ್ರಸ್ತಾಪಿಸುವ ಈ ಶಾಸನದಿಂದ ಕ್ರಿ.ಶ. ೨ನೇ ಶತಮಾನದ

ಅತ್ಯಂತ ಪ್ರಾಚೀನ ದೇವಾಲಯವಿದೆ ಎಂಬ ಹೆಗ್ಗಳಿಕೆಗೆ ವಾಸನದಲ್ಲಿ ಲಭಿಸಿರುವ ಇಟ್ಟಿಗೆ ಕಟ್ಟಡ ರಚನೆಯೇ ಉದಾಹರಣೆ. ಮೇಲಾಗಿ ಇದು ಪೂರ್ವ ಇತಿಹಾಸವನ್ನು ಹೊಂದಿರುವ ನೆಲೆ ಎಂಬ ಅಂಶವನ್ನು ಇಲ್ಲಿ ಲಭಿಸಿರುವ ಸುಮಾರು ೩೦೦೦ ವರ್ಷಗಳಷ್ಟು ಹಳೆಯದಾದ ವೃತ್ತಾಕಾರದ ಕಲ್ಲು ಸಮಾಧಿಗಳು ಸೂಚಿಸುತ್ತವೆ.

ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಮಲಪ್ರಭಾ ಕಾಲುವೆಯಿಂದ ಏತ ನೀರಾವರಿಯ ಅಳವಡಿಸಿರುತ್ತಾರೆ. ಇದರ ಮುಖಾಂತರ ಗ್ರಾಮದ ಸುತ್ತಮುತ್ತಲಿನ ಪರಿಸರ ಹಸಿರಿನಿಂದ ಕೂಡಿದೆ. ಈ ಏತ ನೀರಾವರಿಯಿಂದ ಹೊಲಗಳಿಗೆ ಕಾಲುವೆಗಳ ಮೂಲಕ ನೀರಿನ ಹಂಚಿಕೆಯನ್ನು ಮಾಡಲಾಗುತ್ತದೆ. ಇದರಿಂದ ಮುಖ್ಯವಾಗಿ ಶೇಂಗಾ, ಹತ್ತಿ, ಜೋಳ, ಗೋವಿನ ಜೋಳ, ಸೂರ್ಯಕಾಂತಿ, ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ. ಈ ಏತ ನೀರಾವರಿಯಿಂದ ಇಲ್ಲಿ ಜನರು ಆರ್ಥಿಕವಾಗಿ ಮುನ್ನಡೆಯನ್ನು ಸಾಧಿಸಿದ್ದಾರೆ.

**ಬೆಣಚಮಟ್ಟಿ ಕೆರೆ :**

| | |
|---|---|
| ಗ್ರಾಮ-ಬೆಣಚಮಟ್ಟಿ | ಅಚ್ಚುಕಟ್ಟು ಪ್ರದೇಶ-೯೩.೦೦(ಹೆ) |
| ಜಲಾವೃತ ಪ್ರದೇಶ-೨೩.೮೭(ಹೆ) | ಕೆರೆಯ ಸಾಮರ್ಥ್ಯ-೧೨.೭೮(mcft) |
| ಏರಿಯ ಉದ್ದ-೧೦೦೦ ಮೀ. | ಏರಿಯ ಎತ್ತರ-೪ ಮೀ. |
| ಏರಿಯ ಮೇಲ್ಭಾಗದ ಅಗಲ-೨ ಮೀ. | ತೂಬಿನ ಸಂಖ್ಯೆ-೨ |

ಗದಗ ಜಿಲ್ಲಾಕೇಂದ್ರದಿಂದ ಈಶಾನ್ಯಕ್ಕೆ ೭೦ ಕಿ.ಮೀ ದೂರದಲ್ಲಿ ಬೆಣಚಮಟ್ಟಿ ಗ್ರಾಮವಿದೆ. ರೋಣ ತಾಲೂಕು ಕೇಂದ್ರದಿಂದ ೨೬ ಕಿ.ಮೀ ದೂರದಲ್ಲಿದೆ. ಈ ಕೆರೆಯು ಬೆಣಚಮಟ್ಟಿ ಗ್ರಾಮದಿಂದ ಪಶ್ಚಿಮ ದಿಕ್ಕಿನಲ್ಲಿದೆ. ಕೆರೆಯು ಬೆಣಚಮಟ್ಟಿಯಿಂದ ವಾಯುವ್ಯ ದಿಕ್ಕಿಗೆ ಕಂಡುಬರುತ್ತದೆ. ಈ ಕೆರೆಯ ದಂಡೆಯ ಮೇಲೆ ಈಶ್ವರ ದೇವಾಲಯವಿದ್ದು ಅದರ ಬಹು ಭಾಗಗಳು ನೆಲಕಚ್ಚಿವೆ. ಬಿದ್ದು ಹೋಗಿರುವ ಭಾಗಗಳನ್ನು ಗಮನಿಸಿದರೆ ಈ ದೇವಾಲಯವು ದೊಡ್ಡ ಸಂಕೀರ್ಣವಾಗಿದ್ದಿರಬೇಕು. ಗರ್ಭಗೃಹದಲ್ಲಿ ತಕ್ಕಮಟ್ಟಿನ ಸ್ಥಿತಿಯಲ್ಲಿರುವ ಲಿಂಗವಿದೆ. ಇದನ್ನು ಕಪ್ಪು ಶಿಲೆಯಲ್ಲಿ ನಿರ್ಮಿಸಲಾಗಿದೆ. ಗರ್ಭಗೃಹದ ಬಾಗಿಲುವಾಡವು ಎತ್ತರವಾಗಿದ್ದು ಅದು ೫ ಶಾಖೆಗಳನ್ನು ಹೊಂದಿದೆ. ದೇವಾಲಯದ ಮುಂಭಾಗದಲ್ಲಿ ಪ್ರಾಚೀನ ಬಾವಿ ಇದ್ದು, ಅದರ ಸುತ್ತಲೂ ಪ್ರಾಚೀನವಾದ ಬಿಡಿ ಶಿಲ್ಪಗಳು ಅಲ್ಲಲ್ಲಿ ಬಿದ್ದಿರುವುದನ್ನು ಕಾಣುತ್ತೇವೆ. ದೇವಾಲಯದ ಮುಂಭಾಗದಲ್ಲಿ ಅಪ್ರಕಟಿತ ಶಾಸನವೊಂದು ಕಂಡುಬಂದಿದ್ದರಿಂದ ಇದು ಬಹುಶಃ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿರಬಹುದು. ಈ ಕೆರೆಯ ಬಗ್ಗೆ ಹೇಳುವುದಾದರೆ, ಈ ಕೆರೆಯ ವಿಸ್ತೀರ್ಣ ೯೩.೧೫ ಹೆಕ್ಟೇರ್ ಪ್ರದೇಶ ಕ್ಷೇತ್ರವನ್ನು ಹೊಂದಿದೆ. ಕೆರೆಯ ಒಟ್ಟು ಉದ್ದ ೩೨೦೦೦ ಚದರ ಅಡಿ ಹಾಗೂ ಕೋಡಿಯ ಉದ್ದ ೩೫

ಅಡಿ ಆಗಿದೆ. ಈ ಕೆರೆಯಲ್ಲಿ ನೀರು ನಿಲ್ಲುವ ಸಾಮರ್ಥ್ಯ ೧೮.೩೭ ಎಂ.ಸಿ.ಎಫ್.ಟಿ. ಆಗಿದೆ. ಒಟ್ಟು ನೀರಿನಿಂದ ಕೆರೆಯ ಸುತ್ತಮುತ್ತಲ ೨೧.೬೩ ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ.

ಏರಿಯು ಕೆರೆಯಿಂದ ದಕ್ಷಿಣಕ್ಕೆ ಇದ್ದು, ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ., ಏರಿಯ ಒಟ್ಟು ಉದ್ದ ೮೦೦ ಮೀಟರ್ ಎತ್ತರ. ೧೨ ಅಡಿ ಏರಿಯ ಮೇಲ್ಭಾಗದ ಅಗಲ ೬ ಅಡಿ ಆಗಿದೆ. ಇದಕ್ಕೆ ಹೊಂದಿಕೊಂಡಂತೆ ಒಂದು ತೂಬು ಇದೆ. ಇದು ಏರಿಯಿಂದ ೧೨ ಅಡಿ ದೂರದಲ್ಲಿದೆ. ಇದನ್ನು ಗಚ್ಚು ಗಾರೆ ಸಿಮೆಂಟ್ ಮತ್ತು ಕಬ್ಬಿಣದ ಲೋಹದ ವಸ್ತುಗಳಿಂದ ತಯಾರಿಸುಲಾಗಿದೆ. ತೂಬಿನ ಅನುಗುಣವಾಗಿ ಕಾಲುವೆಗಳಿದ್ದು ಇದರಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪರ್ಕವಾಗಿ ಹರಿಯುತ್ತದೆ. ಕೆರೆಯ ಸುತ್ತಮುತ್ತಲಿನ ಪ್ರದೇಶವು ಒಕ್ಕಲಿಗ, ಲಿಂಗಾಯತ, ಕುರುಬ ಸಮುದಾಯಗಳಿಗೆ ಸೇರಿದ್ದು, ಇವರು ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿದೆ. ಹಾಗೆಯೇ ಈ ಕೆರೆಯು ಮೀನುಗಾರಿಕೆಗೆ ಮತ್ತು ಹೈನುಗಾರಿಕೆಗೂ ಉಪಯುಕ್ತವಾಗಿದೆ.

**ನಾಗೇಂದ್ರಗಡ ಕೆರೆ**

| | |
|---|---|
| ಗ್ರಾಮ-ನಾಗೇಂದ್ರಗಡ | ಅಚ್ಚುಕಟ್ಟು ಪ್ರದೇಶ- ೧೨೧.೨೩(ಹೆ) |
| ಜಲಾವೃತ ಪ್ರದೇಶ- ೩೪.೮೭(ಹೆ) | ಕೆರೆಯ ಸಾಮರ್ಥ್ಯ- ೧೨.೨೩(mcft) |
| ಏರಿಯ ಉದ್ದ- ೧೧೦೦ ಮೀ. | ಏರಿಯ ಎತ್ತರ- ೧೦.೦೦ಮೀ. |
| ಏರಿಯ ಮೇಲ್ಭಾಗದ ಅಗಲ-೨.೦೦ ಮೀ. | ತೂಬಿನ ಸಂಖ್ಯೆ-೨ |
| ಬಲದಂಡೆ ಕಾಲುವೆ ಉದ್ದ-೨.೪೦ ಮೀ. | |

ಗದಗದಿಂದ ನಾಗೇಂದ್ರಗಡ ಈಶಾನ್ಯಕ್ಕೆ ೬೮ ಕಿ.ಮೀ ದೂರದಲ್ಲಿದೆ. ರೋಣ ತಾಲೂಕು ಕೇಂದ್ರದಿಂದ ೨೭ಕಿ.ಮೀ ದೂರದಲ್ಲಿದೆ. ಈ ಕೆರೆಯು ನಾಗೇಂದ್ರಗಡದಿಂದ ಪೂರ್ವ ದಿಕ್ಕಿಗೆ ಕಂಡುಬರುತ್ತದೆ. ಕೆರೆ ಊರಿನಿಂದ ೧.೫ ಕಿ.ಮೀ ಅಂತರದಲ್ಲಿದೆ. ಭೌಗೋಳಿಕ ಪರಿಸರ ಮತ್ತು ಜಲಾಸಯನ ಗಮನಿಸಿ ಬೆಟ್ಟದ ಕೆಳಗೆ ಕೆರೆಯನ್ನು ಕಟ್ಟಲಾಗಿದೆ. ಕೆರೆಯಿಂದ ಪಶ್ಚಿಮ ದಿಕ್ಕಿಗೆ ಏರಿ ಇದ್ದು, ಪೂರ್ವ ದಿಕ್ಕಿಗೆ ಬೆಟ್ಟ ಇದೆ. ಈ ಬೆಟ್ಟದ ಮೇಲೆ ಬಿದ್ದ ನೀರು ಸಂಗ್ರಹವಾಗುವಂತೆ ಕೆರೆಯನ್ನು ನಿರ್ಮಿಸಿರುತ್ತಾರೆ. ಈ ಕೆರೆ ಒಟ್ಟು ೧೨೧.೨೩ಹೆಕ್ಟೇರ್ ಪ್ರದೇಶ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದ್ದು, ಕೆರೆಯ ಬಲ ಭಾಗದಲ್ಲಿ ಕೋಡಿ ಇದ್ದು, ಇದು ೧೮ಮೀ. ಉದ್ದವನ್ನು ಹೊಂದಿದೆ. ಎತ್ತರ ೪ ಮೀ. ಆಗಿದೆ. ನೀರು ನಿಲ್ಲುವ ಸಾಮರ್ಥ್ಯ ೧೨.೨೩ ಎಂ.ಸಿ.ಎಫ್.ಟಿ. ಆಗಿದೆ. ಕೆರೆಯ ಸುತ್ತಮುತ್ತಲ ೩೪.೮೩ ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳಭಾಗವು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ

ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಏರಿಗೆ ಹೊಂದಿಕೊಂಡಂತೆ ಒಂದು ತೂಬು ಇದೆ. ಇದು ೩ಮೀ. ಎತ್ತರವಾಗಿದೆ. ಏರಿಯಿಂದ ತೂಬಿನ ಉದ್ದ ೫.೬ ಮೀ. ಆಗಿದೆ. ತೂಬಿನ ಸುತ್ತಳತೆ ೧.೮ ಮೀ. ಆಗಿದೆ. ತೂಬಿನ ಅನುಗುಣವಾಗಿ ಏರಿಯಿಂದ ಕಾಲುವೆ ಇದ್ದು, ಇದರಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಹಾಯಿಸಿ ಜೋಳ, ಶೇಂಗಾ, ಹತ್ತಿ, ಸೂರ್ಯಕಾಂತಿ ಇನ್ನಿತರ ಬೆಳೆಗಳನ್ನು ಬೆಳೆಯುತ್ತಾರೆ.

ಕೆರೆಯ ಸಮೀಪದಲ್ಲಿ ನಂದಿ, ನಾಗ ಮತ್ತು ವೀರನು ಬಾಣ ಹಿಡಿದ ಹಾಗೂ ವೀರಗಲ್ಲು ಶಿಲ್ಪಗಳು ಅವಶೇಷಗಳು ಕಂಡುಬರುತ್ತವೆ. ಕೆರೆಯ ಸಮೀಪದಲ್ಲಿ ಗೋಶಾಲೆಯನ್ನು ನಿರ್ಮಾಣ ಮಾಡಿದ್ದು ಗೋವುಗಳಿಗೆ ಅನುಕೂಲಕರವಾಗಿದೆ. ಈ ಕೆರೆಯು ಮೂರು ಕಡೆಗೆ ಗುಡ್ಡದಿಂದ ಆವರಿಸಿದ್ದು, ಪಶ್ಚಿಮ ದಿಕ್ಕಿಗೆ ಮಾತ್ರ ಏರಿಯನ್ನು ಒಳಗೊಂಡಿದೆ. ಗುಡ್ಡದಲ್ಲಿ ಶಂಕರಕೊಂಡ, ಪಾರ್ವತಿಕೊಂಡ, ನವಿಲುಕೊಂಡ ಎಂಬ ಮೂರು ಹೊಂಡಗಳಿಂದ ಈ ಕರೆಗೆ ನೀರು ಶೇಖರಣೆಗೋಳ್ಳತ್ತದೆ. ಈ ಕೆರೆಯ ನೀರು ಮೀನುಗಾರಿಕೆ, ನೀರಾವರಿಗೆ ಹಾಗೂ ದನಕರುಗಳಿಗೆ ಉಪಯುಕ್ತವಾಗಿದೆ. ಪ್ರಸ್ತುತ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದೆ.

**ಕಣಗಿನಹಾಳ ಕೆರೆ:**

| | |
|---|---|
| ಗ್ರಾಮ–ಕಣಗಿನಹಾಳ | ಅಚ್ಚುಕಟ್ಟು ಪ್ರದೇಶ–೪೫.೦೦(ಹೆ) |
| ಜಲಾವೃತ ಪ್ರದೇಶ–೧೨.೯೮(ಹೆ) | ಕೆರೆಯ ಸಾಮರ್ಥ್ಯ–೧೧.೩೪(mcft) |
| ಏರಿಯ ಉದ್ದ–೫೦೦ ಮೀ. | ಏರಿಯ ಎತ್ತರ–೫ ಮೀ. |
| ಏರಿಯ ಮೇಲ್ಭಾಗದ ಅಗಲ–೧.೮ ಮೀ. | ತೂಬಿನ ಸಂಖ್ಯೆ–ಇಲ್ಲಾ |

ಗದಗ ತಾಲ್ಲೂಕು ಕೇಂದ್ರದಿಂದ ಈಶಾನ್ಯಕ್ಕೆ ೯ ಕಿ.ಮೀ ದೂರದಲ್ಲಿದೆ. ಇದು ಚಾರಿತ್ರಿಕವಾದ ಗ್ರಾಮವಾಗಿದೆ. ೧೯೦೫ರಲ್ಲಿ ಏಷ್ಯಾ ಖಂಡದಲ್ಲಿ ಪ್ರಪ್ರಥಮ ಸಹಕಾರ ಸಂಘ ಸ್ಥಾಪನೆಯಾದ ಗ್ರಾಮವಾಗಿದೆ. ಗ್ರಾಮದಲ್ಲಿ ತ್ರುಟಿತವಾದ ಶಾಸನವೊಂದು ವರದಿಯಾಗಿದ್ದು, ಗ್ರಾಮದಲ್ಲಿ ಅಳಿದುಳಿದ ದೇವಾಲಯ, ಮೂರ್ತಿಶಿಲ್ಪ ಅವಶೇಷಗಳಿಂದ ಈ ಊರಿನ ಪ್ರಾಚೀನತೆಯನ್ನು ರಾಷ್ಟ್ರಕೂಟರಷ್ಟೇ ಹಿಂದಕ್ಕೆ ಗುರುತಿಸಬಹುದಾಗಿದೆ. ಇಲ್ಲಿ ಸುಮಾರು ಕ್ರಿ.ಶ. ೧೦ನೇ ಹಾಗೂ ೧೨ನೇ ಶತಮಾನದ ಬಸವಣ್ಣನ ಗುಡಿ ಕಲ್ಮೇಶ್ವರ, ನಾರಾಯಣ ದೇವಾಲಯಗಳು ಶಿಥಿಲಾವಸ್ಥೆಯಲ್ಲಿವೆ. ಊರಿನಿಂದ ಪೂರ್ವ ದಿಕ್ಕಿಗೆ ಎರಡು ಕೆರೆಗಳಿದ್ದು ಒಟ್ಟು ಸುಮಾರು ೧೩೫ ಎಕರೆ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕೆರೆಯ ಒಟ್ಟು ವಿಸ್ತೀರ್ಣ ೨೨೦೦ ಅಡಿ ಹಾಗೂ ಕೋಡಿಯ ಉದ್ದ ೯ ಮೀ. ಕೋಡಿಯ ಎತ್ತರ ೩ಮೀ. ಆಗಿದೆ. ಕೆರೆಯ ಸುತ್ತಮುತ್ತಲು ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಕೆರೆಯ ಪೂರ್ವ ದಿಕ್ಕಿಗೆ ಹುಚ್ಚೀರಪ್ಪನ ಗದ್ದುಗೆ ಇದೆ. ಈ ಕೆರೆಗೆ ತಂತಿ ಬೇಲಿಯನ್ನು ಅಳವಡಿಸಿ ಸಂರಕ್ಷಣೆ ಮಾಡಿರುತ್ತಾರೆ. ಕೆರೆಯ ನೀರನ್ನು ಎಲ್ಲಾ ಸಮುದಾಯದವರು ಬಳಸಬಹುದಾಗಿದೆ.

ಕುಡಿಯುವ ಕೆರೆಯ ನೀರು ಹೆಚ್ಚಾದ ಬಳಿಕ ಇನ್ನೊಂದು ಕೆರೆಗೆ ಕೋಡಿಯ ಮೂಲಕ ಶೇಖರಣೆಗೊಳ್ಳುತ್ತದೆ. ಆ ನೀರನ್ನು ಜಾನುವಾರುಗಳಿಗೆ ಮತ್ತು ಬಟ್ಟೆ ಒಗೆಯಲು ಮತ್ತು ಮೀನು ಸಾಕಾಣಿಕೆಗೆ ಬಳಸುತ್ತಾರೆ.

**ಶಿರೂರು ಕೆರೆ :**

| | |
|---|---|
| ಗ್ರಾಮ–ಶಿರೂರು | ಅಚ್ಚುಕಟ್ಟು ಪ್ರದೇಶ– ೫೦೬.೦೦(ಹೆ) |
| ಜಲಾವೃತ ಪ್ರದೇಶ– ೭೪.೫೦(ಹೆ) | ಕೆರೆಯ ಸಾಮರ್ಥ್ಯ– ೮೩.೦೦(mcft) |
| ಏರಿಯ ಉದ್ದ– ೭೫೦ ಮೀ. | ಏರಿಯ ಎತ್ತರ–೭ ಮೀ. |
| ಏರಿಯ ಮೇಲ್ಭಾಗದ ಅಗಲ– ೫ ಮೀ. | ತೂಬಿನ ಸಂಖ್ಯೆ– ೧ |
| ಬಲದಂಡೆ ಕಾಲವೆ ಉದ್ದ–೬.೦೬ ಮೀ. | ಬಳಕೆಯಾಗುವ ನೀರಿನ ಪ್ರಮಾಣ–೨೫.೭೫ |
| ನೀರಿನ ಹೊರ ಹರಿವು–೫೬.೨೪ ಕ್ಯೂಸೆಕ್ಸ್ | ಒಟ್ಟು ಹೆಕ್ಟೇರ್ ನೀರಾವರಿ ಪ್ರದೇಶ–೪೦೯.೯ |
| ಬಲದಂಡೆ ಕಾಲುವೆ ಉದ್ದ–೬.೬೦ ಮೀ. | |

ಶಿರೂರು ಗ್ರಾಮವು ಗದಗದಿಂದ ಆಗ್ನೇಯಕ್ಕೆ ೨೪ ಕಿ.ಮೀ, ಮುಂಡರಗಿ ತಾಲೂಕು ಕೇಂದ್ರದಿಂದ ವಾಯುವ್ಯಕ್ಕೆ ೨೦ ಕಿ.ಮೀ ದೂರದಲ್ಲಿದೆ. ಈ ಊರು ಪ್ರಾಚೀನ ಶಾಸನಗಳಲ್ಲಿ 'ಸಿರಿವೂರು' ಎಂದು ಉಲ್ಲೇಖಿತಗೊಂಡಿದ್ದು ಹಿಂದೆ ಮಾಸವಾಡಿ–೧೪೦ಕ್ಕೆ ಸೇರಿತ್ತು. ಇಲ್ಲಿಂದ ಈವರೆಗೆ ಕಲ್ಯಾಣ ಚಾಲುಕ್ಯ ಹಾಗೂ ಯಾದವ ಅರಸರಿಗೆ ಸೇರಿದ ಏಳು ಶಾಸನಗಳು ವರದಿಯಾಗಿವೆ.

ಗ್ರಾಮದಿಂದ ಪಶ್ಚಿಮ ದಿಕ್ಕಿಗೆ ಕಂಡುಬರುತ್ತದೆ. ಇದು ಕೃಷಿಗೆ ಅತಿ ಉಪಯುಕ್ತವಾದ ಕೆರೆಯಾಗಿದೆ. ಇಂದಿಗೂ ಸುಸ್ಥಿತಿಯಲ್ಲಿದ್ದು ಇದರ ಪ್ರಯೋಜನವನ್ನು ಜನರು ಪಡೆಯುತ್ತಿದ್ದಾರೆ. ಈ ಕೆರೆಯನ್ನು ಯಾರು ನಿರ್ಮಿಸಿದರೆಂದು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಈ ಕೆರೆಗೆ ಮಳೆಯ ನೀರು ಆಧಾರವಾಗಿದ್ದು ಪಶ್ಚಿಮ ದಿಕ್ಕಿನ ಮುಖಾಂತರ ನೀರು ಸಂಗ್ರಹವಾಗುತ್ತದೆ. ಇದು ಸುಮಾರು ೫೬೭.೨೫ ಪ್ರಮಾಣದಷ್ಟು ನೀರಿನ ಸಂಗ್ರಹಣಾ ಸಾಮರ್ಥ್ಯವನ್ನು ಹೊಂದಿದೆ. ಈ ಕೆರೆಯ ಜಲಾನಯನ ಪ್ರದೇಶವು ೩೬೨ ಹೆಕ್ಟೇರ್‌ಗಳು ಮತ್ತು ಅಚ್ಚುಕಟ್ಟು ಪ್ರದೇಶವು ೧೨೫೦ ಹೆಕ್ಟೇರ್ ಪ್ರದೇಶವನ್ನು ಒಳಗೊಂಡಿದೆ.

ಪೂರ್ವಾಭಿಮುಖವಾಗಿರುವ ತೂಬಿನ ಮೂಲಕ ನೀರು ಹರಿದು ಹೋಗುತ್ತದೆ. ಏರಿಗೆ ಹೊಂದಿಕೊಂಡಂತೆ ಕಾಲುವೆ ಇದ್ದು, ಇದರ ಮೂಲಕ ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಸರಬರಾಜು ಮಾಡುತ್ತದೆ. ಕೆರೆಯ ಸುತ್ತಲಿನ ಪ್ರದೇಶವು ನೀರಾವರಿಗೆ ಒಳಪಟ್ಟಿರುತ್ತದೆ. ಕೆರೆಗೆ ಏರಿಯು ಉತ್ತರ ಮತ್ತು ಪೂರ್ವಾಭಿಮುಖವಾಗಿದ್ದು, ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ, ಒಳ ಭಾಗವು ದಪ್ಪ ದಪ್ಪ ಕಲ್ಲುಗಳಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ರಚನೆಯಾಗಿದೆ. ಈ ಕೆರೆಗೆ ಒಂದು ತೂಬು

ಮತ್ತು ಕೋಡಿಯಿದೆ. ತೂಬನ್ನು ದಕ್ಷಿಣ ದಿಕ್ಕಿನ ಏರಿಯಿಂದ ೧೨ ಅಡಿ ದೂರದಲ್ಲಿ ಇರಿಸಲಾಗಿದೆ. ಕೆರೆಯ ಉತ್ತರ ದಿಕ್ಕಿಗೆ ೧೨೬ ಮೀಟರ್ ಉದ್ದದ ಕೋಡಿ ಇದ್ದು, ಇದರ ಮೂಲಕ ಹೆಚ್ಚುವರಿ ನೀರನ್ನು ಹೊರಗೆ ಬಿಡಲಾಗುತ್ತದೆ.ಇಲ್ಲಿನ ಬೂಮಿ ಒಕ್ಕಲಿಗ, ಲಿಂಗಾಯತ, ಕುರುಬ, ಗಾಣಿಗ ಸಮುದಾಯದವರಿಗೆ ಸೇರಿದ್ದು ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿದೆ. ಹಾಗೆಯೇ ಈ ಕೆರೆಯು ಮೀನು ಸಾಕಾಣಿಕೆಗೆ ಉಪಯುಕ್ತವಾಗಿದೆ.

**ಮಜ್ಜೂರು ಕೆರೆ:**

ಗ್ರಾಮ- ಮಜ್ಜೂರು
ಅಚ್ಚುಕಟ್ಟು ಪ್ರದೇಶ- ೭೨೦.೫೨
ಜಲಾವೃತ ಪ್ರದೇಶ-೮೭.೨೭ ಚದರ ಕಿ.ಮಿ.
ಕೆರೆಯ ಸಾಮರ್ಥ್ಯ-೨೧೪.೦೦(mcft)
ಏರಿಯ ಉದ್ದ- ೧೪೦.೦೦ ಮೀ.
ಏರಿಯ ಎತ್ತರ-೧೮.೬೧ ಮೀಟರ್
ಏರಿಯ ಮೇಲ್ಭಾಗದ ಅಗಲ-೨ ಮೀ.
ತೂಬಿನ ಸಂಖ್ಯೆ -೨
ಬಲದಂಡೆ ಕಾಲುವೆ ಉದ್ದ-೯.೯ ಮೀ.

ಗ್ರಾಮವು ಗದಗ ಜಿಲ್ಲಾಕೇಂದ್ರದಿಂದ ದಕ್ಷಿಣಕ್ಕೆ ೩೬ ಕಿ.ಮೀ ದೂರದಲ್ಲಿದೆ. ಶಿರಹಟ್ಟಿ ತಾಲೂಕು ಕೇಂದ್ರದಿಂದ ೮ ಕಿ.ಮೀ ದೂರದಲ್ಲಿದೆ. ಈ ಕೆರೆಯು ಮಜ್ಜೂರು ಗ್ರಾಮದಿಂದ ವಾಯುವ್ಯಕ್ಕೆ ಕಂಡುಬಂದಿದ್ದು, ಇದು ಇಲ್ಲಿಯ ಜನರಿಗೆ ನೀರಾವರಿ ಮಾಡಲು ಉಪಯುಕ್ತವಾಗಿದೆ. ಕೆರೆಗೆ ಮೂರು ದಿಕ್ಕಿನ ಗುಡ್ಡಗಳಿಂದ ಸಮತಟ್ಟಾದ ಪ್ರದೇಶಕ್ಕೆ ಅಥವಾ ಇಳಿಜಾರಿನ ಪ್ರದೇಶಕ್ಕೆ ನೀರು ಹರಿದು ಬಂದು ನಿಲ್ಲುತ್ತದೆ. ಕೆರೆಯ ದಕ್ಷಿಣ ದಿಕ್ಕಿಗೆ ಏರಿಯನ್ನು ನಿರ್ಮಿಸಿದ್ದು ಏರಿಯ ಒಳಭಾಗದಲ್ಲಿ ದಪ್ಪ ದಪ್ಪ ಕಲ್ಲುಗಳನ್ನು ಮಣ್ಣಿನಲ್ಲಿ ಜೋಡಿಸಿರುತ್ತಾರೆ. ಹೊರಭಾಗವು ಮಣ್ಣಿನಿಂದ ಕೂಡಿರುತ್ತದೆ. ಈ ಕೆರೆಯು ನೈರುತ್ಯ ದಿಕ್ಕಿಗೆ ಕೋಡಿಯನ್ನು ಒಳಗೊಂಡಿದ್ದು, ಇದು ೧೨ ಮೀ. ಉದ್ದ ಹಾಗೂ ೨ ಮೀ. ಎತ್ತರವಾಗಿದೆ. ಏರಿಯ ಪಕ್ಕದಲ್ಲಿ ಒಂದು ತೂಬನ್ನು ಒಳಗೊಂಡಿದ್ದು, ಇದರ ಕಾಲುವೆ ೯.೯೦ ಕಿ.ಮೀ ಉದ್ದವಾಗಿದ್ದು ಇದಕ್ಕೆ ಹೊಂದಿಕೊಂಡಂತೆ ೧೭ ಚಿಕ್ಕ ತೂಬುಗಳನ್ನು ನಿರ್ಮಿಸಿದ್ದಾರೆ. ಈ ಕೆರೆಯಿಂದ ನೀರಾವರಿಗೆ ಒಳಪಡುವ ಗ್ರಾಮಗಳೆಂದರೆ ಮಜ್ಜೂರು, ಮಾಚೇನಹಳ್ಳಿ, ತೆಗ್ಗಿನ ಬಾವನೂರು, ಕುಸಲಾಪುರಕ್ಕೆ ಸೀಮಿತವಾಗಿದೆ.

**ಶೆಟ್ಟಿಗೇರಿ ಕೆರೆ :**

ಗ್ರಾಮ-ಶೆಟ್ಟಿಗೇರಿ
ಅಚ್ಚುಕಟ್ಟು ಪ್ರದೇಶ-೨೧೪.೭೦(ಹೆ)
ಜಲಾವೃತ ಪ್ರದೇಶ- ೯೪.೯೮(ಹೆ)
ಕೆರೆಯ ಸಾಮರ್ಥ್ಯ-೨೭.೮೭(mcft)
ಏರಿಯ ಉದ್ದ- ೯೦೦ ಮೀಟರ್.
ಏರಿಯ ಎತ್ತರ -೧೧.೦೩ ಮೀ
ಏರಿಯ ಮೇಲ್ಭಾಗದ ಅಗಲ-೨.೦೦ ಮೀ. ತೂಬಿನ ಸಂಖ್ಯೆ -೨.
ಬಲದಂಡೆ ಕಾಲುವೆ ಉದ್ದ-೨.೩೪ ಮೀ.

ಶೆಟ್ಟಿಗೇರಿ ಗ್ರಾಮವು ಗದಗ ಜಿಲ್ಲಾಕೇಂದ್ರದಿಂದ ದಕ್ಷಿಣಕ್ಕೆ ೪೮ ಕಿ.ಮೀ ದೂರದಲ್ಲಿದೆ. ಶಿರಹಟ್ಟಿ ತಾಲೂಕು ಕೇಂದ್ರದಿಂದ ೭ ಕಿ.ಮೀ ದೂರದಲ್ಲಿದೆ. ಕೆರೆಯು ಶೆಟ್ಟಿಗೇರಿ ಗ್ರಾಮದಿಂದ ಪೂರ್ವಕ್ಕೆ ಕಂಡುಬಂದಿದ್ದು, ಈ ಕೆರೆ ಮೂರು ದಿಕ್ಕಿನಲ್ಲಿ ಗುಡ್ಡಗಳಿಂದ ಆವರಿಸಿದೆ. ಇದರ ಮೇಲೆ ಬಿದ್ದ ನೀರು ಇಳಿಜಾರಿನ ಪ್ರದೇಶಕ್ಕೆ ಹರಿದು ಬಂದು ನಿಲ್ಲುತ್ತದೆ. ಕೆರೆಗೆ ದಕ್ಷಿಣ ದಿಕ್ಕಿಗೆ ಏರಿಯನ್ನು ನಿರ್ಮಿಸಿದ್ದು ಏರಿಯ ಒಳಭಾಗದಲ್ಲಿ ದಪ್ಪ ಕಲ್ಲುಗಳಿಂದ ಮಣ್ಣಿನಲ್ಲಿ ಜೋಡಿಸಿರುತ್ತಾರೆ. ಹೊರಭಾಗವು ಮಣ್ಣಿನಿಂದ ಕೂಡಿರುತ್ತದೆ. ದಕ್ಷಿಣಾಭಿಮುಖವಾಗಿ ೧೫ ಮೀ. ಉದ್ದದನ್ನು ಕೋಡಿಯನ್ನು ಒಳಗೊಂಡಿರುತ್ತದೆ. ೨ ಮೀ. ಎತ್ತರವಾಗಿದೆ. ಏರಿಯ ಒಳಭಾಗದಲ್ಲಿ ತೂಬನ್ನು ಇರಿಸಿದ್ದು, ಇದು ಮೇಲ್ಭಾಗ ಬಿದ್ದು ಹೋಗಿರುವ ಸಾಧ್ಯತೆ ಇದೆ. ಇದರ ಅಗಲ ೨ ಮೀ, ಏರಿಯಿಂದ ತೂಬಿನ ಉದ್ದ ೪ ಮೀ. ಈ ಗ್ರಾಮದ ಜನರು ಕೆರೆ ತುಂಬಿದಾಗ ವಿಶೇಷವಾದ ಪೂಜೆ ಮಾಡಿ ಬಾಗೀನ ಅರ್ಪಿಸುತ್ತಾರೆ. ಕೆರೆಯ ದಂಡೆಯ ಮೇಲೆ ಪ್ರಾಚೀನ ದೇವಾಲಯದ ಕಂಬಗಳು ಬಿದ್ದಿರುವುದರಿಂದ ಈ ಕೆರೆಯನ್ನು ಪ್ರಾಚೀನಕ್ಕೆ ಹೋಲಿಸಬಹುದಾಗಿದೆ. ಕೆರೆಯ ಬಲಗಡೆಗೆ ೩೦೦ ಎಕರೆ ಅರಣ್ಯ ಪ್ರದೇಶವನ್ನು ಹೊಂದಿದ್ದು, ಊರಿನಿಂದ ೨ ಕಿ.ಮೀ ಅಂತರದಲ್ಲಿದೆ. ಇದು ಸುಮಾರು ೨೦ ಎಕರೆ ವಿಸ್ತೀರ್ಣವನ್ನು ಹೊಂದಿದೆ.

**ಕುಂದ್ರಳ್ಳಿ ಕೆರೆ :**

| | |
|---|---|
| ಗ್ರಾಮ–ಕುಂದ್ರಳ್ಳಿ | ಅಚ್ಚುಕಟ್ಟು ಪ್ರದೇಶ–೪೫.೭೬(ಹೆ) |
| ಜಲಾವೃತ ಪ್ರದೇಶ–೧೭.೦೦(ಹೆ) | ಕೆರೆಯ ಸಾಮರ್ಥ್ಯ–೧೧.೭೦(mcft) |
| ಏರಿಯ ಉದ್ದ–೧೦೦೦ ಮೀ. | ಏರಿಯ ಎತ್ತರ–೯.೨೩ ಮೀ |
| ಏರಿಯ ಮೇಲ್ಭಾಗದ ಅಗಲ– ೨.೫ ಮೀ. ತೂಬಿನ | ಸಂಖ್ಯೆ –೨ |

ಈ ಗ್ರಾಮವು ಗದಗದಿಂದ ದಕ್ಷಿಣಕ್ಕೆ ೪೧ ಕಿ.ಮೀ ದೂರದಲ್ಲಿದೆ. ಶಿರಹಟ್ಟಿ ತಾಲೂಕು ಕೇಂದ್ರದಿಂದ ೯ ಕಿ.ಮೀ ದೂರದಲ್ಲಿದೆ. ಈ ಕೆರೆಯು ಕುಂದ್ರಳಿ ಗ್ರಾಮದಿಂದ ಈಶಾನ್ಯಕ್ಕೆ ಕಂಡುಬಂದಿದ್ದು, ಇದು ಇಲ್ಲಿಯ ಜನರ ಜೀವಾಳವಾಗಿದೆ. ಕುಂದ್ರಳ್ಳಿಯ ಗ್ರಾಮ ಐತಿಹ್ಯದ ಮಾಹಿತಿಯನ್ನು ತಿಳಿಯಲು ನಮಗೆ ನಿಖರವಾದ ಗ್ರಂಥಗಳು ದೊರೆವಯುವುದಿಲ್ಲ. ಮಾಹಿತಿಯ ಆಕರಗಳೆಂದರೆ ಆ ಊರಿನಲ್ಲಿ ವಾಸಿಸುತ್ತಿರುವ ಹಿರಿಯ ತಲೆಮಾರಿನ ವ್ಯಕ್ತಿಗಳಾಗಿದ್ದಾರೆ. ಕುಂದ್ರಳ್ಳಿಯ ಈಗಿನ ಅತ್ಯಂತ ಹಿರಿಯರೆಂದರೆ– ನಿವೃತ್ತ ಶಿಕ್ಷಕರಾದ ಶ್ರೀ ಹಜರತ್‌ಸಾಬ್ ದಾವಲ್‌ಸಾಬ್ ಶಿರಹಟ್ಟಿ (೮೨ ವರ್ಷ) ಶ್ರೀ ಯಮನಪ್ಪ ಮಲ್ಲಪ್ಪ ಉಪ್ಪಾರ (೭೯ ವರ್ಷ) ಇವರಿಬ್ಬರ ಹೇಳಿಕೆ ಪ್ರಕಾರ– ಕುಂತಗೊಂಡು ಊಟ ಮಾಡುವ ಊರು 'ಕುಂದ್ರಳ್ಳಿ' ಆಗಿದೆ.[೧೨೪] ಊರಿನ ಉತ್ತರ ದಿಕ್ಕಿನಲ್ಲಿರುವ ಕೆರೆಯು ಅತ್ಯಂತ ವಿಶಾಲವಾಗಿದ್ದು (೮೦ ಎಕರೆ) ಕೆರೆಯ ನೀರಿನಿಂದ ವಿವಿಧ

ಕಾಯಿಪಲ್ಲೆಗಳನ್ನು ಬೆಳೆದು ಮಾರಾಟ ಮಾಡಿ ಬಂದ ಹಣದಿಂದ ಸುಖ ಜೀವನ ನಡೆಸುತ್ತಿದ್ದರು. ಈ ಗ್ರಾಮಕ್ಕೆ "ಕುದ್ದರಗೇಡಿ ಕುಂದ್ರಳ್ಳಿ"ಎಂಬ ಹೆಸರು ಇತ್ತೀಚೆಗೆ ಬಂದಿತು. ಕುದ್ದರಗೇಡಿ ಜನ ಎಂದರೆ ಕಿಡಿಗೇಡಿ ಬುದ್ಧಿಯ ಜನ ಎಂದು ಕರೆಯುವರು. ಮಂಗಚೇಷ್ಟೆ ಬುದ್ಧಿಯ ಜನರು ಎಲ್ಲ ಊರುಗಳಲ್ಲಿಯೂ ಇರುತ್ತಾರೆ. ಈ ಊರಲ್ಲಿಯೂ ಸಹ ಯುವ ಸಮೂಹವು ಕೆಲ ವ್ಯಕ್ತಿಗಳಿಗೆ ಕುಚೇಷ್ಟೆ ಮಾಡುತ್ತಲೇ ಇರುತ್ತಾರೆ.

ಭಾಷಾ ವೈವಿಧ್ಯತೆ ಹಿನ್ನೆಲೆಯಲ್ಲಿ ಕುಂದ್ರಳ್ಳಿ ಇತಿಹಾಸವನ್ನು ಅವಲೋಕನ ಮಾಡಲಾಗಿ ಕುತ್ತರ್+ಹಳ್ಳಿ=ಕುಂದ್ರಳ್ಳಿ ಕುತ್ತರಿ ನಾಮಪದವಾಗಿದೆ. ಕುತ್ತರಿ ಎಂದರೆ ಮೆದೆ, ಪೆಳೆ, ಬಣವೆ ಎಂದರ್ಥ.[೧೨೫] ಈ ಊರಿನ ಕೆರೆಯ ದಂಡೆಯಲ್ಲಿ ಎತ್ತರವಾದ ಮೆದೆ, ಆಪು ಬೆಳೆಯುತ್ತಿತ್ತು. ಈ ಕಾರಣದಿಂದ ಈ ಹೆಸರು ಬಂದಿರಬೇಕು.

ಮತ್ತೊಂದು ಪದ ಕುದುರು+ಹಳ್ಳಿ=ಕುಂದ್ರಳ್ಳಿ, ಇಲ್ಲಿ ಕುದುರು ಎಂಬ ಶಬ್ದ ಅಚ್ಚಗನ್ನಡ ಪದ. ಕುದುರು ಅಥವಾ ಕುದರು ಎಂಬ ಪದಗಳ ಅರ್ಥ–ತಗ್ಗು ಭೂಮಿ, ಹಳ್ಳ, ಹಳ್ಳದ ಒಡ್ಡು ಹೊಳೆಯ ದ್ವೀಪ ಎಂದಾಗುತ್ತದೆ. ಒಂಭತ್ತು ಎಕರೆ ವಿಸ್ತಾರವಾದ ಕುಂದ್ರಳ್ಳಿ ಕೆರೆಗೆ ವಿವಿಧ ಹಳ್ಳ ಕೊಳ್ಳಗಳ ಮುಖಾಂತರ ನೀರು ಹರಿದು ಬಂದು ಸಂಗ್ರಹವಾಗುತ್ತದೆ. ಹಿಂದೆ ಬೇರೆ ಬೇರೆ ಊರುಗಳಿಂದ ಜನರು ಈ ಕೆರೆಯನ್ನು ನೋಡಲು ಬರುತ್ತಿದ್ದರು. ಸೌತೆಕಾಯಿ, ಹೀರೆಕಾಯಿ, ತುಪ್ರಿಕಾಯಿ, ಮೆಣಸಿನಕಾಯಿ, ಬದನೆಕಾಯಿ ಮುಂತಾದ ಕಾಯಿಪಲ್ಲೆಗಳನ್ನು ಇಲ್ಲಿ ಬೆಳೆಯುತ್ತಿದ್ದರು. ಮಿದುವಾದ ಎಳೆಯುಳ್ಳ ಹಚ್ಚನೆಯ ಹಕ್ಕರಕಿಯು ಬಹು ರುಚಿಕಟ್ಟಾಗಿರುತ್ತೆಂದು ಇಲ್ಲಿ ವಯೋವೃದ್ಧರು ತಿಳಿಸುತ್ತಾರೆ.

'ಕುಂದ ಎಂಬ ಸಂಸ್ಕೃತ ಪದ ಕನ್ನಡದಲ್ಲಿ ಮಲ್ಲಿಗೆ ಹೂ ಎಂದಾಗುತ್ತದೆ. ಚೆನ್ನಬಸವ ಪುರಾಣದಲ್ಲಿ ಮೊಲ್ಲೆಪಾದರಿಯ ಪರಿಮಳಮಿದಿಗೆ ಮಿದು ಕುಂದದ ಅಮೋದೇಮೆಂದು ಮಾಲೆಗಾರ್ತಿಯರು ಸುರುತಿರ್ಪುದ ಎಂದು ಬರುತ್ತದೆ. ಕುಂದ ಎಂದರೆ ಮಲ್ಲಿಗೆ ಹೂ ಎನ್ನಬೇಕಾದರೆ ವಿಶಾಲವಾದ ಕೆರೆಯ ನೀರಿನಿಂದ ಕೆಲವು ಜನರು ತೋಟವನ್ನು ಮಾಡಿಕೊಂಡು ಆ ತೋಟದಲ್ಲಿ ಮಲ್ಲಿಗೆ ಹೂಗಳನ್ನು ಬೆಳೆದು ಮಾರುತ್ತಿದ್ದರಂತೆ ಕಂಡುಬರುತ್ತದೆ. ಕುಂದ್ರಳ್ಳಿ ಕೆರೆಯ ದಂಡೆಯ ಮೇಲೆ ಒಂದು ಬಸವಣ್ಣನ ಗುಡಿ ಇದ್ದು ಅದು ಜಕಣಾಚಾರಿಯಿಂದ ನಿರ್ಮಿತವಾದ ಕಟ್ಟಡವಾಗಿದೆ. ೧೦ನೇ ಶತಮಾನದಲ್ಲಿ ಪುಲಿಗೆರೆಯ ಸೋಮನಾಥ ದೇವಾಲಯವನ್ನು ಕಟ್ಟಿದಾಗಲೇ ಈ ದೇವಾಲಯವನ್ನು ಕಟ್ಟಿರಬಹುದು.

ಈ ಕೆರೆಯ ದಕ್ಷಿಣ ದಿಕ್ಕಿನ ಏರಿಯ ಮೇಲೆ ವಿಜಯನಗರೋತ್ತರ ಬಸವಣ್ಣನ ದೇವಾಲಯವು ಇರುವುದರಿಂದ ಈ ಕೆರೆಯು ಇವರ ಕಾಲದಲ್ಲಿ ನಿರ್ಮಾಣಗೊಂಡಿದೆ. ಈ ಕೆರೆಯ ಕಡೆಗೆ ಸಮತಟ್ಟಾದ ಪ್ರದೇಶದಿಂದ ಇಳಿಜಾರಿನ ಪ್ರದೇಶಕ್ಕೆ ನೀರು ಹರಿದು ಬಂದು ನಿಲ್ಲುತ್ತದೆ.

ಈ ಕೆರೆಗೆ ದಕ್ಷಿಣಕ್ಕೆ ಏರಿಯನ್ನು ನಿರ್ಮಿಸಿದ್ದು ಏರಿಯ ಒಳಭಾಗದಲ್ಲಿ ದಪ್ಪ ದಪ್ಪ ಕಲ್ಲುಗಳನ್ನು ಅಳವಡಿಸಿರುತ್ತಾರೆ. ಹೊರಭಾಗ ಮಣ್ಣಿನಿಂದ ಕೂಡಿರುತ್ತದೆ. ಕೆರೆಯ ಪೂರ್ವ ದಿಕ್ಕಿನಲ್ಲಿ ಕೋಡಿ ಇದ್ದು ಸಿಮೆಂಟ್ ಕೊಳವೆಯನ್ನು ಅಳವಡಿಸಿರುತ್ತಾರೆ. ಕೆರೆಯ ದಕ್ಷಿಣ ದಿಕ್ಕಿನಲ್ಲಿ ತೂಬು ಇದ್ದು ಅದು ಅಚ್ಚುಕಟ್ಟು ಪ್ರದೇಶಕ್ಕೆ ನೀರನ್ನು ಸಮರ್ಪಕವಾಗಿ ಒದಗಿಸುತ್ತದೆ. ಇದು ಸುಮಾರು ೧೮ ಎಕರೆ ವಿಸ್ತೀರ್ಣವನ್ನು ಹೊಂದಿದೆ.

**ರಡ್ಡೇರ ನಾಗನೂರ ಕೆರೆ :**

ಗ್ರಾಮ- ರಡ್ಡೇರ ನಾಗನೂರ
ಅಚ್ಚುಕಟ್ಟು ಪ್ರದೇಶ-೪೫.೦೦ (ಹೆ)
ಜಲಾವೃತ ಪ್ರದೇಶ- ೧೧.೮೭(ಹೆ)
ಕೆರೆಯ ಸಾಮರ್ಥ್ಯ-೧೧.೦೮(mcft)
ಏರಿಯ ಉದ್ದ- ೬೦೦ ಮೀ.
ಏರಿಯ ಎತ್ತರ- ೪.೦೦ ಮೀ.
ಏರಿಯ ಮೇಲ್ಭಾಗದ ಅಗಲ-೨.೮ ಮೀ.

ಗದಗದಿಂದ ದಕ್ಷಿಣಕ್ಕೆ ೩೫ ಕಿ.ಮೀ ದೂರದಲ್ಲಿ ರಡ್ಡೇರನಾಗನೂರು ಗ್ರಾಮವಿದೆ. ಊರಿನಿಂದ ದಕ್ಷಿಣ ದಿಕ್ಕಿಗೆ ಇರುವ ಈ ಕೆರೆಯ ಒಟ್ಟು ಕ್ಷೇತ್ರ ೨೨ ಎಕರೆ. ಪಶ್ಚಿಮಕ್ಕೆ ಕೋಡಿ ಇದ್ದು ಇದರ ಮೂಲಕ ಮಲಪ್ರಭಾ ಕಾಲುವೆ ಮೂಲಕ ನೀರು ಕೆರೆಗೆ ಹರಿದು ಬರುತ್ತದೆ. ಕೆರೆಯು ಸುತ್ತಮುತ್ತ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ನೆಲಮಟ್ಟದಿಂದ ೨೨ ಅಡಿ ಎತ್ತರ ಏರಿಯ ಮೇಲ್ಭಾಗದ ಅಗಲ ೪ ಅಡಿ ಆಗಿದೆ. ಈ ಕೆರೆಗೆ ತಂತಿಬೇಲಿಯನ್ನು ಅಳವಡಿಸಿ ಸಂರಕ್ಷಣೆ ಮಾಡಿರುತ್ತಾರೆ. ಈ ಕೆರೆಗೆ ನೀರು ಶುದ್ಧೀಕರಣ ಘಟಕವನ್ನು ಅಳವಡಿಸಿ ಗ್ರಾಮದ ಜನರಿಗೆ ಪೈಪ್‌ಲೈನ್ ಮುಖಾಂತರ ಕುಡಿಯುವ ನೀರನ್ನು ಒದಗಿಸುತ್ತಾರೆ. ಈ ಕೆರೆಯ ನೀರು ಹೆಚ್ಚಾದ ಬಳಿಕ ಇನ್ನೊಂದು ಕೆರೆಯಲ್ಲಿ ಕೋಡಿಯ ಮೂಲಕ ಶೇಖರಣೆಗೊಳ್ಳುತ್ತದೆ. ಆ ನೀರನ್ನು ಜಾನುವಾರುಗಳಿಗೆ, ಬಟ್ಟೆ ತೊಳೆಯಲು ಹಾಗೂ ಮೀನು ಸಾಕಾಣಿಕೆಗೆ ಬಳಸುತ್ತಾರೆ.

**ಕಲಕೇರಿ ಕೆರೆ :**

ಗ್ರಾಮ- ಕಲಕೇರಿ
ಅಚ್ಚುಕಟ್ಟು ಪ್ರದೇಶ-೪೩.೦೦(ಹೆ)
ಜಲಾವೃತ ಪ್ರದೇಶ- ೧೩.೬೭(ಹೆ)
ಕೆರೆಯ ಸಾಮರ್ಥ್ಯ- ೧೪.೩೩(mcft)
ಏರಿಯ ಉದ್ದ- ೬೦೦ ಮೀ.
ಏರಿಯ ಎತ್ತರ-೬ ಮೀ.
ಏರಿಯ ಮೇಲ್ಭಾಗದ ಅಗಲ- ೨ ಮೀ.

ಈ ಗ್ರಾಮವು ಗದಗ ಜಿಲ್ಲಾ ಕೇಂದ್ರದಿಂದ ಉತ್ತರಕ್ಕೆ ೩೨ ಕಿ.ಮೀ, ನರಗುಂದ ತಾಲೂಕು ಕೇಂದ್ರದಿಂದ ೧೫ ಕಿ.ಮೀ.ದೂರದಲ್ಲಿದೆ. ಈ ಗ್ರಾಮದಲ್ಲಿ ೧೮ ಮತ್ತು ೧೯ನೇ ಶತಮಾನಕ್ಕೆ ಸಂಬಂಧಿಸಿದ ದೇವಾಲಯಗಳು ಇವೆ. ಗ್ರಾಮದಿಂದ ಉತ್ತರಕ್ಕೆ ಕೆರೆ ಕಂಡುಬಂದಿದ್ದು ಇದು

ಒಟ್ಟು ಸುಮಾರು ೧೫ ಎಕರೆ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕೆರೆಗೆ ಪಶ್ಚಿಮ ದಿಕ್ಕಿನಲ್ಲಿ ಕೋಡಿಯನ್ನು ಅಳವಡಿಸಿದ್ದು, ಕೋಡಿ ಸುಮಾರು ೧೨ ಅಡಿ ಎತ್ತರವಾಗಿದ್ದು ಮೇಲ್ಭಾಗದ ಅಗಲ ೨ ಅಡಿ ಆಗಿದೆ. ಕೆರೆಯು ಸುತ್ತಮುತ್ತಲು ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಇದರ ಉದ್ದ ಸುಮಾರು ೬೦೦ ಮೀಟರ್. ನೆಲಮಟ್ಟದಿಂದ ಎತ್ತರ ೧೫ ಅಡಿ ಏರಿಯ ಮೇಲ್ಭಾಗದ ಅಗಲ ೪ ಅಡಿ ಆಗಿದೆ.

ಈ ಕೆರೆಗೆ ತಂತಿಬೇಲಿಯನ್ನು ಅಳವಡಿಸಿ ಸಂರಕ್ಷಣೆ ಮಾಡಿರುತ್ತಾರೆ. ಈ ಕೆರೆಗೆ ನೀರು ಶುದ್ಧೀಕರಣ ಘಟಕವನ್ನು ಅಳವಡಿಸಿ ಗ್ರಾಮದ ಜನರಿಗೆ ಪೈಪ್‌ಲೈನ್ ಮುಖಾಂತರ ಕುಡಿಯುವ ನೀರನ್ನು ಒದಗಿಸುತ್ತಾರೆ.

**ಸಂಕದಾಳ ಕೆರೆ :**

| | |
|---|---|
| ಗ್ರಾಮ-ಸಂಕದಾಳ | ಅಚ್ಚುಕಟ್ಟು ಪ್ರದೇಶ-೪೩.೭೬(ಹೆ) |
| ಜಲಾವೃತ ಪ್ರದೇಶ- ೧೩.೦೦(ಹೆ) | ಕೆರೆಯಸಾಮರ್ಥ್ಯ- ೧೨.೮೯(mcft) |
| ಏರಿಯ ಉದ್ದ- ೯೦೦ ಮೀ. | ಏರಿಯ ಎತ್ತರ- ೧೧.೭೭ ಮೀ. |
| ಏರಿಯ ಮೇಲ್ಭಾಗದ ಅಗಲ-೨.೯ ಮೀ. | |

ಗದಗದಿಂದ ದಕ್ಷಿಣಕ್ಕೆ ಸಂಕದಾಳ ೩೮ ಕಿ.ಮೀ ದೂರದಲ್ಲಿದೆ. ಊರಿನಿಂದ ಪೂರ್ವ ದಿಕ್ಕಿಗೆ ೨ ಕೆರೆಗಳು ಕಂಡುಬರುತ್ತವೆ. ಈ ಕೆರೆಗಳು ಒಟ್ಟು ಸುಮಾರು ೪೮ ಎಕರೆ ನೀರು ನಿಲ್ಲುವ ಸಾಮರ್ಥ್ಯವನ್ನು ಹೊಂದಿದೆ. ಕೆರೆಯ ದಕ್ಷಿಣಕ್ಕೆ ಕೋಡಿ ಇದ್ದು, ಇದು ೨೫ ಅಡಿ ಉದ್ದ ಎತ್ತರ ೫ ಅಡಿ ಇದೆ. ಕೆರೆಯು ಸುತ್ತಮುತ್ತ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಈ ಕೆರೆಗೆ ತಂತಿಬೇಲಿಯನ್ನು ಅಳವಡಿಸಿ ಸಂರಕ್ಷಣೆ ಮಾಡಿರುತ್ತಾರೆ. ಹಾಗೆಯೇ ಕೆರೆಗೆ ನೀರು ಶುದ್ಧೀಕರಣ ಘಟಕವನ್ನು ಅಳವಡಿಸಿ, ಗ್ರಾಮದ ಜನರಿಗೆ ಪೈಪ್‌ಲೈನ್ ಮುಖಾಂತರ ಕುಡಿಯುವ ನೀರನ್ನು ಒದಗಿಸುತ್ತಾರೆ. ಈ ಕೆರೆಯ ನೀರು ಹೆಚ್ಚಾದ ಬಳಿಕ ಇನ್ನೊಂದು ಕೆರೆಯಲ್ಲಿ ಕೋಡಿಯ ಮೂಲಕ ಸಂಗ್ರಹವಾಗುತ್ತದೆ. ಆ ನೀರನ್ನು ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಉಪಯೋಗಿಸುತ್ತಾರೆ.

**ಹದಲಿ ಕೆರೆ :**

| | |
|---|---|
| ಗ್ರಾಮ-ಹದಲಿ | ಅಚ್ಚುಕಟ್ಟು ಪ್ರದೇಶ-೪೨.೮೯(ಹೆ) |
| ಜಲಾವೃತ ಪ್ರದೇಶ- ೧೩.೪೫(ಹೆ) | ಕೆರೆಯ ಸಾಮರ್ಥ್ಯ-೧೩.೦೦ (mcft) |
| ಏರಿಯ ಉದ್ದ- ಸುಮಾರು ೬೦೦ ಮೀ. | 'ಏರಿಯ ಮೇಲ್ಭಾಗದ ಅಗಲ-೨ ಮೀ. |
| ಏರಿಯ ಎತ್ತರ-೭ ಮೀ. | |

ಹದಲಿ ಗದಗದಿಂದ ಉತ್ತರಕ್ಕೆ ೩೮ ಕಿ.ಮೀ ದೂರದಲ್ಲಿದೆ. ಗ್ರಾಮದಲ್ಲಿ ಬಿದ್ದಿರುವ ಅಳಿದುಳಿದ ದೇವಾಲಯ ಮೂರ್ತಿ, ಶಿಲ್ಪ, ಅವಶೇಷಗಳಿಂದ ಈ ಊರಿನ ಪ್ರಾಚೀನತೆಯನ್ನು

ರಾಷ್ಟ್ರಕೂಟರ ಹಿಂದಕ್ಕೆ ಗುರುತಿಸಬಹುದಾಗಿದೆ. ಗ್ರಾಮದಿಂದ ಉತ್ತರಕ್ಕೆ ಈ ಕೆರೆ ಕಂಡು ಬಂದಿದ್ದು, ಇದು ಒಟ್ಟು ೩೫ ಎಕರೆ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕೆರೆಯ ಉತ್ತರ ದಿಕ್ಕಿಗೆ ಕೋಡಿಯನ್ನು ಇರಿಸಿದ್ದು ಇದರ ಉದ್ದ ಸುಮಾರು ೧೦ ಅಡಿ, ೦೪ ಅಡಿ ಎತ್ತರವಿದೆ. ಕೆರೆಯ ಸುತ್ತಮುತ್ತ ಮಣ್ಣಿನ ಏರಿಯನ್ನು ಒಳಗೊಂಡಿದ್ದು ಇದರ ಈ ಕೆರೆಯ ನೀರು ಹೆಚ್ಚಾದ ಬಳಿಕ ಇನ್ನೊಂದು ಕೆರೆಯಲ್ಲಿ ಕೋಡಿಯ ಮೂಲಕ ಸಂಗ್ರಹವಾಗುತ್ತದೆ. ಆ ನೀರನ್ನು ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಉಪಯೋಗಿಸುತ್ತಾರೆ.

**ಕಪ್ಪತಗಿರಿಯ ಆಲದ ಕೆರೆ :**

ಮುಂಡರಗಿ ತಾಲೂಕಿನ ಕಪ್ಪತ್ತಗಿರಿಯು ಗದಗ ಜಿಲ್ಲಾಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೧೫ ಕಿ.ಮೀ ಅಂತರದಲ್ಲಿದೆ. ಆಲದ ಕೆರೆಯು ಕಪ್ಪತ್ತಗಿರಿಯ ಬೆಂಡೆ ಕೊಳ್ಳದ ಮಾರ್ಗವಾಗಿ ಸಾಗಿ ಮುಂದೆ ಕಾಣುವ ಬೃಹದಾಕಾರದ ಆಲದ ಮರದ ಬುಡದಲ್ಲಿ ಆಲದ ಕೆರೆ ಕಂಡುಬರುತ್ತದೆ. ಆಲದ ಕೆರೆಯು ಋಷಿ ಮುನಿಗಳ ಹೇಳಿಕೆಯಂತೆ ಅಲ್ಕಿ ಗ್ರಾಮವೆಂದು[೧೬] ಹೇಳಲಾಗಿದ್ದು, ಆ ಗ್ರಾಮದಿಂದ ಯಲ್ಲಮ್ಮದೇವಿಯು ಕವಡಿ ರಥವೇರಿ ಆಲದ ಕೆರೆಯ ಪಕ್ಕದಲ್ಲಿರುವ ಕರಡಿ ಕೊಳ್ಳದಿಂದ ಸಾಗಿ ಹೋದರೆಂಬ ಪ್ರತೀತಿ ಇದೆ. ಇದರ ಪ್ರತೀಕವಾಗಿ ಗಂಗಾದೇವಿಯ ಕ್ಷೇತ್ರದ ಎದುರಿಗಿನ ಬೆಟ್ಟದ ಸಾಲಿನ ಪಡಿಯಲ್ಲಿರುವ ಕೊಳ್ಳಗಳ ಸರಮಾಲೆಯಲ್ಲಿ ಪಡಿಯ ರೂಪದಲ್ಲಿ ಏಳು ಕೊಳ್ಳದ ಎಲ್ಲಮ್ಮನ ಗುಡಿ ಇದೆ. ಆಲದ ಕೆರೆ ಎದುರಿಗೆ ರಾಶಿಯ ರೂಪದಲ್ಲಿ ಬೆಟ್ಟದ ಎಡೆಯಲ್ಲಿ ಪುಟ್ಟದೊಂದು ಒರತೆ ಇದ್ದು ಅದು ನಿರಂತರವಾಗಿ ಜಿನುಗುತ್ತಾ ಹರಿಯುತ್ತಿರುತ್ತದೆ. ಆದ್ದರಿಂದ ಅದನ್ನು ಜಿನುಗು ಝುರಿ ಎಂದು ಕರೆಯುತ್ತಾರೆ. ಅದನ್ನು ಪೂರ್ವಜರು ತಂತ್ರಾಣಿ ಝುರಿ ಎಂದು ಕರೆಯುತ್ತಿದ್ದರು. ಐತಿಹಾಸಿಕ ಸತ್ಯಾಸತ್ಯತೆಯನ್ನು ಸಾರುವಲ್ಲಿ ಈ ಆಲದ ಕೆರೆ ಜೀವಂತ ಉದಾಹರಣೆಯಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

**ಲಕ್ಷ್ಮೇಶ್ವರದ ಇಂಗುಕೆರೆ:**

| | |
|---|---|
| ಗ್ರಾಮ-ಲಕ್ಷ್ಮೇಶ್ವರದ | ಅಚ್ಚುಕಟ್ಟು ಪ್ರದೇಶ-೪೫.೦೦(ಹೆ) |
| ಜಲಾವೃತ ಪ್ರದೇಶ- ೧೨.೯೫(ಹೆ) | ಕೆರೆಯ ಸಾಮರ್ಥ್ಯ-೧೧.೦೫(mcft) |
| ಏರಿಯ ಉದ್ದ- ೬೦೦ ಮೀ. | ಏರಿಯ ಎತ್ತರ- ೬.೮೮ ಮೀ. |
| ಏರಿಯ ಮೇಲ್ಭಾಗದ ಅಗಲ- ೨.೦೦ ಮೀ. | ತೂಬಿನ ಸಂಖ್ಯೆ -೧ ಮೀ. |

ಲಕ್ಷ್ಮೇಶ್ವರವು ಗದಗ ಜಿಲ್ಲಾಕೇಂದ್ರದಿಂದ ಉತ್ತರ ದಿಕ್ಕಿಗೆ ೪೦ ಕಿ.ಮೀ, ಶಿರಹಟ್ಟಿ ತಾಲೂಕಿನ ಕಸುಬೆಯಿಂದ ನೈರುತ್ಯಕ್ಕೆ ೨೧ ಕಿ.ಮೀ. ದೂರದಲ್ಲಿದೆ. ಇದು ಕನ್ನಡ ನಾಡಿನ ನುಡಿ, ಧರ್ಮ, ಸಾಹಿತ್ಯ, ಸಂಸ್ಕೃತಿಗೆ ಪ್ರಖ್ಯಾತಿಯನ್ನು ಪಡೆದಿದೆ. ಬದಾಮಿ ಚಾಲುಕ್ಯರ ಕಾಲದಿಂದಲೂ ಇದರ ಪ್ರಸ್ತಾಪವನ್ನು ಶಾಸನಗಳಲ್ಲಿ ಕಾಣುತ್ತೇವೆ. ಪ್ರಾಚೀನ ಶಾಸನ, ಗ್ರಂಥಗಳಲ್ಲಿ ಈ ಪಟ್ಟಣವನ್ನು

ಪುಲಿಗೆರೆ ಪುರಿಕರ[೧೨೬] ಎಂದು ಮೊದಲಾದ ಹೆಸರುಗಳಿಂದ ಕರೆಯಲಾಗಿದೆ. ಪಟ್ಟಣದಿಂದ ದಕ್ಷಿಣ ದಿಕ್ಕಿಗೆ ಕೆರೆ ಕಂಡುಬಂದಿದ್ದು, ಪಟ್ಟಣದ ಬಹಳ ಮುಖ್ಯವಾದ ಮತ್ತು ಪ್ರಾಚೀನವಾದ ಕೆರೆ ಆಗಿದೆ. ಇದನ್ನು ಸ್ಥಳೀರಯ ಇಂಗುಕೆರೆ ಎಂದೇ ಕರೆಯುತ್ತಾರೆ. ಇದರಲ್ಲಿ ಸಂಗ್ರಹವಾದ ನೀರು ಬೇಗನೆ ಇಂಗುತ್ತದೆ. ಈ ಕೆರೆಯಲ್ಲಿ ಈಗ ಹೂಳು ತುಂಬಿದ್ದು ಅವನತಿಯತ್ತ ಸಾಗುತ್ತಿದೆ.

ಇಟ್ಟಿಗೆರೆ ಲಕ್ಷ್ಮೇಶ್ವರ ಪಟ್ಟಣದ ಪುರಾತನ ಕೆರೆಗಳಲ್ಲಿ ಇದು ಒಂದು. ಇದು ಅತ್ಯಂತ ದೊಡ್ಡದಾದ ಹಳೆಯ ಕೆರೆಯಾಗಿದೆ. ಕಳೆದ ೨-೩ ದಶಕಗಳ ಹಿಂದೆ ಮಳೆಗಾಲದಲ್ಲಿ ಸಂಪೂರ್ಣ ಭರ್ತಿಯಾಗಿ ಕೋಡಿ ಬೀಳುತ್ತಿತ್ತು. ಆದರೆ ಪಟ್ಟಣ ಬೆಳೆದಂತೆ ಕೆರೆಗೆ ನೀರು ಹರಿದು ಬರುವ ಜಾಗಗಳನ್ನು ಬಂದ್ ಮಾಡಲಾಗಿದೆ. ಹೀಗಾಗಿ ಎಷ್ಟೇ ಮಳೆ ಸುರಿದರೂ ಇತ್ತೀಚಿನ ದಿನಗಳಲ್ಲಿ ಕೆರೆ ತುಂಬಿದ ಉದಾಹರಣೆ ಇಲ್ಲ. ಅಲ್ಲದೇ ಕೆರೆ ಒತ್ತುವರಿಯಾಗಿರುವ ಕುರಿತು ಶಂಕೆ ವ್ಯಕ್ತವಾಗುತ್ತಿದೆ. ಲಕ್ಷ್ಮೇಶ್ವರ ಜನತೆಗೆ ಆಧಾರವಾಗಿರುವ ಈ ಕೆರೆಯನ್ನು ಕಾಪಾಡಿಕೊಂಡು ಬರುವುದು ಪುರಸಭೆಯ ಆಡಳಿತದ ಜವಾಬ್ದಾರಿಯಾಗಿದೆ. ಆದರೆ ಕೆರೆ ಉಳಿಸಿ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಪುರಸಭೆಯವರು ಈವರೆಗೂ ಯಾವುದೇ ಕ್ರಮವನ್ನು ಕೈಗೊಂಡಿಲ್ಲ. ಕೆರೆಯ ಅಭಿವೃದ್ಧಿ ಕುರಿತು ಪುರಸಭೆ ಈ ಹಿಂದೆ ಜರುಗಿದ ಸಾಮಾನ್ಯ ಸಭೆಯಲ್ಲಿ ಠರಾವು ತೆಗೆದುಕೊಂಡಿದೆ. ಆದರೆ ಅದನ್ನು ಅನುಷ್ಠಾನಗೊಳಿಸುವ ಗೋಜಿಗೆ ಹೋಗಿಲ್ಲ. ಕೆರೆ ಸುತ್ತಮುತ್ತಲೂ ಸಾಕಷ್ಟು ಹೊಲಸು ತುಂಬಿಕೊಂಡಿದ್ದು ಈಗ ಹಾಳಾಗಿದೆ. ಕೆರೆಯ ಸ್ವಚ್ಛತೆಯ ಬಗ್ಗೆ ಪುರಸಭೆ ಜಾಣ ಕುರುಡನಂತೆ ನಡೆದುಕೊಳ್ಳುತ್ತಿದೆ ಎಂದು ಪಟ್ಟಣದ ಜನತೆ ಆರೋಪಿಸಿದ್ದಾರೆ.

ಇದು ಒಟ್ಟು ಸುಮಾರು ೨೦ ಎಕರೆ ವಿಸ್ತೀರ್ಣತೆಯನ್ನು ಹೊಂದಿದ್ದು ಪೂರ್ವ ದಿಕ್ಕಿನಲ್ಲಿರುವ ಕಾಲುವೆ ಮೂಲಕ ನೀರು ಸಂಗ್ರಹವಾಗುತ್ತದೆ. ಈ ಕೆರೆ ಹುಬ್ಬಳ್ಳಿಗೆ ಹೋಗುವ ರಸ್ತೆಯ ಎಡಭಾಗದಲ್ಲಿ ಕಂಡುಬರುತ್ತದೆ.

**ತಾಮ್ರಗುಂಡಿ ಕೆರೆ ;**

| | |
|---|---|
| ಗ್ರಾಮ- ತಾಮ್ರಗುಂಡಿ | ಅಚ್ಚುಕಟ್ಟು ಪ್ರದೇಶ- ೨೪೩.೦೦(ಹೆ) |
| ಜಲಾವೃತ ಪ್ರದೇಶ-೪೧.೦೭ (ಹೆ) | ಕೆರೆಯ ಸಾಮರ್ಥ್ಯ-೩೬.೦೦ (mcft) |
| ಏರಿಯ ಉದ್ದ- ೫೪೯ ಮೀ. | ಏರಿಯ ಎತ್ತರ-೧೨.೦೯ ಮೀಟರ |
| ಏರಿಯ ಮೇಲ್ಭಾಗದ ಅಗಲ-೨.೪ ಮೀ. | ತೂಬಿನ ಸಂಖ್ಯೆ -೨ |

ತಾಮ್ರಗುಂಡಿಯು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಒಂದು ಚಿಕ್ಕ ಗ್ರಾಮ. ಗದಗದಿಂದ ೪೨ ಕಿ.ಮೀ ಅಂತರದಲ್ಲಿ ಕಂಡುಬರುತ್ತದೆ. ಈ ಗ್ರಾಮದ ಜನಸಂಖ್ಯೆ ೪೪೯ ಆಗಿದ್ದು, ಮುಂಡರಗಿಯಿಂದ ವಾಯುವ್ಯಕ್ಕೆ ೫ ಕಿಮೀ ದೂರದಲ್ಲಿ ಇದೆ. ಇದು ಚಾರಿತ್ರಿಕ ಸ್ಥಳವಾದ ಬರದೂರುನಿಂದ ಪಶ್ಚಿಮಕ್ಕೆ ೨ ಕಿಮೀ ದೂರದಲ್ಲಿದೆ. ಮುಂಡರಗಿ ಗದಗ ರಸ್ತೆಯಲ್ಲಿರುವ

ಈ ಊರು ಪ್ರಾಚೀನ ಶಾಸನಗಳಲ್ಲಿ 'ಕಿಸುಗುಣ್ಡಿ' ಎಂದು ಉಲ್ಲೇಖಿತಗೊಂಡಿದ್ದು, ಹಿಂದೆ ಇದು ೫೦ ಮಹಾಜನರನ್ನು ಹೊಂದಿದ್ದ ಅಗ್ರಹಾರವಾಗಿದ್ದು ಮಾಸವಾಡಿ ೧೪೦ಕ್ಕೆ ಸೇರಿತ್ತು. ಇಂದು ಊರಿನ ಹಾಳಾದ ನಿವೇಶನದಲ್ಲೇ ಈಶ್ವರ ಗುಡಿ ಮುಂದೆ ಇರುವ ಒಂದನೆಯ ಸೋಮೇಶ್ವರನ ಕ್ರಿ.ಶ. ೧೦೫೪ರ ಶಾಸನ[೧೦೩] ಕುಸುಗುಣ್ಡಿಯನ್ನಾಳುತ್ತಿದ್ದ ದಾಸಿಮಯ್ಯನು ಮೂಲಸ್ಥಾನ ಕಲಿದೇವರಿಗೆ ವಿಷ್ಣುದೇವರಿಗೆ ನಂದಾದೀಪಕ್ಕೆಂದು, ಸತ್ರಕ್ಕೆಂದು, ಮಹಾಜನರ ಕೈಯಲ್ಲಿ ದಾನ ಕೊಟ್ಟ ಅಂಶವನ್ನು ತಿಳಿಸುತ್ತದೆ. ಇದರಿಂದ ಶಾಸನೋಕ್ತ ಮೂಲಸ್ಥಾನದ ಕಲಿದೇವ ಗುಡಿ ಇಂದಿನ ಈಶ್ವರ ಗುಡಿಯೆಂದೇ ಗುರುತಿಸಬಹುದಾಗಿದೆ. ಕಲ್ಯಾಣದ ಚಾಲುಕ್ಯ ಶೈಲಿಯ ಗುಡಿ ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದ್ದು ಜೀರ್ಣೋದ್ಧಾರಗೊಂಡಿದೆ.

ತಾಮ್ರಗುಂಡಿ ಗ್ರಾಮದಿಂದ ಈಶಾನ್ಯಕ್ಕೆ ೧ ಕಿಮೀ ಅಂತರದಲ್ಲಿ ಕೆರೆ ಕಂಡುಬಂದಿದ್ದು, ಇದು ಈ ಗ್ರಾಮದ ಜೀವನಾಡಿ. ಕೆರೆ ಒಟ್ಟು ೪೧.೦೭ ಹೆಕ್ಟೇರ್ ಪ್ರದೇಶ ನೀರು ನಿಲ್ಲುವ ಕ್ಷೇತ್ರವನ್ನು ಹೊಂದಿದೆ. ಕೆರೆಯ ಬಲಭಾಗದಲ್ಲಿ ಕೋಡಿಯನ್ನು ನಿರ್ಮಿಸಿರುತ್ತಾರೆ. ಅದು ಈಗ ನೀರಿನ ರಭಸಕ್ಕೆ ಕೊಚ್ಚಿಕೊಂಡು ಹೋಗಿದೆ. ಕೆರೆಯು ಸುತ್ತಮುತ್ತಲಿನ ೮೦೦ ಎಕರೆ ಭೂಮಿಗೆ ನೀರನ್ನು ಒದಗಿಸುತ್ತದೆ.

ಕೆರೆಯ ಉತ್ತರ ದಿಕ್ಕಿಗೆ ಏರಿ ಇದ್ದು, ಏರಿಯ ಹೊರಭಾಗವು ಮಣ್ಣಿನಿಂದ ಕೂಡಿದ್ದರೆ ಒಳಭಾಗವನ್ನು ದಪ್ಪ ದಪ್ಪ ಕಲ್ಲಿನಿಂದ ಕಟ್ಟಿರುವ ಕಲ್ಲಿನ ಕಟ್ಟಡದಂತೆ ಇಳಿಜಾರಾಗಿ ರಚನೆ ಮಾಡಿದ್ದಾರೆ. ಏರಿಯ ಒಟ್ಟು ಉದ್ದ ೫೪೯.೦೦ ಮೀಟರ್, ಎತ್ತರ ೧೦ ಮೀ, ಏರಿಯ ಮೇಲ್ಭಾಗದ ಅಗಲ ೨.೪ ಮೀಟರ್ ಆಗಿದೆ. ಏರಿಗೆ ಹೊಂದಿಕೊಂಡಂತೆ ಒಂದು ತೂಬು ಇದೆ. ಏರಿಯಿಂದ ತೂಬಿನ ಉದ್ದ ೧೪ ಅಡಿ, ನೆಲಮಟ್ಟದಿಂದ ತೂಬಿನ ಎತ್ತರ ೨೨ ಅಡಿ ಮತ್ತು ತೂಬಿನ ಸುತ್ತಳತೆ ೬ ಅಡಿ ಆಗಿದೆ. ಇದನ್ನು ಗಚ್ಚು ಗಾರೆ ಸಿಮೆಂಟಿನಿಂದ ಮತ್ತು ಕಬ್ಬಿಣ ಲೋಹದ ವಸ್ತುಗಳಿಂದ ತಯಾರಿಸಿರುತ್ತಾರೆ. ತೂಬಿಗೆ ಅನುಗುಣವಾಗಿ ಕಾಲುವೆ ಇದ್ದು ಇದರಿಂದ ಅಚ್ಚುಕಟ್ಟು ಪ್ರದೇಶಕ್ಕೆ ನೀರು ಸಮರ್ಪಕವಾಗಿ ಹರಿಯುತ್ತದೆ. ಕೆರೆಯ ದಂಡೆಯ ಮೇಲೆ ವಿಜಯನಗರೋತ್ತರ ದೇವಾಲಯ ಇರುವುದರಿಂದ ಇದು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾಗಿರುವ ಸಾಧ್ಯತೆಯಿದೆ.

**ಬಳಗಾನೂರ ಕೆರೆ :**

ಬಳಗಾನೂರು ಕೆರೆ

ಜಲಾವೃತ ಪ್ರದೇಶ-೧೦.೩೪(ಹೆ)

ಏರಿಯ ಉದ್ದ- ೬೫೪ ಮೀ.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಅಚ್ಚುಕಟ್ಟು ಪ್ರದೇಶ-೩೦.೯೯(ಹೆ)

ಕೆರೆಯ ಸಾಮರ್ಥ್ಯ- ೧೦.೮೮(mcft)

ಏರಿಯ ಎತ್ತರ- ೧೦.೦೦ಮೀ.

ಬಳಗಾನೂರ ಗ್ರಾಮವು ಗದಗ ತಾಲೂಕಿನ ಒಂದು ಗ್ರಾಮ. ಇದು ಗದಗದಿಂದ ೨೫ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು ಗ್ರಾಮದಿಂದ ದಕ್ಷಿಣ ದಿಕ್ಕಿಗೆ ಕಂಡುಬಂದಿದ್ದು, ನೀರನ್ನು ಎಲ್ಲಾ ವರ್ಗದ ಜನರು ಮುಕ್ತವಾಗಿ ಬಳಸುತ್ತಿದ್ದರು. ಈಗ ನೀರನ್ನು ಕುಡಿಯುವುದಕ್ಕೆ ಮಾತ್ರ ಉಪಯೋಗಿಸುತ್ತಿದ್ದಾರೆ. ಇದು ಮಳೆಯಾಶ್ರಿತ ಕೆರೆಯಾಗಿದೆ. ಬೇಸಿಗೆ ಕಾಲದಲ್ಲಿ ಇದಕ್ಕೆ ಮಲಪ್ರಭಾ ಕಾಲುವೆ ನೀರು ಸೇರುವ ಹಾಗೆ ನಿರ್ಮಿಸಿರುತ್ತಾರೆ. ಕೆರೆಯು ನಾಲ್ಕು ದಿಕ್ಕುಗಳಲ್ಲಿ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗದಲ್ಲಿ ಇಳಿಜಾರಾಗಿ ದಪ್ಪ ದಪ್ಪ ಕಲ್ಲುಗಳನ್ನು ಜೋಡಿಸಿರುತ್ತಾರೆ. ಹೊರಭಾಗ ಮಣ್ಣಿನ ಏರಿಯನ್ನು ಒಳಗೊಂಡಿದೆ. ಏರಿಯ ಮೇಲ್ಭಾಗದಲ್ಲಿ ಕೆರೆಯ ಸಂರಕ್ಷಣೆಗಾಗಿ ತಂತಿಬೇಲಿಯನ್ನು ಅಳವಡಿಸಿರುತ್ತಾರೆ. ಇದು ಸರಣಿ ಕೆರೆಯಾಗಿದ್ದು ಒಂದು ಕೆರೆ ತುಂಬಿದ ಬಳಿಕ ಮುಖ್ಯವಾದ ಕೆರೆಗೆ ತಿಳಿನೀರು ಬಂದು ಸೇರುತ್ತಿತ್ತು. ಇದರಿಂದ ಪ್ರಾಚೀನ ಕಾಲದಲ್ಲಿ ನೀರಿನ ಶುದ್ಧೀಕರಣಕ್ಕಾಗಿ ಈ ತರಹದ ಸರಣಿ ಕೆರೆಗಳನ್ನು ನಿರ್ಮಿಸಿರಬಹುದು. ಅಥವಾ ಕೆರೆಯ ಏರಿ ಒಡೆಯಬಾರದೆಂಬ ಉದ್ದೇಶದಿಂದ ಇಂತಹ ಕೆರೆಗಳನ್ನು ನಿರ್ಮಾಣಮಾಡಿರಬೇಕು. ಈ ಕೆರೆ ೧೨ ಎಕರೆ ೩೦ ಗುಂಟೆ ಒಟ್ಟು ವಿಸ್ತೀರ್ಣ ಹೊಂದಿದೆ. ಒಂದು ಕೆರೆಯ ನೀರನ್ನು ಕುಡಿಯುವುದಕ್ಕೆ ಬಳಸುತ್ತಾರೆ. ಮತ್ತೊಂದು ಕೆರೆಯನ್ನು ದಿನಬಳಕೆಗೆ ಉಪಯೋಗಿಸುತ್ತಾರೆ.

ಕೆರೆಯ ನೀರು ಮೀನುಗಾರಿಕೆ, ಬಟ್ಟೆ ತೊಳೆಯಲು ಮತ್ತು ಜಾನುವಾರುಗಳಿಗಾಗಿ ಹೆಚ್ಚು ಬಳಕೆಯಾಗುತ್ತಿದೆ. ಕೆರೆಯನ್ನು ಜೀರ್ಣೋದ್ಧಾರ ಮಾಡಿದರೆ ಇನ್ನೂ ಹೆಚ್ಚಿನ ನೀರನ್ನು ಸಂಗ್ರಹಿಸಬಹುದು. ಈ ಕೆರೆಯು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಸೇರಲ್ಪಟ್ಟಿದೆ.

**ಹರ್ತಿ ಕೆರೆ :**

| | |
|---|---|
| ಗ್ರಾಮ-ಹರ್ತಿ | ಅಚ್ಚುಕಟ್ಟು ಪ್ರದೇಶ-೨೦.೯೯(ಹೆ) |
| ಜಲಾವೃತ ಪ್ರದೇಶ-೧೧.೩೪(ಹೆ) | ಕೆರೆಯ ಸಾಮರ್ಥ್ಯ- ೧೧.೮೮(mcft) |
| ಏರಿಯ ಉದ್ದ- ೭೫೪ ಮೀ. | ಏರಿಯ ಎತ್ತರ- ೧೧.೦೦ಮೀ. |
| ಏರಿಯ ಮೇಲ್ಭಾಗದ ಅಗಲ-೩.೦೦ ಮೀ. | |

ಹರ್ತಿ ಗದಗ ತಾಲೂಕಿನ ಒಂದು ಗ್ರಾಮ. ಗದಗದಿಂದ ದಕ್ಷಿಣಕ್ಕೆ ೧೨ ಕಿ.ಮೀ. ಅಂತರದಲ್ಲಿದೆ. ಮುಳಗುಂದದಿಂದ ಗದಗಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿ ಈ ಗ್ರಾಮವಿದೆ. ಇದು ಮುಳಗುಂದದಿಂದ ೧೦ ಕಿ. ಮೀ ಅಂತರದಲ್ಲಿದೆ. ಶಾಸನಗಳಲ್ಲಿ ಇದನ್ನು ಹರತಿ, ಹರ್ತಿ ಎಂದು ಕರೆಯಲಾಗಿದೆ. ಬಹುಶಃ ಇದು ಸಸ್ಯಮೂಲದ ಸ್ಥಳನಾಮವಾಗಿರಬೇಕು. ಹರ್ತಿ-ಹತ್ತಿ ಎಂದಾಗಬಹುದು; ಈ ಪ್ರದೇಶದಲ್ಲಿ ಹತ್ತಿ ಒಂದು ಪ್ರಮುಖ ಬೆಳೆಯಾಗಿತ್ತೆಂದು ಶಾಸನದ ಆಧಾರದಿಂದ ತಿಳಿಯುತ್ತದೆ. ಹರತಿ-ಹರ್ತಿ-ಹತ್ತಿ ಎಂಬ ರೂಪಗಳಲ್ಲಿ ನಡುಗನ್ನಡ ಭಾಷೆಯ ಹರ್ತಿ ಎಂಬುದು ಈಗಲೂ ಪ್ರಚಲಿತದಲ್ಲಿದೆ.[೧೨೭] ಹರಣಾಪುರ ಆಗಿತ್ತು ಎಂದು ಅಲ್ಲಿಯ ಜನರ

ಅಭಿಪ್ರಾಯ. ಪ್ರಾಚೀನ ಕಾಲದಲ್ಲಿ ಹರಣಾಪುರ ಎಂದರೆ ಸನ್ಯಾಸಿಗಳು ತಪಸ್ಸು ಮಾಡುವ ಸ್ಥಳವಾಗಿತ್ತು. ಹರ್ತಿಗೆ ಸಂಬಂಧಿಸಿದಂತೆ ಈವರೆಗೆ ೩ ಶಾಸನಗಳು ವರದಿಯಾಗಿದ್ದು, ಅವು ಕ್ರಿ.ಶ. ೧೧೭೩ಕ್ಕೆ ಸೇರಿದ (ಕಲಚೂರಿ ಸೊವಿದೇವ) ಶಾಸನ ಹರ್ತಿಯ ಪನ್ನಿಗನವರ ಗಾವುಂಡರಿಂದ ಇಲ್ಲಿನ ದೇವಾಲಯವನ್ನು (ಸೊವಿದೇಶ್ವರ) ದಾನ ನೀಡಿದ ಪ್ರಸ್ತಾಪವಿದೆ. ಇಲ್ಲಿನ ಮತ್ತೊಂದು ಕಂಬದ ಮೇಲಿನ ಶಾಸನವು ಬಿಜ್ಜಳನ ಕಾಲಕ್ಕೆ ಸೇರಿದ್ದು, ಇದು ಕ್ರಿ.ಶ. ೧೧೭೩ರ ಅಲ್ಲಿನ ಹೆಗ್ಗಡೆ ಕಿಮ್ಮರಸ ಜಾತಿವೇದ ಪಂಡಿತರ ಕಾಲುತೊಳೆದು ಗೋವಿಂದೇಶ್ವರ ದೇವರಿಗೆ ಸುಂಕ ಬಿಟ್ಟು ವಿವರ ಇದೆ. ಅದೇ ದೇವಾಲಯದ ಮತ್ತೊಂದು ಕಂಬದ ಮೇಲೆ ಇರುವ ಶಾಸನವು ಯಾದವರ ಸೀಂಘನ ಕಾಲದ್ದಾಗಿದ್ದು. (ಕ್ರಿ.ಶ.೧೨೩೬) ಅದು ಅಲ್ಲಿನ ಹನ್ನೆರಡು ಗಾವುಂಡರ ಉಗುರ ಮುನ್ನೂರ್ವರ ಹಾಗೂ ಮೂಲಸ್ಥಾನ ದೇವರಿಗೆ ದಾನ ನೀಡಿದ ಬಗ್ಗೆ ಮಾಹಿತಿ ಇದೆ.

ಕೆರೆಯು ಊರಿನಿಂದ ನೈರುತ್ಯ ದಿಕ್ಕಿಗೆ ಕಂಡುಬಂದಿದ್ದು, ಇದು ಸುಮಾರು ೮ ಎಕರೆ ವಿಸ್ತೀರ್ಣವನ್ನು ಹೊಂದಿದೆ. ಇದರ ಒಟ್ಟು ಆಳ ೬ ಅಡಿ ಆಗಿದೆ. ಇದು ಮಳೆಯಾಶ್ರಿತ ಕೆರೆಯಾಗಿದ್ದು, ಮೊದಲಿಗೆ ಈ ನೀರನ್ನು ಗ್ರಾಮಸ್ಥರು ದೇವಸ್ಥಾನದ ಪೂಜೆಗೆ ಹಾಗೂ ಕುಡಿಯುವುದಕ್ಕೆ ಉಪಯೋಗಿಸುತ್ತಿದ್ದಿರಬೇಕು. ಆದರೆ ಈಗ ಇದು ಕನಿಷ್ಠ ಮಟ್ಟದಲ್ಲಿದ್ದು ನೀರನ್ನು ದನಕರುಗಳಿಗೆ ಹಾಗೂ ದಿನನಿತ್ಯದ ಕೆಲಸಗಳಿಗೆ ಉಪಯೋಗಿಸುತ್ತಾರೆ. ಆದರೆ ಇದನ್ನು ಒಂದು ನಿರ್ದಿಷ್ಟ ಪ್ರದೇಶದಲ್ಲಿ ಪೂರ್ವಜರು ನಿರ್ಮಾಣ ಮಾಡಿರುತ್ತಾರೆ. ಕೆರೆಯ ಪಶ್ಚಿಮ ದಿಕ್ಕಿಗೆ ಬಸವಣ್ಣನಗುಡ್ಡ ಇದ್ದು ಈ ಗುಡ್ಡದ ಮೇಲೆ ಬಸವಣ್ಣನ ರೂಪದಲ್ಲಿ ಉದ್ಭವಲಿಂಗ ಇದೆ. ಗುಡ್ಡದ ಮೇಲೆ ಬಿದ್ದಂತಹ ನೀರು ಸರಾಗವಾಗಿ ಕೆರೆಗೆ ಬಂದು ಸೇರುವಂತೆ ನಿರ್ಮಾಣ ಮಾಡಿರುತ್ತಾರೆ. ಇದರ ದಕ್ಷಿಣಕ್ಕೆ ಸಮೀಪದಲ್ಲಿಯೇ ಕಲ್ಯಾಣ ಚಾಲುಕ್ಯರ ಕಾಲದ ಪಾರ್ವತಿ ಪರಮೇಶ್ವರ ದೇವಾಲಯವಿದೆ. ದೇವಾಲಯದ ಲಕ್ಷಣಗಳನ್ನು ನೋಡಿದಾಗ ಈ ಕೆರೆಯು ಕಲ್ಯಾಣ ಚಾಲಕ್ಯರ ಕಾಲದಲ್ಲಿ ನಿರ್ಮಾಣವಾಗಿರಬೇಕು ಮತ್ತು ಈ ನೀರನ್ನು ಧಾರ್ಮಿಕ ಪೂಜಾ ವಿಧಿವಿಧಾನಗಳಿಗೆ ಬಳಸುತ್ತಿರಬೇಕು ಎಂಬುದು ಗೊತ್ತಾಗುತ್ತದೆ. ಈ ಕೆರೆಯು ಎರಡೂ ಕಡೆಗೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು ಉಳಿದ ಎರಡು ಕಡೆ ಗುಡ್ಡ ಆವರಿಸಿದೆ.

**ಮಲ್ಲಸಮುದ್ರ ಕೆರೆ :**

ಗ್ರಾಮ-ಮಲ್ಲಸಮುದ್ರ

ಅಚ್ಚುಕಟ್ಟು ಪ್ರದೇಶ-೩೨.೯೯(ಹೆ)

ಜಲಾವೃತ ಪ್ರದೇಶ-೧೨.೩೪(ಹೆ)

ಕೆರೆಯ ಸಾಮರ್ಥ್ಯ- ೧೦.೮೮(mcft)

ಏರಿಯ ಉದ್ದ- ೭೫೪ ಮೀ.

ಏರಿಯ ಎತ್ತರ- ೦೯.೦೦ ಮೀ.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಮಲ್ಲಸಮುದ್ರ ಗದಗ ಜಿಲ್ಲೆಯ ಒಂದು ಗ್ರಾಮ. ಇದು ಗದಗ ತಾಲ್ಲೂಕು ಕೇಂದ್ರದಿಂದ ೫ ಕಿ.ಮೀ, ಅಂತರದಲ್ಲಿದೆ. ಗದಗ ಜಿಲ್ಲೆಯಲ್ಲಿ ಬರುವ ಕೆರೆಗಳಲ್ಲಿ ಮಲ್ಲಸಮುದ್ರ ಕೆರೆಯು ಒಂದು. ಈ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಅವಶೇಷಗಳು ಮತ್ತು ದೇವಾಲಯಗಳು ಕಂಡುಬರುತ್ತವೆ. ಈ ಸ್ಥಳನಾಮವನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ಮಲ್ಲಯುದ್ಧದಲ್ಲಿ ಪಾಲ್ಗೊಳ್ಳುವವರ ಸಂಖ್ಯೆ ಗ್ರಾಮದಲ್ಲಿ ಹೆಚ್ಚಾಗಿದ್ದರಿಂದ ಇದಕ್ಕೆ ಮಲ್ಲಸಮುದ್ರ ಎಂದು ಹೆಸರು ಬಂದಿರಬಹುದು. ಹಾಗೂ ಮಲ್ಲಸಮುದ್ರ ಹೆಸರಿನಲ್ಲಿ ಉತ್ತರ ಪದ ಜಲವಾಚಕವಾಗಿದ್ದರಿಂದ ಈ ಗ್ರಾಮ ನೀರಿನ ತಾಣವಾಗಿತ್ತು. ಆ ಕಾರಣಕ್ಕಾಗಿ ಇದಕ್ಕೆ ಮಲ್ಲಸಮುದ್ರ ಎಂದು ಕರೆದಿರಬಹುದು. ಈ ಗ್ರಾಮದಲ್ಲಿ ಕೆರೆಗೆ ಸಂಬಂಧಿಸಿದ ಯಾವುದೇ ಶಾಸನಗಳು ದೊರೆತಿಲ್ಲ. ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಮಾಹಿತಿಯಂತೆ ಈ ಗ್ರಾಮದಲ್ಲಿ ಕೆರೆಯನ್ನು ಒಂದು ನಿರ್ದಿಷ್ಟ ಸ್ಥಳದಲ್ಲಿ ವ್ಯವಸ್ಥಿತವಾಗಿ ನಿರ್ಮಿಸಿದ್ದಾರೆ. ಕೆರೆಯ ಉತ್ತರ ದಿಕ್ಕಿನಲ್ಲಿ ಕಪ್ಪತಗುಡ್ಡಗಳ ಸಾಲುಗಳು ಕೆರೆಗೆ ಏರಿಯು ದಕ್ಷಿಣಾಭಿಮುಖವಾಗಿದ್ದು, ಇದನ್ನು ಮಣ್ಣಿನಿಂದ ನಿರ್ಮಿಸಿದ್ದಾರೆ. ಈ ಕೆರೆಯ ದಕ್ಷಿಣಕ್ಕೆ ಕೋಡಿಯನ್ನು ಒಳಗೊಂಡಿದೆ. ಏರಿಯ ಒಳಭಾಗವನ್ನು ದಪ್ಪ ದಪ್ಪ ಕಲ್ಲುಗಳಿಂದ ನಿರ್ಮಿಸಿದ್ದಾರೆ ಹೊರಭಾಗವು ಮಣ್ಣಿನಿಂದ ಕೂಡಿದೆ. ಆದರೆ ಈ ಕೆರೆಯು ಈಗ ಅಳಿವಿನ ಅಂಚಿನಲ್ಲಿದೆ. ಇದನ್ನು ಗ್ರಾಮಸ್ಥರು ಹಾಗೂ ಸಂಬಂಧಿಸಿದ ಇಲಾಖೆಯವರು ಗಮನಹರಿಸಿ ಜೀರ್ಣೋದ್ಧಾರವನ್ನು ಮತ್ತು ಇಲ್ಲಿನ ಕುಡಿಯುವ ನೀರಿನ ತಾಪತ್ರಯವನ್ನು ಹೋಗಲಾಡಿಸಬಹುದು.

**ದೇವಿಹಾಳ ಕೆರೆ :**

| | |
|---|---|
| ಗ್ರಾಮ-ದೇವಿಹಾಳ | ಅಚ್ಚುಕಟ್ಟು ಪ್ರದೇಶ-೪೦.೦೦(ಹೆ) |
| ಜಲಾವೃತ ಪ್ರದೇಶ-೩೦.೦೦(ಹೆ) | ಕೆರೆಯಸಾಮರ್ಥ್ಯ- ೧೭.೮೮(mcft) |
| ಏರಿಯ ಉದ್ದ- ೭೪೦ ಮೀ. | ಏರಿಯ ಎತ್ತರ- ೦೬.೦೦ಮೀ. |
| ಏರಿಯ ಮೇಲ್ಭಾಗದ ಅಗಲ-೧.೦೦ ಮೀ. | |

ದೇವಿಹಾಳ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಒಂದು ಚಿಕ್ಕ ಗ್ರಾಮ. ಶಿರಹಟ್ಟಿಯಿಂದ ದಕ್ಷಿಣಕ್ಕೆ ೧೪ ಕಿ.ಮೀ. ಗದಗದಿಂದ ೩೨ ಕಿ.ಮೀ. ಅಂತರದಲ್ಲಿದೆ. ದೇಸಾಯಿಯವರ ಆಳ್ವಿಕೆ ಮತ್ತು ಶಿವಾಜಿ ಆಳ್ವಿಕೆಗೆ ಒಳಪಟ್ಟಂತಹ ಗ್ರಾಮವಾಗಿದ್ದು, ದೇವಿಹಾಳದ ಹೊಳಲಮ್ಮನ ಗುಡ್ಡವು ಐತಿಹಾಸಿಕವಾಗಿದೆ. ದೇವಸ್ಥಾನ ಮತ್ತು ಕೋಟೆಯನ್ನು ಶಿವಾಜಿಯ ಕಾಲದಲ್ಲಿ ನಿರ್ಮಾಣವಾಗಿದೆ. ಗ್ರಾಮ ಅತಿ ಚಿಕ್ಕದಾಗಿದ್ದು ಇದರ ಸಮೀಪದಲ್ಲಿಯೇ ರಣತೂರು ಎಂಬ ಗ್ರಾಮವೂ ಕೂಡ ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದಿದೆ.

ರಣದುಲ್ಲಾಖಾನನು ರಾಜ್ಯ ಕಟ್ಟಿ ರಾಜ್ಯ ಆಳಿದ ಈಗಲೂ ಪಾಳುಬಿದ್ದ ರಾಜಧಾನಿ ನೋಡಬಹುದು. ರಣದುಲ್ಲಾಖಾನ ನಂತರ ಮಾಂಡಲೀಕ ಆಳ ಅರಸರ ಹಿಂದೆ ಎಷ್ಟೋ ಜನರು

ಆಳಿ ಹೋಗಿದ್ದಾರೆ. ಶ್ರೀಮಂತಗಡದ ಗುಡ್ಡದಿಂದ ಹರಿದುಬರುವ ದೇವಿಯ ಒಂದು ತೀರ್ಥದ ಪ್ರಭಾವದಿಂದ ದೇವಿಯ ಆಲಯ ಮೇಲ್ಗಡೆ ಇರುವುದರಿಂದ ದೇವಿಯ ನಾಮಾಂಕಿತದಿಂದ ದೇವಿಯ ಹಾಲ ಹೋಗಿ ದೇವಿಹಾಳ ಎಂಬುದಾಗಿದೆ. ಇಲ್ಲಿ ಶಿವಾಜಿಯ ಸಂಗಡ ಬಂದಂತಹ ಮರಾಠರು ಕೆಲವರು ಇಲ್ಲಿಯೇ ಉಳಿದುಕೊಂಡರು ಹಾಗಾಗಿ ಪ್ರಸ್ತುತ ಹೆಚ್ಚಿನ ಮರಾಠಿಗರು ಇಲ್ಲಿ ವಾಸಿಸುತ್ತಾರೆ. ರಣದುಲ್ಲಾಖಾನನು ಸುಮಾರು ೫೦೦ ವರ್ಷಗಳ ಹಿಂದೆ ಈಗ ಇರುವ ಶ್ರೀಮಂತಗಡದ ಹತ್ತಿರಕ್ಕೆ ತಾಗಿರುವ ಇದನ್ನು ವಿಚಾರಿಸಿದಾಗ ಸುಮಾರು ನಾಲ್ಕು ತಲೆಮಾರಿನ ಹಿಂದೆ ದೇವಿಯ ಇತಿಹಾಸ ಆಗಿನ ಸಂಸ್ಥಾನಕ್ಕೆ ಈಗ ಇರುವ ಶ್ರೀಮಂತಗಡವು ಹಿಂದಕ್ಕೆ ಕಪ್ಪೆಗುಡ್ಡವೆಂತಲೂ ಹೆಸರು. ಇಲ್ಲಿ ಕಪಿಲಮುನಿ ಎಂಬುವರು ತಪಗೈದಿದ್ದರು. ಸಾವಿರಾರು ಸಾಧು ಸಂತರು ತಪಗೈದ ಸ್ಥಳವಿದು. ತಪಗೈದವರು ಬರಿಗೈಯಲ್ಲಿ ಯಾರೂ ಹೋಗಿಲ್ಲ. ಶರಣ ಶರಣೆಯರು ತಪಗೈದಿದ್ದಾರೆ. ಇಂತಹ ಋಷಿಮುಂಗವರ, ಶರಣರ ತಪಸ್ಸಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ಮುಂದೊಂದು ದಿನ ಈ ಕಪ್ಪೆಗುಡ್ಡ ಮಹಾಕ್ಷೇತ್ರವಾಗಿ ಮೆರೆಯುತ್ತದೆ ಎಂದು ಆಶೀರ್ವಾದ ಮಾಡಿದ ಪರಿಣಾಮವೇ ದೇವಿಯು ಇಲ್ಲಿ ನೆಲೆನಿಂತು ಬೇಡಿದ ಇಷ್ಟಾರ್ಥಗಳನ್ನು ಕೊಡುವಂತಹ ಕಾಮಧೇನು ಹೊಳಲಮ್ಮ.[೧೮]

ಕಪ್ಪೆಗುಡ್ಡ ಈಗಿನ ಶ್ರೀಮಂತಗಡ ಪಾವನವಾಗಲು ಕೆಳಗಡೆ ರಣದುಲ್ಲಾಖಾನನ ಸಂಸ್ಥಾನದ ರಾಜರು ರಾಜದರ್ಬಾರ್ ನಡೆಸುತ್ತಿದ್ದರು. ಒಮ್ಮೆ ರಣದುಲ್ಲಾಖಾನನ ಮನದಲ್ಲಿ ವಿಚಾರ ಮೂಡಿದಾಗ ತಾನು ಮುಸಲ್ಮಾನರ ಧರ್ಮರಾಜ ಧಂಗೆ ಎದ್ದರೆ ನನ್ನ ಸಂಸ್ಥಾನವೆಲ್ಲ ಹಾಳಾಗುತ್ತದೆ ಎಂದು ಗುಪ್ತ ಜಾಗವನ್ನು ಹುಡುಕುತ್ತಿದ್ದ. ಅಲ್ಲಿಯೇ ಸಮೀಪವಿರುವ ಶ್ರೀಮಂತಗಡಕ್ಕೆ ಹೋಗಿದ್ದ ಋಷಿಮುಂಗವರನ್ನು ನೋಡಿ ಹೇಗಾದರೂ ಮಾಡಿ ಇದೇ ಯೋಗ್ಯ ಸ್ಥಳ ಎಂದು ನಿಶ್ಚಯಿಸಿ ತನ್ನ ರಾಜ್ಯಕ್ಕೆ ಮರಳಿಬಂದ. ಗುಡ್ಡದ ಮೇಲೆ ಸಣ್ಣದೊಂದು ಗುಡ್ಡದಮ್ಮನ ದೇವಿಯ ಗುಡಿ ಇತ್ತು. ಗಿಡಗಂಟಿಗಳು ಬೆಳೆದು ಕಲ್ಲುಮುಳ್ಳುಗಳಿಂದ ತುಂಬಿದ ಗುಡ್ಡದಮ್ಮನ ದೇವಾಲಯಕ್ಕೆ ಹೋಗಲು ದಾರಿ ಇದ್ದಿಲ್ಲ. ಇದು ಹಿಂದೂ ದೇವಾಲಯ; ಇಲ್ಲಿ ನನ್ನ ರಾಜ್ಯವನ್ನು ಪಡೆಯಲು ಯಾರಿಂದಲೂ ಸಾಧ್ಯವಿಲ್ಲ ಎಂದು ನಿಶ್ಚಯಿಸಿ ರಾಜಧಾನಿಗೂ, ದೇವಾಲಯಕ್ಕೂ ಸುರಂಗ ಮಾರ್ಗ ಮಾಡಿದ. ಆ ಗುಡಿಯಲ್ಲಿ ಆದಿಶಕ್ತಿ ಮೂರ್ತಿಯನ್ನು ಸ್ಥಾಪನೆ ಮಾಡಿ ತಿರುಗುಣಿ ಮಾಡಿ ದೇವಿಯನ್ನು ಪೂಜಿಸಿದ. ಈ ಮೂರ್ತಿಯ ಕೆಳಗೆ ಒಂದು ಗರ್ಭಗುಡಿ ಇತ್ತು; ಅಲ್ಲಿ ವೈರಿಗಳು ಬಂದಕೂಡಲೇ ಕೆಳಗಿನ ಗರ್ಭಗುಡಿಯಲ್ಲಿ ಇಳಿದು ದೇವಿಯನ್ನು ಹೊರಳಿಸುತ್ತಿದ್ದನು. ಅದರಂತೆ ಅದೇ ರೀತಿ ಹೊಳಲಮ್ಮ ಎಂದು ನಾಮಕರಣ ಬಂದಿದೆ. ರಣದುಲ್ಲಾಖಾನನ ಮನದಲ್ಲಿ ಸಂಶಯದ ಮೊಳಕೆ ಮೂಡಹತ್ತಿತು. ನಾನು ಪದೇ ಪದೇ ದೇವಸ್ಥಾನಕ್ಕೆ ಬರುವುದರಿಂದ ಜನರಿಗೆ ಸಂಶಯ ಬರಬಹುದೆಂದು ದೇವಿಯ ಗುಡಿಯ ಹತ್ತಿರ ಒಂದು ಈಶ್ವರ ದೇವಾಲಯವನ್ನು ಕಂಡು ಆನಂದಭರಿತನಾದನು. ಆದರೆ ದೇವಸ್ಥಾನಕ್ಕೆ ಹೋಗಲು ದಾರಿ ಇದ್ದಿಲ್ಲ. ಗಿಡಗಂಟೆ, ಮುಳ್ಳು, ಕಲ್ಲುಗಳಿಂದ ಕೂಡಿದ್ದರಿಂದ

ಅಲ್ಲಿಯವರೆಗೂ ಯಾರೂ ಹೋಗುತ್ತಿದ್ದಿಲ್ಲ. ಆ ಸ್ಥಳಕ್ಕೆ ತಾನು ಮಾತ್ರ ಸುರಂಗ ಮಾರ್ಗದಿಂದ ಹೋಗಿ ಬರುತ್ತಿದ್ದ. ಶ್ರೀಮಂತಗಡ ವನ್ಯಮೃಗಗಳ, ನಾನಾ ತರಹದ ತೇಗು, ಲಿಂಬೆಗಿಡ, ಮಾವು, ವನಸ್ಪತಿಗಳು, ನಾನಾ ತರಹದ ಪಕ್ಷಿಗಳು, ದೊಡ್ಡ ದೊಡ್ಡ ಬಂಡೆ ಕಲ್ಲುಗಳು, ಕುಣಿಯುವ ನವಿಲುಗಳನ್ನು ನೋಡಲು ಎರಡು ಕಣ್ಣುಗಳು ಸಾಲವು ಅಷ್ಟು ಸೌಂದರ್ಯದಿಂದ ಕೂಡಿದೆ.

ರಣದುಲ್ಲಾಖಾನನು ತನ್ನ ಸಂಸ್ಥಾನದ ಎರಡು ಕಿ.ಮೀ ದೂರದಲ್ಲಿ ಒಂದು ಕೆರೆಯನ್ನು ಕಟ್ಟಿಸಲು ಪ್ರಾರಂಭಿಸಿದ; ದೊಡ್ಡ ಪ್ರಮಾಣದ ಕೆರೆಯನ್ನು ಕಟ್ಟಿಸಿದ. ಆನೆ ಕುದುರೆಗಳಿಗೆ ದನ ಕರುಗಳಿಗೆ ಉಪಯೋಗವಾಗಲೆಂದು ನೀರನ್ನು ಸಂಗ್ರಹಿಸಿ ನೂರಾರು ಎಕರೆ ನೀರಾವರಿ ಮಾಡಿಸಿದ. ನೂರು ಕೆರೆ ಇತ್ತೆಂದು ಪೂರ್ವಜರಿಂದ ತಿಳಿದುಬಂದಿದೆ. ತನ್ನ ರಾಜಧಾನಿಯ ಕಡೆಗೆ ಕಾಲುವೆಯನ್ನು ಮಾಡಿಸಿದ; ಅದೇ ನೀರಿನಿಂದ ತೆಂಗು, ನಿಂಬೆ, ಪೇರಲ ಮತ್ತು ನಾನಾ ತರಹದ ಹಣ್ಣು ಹಂಪಲುಗಳನ್ನು ಬೆಳೆಸಿದ. ಆ ತೋಟದ ವೈಭವವನ್ನು ನೋಡಲು ಎರಡು ಕಣ್ಣುಗಳು ಸಾಲದು ಎಲ್ಲಿ ನೋಡಿದಲ್ಲಿ ಹಸಿರು ವಿಜ್ರಂಭಿಸುತ್ತಿತ್ತು. ಇಂತಹ ವೈಭವ ರಣದುಲ್ಲಾಖಾನನ ಸಂಸ್ಥಾನದಲ್ಲಿತ್ತು. ಈಗಲೂ ರೂಢಿಯೊಳಗೆ ದೇವಿಹಾಳದಲ್ಲಿರುವ ಕೆರೆಗೆ ಸಾಂಬನ ಕೆರೆ[೫೫] ಎಂದು ಕರೆಯುವುದುಂಟು.

ದೇವಿಹಾಳದ ಗುಡ್ಡದ ಮುಂಭಾಗದಲ್ಲಿ ಬೃಹತ್ತಾದ ಕೆರೆಯೊಂದಿದ್ದು ಇದನ್ನು ಶಿವಾಜಿಯೇ ಕಟ್ಟಿಸಿದನೆಂದು ಆಧಾರಗಳ ಮೂಲಕ ತಿಳಿಯಬಹುದು. ಈ ಕೆರೆಯು ಗ್ರಾಮದಿಂದ ಪೂರ್ವ ದಿಕ್ಕಿಗೆ ಇದ್ದು, ಪ್ರಸ್ತುತ ಜಿಲ್ಲಾ ಪಂಚಾಯತಿ ಇಲಾಖೆಗೆ ಒಳಪಟ್ಟಿದೆ. ಇದಕ್ಕೆ ಒಂದು ತೂಬು ಕೋಡಿಯನ್ನು ಒಳಗೊಂಡಿದೆ. ಈ ಕೆರೆ ನಾಲ್ಕು ಭಾಗದಲ್ಲಿ ಮಣ್ಣಿನ ಏರಿಯನ್ನು ಒಳಗೊಂಡಿದೆ. ಇಲ್ಲಿ ನಿರ್ಮಿಸಿದ ತೂಬು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಒಳಗೊಂಡಿದ್ದರಿಂದ ಚಾಲುಕ್ಯರ ಕಾಲದಲ್ಲಿ ಈ ಕೆರೆಯು ನಿರ್ಮಾಣಗೊಂಡಿದೆ. ಮಳೆಯಾಶ್ರಿತ ಕೆರೆಯಾಗಿದ್ದು, ಗುಡ್ಡದ ಆಸರೆಯಾಗಿ ನಿರ್ಮಿಸಿರುತ್ತಾರೆ.

**ಸಿದ್ದಾಪುರ ಕೆರೆ :**

ಗ್ರಾಮ–ಸಿದ್ದಾಪುರ

ಅಚ್ಚುಕಟ್ಟು ಪ್ರದೇಶ–೩೦.೯೯(ಹೆ)

ಜಲಾವೃತ ಪ್ರದೇಶ–೧೦.೩೪(ಹೆ)

ಕೆರೆಯ ಸಾಮರ್ಥ್ಯ– ೧೦.೮೮(mcft)

ಏರಿಯ ಉದ್ದ– ೬೫೪ ಮೀ.

ಏರಿಯ ಎತ್ತರ– ೧೦.೦೦ಮೀ.

ಏರಿಯ ಮೇಲ್ಭಾಗದ ಅಗಲ–೨.೦೦ ಮೀ.

ಸಿದ್ದಾಪುರ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಒಂದು ಗ್ರಾಮ. ಇದು ಲಕ್ಷ್ಮೇಶ್ವರದಿಂದ ದಕ್ಷಿಣಕ್ಕೆ ೧೦ ಕಿ.ಮೀ. ಗದಗದಿಂದ ೫೨ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು ಕಲ್ಯಾಣ ಚಾಲುಕ್ಯರ ಕಾಲದ ಕೆರೆಗಳಲ್ಲಿ ಒಂದಾಗಿದೆ. ಈ ಗ್ರಾಮವು ಲಕ್ಷ್ಮೇಶ್ವರದಷ್ಟೇ ಪ್ರಾಚೀನವಾಗಿದೆ. ಗ್ರಾಮದ ಉತ್ತರಕ್ಕೆ ಈ ಕೆರೆ ಕಂಡುಬಂದಿದ್ದು, ಗ್ರಾಮದಿಂದ ೧.೫ ಕಿ.ಮೀ ಅಂತರದಲ್ಲಿದೆ.

ಗ್ರಾಮದ ಜೀವನಾಡಿಯಾಗಿದ್ದು ಈ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಇದು ಪಡೆದಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸಣ್ಣ ಕೆರೆಯಾಗಿದ್ದಿರಬೇಕು. ಕಾಲಕ್ರಮೇಣದಲ್ಲಿ ಈ ಪ್ರದೇಶವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ನಂತರ ಕೆರೆಯನ್ನು ದೊಡ್ಡ ಪ್ರಮಾಣದಲ್ಲಿ ವಿಸ್ತರಿಸಿರಬೇಕು. ಕೆರೆಯನ್ನು ಯಾರು ನಿರ್ಮಿಸಿದರು ಎಂಬುದರ ಬಗ್ಗೆ ಮಾಹಿತಿಗಳು ದೊರೆಯದ ಕಾರಣ ಅಸ್ಪಷ್ಟತೆಗಳು ಇದೆ. ತೂಬಿಗೆ ಬಳಸಿದ ಕಲ್ಯಾಣ ಚಾಲುಕ್ಯರ ಕಾಲದ ವಾಸ್ತುಶಿಲ್ಪದ ಗೋಪುರದ ಕಲಾಕೃತಿಗಳನ್ನು ಅಳವಡಿಸಿದ್ದರಿಂದ ಮತ್ತು ಕೆರೆಯ ಸಮೀಪದಲ್ಲಿ ಪೂರ್ವಾಭಿಮುಖವಾಗಿರುವ ಈಶ್ವರ ದೇವಾಲಯದ ವಾಸ್ತುಶೈಲಿಯನ್ನು ಗಮನಿಸಿದಾಗ ಹಾಗೂ ಅಲ್ಲಿ ಬಿದ್ದಂತಹ ಪ್ರಾಚ್ಯಾವಶೇಷಗಳ ಆಧಾರದ ಮೇಲೆ ಈ ಕೆರೆಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರಬಹುದೆಂದು ತಿಳಿಯಬಹುದು. ಕೆರೆಯು ಮಳೆಯಾಶ್ರಿತ ಕೆರೆಯಾಗಿದೆ. ಈ ಕೆರೆಗೆ ಎರಡು ತೂಬು ಇದ್ದು, ಒಂದನ್ನು ಮೂರು ಹಂತಗಳಲ್ಲಿ ನಿರ್ಮಾಣ ಮಾಡಿದ್ದಾರೆ. ಇದಕ್ಕೆ ಸಿಮೆಂಟ್, ಗಚ್ಚು, ಗಾರೆ ಜೊತೆಗೆ ಕಬ್ಬಿಣದ ಬಾಗಿಲುಗಳನ್ನು ಅಳವಡಿಸಿರುತ್ತಾರೆ. ಇನ್ನೊಂದಕ್ಕೆ ಗ್ರಾನೈಟ್ ಕಲ್ಲುಗಳನ್ನು ಅಳವಡಿಸಿ ಇದಕ್ಕೆ ಕಲ್ಯಾಣ ಚಾಲಕ್ಯ ಶೈಲಿಯ ಕಂಬಗಳನ್ನು ತಂದು ಇದಕ್ಕೆ ಅಳವಡಿಸಿರುತ್ತಾರೆ. ಈ ಎರಡೂ ತೂಬುಗಳು ವಿವಿಧ ಎತ್ತರಗಳಲ್ಲಿ ಮತ್ತು ಅವುಗಳಿಗೆ ಅನುಗುಣವಾಗಿ ಕಾಲುವೆಗಳನ್ನು ನಿರ್ಮಾಣ ಮಾಡಿದ್ದಾರೆ.

ಇಂದು ಈ ರೀತಿಯ ನೀರಾವರಿ ವ್ಯವಸ್ಥೆಯಿಂದ ಕೆರೆ ಬಳಕೆಯಾಗದೇ ಹೂಳು ತುಂಬಿಕೊಂಡಿವೆ. ಮುಂದಿನ ಪೀಳಿಗೆಗೆ ಕೆರೆ ಇಲ್ಲದಂತೆ ಆಗುತ್ತದೆ. ಇದಕ್ಕಾಗಿ ಕೆರೆಯ ಉಸ್ತುವಾರಿಗೆ ಸಂಬಂಧಿಸಿದ ಇಲಾಖೆಗಳು ಅಥವಾ ತಾಲೂಕು ಅಥವಾ ಗ್ರಾಮ ಪಂಚಾಯತಿ ಯವರು ಇತ್ತ ಗಮನಹರಿಸಬೇಕು. ಇಲಾಖೆಯವರು ಕೆರೆಯನ್ನು ಹೂಳೆತ್ತಿಸಿ ತುಂಗಭದ್ರಾ ನಾಲೆಯ ನೀರನ್ನು ಹರಿಸಬೇಕು. ಇದರಿಂದ ಅಧಿಕವಾಗುತ್ತಿರುವ ಆಯಕಟ್ಟು ಪ್ರದೇಶಗಳಿಗೆ ನೀರನ್ನು ಸಮರ್ಪಕವಾಗಿ ಪೂರೈಸಲು ಸಹಾಯಕವಾಗುತ್ತದೆ ಎನ್ನಬಹುದು. ಈ ಕೆರೆಯ ಆಶ್ರಯದಲ್ಲಿ ರೈತರು ವಿವಿಧ ಬೆಳೆಗಳನ್ನು ಬೆಳೆಯುತ್ತಾರೆ.

**ಬಾಲೆಹೊಸೂರ ಕೆರೆ :**

ಗ್ರಾಮ-ಬಾಲೆಹೊಸೂರು

ಅಚ್ಚುಕಟ್ಟು ಪ್ರದೇಶ-೩೦.೯(ಹೆ)

ಜಲಾವೃತ ಪ್ರದೇಶ-೩೧.೯೭(ಹೆ)

ಕೆರೆಯ ಸಾಮರ್ಥ್ಯ- ೧೭.೮೮(mcft)

ಏರಿಯ ಉದ್ದ- ೮೪೩ ಮೀ.

ಏರಿಯ ಎತ್ತರ- ೦೮.೨೮ ಮೀ.

ಏರಿಯ ಮೇಲ್ಭಾಗದ ಅಗಲ-೧.೮೦ ಮೀ.

ಬಾಲೆಹೊಸೂರು ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಒಂದು ಗ್ರಾಮ. ಲಕ್ಷ್ಮೇಶ್ವರದಿಂದ ದಕ್ಷಿಣಕ್ಕೆ ೧೦ ಕಿ.ಮೀ ಗದಗದಿಂದ ೫೨ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು ಬಾಲೆಹೊಸೂರ

ಮತ್ತು ಲಕ್ಷ್ಮೇಶ್ವರ ರಸ್ತೆ ಬಲಬದಿಗೆ ಒಂದೂವರೆ ಕಿ.ಮೀ ಪಶ್ಚಿಮಕ್ಕೆ ಸಾಗಿದಾಗ ಈ ಕೆರೆ ಸಿಗುತ್ತದೆ. ಗ್ರಾಮದ ಜೀವನಾಡಿಯಾಗಿದ್ದು ಈ ಕರೆಯು ನಾಲ್ಕು ದಿಕ್ಕಿನಲ್ಲಿ ಮಣ್ಣಿನ ಏರಿಯನ್ನು ಒಳಗೊಂಡಿದೆ. ಈ ಕೆರೆಗೆ ಒಂದು ತೂಬನ್ನು ಏರಿಯ ಅನುಗುಣವಾಗಿ ಅಳವಡಿಸಿದ್ದು ನೀರಿನ ಆಳಕ್ಕೆ ತಲುಪಲು ಉತ್ತರಾಭಿಮುಖವಾಗಿ ಮೆಟ್ಟಿಲುಗಳನ್ನು ನಿರ್ಮಿಸಿರುತ್ತಾರೆ. ತೂಬಿಗೆ ಕಬ್ಬಿಣದ ಸರಳನ್ನು ಮತ್ತು ಜಾಕ್‌ವೆಲ್ಲನ್ನು ಅಳವಡಿಸಿರುತ್ತಾರೆ. ಕೆರೆಯ ದಕ್ಷಿಣ ದಿಕ್ಕಿಗೆ ಕೋಡಿಯನ್ನು ನಿರ್ಮಿಸಿದ್ದು ಇದನ್ನು ಗ್ರಾನೈಟ್‌ಕಲ್ಲು ಮತ್ತು ಗಚ್ಚುಗಾರೆ ಸಿಮೆಂಟುಗಳಿಂದ ನಿರ್ಮಿಸಿರುತ್ತಾರೆ. ಇದರ ಮೂಲಕ ಹೆಚ್ಚಾದ ನೀರು ಹೊರಗೆ ಹೋಗುವ ಹಾಗೆ ನಿರ್ಮಿಸಿರುತ್ತಾರೆ.

**ಮಾಗಡಿ ಕೆರೆ :**

| | |
|---|---|
| ಗ್ರಾಮ-ಮಾಗಡಿ | ಅಚ್ಚುಕಟ್ಟು ಪ್ರದೇಶ-೩೦.೯೯(ಹೆ) |
| ಜಲಾವೃತ ಪ್ರದೇಶ-೧೦.೩೪(ಹೆ) | ಕೆರೆಯ ಸಾಮರ್ಥ್ಯ- ೧೦.೮೮(mcft) |
| ಏರಿಯ ಉದ್ದ- ೬೫೪ ಮೀ. | ಏರಿಯ ಎತ್ತರ- ೧೦.೦೦ಮೀ. |
| ಏರಿಯ ಮೇಲ್ಭಾಗದ ಅಗಲ-೨.೦೦ ಮೀ. | |

ಮಾಗಡಿ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಒಂದು ಗ್ರಾಮ. ಶಿರಹಟ್ಟಿಯಿಂದ ದಕ್ಷಿಣಕ್ಕೆ ೫ ಕಿ.ಮೀ ಗದಗದಿಂದ ೨೬ ಕಿ.ಮೀ ಅಂತರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ 'ಮಾಗುಂಡಿ' ಎಂದೇ ಉಲ್ಲೇಖಿತಗೊಂಡಿದ್ದು, ಹಿಂದೆ ಇದು ಬೆಳ್ವೊಲ-೩೦೦ಕ್ಕೆ ಸೇರಿದ್ದ ಮುಳಗುಂದ-೧೨ರಲ್ಲಿದ್ದಂತೆ ತೋರುತ್ತದೆ. ನಿಲಮ್ಮನ ಮಠದ ಬಳಿಯಿರುವ ಕ್ರಿ.ಶ. ೯೭೦ರ ಶಾಸನದಿಂದ ಛಲದಂಕಕಾರನ ಆಡಳಿತದಲ್ಲಿ ಬಲ್ಲವರಸನು ಬನವಾಸಿಯನ್ನು ಆಳುತ್ತಿರುವಾಗ ಸಕಳರಾಶಿ ಪಂಡಿತರಿಗೆ ಕಯಿಕಜ್ಜ ಗ್ರಾಮವನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಇದರಿಂದ ಈ ಊರು ರಾಷ್ಟ್ರಕೂಟರಷ್ಟೇ ಪ್ರಾಚೀನವಾದುದೆಂದು ತಿಳಿಯುತ್ತದೆ. ನೆರೆಯ ಯಳವತ್ತಿಯ ೧೧೯೫ರ ಶಾಸನದಲ್ಲಿ ಇದನ್ನು ಮಾಗುಂಡಿ ಎಂದೇ ದಾಖಲಿಸಿದೆ. ಆದರೆ ಕೃಷ್ಣದೇವರಾಯನ ಕಾಲದ ಒಂದು ಶಾಸನದಲ್ಲಿ ಈ ಊರನ್ನು 'ಮಾಗಡೆ' ಎಂದು ಕರೆದಿದೆ.[೧೯] ಮಠದ ಹತ್ತಿರದಲ್ಲಿ ಪ್ರಾಚೀನವಾದ ಕೆರೆ ಕಂಡುಬರುತ್ತದೆ.

ಮಹಾ+ಗಡಿ ಎಂಬ ಎರಡು ಪದಗಳು ಸೇರಿ 'ಮಾಗಡಿ' ಎಂಬ ಸಂಯುಕ್ತ ಪದವಾಗಿದೆ. ಹತ್ತನೆಯ ಶತಮಾನದಲ್ಲಿ ರಾಷ್ಟ್ರಕೂಟರ ಪಂಚಲದೇವನು ಕ್ರಿ.ಶ. ೯೭೫ರಲ್ಲಿ ಮುಳಗುಂದವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದನೆಂದು ಇಲ್ಲಿಯ ಶಿಲಾಲಿಪಿಗಳಿಂದ ತಿಳಿದುಬರುತ್ತದೆ. ಆತನ ರಾಜ್ಯದ ಸರಹದ್ದು ಈ ಗ್ರಾಮದವರೆಗೆ ಇತ್ತೆಂದು ತಿಳಿಯುತ್ತದೆ. ಮಾಗಡಿ ಕೆರೆಯ ದೊಡ್ಡ ಬಯಲು ಜಾಗೆಯನ್ನು ಸೈನ್ಯದ ಮುಖ್ಯ ಠಾಣೆಯನ್ನಾಗಿ ಮಾಡಿದ್ದರು. ಆದ್ದರಿಂದ ಈ ಜಾಗೆಗೆ 'ಮಹಾಗಡಿ' ಎಂದು ಹೆಸರು ಬಂದಿತು. ಆಗಿನ ಕಾಲದ ಸೈನ್ಯದ ವಸತಿಯ ಬಯಲೇ ಈಗಿರುವ 'ಮಾಗಡಿ ಕೆರೆ' ಆಗಿದೆ. ಸೈನಿಕರಿಗೆ ನೀರಿನ ಸಲುವಾಗಿ ಒಂದು ಬಾವಿಯನ್ನು ತೆಗೆಸಲಾಗಿತ್ತು.

ಅದು ಈಗಲೂ ಸಹ ಕೆರೆಯ ಮಧ್ಯಭಾಗದಲ್ಲಿ ಇರುತ್ತದೆ. ಸೇನಾ ದಂಡನಾಯಕನು ತನ್ನ ಆರಾಧ್ಯ ದೇವತೆಯಾದ ಉಡಚಮ್ಮ ದೇವತೆಯನ್ನು ಸ್ಥಾಪಿಸಿ ಪೂಜೆಗಾಗಿ ಜಮೀನುಗಳನ್ನು ಉಂಬಳಿಯಾಗಿ ನೀಡಿದ್ದನು. ಕ್ರಿ.ಶ ೧೨೫೦ಕ್ಕೆ ಇವರ ಆಳ್ವಿಕೆ ಕೊನೆಗೊಂಡ ನಂತರ, ತಮ್ಮಲ್ಲಿದ್ದ ಆಯಧಗಳೆಲ್ಲವನ್ನು ನೀಲಮ್ಮನ ಮಠದ ಬಾವಿಯಲ್ಲಿ ಹಾಕಲಾಯಿತೆಂದು ಪ್ರತೀತಿ ಇದೆ.[೧೬೦] ಕ್ರಿ.ಶ. ೧೭೫೫ರಲ್ಲಿ ಶಿವಾಜಿ ಮಹಾರಾಜನ ಆಳ್ವಿಕೆಯಲ್ಲಿ ರಾಜ್ಯದ ಘನತೆಯು ಉಚ್ಛ್ರಾಯ ಸ್ಥಿತಿಗೇರಿತು. ಮಾಗಡಿ ಸರಹದ್ದಿನಲ್ಲಿರುವ ಸೈನ್ಯವನ್ನು ಶಿವಾಜಿ ಮಹಾರಾಜನು ತನ್ನ ಅಧೀನಪಡಿಸಿಕೊಂಡು ದೇವಿಹಾಳದ ಹತ್ತಿರ ಗುಡ್ಡದ ಶ್ರೀಮಂತಗಡಕ್ಕೆ ಸ್ಥಳಾಂತರಿಸಿಕೊಂಡನು. ಶಿವಾಜಿಯು ಶ್ರೀಮಂತಗಡದಲ್ಲಿರುವ ತನ್ನ ಆರಾಧ್ಯ ದೇವತೆಯಾದ ಹೊಳಲಮ್ಮ ದೇವಿಯ ದೇವಸ್ಥಾನವನ್ನು ಆ ಗುಡ್ಡದಲ್ಲಿ ಸ್ಥಾಪಿಸಿ, ಒಂದು ಕೋಟೆಯನ್ನು ಕಟ್ಟಿಸಿದನು. ಅಂದಿನಿಂದ ಮಾಗಡಿಯ ಪ್ರಾಚೀನ ವೈಭವ ಕುಂದುವಂತಾಯಿತು. ಕ್ರಿ.ಶ. ೧೮ನೇ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರ ಆಳ್ವಿಕೆ ಪ್ರಾರಂಭವಾದಾಗ ತಾಲೂಕು ವಿಂಗಡನೆ ಮಾಡುವಾಗ ಗದಗ ಹಾಗೂ ಶಿರಹಟ್ಟಿ ತಾಲೂಕುಗಳನ್ನು ವಿಂಗಡಿಸುವಾಗ ಮಾಗಡಿ ಗ್ರಾಮದ ನೀಲಮ್ಮನ ಮಠದ ಹತ್ತಿರವಿರುವ ಮಹಾಗಡಿಯನ್ನಾಗಿ ಮಾಡಿರಬಹುದು. ಮಠದ ಹತ್ತಿರ ಇರುವ ಶಿಲಾಲಿಪಿಗಳ ಆಧಾರದಿಂದಲೂ ಮಾಗಡಿ ಪುರಾತನ ಗ್ರಾಮವೆಂದು ಹೇಳಬಹುದಾಗಿದೆ. ಸೇನಾ ನೆಲೆಯಾಗಿದ್ದ ಬಯಲು ಪ್ರದೇಶವು ಕಾಲಾಂತರದಿಂದ ನೀರು ನಿಲ್ಲುವ ಜಾಗವಾಗಿ ದೊಡ್ಡ ಕೆರೆಯಾಗಿ ಪರಿಣಮಿಸಿದೆ ಎಂದು ಗ್ರಾಮದ ಜನರು ಅಭಿಪ್ರಾಯಪಡುತ್ತಾರೆ.

'ಮಾಗಿ' ಎಂಬುದು ಕನ್ನಡದ ತದ್ಭವ ಪದವಾಗಿದ್ದು ಇದರ ಅರ್ಥ ಮಾಘ, ಚಳಿಗಾಲ, ಸುಗ್ಗಿಕಾಲ, ಬೆಳೆಗಳು ಮಾಗಿರುವ ಕಾಲ ಎಂದಾಗುತ್ತದೆ. ಕೆರೆಯ ನೀರು ವರ್ಷವಿಡಿ ತುಂಬಿ ತುಳುಕುತ್ತಿದ್ದರಿಂದ ಚಳಿಗಾಲದ ನಾಲ್ಕು ತಿಂಗಳನ್ನು ಹೊರತುಪಡಿಸಿಯೂ ಇಲ್ಲಿ ಚಳಿ ಇರುತ್ತದೆ. ಪ್ರಾಚೀನ ಕಾಲದಲ್ಲಿ ಮಾಗಡಿ ಗ್ರಾಮದ ಜನರು 'ಸುಗ್ಗಿಕಾಲ' ಮತ್ತು 'ಉತ್ಸವ' ಗಳನ್ನು ಅತ್ಯಂತ ಕಾಳಜಿಪೂರ್ವಕ ಆಚರಿಸಿದ ಉದಾಹರಣೆಗಳು ಇವೆ. ಈ ಕೆರೆಯು ಲಕ್ಷ್ಮೇಶ್ವರದಿಂದ ಜಿಲ್ಲಾ ಕೇಂದ್ರಕ್ಕೆ ಹೋಗುವ ಮಾರ್ಗದಲ್ಲಿದೆ. ಇದು ಗ್ರಾಮದಿಂದ ಪೂರ್ವದಿಕ್ಕಿಗಿರುವ ಮಳೆಯಾಶ್ರಿತ ಕೆರೆಯಾಗಿದೆ. ಇಂದಿಗೂ ಸುಸ್ಥಿತಿಯಲ್ಲಿದ್ದು, ಅದರ ಪ್ರಯೋಜನವನ್ನು ಜನರು ಪಡೆದುಕೊಳ್ಳುತ್ತಿದ್ದಾರೆ.

ಈ ಕೆರೆ ಪಕ್ಷಿಧಾಮವಾಗಿದೆ. ಪ್ರತಿವರ್ಷ ನವೆಂಬರ್ ತಿಂಗಳಿನಲ್ಲಿ ಈ ಕೆರೆಗೆ ವಿದೇಶಗಳಿಂದ ಪಕ್ಷಿಗಳು ವಲಸೆ ಬಂದು, ಫೆಬ್ರವರಿ ತಿಂಗಳವರೆಗೆ ಇಲ್ಲಿ ನೆಲೆಸಿ ಸ್ವದೇಶಕ್ಕೆ ಮರಳುತ್ತವೆ. ಆಸ್ಟ್ರಿಯಾ, ದಕ್ಷಿಣ ಶ್ರೀಲಂಕಾ, ಅಫಘಾನಿಸ್ಥಾನ, ಮಲೇಷಿಯಾ ಮತ್ತು ಜಮ್ಮು ಕಾಶ್ಮೀರದ, ಲೇಹ್, ಲಢಾಕ್‌ಗಳಿಂದ ಆಗಮಿಸುತ್ತವೆ. ಈ ವರ್ಷ ಎರಡೂ ಸಾವಿರಕ್ಕೂ ಹೆಚ್ಚು ಸಂಖ್ಯೆಯಲ್ಲಿ ಬಂದಿಳಿದಿದ್ದು ವಿಶೇಷ. ಇನ್ನೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಆಗಮಿಸುವ ನಿರೀಕ್ಷೆಯಿದೆ ಎಂದು ಅಲ್ಲಿನ ಜನರ ಅಭಿಪ್ರಾಯವಾಗಿದೆ.

ಇಲ್ಲಿ ಬರುವ ಮುಖ್ಯ ಪಕ್ಷಿಗಳೆಂದರೆ ಬಾರಹೆಡ್ಡೆಡ್, ಗೂಸ್, ಬ್ರಾಹ್ಮಿಣಿ ಡಕ್, ಪೆಂಟೆಡ್ ಸ್ಟಾರ್ಕ್, ವೈಟ್ಐಬಿಸ್, ಬ್ಲ್ಯಾಕ್‌ನೆಕೆಡ್ ಸ್ಟಾರ್ಕ್, ವೈಟ್‌ನೆಕೆಡ್ ಸ್ಟಾರ್ಕ್, ಸ್ಪಾಫ್‌ಡಕ್, ಲಿಟಲ್‌ಕಾರ್ಮೋರೆಟ್, ಸ್ಪಾಟ್‌ಬಿಲ್, ಗ್ರೋಡಕ್‌ಕೂಟ ಸೇರಿದಂತೆ ಹಲವಾರು ಜಾತಿಯ ಹಕ್ಕಿಗಳ ಕಲರವ ಪಕ್ಷಿಪ್ರಿಯರಿಗೆ ಸಿಗುತ್ತವೆ.

ಇಲ್ಲಿಗೆ ಆಗಮಿಸಿದ ಪಕ್ಷಿಗಳು ನಿತ್ಯ ನಸುಕಿನ ಮತ್ತು ಸಂಜೆಯ ವೇಳೆಯಲ್ಲಿ ಎರಡು ಬಾರಿ ಆಹಾರ ಅರಸಿ ದೂರ ಪ್ರದೇಶದ ಹೂವಿನ ಹಡಗಲಿ, ಹರಿಹರ, ರಾಣೆಬೆನ್ನೂರ, ಬೆಳಗಾವಿ ಹೀಗೆ ವಿವಿದೆಡೆಗೆ ತೆರಳುವ ಈ ಬಾನಾಡಿಗಳು ಬೆಳಿಗ್ಗೆ ೮ ರಿಂದ ೯ ಗಂಟೆಯವರೆಗೆ ಇದ್ದು, ಸಾಯಂಕಾಲ ೪ ಗಂಟೆಗೆ ಮಾಗಡಿ ಕೆರೆಗೆ ಧಾವಿಸುವ ದೃಶ್ಯ ನಯನಮನೋಹರ. ಕೆರೆಯಲ್ಲಿ ಸಂಜೆಯವರೆಗೆ ವಿರಮಿಸುವ ಈ ಹಕ್ಕಿಗಳ ದಂಡು ಇಳಿಹೊತ್ತಿನಲ್ಲಿ ಮತ್ತೊಮ್ಮೆ ಆಹಾರಕ್ಕಾಗಿ ತೆರಳುತ್ತವೆ. ನಿತ್ಯ ಕನಿಷ್ಠ ೩೦೦ ಕ್ಕೂ ಹೆಚ್ಚು ಕಿ.ಮೀ ದೂರದವರೆಗೆ ಆಹಾರಕ್ಕಾಗಿ ಪ್ರಯಾಣ ಬೆಳೆಸುತ್ತವೆ. ಈ ಪಕ್ಷಿಗಳಿಂದ ಮಾಗಡಿ ಕೆರೆ ಪಕ್ಷಿಧಾಮವಾಗಿದ್ದರೂ ಸರಕಾರ ಇಲ್ಲಿಯವರೆಗೂ ಈ ಕೆರೆಯ ಅಭಿವೃದ್ಧಿ ಬಗ್ಗೆ ಸಮರ್ಪಕ ಕ್ರಮ ಕೈಗೊಂಡಿಲ್ಲ. ಕೆರೆಗಳ ಸುತ್ತಮುತ್ತಲಿನ ಪ್ರವಾಸಿಗರಿಗೆ ಪಕ್ಷಿಗಳನ್ನು ವೀಕ್ಷಿಸಲೆಂದೇ ಪರಗೋಣ (ಅಟ್ಟಣಿಗೆ)ಗಳನ್ನು ಅಳವಡಿಸಲಾಗಿದ್ದು ಹೆಚ್ಚಿನ ಅಭಿವೃದ್ಧಿ ಆಗಬೇಕಾಗಿದೆ. ವೀಕ್ಷಿಸಲು ಆಗಮಿಸುವ ಪ್ರವಾಸಿಗರು ಕೊಂಚ ಸಪ್ಪಳ ಮಾಡಿದರೆ ಸಾಕು ಪಕ್ಷಿಗಳು ಚದುರಿಹೋಗುತ್ತವೆ. ಈ ಸ್ಥಳ ಸೂಕ್ತವಾಗಿದ್ದರೆ ಪಕ್ಷಿಗಳನ್ನು ನೋಡಲು ಸುಗಮವಾಗುತ್ತದೆ. ಈ ಹಕ್ಕಿಗಳ ರಕ್ಷಣೆಗೆ ಮತ್ತು ಕೆರೆಯನ್ನು ಅಭಿವೃದ್ಧಿಗೊಳಿಸಿದರೆ ಉತ್ತರ ಕರ್ನಾಟಕದ ಜನರಿಗೆ ರಂಗನತಿಟ್ಟು ಪಕ್ಷಿಧಾಮ ಬಿಟ್ಟರೆ ಕರ್ನಾಟಕದಲ್ಲಿ ಮಾಗಡಿ ಪಕ್ಷಿಧಾಮವು ಒಂದು ಸುಪ್ರಸಿದ್ಧ ಪಕ್ಷಿಧಾಮವಾಗಿ ಮಾರ್ಪಡಿಸಬಹುದು.

ಸುಮಾರು ಐದು ತಿಂಗಳು ಕಾಲ ಇಲ್ಲೇ ಬೇರೆ ಬೇರೆ ದೇಶಗಳಿಂದ ಸುಮಾರು ೧೫ ಜಾತಿಯ ಸಾವಿರಾರು ಪಕ್ಷಿಗಳು ಬಂದು ನೆಲೆಸುತ್ತವೆ. ಇದನ್ನು ನೋಡಲು ಜನ ಬರುತ್ತಾರೆ. ರಂಗನತಿಟ್ಟು ಪಕ್ಷಿಧಾಮದ ನಂತರ ಇದು ರಾಜ್ಯದಲ್ಲಿ ೨ನೇ ಸ್ಥಾನದಲ್ಲಿದೆ. ಇನ್ನುಳಿದ ಹೆಬ್ಬಾಳ, ಇಟಗಿ, ಸೂರಣಗಿ, ಕಡಕೋಳ ಮುಂತಾದ ಅನೇಕ ಗ್ರಾಮಗಳು ಒಕ್ಕಲುತನ, ಕೈಗಾರಿಕೆ ಹೆಸರುವಾಸಿಯಾಗಿವೆ.

**ಸೋಮನಕಟ್ಟಿ ಕೆರೆ :**

| | |
|---|---|
| ಗ್ರಾಮ–ಸೋಮನಕಟ್ಟಿ | ಅಚ್ಚುಕಟ್ಟು ಪ್ರದೇಶ–೩೦.೯೯(ಹೆ) |
| ಜಲಾವೃತ ಪ್ರದೇಶ–೧೦.೩೪(ಹೆ) | ಕೆರೆಯ ಸಾಮರ್ಥ್ಯ– ೧೦.೮೮(mcft) |
| ಏರಿಯ ಉದ್ದ– ೭೫೪ ಮೀ. | ಏರಿಯ ಎತ್ತರ– ೧೦.೦೦ಮೀ. |
| ಏರಿಯ ಮೇಲ್ಭಾಗದ ಅಗಲ–೨.೦೦ ಮೀ. | |

ಸೋಮನಕಟ್ಟಿ ಗದಗ ಜಿಲ್ಲೆಯ ರೋಣ ತಾಲೂಕಿನಲ್ಲಿದೆ. ರೋಣದಿಂದ ಪಶ್ಚಿಮಕ್ಕೆ ೧೫ ಕಿ.ಮೀ ಗದಗದಿಂದ ಉತ್ತರಕ್ಕೆ ೩೮ ಕಿ.ಮೀ. ಅಂತರದಲ್ಲಿದೆ. ಈ ಕೆರೆಯು ಗ್ರಾಮದಲ್ಲಿ ಉತ್ತರ ದಿಕ್ಕಿಗೆ ಕಂಡು ಬರುತ್ತದೆ. ಇದು ಮಲಪ್ರಭಾ ನದಿಯ ಆಶ್ರಯ ಕೆರೆಯಾಗಿದ್ದು ಈ ನೀರನ್ನು ಕುಡಿಯುವುದಕ್ಕೆ ಮತ್ತು ಇನ್ನಿತರ ಕೆಲಸಕಾರ್ಯಗಳಿಗೆ ಉಪಯೋಗಿಸುತ್ತಾರೆ. ಗದಗ ಜಿಲ್ಲೆಯಲ್ಲಿ ಕುಡಿಯುವ ನೀರಿನ ಕೆರೆಗಳಲ್ಲಿ ಅತ್ಯಂತ ದೊಡ್ಡದಾದ ಕೆರೆ ಎಂದರೆ ಸೋಮನಕಟ್ಟಿ ಕೆರೆ.

ಕೆರೆಯ ಆಕಾರ ಇಂಗ್ಲೀಷ್‌ನ ಝಡ್ ಆಕಾರದಲ್ಲಿ ಕಂಡುಬರುತ್ತದೆ. ಇದು ಸರಣಿ ಕೆರೆಯಾಗಿದ್ದು, ಒಟ್ಟಾಗಿ ೫ ಕೆರೆಗಳಿಂದ ಕೂಡಿದೆ. ಇದು ಸುಮಾರು ೧೫ ರಿಂದ ೨೫ ಎಕರೆ ವಿಸ್ತೀರ್ಣತೆಯನ್ನು ಒಳಗೊಂಡಿದೆ. ಇದರ ಒಂದು ವಿಶೇಷ ತಾಂತ್ರಿಕತೆ ಎಂದರೆ ಮುಖ್ಯವಾದ ಕುಡಿಯುವ ನೀರಿನ ಕೆರೆಗೆ ನಾಲ್ಕು ಕೆರೆಯ ನೀರು ತುಂಬಿದ ಬಳಿಕ ಈ ಕೆರೆ ನೀರು ಬಂದು ಸೇರುತ್ತದೆ. ಈ ಕೆರೆಯ ದಂಡೆಯಲ್ಲಿ ಪ್ರಾಚೀನ ಅವಶೇಷಗಳಾದ ಈಶ್ವರ, ನಂದಿ, ಭರಮದೇವರು ಮತ್ತು ಇಟಗಿ ಭೀಮಾಂಬಿಕೆ, ಪಾಂಡುರಂಗ ದೇವಾಲಯಗಳು ಪ್ರಮುಖವಾಗಿ ಕಂಡುಬರುತ್ತವೆ. ಕೆರೆಯು ಕೂಡ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಏರಿಯ ಒಳಭಾಗವು ದಪ್ಪ ದಪ್ಪ ಕಲ್ಲುಗಳಿಂದ ಮತ್ತು ಹೊರಭಾಗವು ಮಣ್ಣಿನಿಂದ ಕೂಡಿರುತ್ತದೆ.

**ಗುಜಮಾಗಡಿ ಕೆರೆ :**

ಗ್ರಾಮ-ಗುಜಮಾಗಡಿ

ಅಚ್ಚುಕಟ್ಟು ಪ್ರದೇಶ-೩೦.೯೯(ಹೆ)

ಜಲಾವೃತ ಪ್ರದೇಶ-೧೦.೩೪(ಹೆ)

ಕೆರೆಯಸಾಮರ್ಥ್ಯ- ೧೦.೮೮(mcft)

ಏರಿಯ ಉದ್ದ- ೬೫೪ ಮೀ.

ಏರಿಯ ಎತ್ತರ- ೧೦.೦೦ಮೀ.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಗುಜಮಾಗಡಿ ಗದಗ ಜಿಲ್ಲೆಯ ರೋಣ ತಾಲೂಕಿನ ಒಂದು ಗ್ರಾಮ. ರೋಣದಿಂದ ದಕ್ಷಿಣಕ್ಕೆ ೧೭ ಕಿ.ಮೀ ಗದಗದಿಂದ ಉತ್ತರಕ್ಕೆ ೨೩ ಕಿ.ಮೀ. ಅಂತರದಲ್ಲಿದೆ. ಗ್ರಾಮದಿಂದ ಉತ್ತರಕ್ಕಿದ್ದು, ಮಳೆಯಾಶ್ರಿತ ಕೆರೆಯಾಗಿದೆ. ಈ ಕೆರೆಯ ನೀರನ್ನು ಕುಡಿಯುವುದಕ್ಕೆ ಮತ್ತು ಇನ್ನಿತರ ಕೆಲಸ ಕಾರ್ಯಗಳಿಗೆ ಬಳಸುತ್ತಾರೆ. ಇದು ಕೂಡ ಸರಣಿ ಕೆರೆಯಾಗಿದೆ. ಈ ಕೆರೆಯ ನೀರನ್ನು ಸುತ್ತಮುತ್ತಲಿನ ಗ್ರಾಮಸ್ಥರು ಉಪಯೋಗಿಸುತ್ತಾರೆ. ಕೆರೆಗೆ ತಂತಿಬೇಲಿಯನ್ನು ಅಳವಡಿಸಿ ರಕ್ಷಣೆ ಮಾಡಿರುತ್ತಾರೆ. ಈ ಕೆರೆಯನ್ನು ಕಾಯುವುದಕ್ಕೆ ನೀರುಗಂಟಿಯನ್ನು ನೇಮಕ ಮಾಡಿದ್ದು ಇವರಿಗೆ ತಿಂಗಳಿಗೆ ಹಣದ ರೂಪದಲ್ಲಿ ವೇತನವನ್ನು ನೀಡುತ್ತಾರೆ. ಈ ಕೆರೆ ಚೌಕಾಕಾರವಾಗಿದ್ದು ಎರಡು ಕೆರೆಗಳಿಂದ ಕೂಡಿದೆ. ಒಟ್ಟು ೧೫ ವಿಸ್ತೀರ್ಣತೆಯನ್ನು ಹೊಂದಿದೆ. ಕೆರೆಗೆ ನಾಲ್ಕು ಕಡೆಗೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು ಒಳಭಾಗ ದಪ್ಪ ಕಲ್ಲುಗಳನ್ನು ಜೋಡಿಸಲಾಗಿದ್ದು ಹೊರಭಾಗ

ಮಣ್ಣಿನಿಂದ ಕೂಡಿರುತ್ತದೆ. ಏರಿಯ ಎತ್ತರ ೧೨ ಅಡಿ ಮೇಲ್ಭಾಗದ ಅಗಲ ೫ ಅಡಿ ಆಗಿದೆ. ಈ ಕೆರೆಗೆ ಪೂರ್ವ ದಿಕ್ಕಿನಲ್ಲಿ ಕೋಡಿಯನ್ನು ಅಳವಡಿಸಿದ್ದು ಇದರ ಮೂಲಕ ನೀರು ಒಳಗಡೆ ಪ್ರವೇಶಿಸುತ್ತದೆ. ಇದು ಸುಮಾರು ೨ ಅಡಿ ಎತ್ತರ ಉದ್ದ ೪ ಮೀ. ಆಗಿದೆ. ಈ ಕೆರೆಗೆ ಪಶ್ಚಿಮಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಕೋಡಿ ಮತ್ತು ಮೆಟ್ಟಿಲುಗಳನ್ನು ಗ್ರಾನೈಟ್ ಕಲ್ಲುಗಳನ್ನು, ಸಿಮೆಂಟ್, ಗಾರೆಗಳನ್ನು ಬಳಸಿ ನಿರ್ಮಾಣ ಮಾಡಿರುತ್ತಾರೆ.

**ಹಾಲಕೆರೆ ಕೆರೆ :**

ಗ್ರಾಮ-ಹಾಲಕೆರೆ

ಅಚ್ಚುಕಟ್ಟು ಪ್ರದೇಶ-೩೦.೯(ಹೆ)

ಜಲಾವೃತ ಪ್ರದೇಶ-೧೦.೩೪(ಹೆ)

ಕೆರೆಯ ಸಾಮರ್ಥ್ಯ- ೧೦.೮೮(mcft)

ಏರಿಯ ಉದ್ದ- ೬೫೪ ಮೀ.

ಏರಿಯ ಎತ್ತರ- ೧೦.೦೦ಮೀ.

ಏರಿಯ ಮೇಲ್ಭಾಗದ ಅಗಲ-೨.೦೦ ಮೀ.

ಗದಗ ಜಿಲ್ಲೆಯ ರೋಣ ತಾಲೂಕಿನ ಒಂದು ಐತಿಹಾಸಿಕ ಹಾಲಕೆರೆ ಗ್ರಾಮ. ರೋಣದಿಂದ ದಕ್ಷಿಣಕ್ಕೆ ೨೮ ಕಿ.ಮೀ ಗದಗದಿಂದ ಪೂರ್ವಕ್ಕೆ ೩೨ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ಅನ್ನದಾನೇಶ್ವರ ಸಂಸ್ಥಾನ ಮಠವು ಬೃಹದಾಕಾರವಾಗಿ ಬೆಳೆದು ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ ಕಾರ್ಯಗಳು ಸಾಕಷ್ಟು ಅಭಿವೃದ್ಧಿ ಪಥದಲ್ಲಿ ಸಾಗುತ್ತಿವೆ. ಈ ಮಠದ ಮುಂದೆ ಬೃಹದಾಕಾರವಾದ ಹಾಲಕೆರೆ ಕಂಡುಬರುತ್ತದೆ.

ಈ ಕೆರೆ ಆಯತಾಕಾರವಾಗಿದ್ದು, ಒಟ್ಟು ೧೫ ಎಕರೆ ವಿಸ್ತೀರ್ಣತೆಯನ್ನು ಹೊಂದಿದೆ. ಕೆರೆಗೆ ನಾಲ್ಕು ಕಡೆಗೆ ಮಣ್ಣಿನ ಏರಿಯನ್ನು ಒಳಗೊಂಡಿದ್ದು, ಒಳಭಾಗ ದಪ್ಪ ಕಲ್ಲುಗಳನ್ನು ಜೋಡಿಸಲಾಗಿದ್ದು ಹೊರಭಾಗ ಮಣ್ಣಿನಿಂದ ಕೂಡಿರುತ್ತದೆ. ಏರಿಯ ಎತ್ತರ ೧೨ ಅಡಿ ಮೇಲ್ಭಾಗದ ಅಗಲ ೫ ಅಡಿ ಆಗಿದೆ. ಈ ಕೆರೆಗೆ ಪೂರ್ವ ದಿಕ್ಕಿನಲ್ಲಿ ಕೋಡಿಯನ್ನು ಅಳವಡಿಸಿದ್ದು ಇದರ ಮೂಲಕ ನೀರು ಒಳಗಡೆ ಪ್ರವೇಶಿಸುತ್ತದೆ. ಇದು ಸುಮಾರು ೨ ಅಡಿ ಎತ್ತರ ಉದ್ದ ೬ ಅಡಿ ಆಗಿದೆ. ಈ ಕೆರೆಗೆ ಪಶ್ಚಿಮಾಭಿಮುಖವಾಗಿ ಮೆಟ್ಟಿಲುಗಳ ಮೂಲಕ ಕೆರೆಯ ಆಳಕ್ಕೆ ತಲುಪಬಹುದು. ಕೋಡಿ ಮತ್ತು ಮೆಟ್ಟಿಲುಗಳನ್ನು ಗ್ರಾನೈಟ್ ಕಲ್ಲುಗಳನ್ನು, ಸಿಮೆಂಟ್, ಗಾರೆಗಳನ್ನು ಬಳಸಿ ನಿರ್ಮಾಣ ಮಾಡಿರುತ್ತಾರೆ.

**ಕೆರೆಗಳ ಇಂದಿನ ಸ್ಥಿತಿ-ಗತಿಗಳು;**

ಭಾರತದ ನೀರಿನ ಮೂಲಗಳು ಕ್ರಮೇಣ ಬತ್ತಿ ಹೋಗುತ್ತಿವೆ. ೩೦ ವರ್ಷದ ನೀರಿನ ಮೂಲಗಳು ಈಗ ಇಲ್ಲ. ಅಪಾರವಾಗಿ ಅಂತರ್ಜಲದ ಶೋಷಣೆ ನಡೆಯುತ್ತಿದೆ. ಲಾಭದತ್ತ ಹೆಜ್ಜೆ ಹಾಕಿರುವ ಕೃಷಿ ಪೈಪೋಟಿ ಅಂತರ್ಜಲದ ಶೋಷಣೆಗೆ ಹೆಚ್ಚು ಕಾರಣವಾಗಿದೆ. ಕರ್ನಾಟಕದಲ್ಲಿ ನೀರು ಸಮೃದ್ಧವಾಗಿ ಇದೆ. ಹಳ್ಳ, ಕೊಳ್ಳ, ನದಿ, ಸಮುದ್ರ ಎಲ್ಲಾ ರೀತಿಯಿಂದಲೂ ನೀರು

ಆವೃತವಾಗಿದೆ. ಜೀವ ವೈವಿಧ್ಯತೆಯ ಕೊಂಡಿಗಳಾಗಿದ್ದ ನಮ್ಮ ಕೆರೆಗಳನ್ನು ನಮ್ಮ ರಾಜಕಾರಣ ನುಂಗಿ ಹಾಕಿದೆ. ನೀರುಳ್ಳ ಕೆರೆಗಿಂತ ನೀರು ಬತ್ತಿದ ಕೆರೆ ಅಂಗಳದ ಭೂಮಿಗೆ ಹೆಚ್ಚು ಬೆಲೆ ಇರುವುದರಿಂದ ಕೆರೆಗಳನ್ನು ಬತ್ತಿಸುವ ಕಾರ್ಯಕ್ರಮ ಭರದಿಂದ ಸಾಗಿದೆ. ಭೂದಾಹ ಮನುಷ್ಯನನ್ನು ಕ್ರೂರಿಯನ್ನಾಗಿಸಿ ಒಂದು ಕಾಲಕ್ಕೆ ಇಲ್ಲಿ ಕೆರೆ ಇತ್ತು ಆ ನೀರನ್ನೇ ಕುಡಿಯುತ್ತಿದ್ದೆವು ಎಂಬುದನ್ನು ನಂಬಲಾರದ ಸ್ಥಿತಿಗೆ ತಂದಿದ್ದೇವೆ. ಅಮೇರಿಕಾ ಇರಾಕ್ ದಾಳಿಯಲ್ಲಿ ಸದ್ದಾಂ ಹುಸೇನ್ ಪ್ರತಿಮೆ ಕೆಡವಿಹಾಕುವ ಸೂಚನೆಯಲ್ಲಿ, ಪ್ರಾಚೀನ ಮೆಸಪೋಟಿಮೆಯ ಸಂಸ್ಕೃತಿಯ ಪ್ರತೀಕವಾಗಿದ್ದ ಮ್ಯೂಜಿಯಂ ಒಂದನ್ನು ಒಡೆದು ಹಾಕಿತು. ಸ್ಮೃತಿಯ ನಾಶದಲ್ಲಿ ಅಮೇರಿಕಾ ಎತ್ತಿದ ಕೈ. ಹಾಗೆಯೇ ನಾವು ಜಲಮೂಲಗಳನ್ನು ನಾಶ ಮಾಡಿಕೊಂಡು ನಮ್ಮದೇ ಆದ ಸಂಸ್ಕೃತಿ ನೆಲೆಗಳನ್ನು ನಾವೇ ನಾಶ ಮಾಡಿಕೊಳ್ಳುತ್ತಿದ್ದೇವೆ. ನಮ್ಮ ಇಂತಹ ಘೋರವಾದ ದಬ್ಬಾಳಿಕೆಯಿಂದ ನಮ್ಮನ್ನು ಕಾಪಾಡುವವರು ಯಾರಿದ್ದಾರೆ ? ಸಾವಿಗಿಂತ ಸಾವು ಬರಬಹುದೆಂಬ ಭಯ ಘೋರವಾದದ್ದು. ಇಂಥ ಭಯವನ್ನೇ ಬದುಕುವ ಸ್ಥಿತಿ ಯಾವಾಗಲೂ ಭೀಕರವಾಗಿರುವವು. ಕರ್ನಾಟಕದ ಜಲ ಮೂಲಗಳನ್ನು ದಿನದಿಂದ ದಿನಕ್ಕೆ ಅಧೋಗತಿಗೆ ತಳ್ಳಿಕೊಳ್ಳುತ್ತಿದ್ದೇವೆ.

ಗದಗ ಜಿಲ್ಲೆಯಲ್ಲಿರುವ ಹೆಚ್ಚು ಕೆರೆಗಳು ಕಲ್ಯಾಣ ಚಾಲುಕ್ಯರ ಕಾಲದ ಪ್ರಸಿದ್ಧ ಅರಸರಾದ ೧ನೇ ಸೋಮೇಶ್ವರ, ೨ ನೆಯ ಸೋಮೇಶ್ವರ, ೬ ನೆಯ ವಿಕ್ರಮಾದ್ಯಿತನ ಕಾಲಾವಧಿಯಲ್ಲಿ ರಚನೆಗೊಂಡವುಗಳಾಗಿವೆ. ಕೆರೆಗಳು ರಚನೆಯಾಗುವ ಅವಧಿಯಲ್ಲಿ ಗದಗ ಜಿಲ್ಲೆಯ ಜನಸಂಖ್ಯೆಯು ಕಡಿಮೆಯಿತ್ತು. ಹಾಗೂ ಮಳೆಯ ಪ್ರಮಾಣ ಹೆಚ್ಚಿತ್ತು. ಆದರೆ ಇವತ್ತಿನ ದಿನದಲ್ಲಿ ಮಳೆಯ ಪ್ರಮಾಣ ಕಡಿಮೆಯಿದ್ದು, ಜಿಲ್ಲೆಯ ಜನಸಂಖ್ಯೆ ಹೆಚ್ಚಾಗಿದೆ. ಅಂದು ಜಿಲ್ಲೆಯ ಜನರಿಗೆ ನೀರಿನ ಸೌಕರ್ಯ ಒದಗಿಸಲು ನಿರ್ಮಿಸಲಾದ ಕೆರೆಗಳನ್ನು ಇಂದು ನೆಲಸಮ ಮಾಡಿಕೊಂಡು ಬೃಹತ್ ನಿವೇಶನಗಳನ್ನು ನಿರ್ಮಿಸುವ ಯೋಜನೆಗಳು ಜನರಲ್ಲಿ ತಲೆದೋರಿದೆ. ಅಂದಿನವರು ನಿರ್ಮಿಸಿಕೊಟ್ಟ ಕೆರೆಗಳನ್ನು ಇಂದಿನವರು ಸಂರಕ್ಷಿಸಿಕೊಂಡು ಹೋಗುತ್ತಿರುವರೇ, ಹೋಗುತ್ತಾರೆಯೇ ಎಂಬುದು ಸಂಶಯದ ಮಾತು. ನೀರಿನ ಅಬಾವಿರುವ ಇಂದಿನ ದಿನಮಾನದಲ್ಲಿ ಹಿಂದಿನವರು ನಿರ್ಮಿಸಿದ ಕೆರೆಗಳು ಇಂದಿನವರೆಗೆ ಜೀವನಾಡಿಗಳಾಗಿವೆ.

ಜಲ ಸರಂಕ್ಷಣೆಯ ಮಹತ್ವವನ್ನು ಹಿಂದಿನವರು ಚೆನ್ನಾಗಿ ಅರಿತುಕೊಂಡಿದ್ದರಿಂದಲೇ ಅಂದು ಕೆರೆಗಳನ್ನು ನಿರ್ಮಿಸಿ ಇಂದಿನ ಸಮುದಾಯಕ್ಕೆ ಮಹದುಪಕಾರ ಮಾಡಿದ್ದಾರೆ. ಇಂದಿನ ಸರಕಾರವು ಕೈಕೊಂಡ ಜಲಸರಂಕ್ಷಣಾ ಅಂದೋಲನವನ್ನು ಹುಟ್ಟು ಹಾಕಿದವರೇ ಹಿಂದಿನ ಜನರು. ಅಂದು ಅವರು ನಿರ್ಮಿಸಿದ ಕೆರೆಗಳನ್ನು ಹಾಳುಗೆಡುಹದೆ ಸುಸ್ಥಿತಿಯಲ್ಲಿಟ್ಟುಕೊಂಡು ಭೂಮಿಯ ಅಂತರ ಜಲಮಟ್ಟವನ್ನು ಕಾಯ್ದುಕೊಳ್ಳಬೇಕಾಗಿರುವುದು ಪ್ರತಿಯೋಬ್ಬರ ಆದ್ಯ ಕರ್ತವ್ಯ. ಆದರೆ ಇಂದಿನ ಜನರು ಆಧುನಿಕ ಬೆಳವಣಿಗೆಗೆ ಮಾರುಹೋಗಿ ಕೆರೆಗಳನ್ನು ನಿರ್ಲಕ್ಷಿಸುತ್ತಿರುವುದನ್ನು ಕಾಣಬಹುದು.

ಇಂದರಿಂದ ಮುಂದಿನ ದಿನಮಾನಗಳಲ್ಲಿ ಮುಂದಿನ ಪೀಳಿಗೆಯವರಿಗೆ ಅಂತರ್ಜಲ ಕೊರತೆಯುಂಟಾಗಿ ನೀರಿನ ಅಭಾವ ಉಂಟಾಗುತ್ತದೆ.

ಗದಗ ನಗರದ ದಕ್ಷಿಣ ಭಾಗಕ್ಕೆ ಇರುವ ಭೀಷ್ಮಕೆರೆಯು ಅಂದಿನ ಇಡೀ ಗದಗ ನಗರಕ್ಕೆ ಕುಡಿಯುವ ನೀರನ್ನು ಒದಗಿಸುತ್ತಿತ್ತು. ಹಾಗೂ ಈ ಕೆರೆಯು ತುಂಬಿ ನಗರದ ಪೂರ್ವ ಭಾಗವೆಲ್ಲವೂ ಮುಳಗಿ ಹೋಗುವಂತಿದ್ದ ಈ ಕೆರೆಯು ಇಂದು ಜೀವವಿಲ್ಲದ್ದಂತೆ, ಮಳೆ ಬಂದಾಗ ಮಾತ್ರ ಸ್ವಲ್ಪ ಪ್ರಮಾಣದಲ್ಲಿ ನೀರನ್ನು ಸಂಗ್ರಹಿಸಿಕೊಂಡಿರುತ್ತದೆ. ಕೆರೆಯ ಏರಿಯ ಅಲ್ಲಲ್ಲಿಯ ಕೆಲವು ಕಲ್ಲುಗಳು ಬಿದ್ದು ಹೋಗಿವೆ. ಅಲ್ಲದೆ ಅಲ್ಲಿ ಮರಗಳನ್ನು ಬೆಳೆಸುವಲ್ಲಿಯೋ ಅರಣ್ಯ ಇಲಾಖೆಯು ನಿಷ್ಕಾಳಜಿಯನ್ನು ತೊರಿದೆ ಎನ್ನಬಹುದು. ಅರಣ್ಯ ಇಲಾಖೆಗೆ ಸಂಬಂಧಪಟ್ಟ ಅಧಿಕಾರಿಗಳು ಇದರತ್ತ ಗಮನಹರಿಸಿ ಇನ್ನಷ್ಟು ಮರಗಳನ್ನು ನೆಟ್ಟು ಸುಂದರ ಉದ್ಯಾನವನ್ನಾಗಿ ಮಾಡಿ ಜಿಲ್ಲೆಯ ಜನರಿಗೆ ವಿಶ್ರಾಂತಿ ತೆಗೆದುಕೊಳ್ಳಲು ಸ್ಥಳವನ್ನಾಗಿ ಮಾಡಬೇಕು. ಈಗಲೂ ಕೂಡ ಜನರು ಮುಂಜಾನೆ ಹಾಗೂ ಸಾಯಂಕಾಲ ಸಮಯದಲ್ಲಿ ಜನರು ಆ ಕೆರೆಯ ದಂಡೆಯಗುಂಟ ವಾಯುವಿಹಾರಕ್ಕೆ ಬರುತ್ತಾರೆ. ಕೆರೆಯ ಮಧ್ಯದಲ್ಲಿ ಬೃಹತ್ ಆದ ೧೦೮ ಅಡಿ ಎತ್ತರದ ಬಸವೇಶ್ವರ ಶಿಲಾಮೂರ್ತಿಯನ್ನು ಸ್ಥಾಪಿಸಲಿದ್ದಾರೆ. ಕೆರೆಯ ಪ್ರದೇಶವನ್ನು ಒತ್ತವರಿ ಮಾಡಿಕೊಂಡು ಕೆರೆಯ ಪೂರ್ವಭಾಗದಲ್ಲಿ ದೊಡ್ಡ ದೊಡ್ಡ ಕಟ್ಟಡಗಳು ತಲೆಯೆತ್ತಿವೆ. ಇದರಿಂದ ಇಂದು ನಗರದ ತುಂಬಲ್ಲಾ ನೀರಿನ ಬೇಡಿಕೆ ಹೆಚ್ಚಾಗಿದೆ. ಅಷ್ಟಲ್ಲದೆ ಇವರಿಗೆ ತುಂಗಭದ್ರ ನದಿಯಿಂದ ಇಂದು ಕುಡಿಯಲು ನೀರನ್ನು ೮ ರಿಂದ ೧೦ ದಿನಗಳಿಗೊಮ್ಮೆ ಸರಬರಾಜು ಮಾಡಲಾಗುತ್ತಿದೆ.

**ಟಿಪ್ಪಣಿಗಳು:**

೦೧. **SII Vol, IV, No.267**

೦೨. ಕೋಲ್ಕಾರ್ ಶರಣಬಸಪ್ಪ., ೨೦೧೧, **ಕನಕಗಿರಿ ನಾಯಕರ ನೀರಾವರಿ ವ್ಯವಸ್ಥೆ**, ಪು. ೧೪೩.

೦೩. ಸ್ವಾಮಿ. ಲ.ನ., ೨೦೦೯, **ಕೆರೆ ಕಟ್ಟೆಗಳು**, ಸಿ. ಮಹದೇವ (ಸಂ), ತೊಣ್ಣೂರು, ಪು. ೧೨೯.

೦೪. ಅದೇ.

೦೫. ಅದೇ, ಪು. ೧೩೦.

೦೬. CTM Kotrayya., 1995, **irrigation system under vijayanagar empire**, page no-2

೦೭. ಬೆಳಗೆರೆ ಕೃಷ್ಣಮೂರ್ತಿ., ೨೦೧೧, **ಬೇಸಾಯದ ಮಾಡು**, ಪು. ೩೪.

೦೮. ಅದೇ, ಪು. ೩೫-೩೬.

೦೯. ಅದೇ.

೧೦. ಅದೇ, ಪು. ೩೨-೩೩

೧೧. ಶೈಲಾನಾಗರಾಜ ಬಿ. ಸಿ., ೨೦೧೨, **ಪುರಾಣಗಳಲ್ಲಿ ನೀರು,** ಪು. ೪೮.

೧೨. ದಳವಾಯಿ ರಾಜಪ್ಪ., ೨೦೧೨, **ನೀರು ನೀರೆಂದರೆ,** ಪು. ೧೫

೧೩. ಅದೇ, ಪು. ೧೪.

೧೪. ಅದೇ, ಪು. ೧೯.

೧೫. ಅದೇ.

೧೬. ಪೂಜಾರಹಳ್ಳಿ ವಿರೂಪಾಕ್ಷಿ., **ಜಲಸಂಬಂಧಿ ಚಳುವಳಿಗಳು,** ಪು. ೭.

೧೭. ಅದೇ.

೧೮. ಕೋಲ್ಕಾರ್ ಶರಣಬಸಪ್ಪ., ೨೦೧೧, **ಪೂರ್ವೋಕ್ತ,** ಪು. ೯.

೧೯. ಅದೇ.

೨೦. ಪೂಜಾರಹಳ್ಳಿ ವಿರೂಪಾಕ್ಷಿ., **ಪೂರ್ವೋಕ್ತ,** ಪು. ೧೦.

೨೧. ಚಿದಾನಂದಮೂರ್ತಿ ಎಂ., ೨೦೦೨, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು. ೪೦೭.

೨೨. ವಾಸುದೇವನ್ ಸಿ.ಎಸ್., ೨೦೦೧, **ಹಂಪಿ ಪರಿಸರದ ಕೆರೆಗಳು,** ಪು. ೮.

೨೩. ಅದೇ.

೨೪. ಅದೇ.

೨೫. ಅದೇ.

೨೬. ಧ್ರುವನಾರಾಯಣ ಎಂ (ಕನ್ನಡ ಅನುವಾದ)., ಸಿ.ಟಿ.ಎಂ. ಕೊಟ್ರಯ್ಯ (ಆಂಗ್ಲ ಮೂಲ), ೨೦೦೧, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಪು. ೪.

೨೭. ಅದೇ.

೨೮. ಭಟ್ಟ ಕಪನೀತ., ೧೯೯೬, **ನೀರಾವರಿ** ಪು. ೨ ,೩.

೨೯. ಅದೇ. ಪು. ೮.

೩೦. ಅದೇ.

೩೧. ಕುಂಚೂರ ಬಸವರಾಜ., ೨೦೧೦, **ನಮ್ಮೂರ ಕೆರೆಗಳು,** ಪು. ೪೨.

೩೨. ಅದೇ. ಪು. ೪೩.

೩೩. ಅದೇ.

೩೪. ಅದೇ. ಪು. ೪೪.

೩೫. ಕಸ್ತೂರಿ ನೀಲತ್ತಹಳ್ಳಿ., (ಅನು) ದೀಕ್ಷಿತ್ ಜಿ.ಎಸ್., ಕುಪ್ಪುಸ್ವಾಮಿ. ಜಿ. ಆರ್., ಮೋಹನ್ ಎಸ್.ಕೆ., (ಮೂಲ), ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ,** ಪು. ೧.

೩೬. ಧ್ರುವನಾರಾಯಣ ಎಂ (ಕನ್ನಡ ಅನುವಾದ)., ಸಿ.ಟಿ.ಎಂ. ಕೊಟ್ರಯ್ಯ (ಆಂಗ್ಲ ಮೂಲ), ೨೦೦೧, **ಪೂರ್ವೋಕ್ತ**, ಪು. ೧.

೩೭. ಅದೇ.

೩೮. ಲಲಿತಾಂಬ ಎನ್.ಆರ್., ೨೦೧೧, **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ**, ಪು. ೩೨.

೩೯. ಅದೇ.

೪೦. ಚವಡಿ ಬಸವರಾಜ., ೨೦೦೭, **ಕಲ್ಯಾಣ ಚಾಲುಕ್ಯರ ಕಾಲದ ನೀರಾವರಿ ವ್ಯವಸ್ಥೆ**, ಪು. ೩೪.

೪೧. ಅದೇ, ಪು. ೩೫.

೪೨. ಪತ್ತಾರ ಶೀಲಕಾಂತ., ೨೦೦೯, **ಬಾದಾಮಿ ಚಾಲುಕ್ಯರ ಕಾಲದ ಆರ್ಥಿಕ ವ್ಯವಸ್ಥೆ**, ಬಾದಾಮಿ ಚಾಲುಕ್ಯ ಸಂಪುಟ, ಮುರಿಗೆಪ್ಪ. ಎ.,(ಪ್ರಸಂ), ಪು. ೨೪೭.

೪೩. ಚವಡಿ ಬಸವರಾಜ., ೨೦೦೭, **ಕಲ್ಯಾಣ ಚಾಲುಕ್ಯರ ಕಾಲದ ನೀರಾವರಿ ವ್ಯವಸ್ಥೆ**, ಪು. ೩೫.

೪೪. ಅದೇ, ಪು. ೩೬.

೪೫. SII Vol, XV, No. 59, ೯ನೇ ಶತಮಾನ

೪೬. ಗುಬ್ಬಣ್ಣವರ ಸೇವಾನಂದ., ೧೯೯೫, **'ನರಗುಂದ ನವಲಗುಂದ ರೈತ ಹೋರಾಟ'**, ಪು. ೨೩.

೪೭. SII Vol, XVIII, No.25 P No. 448, KI-Vol-II P No. 12, IA-VII, P No. 222

೪೮. SII Vol, XVIII, No.25 P No. 448

೪೯. ಕಾಮತ್ ಸೂರ್ಯನಾಥ., ೧೯೮೪, **ಧಾರವಾಡ ಜಿಲ್ಲಾ ಗೆಜಟೀಯರ್**, ಪು. ೯೩೬

೫೦. ಅದೇ.

೫೧. SII Vol, XI, P-I No.15 , ಕ್ರಿ.ಶ. 795.

೫೨. ಕಾಮತ್ ಸೂರ್ಯನಾಥ., ೧೯೮೪, **ಪೂರ್ವೋಕ್ತ**, ಪು. ೮೯೨

೫೩. ಅದೇ

೫೪. S.II, P-I, Vol,XI,No-101

೫೫. S.II, P-II, Vol, XI,No-136

೫೬. S.II, Vol- XI, , P-I, No-112 , ಕ್ರಿ.ಶ. 1072

೫೭. S.II, Vol, XI, P-II, No-122, P No. 110, ಕ್ರಿ.ಶ. 1072

೫೮. EI-XX, No. VI, ಕ್ರಿ.ಶ 1153-54

೫೯. ಕಾಮತ್ ಸೂರ್ಯನಾಥ., ೧೯೮೪, **ಪೂರ್ವೋಕ್ತ**, ಪು. ೯೧೮

೬೦. SII Vol-XV, No.125.

೬೧. ಪವಾರ್ ತುಕಾರಾಮ., ೨೦೦೮, **ಲಕ್ಕುಂಡಿ ಶಿಲ್ಪ ಕಲಾ ಸಂಸ್ಕೃತಿ**, ಪು. ೮೧, KI-II, No–೧೦.

೬೨. ಅದೇ, ಪು. ೮೨.

೬೩. ನರೇಗಲ್ಲ ಎಂ.ಎಸ್., **ಉತ್ತರ ಗದಗ ಜಿಲ್ಲೆಯ ಶಾಸನಗಳು**, ಪು. ೭೯

೬೪. SII Vol-XVIII, No.104, ಕ್ರಿ.ಶ. ೧೧೧೬

೬೫. SII Vol-XVIII, No.104, ಕ್ರಿ.ಶ. ೯೧೮

೬೬. SII Vol-IX, P-I, No.69, ಕ್ರಿ.ಶ. ೧೧೩೩

೬೭. ಅದೇ.

೬೮. ಕಾಮತ್ ಸೂರ್ಯನಾಥ., ೧೯೮೪, **ಪೂರ್ವೋಕ್ತ**, ಪು. ೧೦೦೧.

೬೯. SII Vol-XV, No.43, ಕ್ರಿ.ಶ. ೧೧೫೩-೫೪.

೭೦. ಅದೇ.

೭೧. EI-19,Page No. 224, ೧೧೭೯ ಕ್ರಿ.ಶ.

೭೨. SII, Vol-XI, P-II, No.147, ಕ್ರಿ.ಶ. ೧೧೯೯.

೭೩. S.II, Vol,XI P-II, No-127, ಪು. ೧೪೭.

೭೪. S.II, Vol, XI, P-II, No-134, ಪು. ೧೫೬-೧೫೮.

೭೫. ಅದೇ.

೭೬. S.II, Vol, XI, P-II, No-127, ಪು. ೧೪೬-೧೪೯

೭೭ ಗೋಗಿ ಹನಮಾಕ್ಷಿ, ಪಿ.ಕೆ.ರಾಠೋಡ., ೨೦೦೮, **ಡಂಬಳ ಒಂದು ಸಾಂಸ್ಕೃತಿಕ ಅಧ್ಯಯನ**, ಪು. ೯.

೭೮. ಅದೇ.

೭೯. ಅದೇ, ಪು. ೪೩.

೮೦. ಚಂದ್ರಶೇಖರ ವಸ್ತ್ರದ, ಅರ್ಜುನ ಗೊಳಸಂಗಿ, ೨೦೧೦, **ಕೃತಪುರ**, ಪು. ೪೫.

೮೧. ಅದೇ, ಪು. ೪೬

೮೨. ಎಸ್.ಆಯ್.ಆಯ್. ೧೧,-೧, ನಂ-೨೪೯

೮೩. ಗೋಗಿ ಹನಮಾಕ್ಷಿ, ಪಿ.ಕೆ.ರಾಠೋಡ., ೨೦೦೮, **ಪೂರ್ವೋಕ್ತ**, ಪು. ೪೫.

೮೪. ಅದೇ.

೮೫. ಅದೇ.

೮೬. ಗೋಗಿ ಹನಮಾಕ್ಷಿ, ಪಿ.ಕೆ.ರಾಠೋಡ., ೨೦೦೮, **ಪೂರ್ವೋಕ್ತ**, ಪು. ೪೫.

೮೭. SII Vol-XV, No.718

೮೮. KI Vol V, No.12, SII Vol, XVIII, No.89 ಕ್ರಿ.ಶ. ೧೦೮೦.

೮೯. ಗೊಳಸಂಗಿ ಅರ್ಜುನ., ಚಂದ್ರಶೇಖರ ವಸ್ತ್ರದ., **ಪೂರ್ವೋಕ್ತ**, ಪು. ೫೩.

೯೦. SII Vol, XV, No.29, ಕ್ರಿ.ಶ. 1145 ಪು. ೩೨,

೯೧. ಗೊಳಸಂಗಿ ಅರ್ಜುನ, ಚಂದ್ರಶೇಖರ ವಸ್ತ್ರದ., **ಪೂರ್ವೋಕ್ತ** ಪು. ೫೪.

೯೨. SII Vol, XV, No.159, ಗದಗ.

೯೩. ಮಹಾಬಲರಾವ್ ಬಿ., ೧೯೭೭, **ಗದಗ-ಬೆಟಗೇರಿ**, ಪು. ೧೫.

೯೪. SII Vol, XV, P-I, No.79, ಮುಳಗುಂದ, ಕ್ರಿ.ಶ. ೧೦೬೨

೯೫. ಹಾಜವಗೋಳ ಧನವಂತ., **ಮುಳಗುಂದ ನಾಡು ಒಂದು ಅಧ್ಯಯನ**, ಪು. ೧೨

೯೬ ಅದೇ. ಪು. ೧೩.

೯೭ ಅದೇ. ಪು. ೧೬೨

೯೮. ಅದೇ, ಪು. ೧೨೦

೯೯. ಅದೇ, ಪು. ೧೩.

೧೦೦. ಅದೇ, ಪು. ೨೮೩.

೧೦೧. ಅದೇ, ಪು. ೩೧೨.

೧೦೨. ರಾಜೇಂದ್ರಪ್ಪ ಎಸ್.,೨೦೦೦, ಕೌಜಗೇರಿ ಒಂದು ಅಪೂರ್ವ ಸ್ಮಾರಕ ಶಿಲೆ, ಪು. ೫೪-೫೫.

೧೦೩. ಕಾಮತ್ ಸೂರ್ಯನಾಥ., ೧೯೮೮, **ಪೂರ್ವೋಕ್ತ**, ಪು. ೯೪೨.

೧೦೪. SII vol-XV, NO-18, Page-16

೧೦೫. ತಮ್ಮನಗೌಡ್ರ ಸಂಗಮೇಶ್., ೨೦೧೧, **'ಗ್ರಾಮನಾಮ ಸಂಸ್ಕೃತಿ'** ಪು. ೧೫, ೧೬

೧೦೬. ಹಾಜವಗೋಳ ಧನವಂತ., ೨೦೦೮, **ಪೂರ್ವೋಕ್ತ**, ಪು. ೩೮೧.

೧೦೭. SII vol-II, P-I, Page no-198, ೧೧೦೫ AD

೧೦೮. ಹಾಜವಗೋಳ ಧನವಂತ., ೨೦೦೮, **ಪೂರ್ವೋಕ್ತ**, ಪು. ೨೯೩.

೧೦೯. ಅದೇ. ಪು. ೩೯೨.

೧೧೦. ಹಾಜವಗೋಳ ಧನವಂತ., ೨೦೦೮, **ಪೂರ್ವೋಕ್ತ**, ಪು. ೨೬.

೧೧೧. ಅದೇ, ಪು. ೨೫.

೧೧೨. SII, VOL-XV, NO-53, 1153 AD

೧೧೩ SII,Vol-XV, No. 493

೧೧೪. SII, VOL-XV, NO-132, 1178 AD

೧೧೫. SII, vol-XV, NO-59, 9$^{Th}$ cent

೧೧೬. ಕಾಮತ್ ಸೂರ್ಯನಾಥ., ೧೯೮೮, **ಪೂರ್ವೋಕ್ತ**, ಪು. ೯೯೯.

೧೧೭. SII,Vol-XV, No. 263.

೧೧೮. SII, vol -XV- No. 13, ಕ್ರಿ.ಶ. ೧೪೧೪

೧೧೯. ಕಾಮತ್ ಸೂರ್ಯನಾಥ., ೧೯೮೪, **ಪೂರ್ವೋಕ್ತ**, ಪು. ೮೯೪.

೧೨೦. ಅದೇ, ಪು. ೧೦೪೮.

೧೨೧. ಕಾಮತ್ ಸೂರ್ಯನಾಥ., ೧೯೮೪, **ಪೂರ್ವೋಕ್ತ**, ಪು. ೯೪೫.

೧೨೨. ಸಂಗಮೇಶ ತಮ್ಮನಗೌಡ್ರ, **ಪೂರ್ವೋಕ್ತ**, ೨೦೧೧, ಪು. ೨೩.

೧೨೩. ಗೊಳಸಂಗಿ ಅರ್ಜುನ., ಚಂದ್ರಶೇಖರ ವಸ್ತ್ರದ., **ಪೂರ್ವೋಕ್ತ**, ಪು. ೫೫.

೧೨೪. ತಮ್ಮನಗೌಡ್ರ ಸಂಗಮೇಶ್., ೨೦೧೧, **ಪೂರ್ವೋಕ್ತ**, ಪು. ೧೩.

೧೨೫. ಅದೇ.

೧೨೬. ಡೋಣಿ ಮಂಜುನಾಥ., ೨೦೧೨, **ಎಪ್ಪತ್ತಗಿರಿ ನೋಡುವದಕ್ಕಿಂತ ಒಂದು ಕಪ್ಪತ್ತಗಿರಿ ನೋಡು**, ಪು. ೨೨.

೧೨೭. ಹಾಜವಗೋಳ ಧನವಂತ., ೨೦೦೮, **ಪೂರ್ವೋಕ್ತ** ಪು. ೧೯.

೧೨೮. ಸಂಕಿನಮಠ ಶಿವಾನಂದಯ್ಯ., ೨೦೧೨, **ಶ್ರೀ ಹೊಳಲಮ್ಮದೇವಿ ಚರಿತ್ರಾಮೃತ**, ಪು. ೩೫

೧೨೯. ತಮ್ಮನಗೌಡ್ರ ಸಂಗಮೇಶ್., ೨೦೧೧, **ಪೂರ್ವೋಕ್ತ**, ಪು. ೧೩.

೧೩೦. ಅದೇ.

## ಅಧ್ಯಾಯ ನಾಲ್ಕು

## ಬಾವಿಗಳು

೪.೧. ಪ್ರಾಚೀನತೆ

೪.೨. ನಾಮಾವಳಿಗಳು

೪.೩. ರಚನೆ

೪.೪. ಬಾವಿ ನೀರಿನ ಉಪಯೋಗದ ಕ್ರಮಗಳು

೪.೫. ಬಾವಿಗಳ ನಿರ್ಮಾಣದ ಉದ್ದೇಶ ಮತ್ತು ಕಾರ್ಯಗಳು

೪.೬. ವಿವಿಧ ಕಾಲಘಟ್ಟಗಳಲ್ಲಿನ ಶಾಸನೋಕ್ತ ಪುಷ್ಕರಣಿ, ಬಾವಿ, ಹೊಂಡಗಳ ಸ್ವರೂಪ

೪.೭. ಶಾಸನೋಕ್ತವಲ್ಲದ ಪುಷ್ಕರಣಿ, ಬಾವಿ, ಹೊಂಡಗಳ ಸ್ವರೂಪ

೪.೮. ಬಾವಿಗಳ ಇಂದಿನ ಸ್ಥಿತಿ–ಗತಿಗಳು

೪

# ಬಾವಿಗಳು

## ೪.೧. ಪ್ರಾಚೀನತೆ:

ಭೂಮಿಯ ಮೇಲೆ ಮಾನವ ಉದಯಿಸಿದಾಗ ಆರಂಭದಲ್ಲಿ ತನ್ನ ವಸತಿಗಳನ್ನು ಹಳ್ಳ ಮತ್ತು ನದಿಗಳ ಸಮೀಪದಲ್ಲಿ ನಿರ್ಮಿಸಿದನು. ಅವನು ತನ್ನ ಬದುಕಿಗೆ ಅಗತ್ಯವಾಗಿ ಜಲವನ್ನು ನದಿ, ಹಳ್ಳ ಕೊಳ್ಳಗಳ ರೂಪದಲ್ಲಿ ಸುಲಭವಾಗಿ ಪಡೆಯುತ್ತಿದ್ದನು. ಹಲವಾರು ಕಾರಣಗಳಿಂದ ಕಾಲಾಂತರದಲ್ಲಿ ಮಾನವನು ಬಾವಿಗಳ ಮೂಲಕ ನೀರನ್ನು ಪಡೆಯುತ್ತಾ ಬಂದಿದ್ದಾನೆ. ಪ್ರಸ್ತುತ ಗದಗ ಜಿಲ್ಲೆಯಲ್ಲಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು, ವಿಜಯನಗರ ಅರಸರು ಮತ್ತು ಆದಿಲ್‌ಶಾಹಿಗಳ ಕಾಲದ ಬಾವಿಗಳು ವಿಶೇಷವಾಗಿ ಕಂಡುಬರುತ್ತವೆ. ಉಳಿದ ಅರಸು ಮನೆತನಗಳ ಬಾವಿಗಳನ್ನು ಸಮೀಪದ ದೇವಾಲಯಗಳ ವಾಸ್ತುಶೈಲಿಗೆ ಹೋಲಿಸಿ ಕಾಲಮಾನವನ್ನು ಗುರುತಿಸಲಾಗಿದೆ. ಬಾದಾಮಿ ಚಾಲುಕ್ಯರ ಕಾಲದ ಬಾವಿಗಳು ಬಾದಾಮಿ, ಪಟ್ಟದಕಲ್ಲು, ಐಹೊಳೆಗಳಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಪ್ರಸ್ತುತ ಆ ಕಾಲದ ಬಾವಿಗಳು ಮುಳಗುಂದದಲ್ಲಿ ರಚಿತಗೊಂಡಿರಬಹುದು. ಆದರೆ ಅವುಗಳು ನಾಶಹೊಂದಿವೆ. ಇವರು ಮುಖ್ಯವಾಗಿ ಬಾವಿಗಳ ಕಟ್ಟಡಕ್ಕಾಗಿ ಮರಳುಗಲ್ಲು, ಸೈಜುಕಲ್ಲುಗಳನ್ನು ಉಪಯೋಗಿಸುತ್ತಿದ್ದು ಕಂಡುಬರುತ್ತದೆ.[೧] ಕಲ್ಯಾಣ ಚಾಲುಕ್ಯರು ಕ್ರಿಶ. ೯೭೩ರಿಂದ ೧೨ನೆಯ ಶತಮಾನದವರೆಗೆ ಆಳ್ವಿಕೆ ಮಾಡಿ ದೇವಾಲಯಗಳಿಗೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಬಹುಶ: ಇವರ ಕಾಲದಲ್ಲಿ ಪ್ರತಿಯೊಂದು ದೇವಾಲಯಗಳ ಮುಂದೆ ಕೆರೆ ಮತ್ತು ಬಾವಿಗಳು ಇದ್ದೇ ಇರುತ್ತವೆ. ದೇವಾಲಯಗಳ ಕಾರ್ಯಕ್ಕನುಗುಣವಾಗಿ ಬಾವಿಗಳನ್ನು ನಿರ್ಮಿಸಿದ್ದಿರಬಹುದು. ಅಂತಹ ಬಾವಿಗಳು ಸೋಮಾಪುರ, ರೋಣ, ಸೂಡಿ ಮುಂತಾದ ಕಡೆಗಳಲ್ಲಿ ಕಂಡುಬಂದಿವೆ. ಆದರೆ ನೀರಾವರಿಗಾಗಿ ಬಳಸಿದ ಬಾವಿಗಳನ್ನು ಸೊರಟೂರು ಮತ್ತು ಅಸುಂಡಿಗಳಲ್ಲಿ ಕಾಣಸಿಗುತ್ತವೆ.

ಸಿಂಧೂ ನಾಗರಿಕತೆಯಲ್ಲಿ ಬಾವಿಗಳ ಕುರಿತು ಉಲ್ಲೇಖ ಈ ರೀತಿ ಇದೆ. ಆ ಕಾಲದ ಎಲ್ಲಾ ನಗರಗಳಲ್ಲಿ ಎರಡು ಬಗೆಯ ವಾಸದ ಕಟ್ಟಡಗಳಿದ್ದವು. ಕೋಟೆಯೊಳಗಿನ ಕಟ್ಟಡಗಳು ಕೋಟೆಯೊಳಗೆ ಸುರಕ್ಷಿತವಾಗಿದ್ದ ರಾಜಕುಟುಂಬ, ಸೈನಾಧಿಕಾರಿಗಳು, ಶ್ರೀಮಂತ ವ್ಯಾಪಾರಿಗಳು ಮತ್ತು ಪುರೋಹಿತರಿಗೆ

ಸೇರಿದ್ದು, ಇವು ಸಕಲ ಸೌಲಭ್ಯಗಳನ್ನು ಹೊಂದಿದ್ದವು. ಪ್ರತಿ ಮನೆಯು ಒಂದು ಕಲ್ಲು ಕಟ್ಟಡದ ಬಾವಿ ಹೊಂದಿತ್ತು, ನೀರಿನ ಕೊರತೆ ಎಂಬುದೇ ಇರಲಿಲ್ಲ. ಆದರೆ ಕೋಟೆಯಾಚೆ, ಯಾವ ರಕ್ಷಣೆಯು ಇಲ್ಲದ ಕಾಡು ಪ್ರಾಣಿಗಳ ಭಯದಿಂದ ಸದಾ ತತ್ತರಿಸುತ್ತಿದ್ದ ಕೃಷಿಕರು, ಕರಕುಶಲ ಕೆಲಸಗಾರರು, ಪಶುಪಾಲಕರ ಹಟ್ಟಿಗಳಿದ್ದವು. ಇವುಗಳಿಗೆ ಒಳಚರಂಡಿ, ರಸ್ತೆ, ಬೀದಿ ದೀಪ, ಮತ್ಯಾವ ಸೌಲಭ್ಯಗಳು ಇರಲಿಲ್ಲ. ಕುಡಿಯುವ ನೀರಿನ ವ್ಯವಸ್ಥೆಯೇ ಅಲ್ಲಿ ಗೈರುಹಾಜರು. ಇಡೀ ಹಟ್ಟಿಗೆ ಒಂದು ಬಾವಿಯ ಗತಿ ಇರಲಿಲ್ಲ. ಒಂದೇ ಕಾಲ, ಅದರೆ ಸ್ಥಳ ಬೇರೆ ಬೇರೆಯಾದ ಕಾರಣ ಸವಲತ್ತು ಮತ್ತು ಅವಕಾಶಗಳ ಲಭ್ಯತೆಯು ಬೇರೆ ಬೇರೆಯಾಯಿತು. ಇದೇ ನೀರಿನ ಊನ ಒಂಚೂರು ಮುಕ್ಕಾಗದೆ ಆಧುನಿಕ ಕಾಲದವರೆಗೂ ಬಂದಿರುವುದು ಅಚ್ಚರಿಯ ಸಂಗತಿ.

ಕದಂಬ, ಚಾಲುಕ್ಯ, ಗಂಗ ಇತ್ಯಾದಿ ನೂರಾರು ವಂಶಗಳ ರಾಜಾಧಿರಾಜರು ತಾವೇ ಉತ್ತರ ಭಾರತದಿಂದ ಬರಮಾಡಿಕೊಂಡ ಬ್ರಾಹ್ಮಣರಿಗಾಗಿ ಅಗ್ರಹಾರಗಳೆಂಬ ಪವಿತ್ರ ಕಾಲನಿಗಳನ್ನು ಕಟ್ಟಿಕೊಡುವುದು ತಮ್ಮ ಪುಣ್ಯವೆಂದು ತಿಳಿದಿದ್ದರು.[2] ಅತ್ಯುತ್ತಮ ಪರಿಸರದಲ್ಲಿ ಸದರಿ ಅಗ್ರಹಾರಗಳನ್ನು ನಿರ್ಮಿಸಿ, ಕೋಟೆಯ ರಕ್ಷಣೆ ಒದಗಿಸುವುದರ ಜೊತೆಗೆ ಎಲ್ಲಾ ಸವಲತ್ತುಗಳನ್ನು ಅಲ್ಲಿಗೇ ಸರಬರಾಜಾಗುವಂತೆ ನೋಡಿಕೊಳ್ಳುತ್ತಿದ್ದರು. ಉತ್ತಮ ಮನೆ, ವಿಶಾಲ ಹಿತ್ತಲು, ಪ್ರತಿ ಮನೆಗೂ ಒಂದೊಂದು ರಕ್ಷಣಾತ್ಮಕ ಕಲ್ಲು ಕಟ್ಟಡವುಳ್ಳ ನೀರಿನ ಬಾವಿಯಿರುವ ಅಗ್ರಹಾರ ವ್ಯವಸ್ಥೆಗೊಂಡಿತ್ತು. ಇದೆಲ್ಲಾ ಸರಿಯೇ, ಅತಿಥಿ ಸತ್ಕಾರದ ಅತ್ಯುತ್ತಮ ಪರಿಯೇ. ಆದರೆ ತನ್ನ ಅರಮನೆ, ಚಿನ್ನದ ಕಿರೀಟ, ಸುಖಲೋಲುಪತೆಗೆ ಮೂಲವಾದ ತನ್ನದೇ ರಾಜ್ಯದ ಬಹು ಜನರ ಬಾಯಾರಿಕೆ ಬಗ್ಗೆ ಈ ರಾಜರುಗಳಿಗೆ ಅರ್ಥವಾಗಲಿಲ್ಲವಲ್ಲ ಅದು ದುರಂತ. ಅಪಾರ ಸವಲತ್ತುಗಳು ಬೇಡ, ಊರಿಗೊಂದು ನೀರಿನ ಬಾವಿಯ ಅಗತ್ಯವಿದೆಯೆಂದು ಎಷ್ಟೋ ಶತಮಾನಗಳವರೆಗೆ ಇವರಿಗೆ ಹೊಳೆಯಲಿಲ್ಲ. ವ್ಯಾಪಾರಿಗಳಿಗೆ, ಪ್ರವಾಸಿಗರಿಗೆ, ಸೈನಾಧಿಕಾರಿಗಳಿಗೆ ಅರವಟ್ಟಿಗೆ ನಿರ್ಮಿಸಲು ಉತ್ಸುಕವಾದ ಮನಸ್ಸು ತನ್ನ ಪ್ರಜೆಗಳ ಜಲ ನಿರೀಕ್ಷೆಯನ್ನು ಉಪೇಕ್ಷಿಸಿದ್ದು ರಾಜತ್ವದ ಹುಟ್ಟು ಕಿವುಡಿಗೆ ಸಾಕ್ಷಿಯಾಗಿದೆ. ದೇವಾಲಯವೊಂದನ್ನು ನಿರ್ಮಿಸುತ್ತಲೇ ಅಲ್ಲೊಂದು ಕಲ್ಯಾಣಿ ಕಟ್ಟಿಸಿದ ಮತ್ತು ಬಾವಿ ತೊಡಿಸಿದ ಮನಸ್ಸಿಗೆ, ಜನರ ನೀರಿನ ಅಗತ್ಯತೆ ಕಾಣಲಿಲ್ಲವಲ್ಲ ಇದು ರಾಜ ಪ್ರಭುತ್ವದ ಹುಟ್ಟು ಕುರುಡಿಗೆ ಸಾಕ್ಷಿಯಾಗಿದೆ. ಅರಮನೆ, ಗುರುಮನೆ, ಸೆರೆಮನೆ, ಕೋಟೆ ಕಟ್ಟಿದವರಿಗೆ ಒಂದು ಕನಿಷ್ಠ ಗೂಡು ಇರಲಿಲ್ಲವೆಂಬುದು ಮತ್ತು ಬಾವಿ, ಕಲ್ಯಾಣಿ, ಕಟ್ಟೆ, ಅರವಟ್ಟಿಗೆ, ಕಟ್ಟಿಕೊಟ್ಟವರಿಗೆ ನೀರಿನ ಹಕ್ಕು ಇರಲಿಲ್ಲವೆಂಬುದು ಒಟ್ಟು ಫಲಿತಾಂಶ.[3] ವಿಜಯನಗರದ ರಾಜಧಾನಿ ಹಂಪಿಯ ಅರಮನೆಯ ಪಕ್ಕದ ಕಲ್ಯಾಣಿಗೆ ನೀರು ನೇರವಾಗಿ ಹರಿಯುವಂತೆ ಮಾಡಿದ ಆ ಕಾಲದ ಚಾಣಕ್ಯ ಇಂಜಿನಿಯರುಗಳಿಗೆ ರಾಜಧಾನಿಯಾಚೆಯ ರೈತಾಪಿ ಜನರ್‍ಯಾಕೆ ನೆನಪಾಗಲಿಲ್ಲವೆಂಬುದು ರಾಜತ್ವದ ಕೇಡಿನ ರಾಜಕಾರಣಕ್ಕೆ ಸಾಕ್ಷಿ.

ಗದಗ ಜಿಲ್ಲಾ ಪ್ರದೇಶದ ಬೇಸಾಯವು ಮಳೆಯ ಮೇಲೆ ಅವಲಂಬಿತವಾಗಿತ್ತು. ನದಿಗಳು, ಹಳ್ಳಗಳು ಕೇವಲ ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುತ್ತಿದ್ದವು. ಇದರಿಂದಾಗಿ ನೀರಾವರಿ ಕಾರ್ಯಗಳಿಗೆ ಅಂದಿನವರು ವಿವಿಧ ಕ್ರಮಗಳನ್ನು ಕೈಗೊಂಡಿದ್ದರು. ನದಿ, ಹಳ್ಳ, ಕೆರೆಗಳ ನೀರಾವರಿ ವಿಧಾನದಿಂದ ನೀರಾವರಿ ಕಾರ್ಯಗಳು ಅವಶ್ಯಕತೆ ನಿವಾರಿಸಲಾಗುತ್ತಿದ್ದಿಲ್ಲ. ಕೆರೆಗಳನ್ನು ಕಟ್ಟಲು ಸಾಧ್ಯವಿಲ್ಲದ ಸ್ಥಳಗಳಲ್ಲಿ ಅಂತರ್ಜಲ ಮೂಲಗಳನ್ನು ಅವಲಂಬಿಸಬೇಕಾಯಿತು. ಅದಕ್ಕಾಗಿ ಬಾವಿಗಳನ್ನು ಅಗೆದು ಬೇಸಾಯಕ್ಕೆ ಹಾಗೂ ದೇವಸ್ಥಾನದ ಪೂಜೆಗಾಗಿ ಬಳಸಿಕೊಂಡರು. ಹೀಗೆ ತೆಗೆಯಲಾದ ಬಾವಿಗಳಿಂದ ಅಂತರ್ಜಲ ನೀರು ಸದಾ ದೊರಕುತ್ತಿತ್ತು. ಈ ವಿಧವಾದ ಬಾವಿ ನೀರಾವರಿ ಒಂದರಿಂದ ಇಪ್ಪತ್ತು ಎಕರೆ ಭೂಮಿಗೆ ನೀರುಣಿಸಬಹುದಾಗಿತ್ತು. ಹೀಗೆ ಬಾವಿನೀರಾವರಿ ಕಾರ್ಯ ಸ್ಥಳೀಯ ಮತ್ತು ನಿರ್ದಿಷ್ಟ ಪ್ರಮಾಣದಲ್ಲಿ ಮಾತ್ರ ಸಾಧ್ಯವಾಗುತ್ತಿತ್ತು. ಆದರೂ ಅದು ಅನಿವಾರ್ಯವಾಗಿತ್ತು. ಹೀಗಾಗಿ ನದಿ ಮತ್ತು ಕಾಲುವೆಗಳಿಂದ ದೂರದಲ್ಲಿರುವ ಪ್ರದೇಶಗಳಲ್ಲಿ ನೂರಾರು ಬಾವಿಗಳು ತೋಡಲ್ಪಟ್ಟವು. ಇದಲ್ಲದೆ

ಭಾರತೀಯ ಧರ್ಮದಲ್ಲಿ ಬಾವಿಗಳಿಗೆ ಪವಿತ್ರ ಸ್ಥಾನವೂ ಇದ್ದುದರಿಂದ ಅವು ಅಧಿಕ ಸಂಖ್ಯೆಯಲ್ಲಿ ಜಾರಿಯಲ್ಲಿದ್ದವು. ಬಾವಿಗಳು ಸಹ ನೀರಾವರಿಗೆ ಅನುಕೂಲವಾಗಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಸಾಮಾನ್ಯವಾಗಿ ರಾಜರು, ಶ್ರೀಮಂತರು ಮತ್ತು ಗ್ರಾಮಸ್ಥರು ಕೆಲವೊಮ್ಮೆ ಸಾಮಾನ್ಯರು ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ನಂಬಿದ್ದರು. ಕಟ್ಟಿಸಿದ ಬಾವಿಗಳನ್ನು ಯಾರೇ ಆಗಲಿ ನಾಶಪಡಿಸುವುದು ಅತ್ಯಂತ ಪಾಪಕರವೆಂಬ ಭಾವನೆ ಇತ್ತು.[೪]

ಹೀಗೆ ತೋಡಲಾದ ಬಾವಿಗಳಿಂದ ನೀರನ್ನು ತಾಂತ್ರಿಕ ವಿಧಾನಗಳಿಂದ ಮೇಲೆತ್ತಿ ಸಾಗುವಳಿಗೆ ಬೇಕಾದ ನೀರನ್ನು ಪಡೆಯಲಾಗುತ್ತಿತ್ತು. ಕ್ರಿ.ಶ.೧೯೦೭ ಸರ್ವೇಕ್ಷಣೆ ಕಾರ್ಯದಂತೆ ಭಾರತದ ಶೇಕಡ ೩೦ರಷ್ಟು ನೀರಾವರಿ ಕಾರ್ಯಗಳು ಬಾವಿಗಳಿಂದಲೇ ಜರುಗುತ್ತಿತ್ತು.[೫] ಈ ಅಂಕಿ ಸಂಖ್ಯೆಗಳ ಪ್ರಕಾರ ಗದಗ ಜಿಲ್ಲೆಯ ನೀರಾವರಿಯಲ್ಲಿ ಬಾವಿಗಳಿಗೆ ಇದ್ದ ಮಹತ್ವವನ್ನು ಎತ್ತಿ ತೋರಿಸುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಎರಡು ವಿಧವಾದ ಬಾವಿಗಳನ್ನು ಕಾಣಬಹುದು. ಮೊದಲನೆಯ ವರ್ಗವೆಂದರೆ ಖಾಯಂ ಅಗಿ ನೀರು ದೊರೆಯುವ ಸರ್ವಋತು ಬಾವಿಗಳು. ಎರಡನೇ ವರ್ಗದ ಬಾವಿಗಳೆಂದರೆ ನದಿ ಹಾಗೂ ಹಳ್ಳಗಳಲ್ಲಿ ತಾತ್ಕಾಲಿಕವಾಗಿ ತೋಡಲಾದ ಬಾವಿಗಳು. ಇವನ್ನು ಒರತೆಗಳು ಎಂದೂ ಕರೆಯುತ್ತಾರೆ. ನೀರಾವರಿಗೆಂದೇ ನಿರ್ಮಿಸಿದ ಬಾವಿಗಳು ಊರಿನಿಂದ ಹೊರಗಡೆಯ ಪ್ರದೇಶಗಳಾದ ಹೊಲ, ತೋಟ, ಗದ್ದೆಗಳಲ್ಲಿರುತ್ತಿದ್ದವು. ಸಾಮಾನ್ಯವಾಗಿ ಈ ಬಾವಿಗಳನ್ನು ಖಾಸಗಿಯಾಗಿ ತೋಡಿಸುತ್ತಿದ್ದರು.

**೪.೨. ನಾಮಾವಳಿಗಳು :**

**'ಜಲಾಶಯೇ ಜಲಾಧಾರಃ'** 'ನೀರು ನಿಂತಿರುವ ಸ್ಥಳಗಳನ್ನು ಜಲಾಶಯಗಳು ಇಲ್ಲವೆ ಜಲಾಧರಗಳು ಎಂದು ಕರೆಯತ್ತಾರೆ.'

"ದ್ವಾರಹೀನೋ ಭವೇತ್ ಕೂಪೋ ದ್ವಾರೇಣ್ಯೆಕೇನ ವಾಪಿಕಾ
ನೈಕದ್ವಾರಾ ಪುಷ್ಕರಣೀ ದೀರ್ಘಾಕಾರ್ ತು ದಿರ್ಘಿಕಾ
ಕುಲ್ಯಾ ವಿಸ್ತ್ರತ್ ತೋಯಶ್ಚ ತಟಾಕಃ ಪರಿಕೀತಿತಃ"[1]

**ಕೂಪ**–ಸೇದುವ ಬಾವಿಗೆ ಕೂಪ ಎಂದು ಹೆಸರು. ಇದು ಮಾನವ ನಿರ್ಮಿತ, ಭೂಮಿಯನ್ನು ಆಳವಾಗಿ ತೋಡಿ ಕೆಳಗಿನಿಂದ ಮೇಲಕ್ಕೆ ಸುತ್ತಲೂ ಇಟ್ಟಿಗೆ, ಕಲ್ಲು ಮಣ್ಣು ಅಥವಾ ಗಾರೆಯಿಂದ ಗೋಡೆ ಕಟ್ಟಿರುವುದು.

**ವಾಪಿ:** ಒಂದು ಕಡೆಯಿಂದ ನೀರಿನ ಸಮೀಪಕ್ಕೆ ಇಳಿದು ಹೋಗಲು ದಾರಿಯುಳ್ಳ ಬಾವಿಗೆ ವಾಪೀ ಅಥವಾ ವಾಪಿಕಾ ಎನ್ನುವರು.

**ಪುಷ್ಕರಣಿ:** ಚಚ್ಚೌಕವಾಗಿ ತೋಡಿರುವ ಮತ್ತು ನಾಲ್ಕೂ ಕಡೆಗಳಿಂದಲೂ ನೀರಿಗೆ ಇಳಿಯಲು ಅನುಕೂಲವಿರುವ ಜಲಾಶಯಕ್ಕೆ ಪುಷ್ಕರಣಿ ಎಂದು ಹೆಸರು.

**ದೇವಖಾತ:** ಪುಷ್ಕರಣಿಯು ಮಾನವ ನಿರ್ಮಿತ; ಅದು ನೈಸರ್ಗಿಕವಾಗಿದ್ದರೆ ಅದಕ್ಕೆ ದೇವಖಾತ ಎನ್ನುವರು.

ದೀರ್ಘಿಕಾ: ದೀರ್ಘವಾಗಿರುವ ಜಲಾಶಯಕ್ಕೆ ದೀರ್ಘಿಕಾ ಎಂದು ಹೆಸರು. ಅದರೆ ಅಮರಕೋಶದಲ್ಲಿ ಮಾತ್ರ ದೀರ್ಘಿಕಾ ಎಂದರೆ ವಾಪೀ ಎಂದೇ ಹೇಳಿದ್ದಾರೆ. ಇದು ಅರ್ಥಪೂರ್ಣವಾಗಲಾರದು.

**ಕುಲ್ಯಾ:** ವಿಶಾಲವಾದ ಜಲಾಶಯವೇ ಕುಲ್ಯಾ. ಕುಲ್ಯಾ ಎಂದರೆ ಕೃತಿಮಾ, ಸರಿತ್ ಎಂದು ಅಮರಕೋಶದಲ್ಲಿದೆ.

**ಸರಾ** : ನದಿಯಿಂದ ಅಥವಾ ಬೆಟ್ಟದಿಂದ ಜಿನುಗಿ ಬಂದ ನೀರು ಒಂದು ಕಡೆ ಸೇರಿ ತಾವರೆಗಳಿಂದ ವಿಸ್ತೃತ ಜಲಾಶಯವಾಗಿದ್ದರೆ ಅದಕ್ಕೆ ಸರ ಎನ್ನುವರು.

**ತಡಾಗ** : ಮನುಷ್ಯನಿಂದ ಕೃತಕವಾಗಿ ನಿರ್ಮಿತವಾದ ಸರೋವರಕ್ಕೆ ಅಥವಾ ತಾವರೆಕೊಳ್ಳಕ್ಕೆ ತಡಾಗ ಎಂದು ಹೆಸರು .ಇದರಲ್ಲಿ ಪ್ರತಿವರ್ಷವೂ ಹೊಸ ಹೊಸ ನೀರು ಸೇರಬೇಕಾಗುತ್ತದೆ.

**ವೇಶನ್ತ** : ಸಣ್ಣ ತಡಾಗಗಳನ್ನು ವೇಶನ್ತಗಳೆನ್ನುವರು.

**ಚೌಣ್ಡೀ** : ಬಂಡೆಕಲ್ಲುಗಳ ಮಧ್ಯ ನೀರು ನಿಂತು ಬಳ್ಳಿಗಳಿಂದ ತುಂಬಿರುವ ಜಲಾಶಯಗಳಿವೆ.

**ನದೀ:** ಯಾವುದು ನೀರು ಹರಿಯುವ ಅಥವಾ ಚಲನಶೀಲತೆಯ ಭೌತಗುಣವನ್ನು ಪ್ರತಿನಿಧಿಸುತ್ತದೆ.

**ನಿಪಾನ** : ಬಾವಿಯ ಹತ್ತಿರ ಗುಂಡಿಗಳನ್ನು ಮಾಡಿ, ಇಲ್ಲವೆ ಕಲ್ಲಿನ ತೊಟ್ಟಿಗಳನ್ನು ಅವುಗಳಲ್ಲಿ ನೀರನ್ನು ತುಂಬಿದರೆ ಅದಕ್ಕೆ 'ನಿಪಾನ' ಎಂದು ಹೆಸರು. ನಿಪಾನಕ್ಕೆ ಆವಾಹ ಉಪಕೂಪ, ಜಲಾಶಯ/ ಜಲಗಾರ ಎಂಬ ಹೆಸರುಗಳೂ ಇವೆ.

**೪.೩. ರಚನೆ :**

'ಒಂದು ಕೊಳ ಹತ್ತು ಬಾವಿಗಳಿಗೆ ಸಮ
ಒಂದು ಕೆರೆ ಹತ್ತು ಕೊಳಗಳಿಗೆ ಸಮ
ಒಬ್ಬ ಮಗ ಹತ್ತು ಕೆರೆಗಳಿಗೆ ಸಮ
ಒಂದು ಮರ ಹತ್ತು ಮಕ್ಕಳಿಗೆ ಸಮ'

ಬಾವಿಗಳ ರಚನೆಯ ಬಗೆಗೆ ಪುರಾತನ ಗ್ರಂಥಗಳಾದ ವೇದಗಳು, ರಾಮಾಯಣ, ಮಹಾಭಾರತ ಇತ್ಯಾದಿಗಳಲ್ಲಿ ಉಲ್ಲೇಖಗಳು ಕಂಡುಬರುತ್ತದೆ. ಇಂತಹ ಆಕರಗಳಲ್ಲಿ 'ಕಶ್ಯಪನ ಕೃಷಿ ಸೂಕ್ತಿ' ಒಂದು. ಇನ್ನೊಂದು ಪುರಾತನ ಕೃತಿ ಎಂದರೆ 'ವಿಶ್ವವಲ್ಲಬ ಮಿಶ್ರಚಕ್ರಪಾಣಿ'.[೭] ಇದರಲ್ಲಿ ಅನೇಕ ಬಾವಿಗಳ ನಿರ್ಮಾಣ ಮಾದರಿಗಳನ್ನು ನೀಡಲಾಗಿದೆ. ಸಾಮಾನ್ಯವಾಗಿ ಸ್ಥಳದ ಭೌಗೋಳಿಕ ಪರಿಸ್ಥಿತಿಯನ್ನು ಆಧರಿಸಿಯೇ ಈ ರಚನೆಗಳನ್ನು ಕೈಗೊಳ್ಳಲಾಗುತ್ತಿತ್ತು.

ಬಾವಿ ತೋಡಲು ಪ್ರಮುಖವಾದ ಅಂಶಗಳನ್ನು ಚಾವುಂಡರಾಯನ ಉದಕಾರ್ಗಳದ ಐದನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಅದು ಹುಟ್ಟುವ ಸ್ಥಳಗಳ ಪ್ರಾಕೃತಿಕ ಲಕ್ಷಣಗಳನ್ನು, ಭೂರಚನೆ, ಮಣ್ಣಿನ ಗುಣ, ಜಲ ಹುಟ್ಟಲು ಅಗೆಯಬೇಕಾದ ಆಳ ಇತ್ಯಾದಿಗಳ ವಿವರ ನೀಡಿದ್ದಾನೆ. ಗ್ರಾಮಗಳಿಗೆ ಆಗ್ನೇಯ ಮತ್ತು ವಾಯುವ್ಯ ದಿಕ್ಕುಗಳನ್ನು ಬಿಟ್ಟು ಉಳಿದ ದಿಕ್ಕುಗಳನ್ನು ಅಂದರೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಮತ್ತು ಈಶಾನ್ಯ ದಿಕ್ಕುಗಳಲ್ಲಿ ಬಾವಿ-ಕೆರೆಗಳನ್ನು ನಿರ್ಮಿಸಬೇಕು.[೮]

**೪.೪. ಬಾವಿ ನೀರಿನ ಉಪಯೋಗದ ಕ್ರಮಗಳು:**

ಬಾವಿಗಳ ನೀರನ್ನು ಕುಡಿಯುವುದಕ್ಕೆ ಬೇಸಾಯಕ್ಕೂ ಉಪಯೋಗಿಸುವುದು ಬಹಳ ಕಾಲದಿಂದಲೂ ಎಲ್ಲಾ ಕಡೆಗಳಲ್ಲಿ ಬಳಕೆಯಲ್ಲಿವೆ. ಕರ್ನಾಟಕ ಉತ್ತರ ಮತ್ತು ಪೂರ್ವದ ಭಾಗಗಳಲ್ಲಿ ಅಗಲವಾದ ಬಾವಿಗಳಿಂದ ನೀರನ್ನು ಮೇಲಕ್ಕೆತ್ತಿ ಉಪಯೋಗಿಸುತ್ತಾರೆ. ನೆಲದ ಮಟ್ಟದಿಂದ ಕೆಳಗಡೆ ಅಂತರಜಲವನ್ನು ಮುಟ್ಟುವವರೆಗೂ ತೋಡಿರುವ ಕಂಡಿಗಳೆ ಬಾವಿಗಳು. ಎಲ್ಲಾ ಕಾಲಗಳಲ್ಲಿಯೂ ಕುಡಿಯುವ ನೀರಿಗಾಗಿ ಜನರು ಉಪಯೋಗಿಸುತ್ತಾರೆ.

೧. **ಕಪ್ಪಿ ಅಥವಾ ಗಡಗಡೆ** : "ಇದು ಸಾಮಾನ್ಯವಾಗಿ ಎಲ್ಲಾ ಬಾವಿಗಳಿಗೂ ಉಪಯೋಗಿಸುವ ಕ್ರಮವಾಗಿದೆ. ಬಾವಿಯ ಅಂಚಿನ ಗೋಡೆಗಳ ಮೇಲೆ ಎರಡು ಕಲ್ಲಿನ ಕಂಬಗಳನ್ನು ನಿರ್ಮಿಸಿ

ಅವುಗಳ ತಲೆಯ ಮೇಲೆ ಮಟ್ಟವಾಗಿ ಒಂದು ತೊಲೆಯನ್ನು ಎಳೆಯುತ್ತಾರೆ. ತೊಲೆಯನ್ನು ಮರ, ಕಲ್ಲು, ಉಕ್ಕು, ಭದ್ರವಾದ ಕಾಂಕ್ರೀಟ್ ಇವುಗಳಿಂದ ಮಾಡಿರುತ್ತಾರೆ, ಈ ತೊಲೆಯ ಕೆಳಬಾಗದಲ್ಲಿ ಕಪ್ಪಿಯನ್ನು ಭದ್ರಮಾಡಿ ಅದರ ಅಂಚಿನಲ್ಲಿ ನೀರು ಸೇದುವ ಹಗ್ಗವನ್ನು ಸೇರಿಸಿ ಒಂದು ಕೊನೆಗೆ ಕೊಡವನ್ನು ಕಟ್ಟಿ ಬಾವಿಯೊಳಕ್ಕೆ ಬಿಡುತ್ತಾರೆ.[೬] ಕೊಡವನ್ನು ತುಂಬಿಸಿ ಹಗ್ಗದ ಇನ್ನೊಂದು ಕೊನೆಯಿಂದ ಮೇಲಕ್ಕೆ ಸೇದಿ ಎಳೆದುಕೊಳ್ಳುತ್ತಾರೆ.

**೨. ಗಾಲಿ ಮತ್ತು ಅಚ್ಚು** : ಇಂತಹ ಸರಳ ಯಂತ್ರದಲ್ಲಿ ಬಾವಿಯ ಪಕ್ಕದ ಗೋಡೆಗಳ ಮೇಲುಗಡೆ ಮಟ್ಟವಾದ ಕಬ್ಬಿಣದ ಅಚ್ಚನ್ನು ಹೂಡಿರುವತ್ತಾರೆ. ಅದರ ಸುತ್ತಲೂ ಇರುವ ಮರದ ಚಕ್ರದ ಮೇಲೆ ಬಾವಿಯ ಹಗ್ಗವು ಸುತ್ತುತ್ತದೆ. ಚಕ್ರಕ್ಕೆ ತಗಲಿಸಿರುವ ಮರದ ಕೈಗಳಿಂದ ಚಕ್ರವನ್ನು ತಿರುಗಿಸುತ್ತಾರೆ. ನೀರನ್ನು ಸೇದುವಾಗ ಹಗ್ಗವನ್ನು ಮುಟ್ಟಬೇಕಾಗಿಲ್ಲ. ಈ ಕ್ರಮದಲ್ಲಿ ಪಂಚಯಾಂತ್ರಿಕ ಅನುಕೂಲ ವಿರುವುದರಿಂದ ನೀರನ್ನು ಸೇದುವ ಪ್ರಯಾಸವು ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತದೆ. ಇಂತಹ ಬಾವಿಗಳು ಗದಗ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ.

**೩. ತೂಗಾಡುವ ಬುಟ್ಟಿ** : ಇದರಲ್ಲಿ ನೀರನ್ನು ಸುಮಾರು ೫ ಅಡಿ ಎತ್ತರಕ್ಕೆ ಎತ್ತಬಹುದು. ಬುಟ್ಟಿಯನ್ನು ಬಿದಿರಿನಿಂದಲೋ, ಕಬ್ಬಿಣದಿಂದಲೂ ಮಾಡಿರುತ್ತಾರೆ. ಅದರ ಕೊನೆಗಳಿಗೆ ಎರಡು ಹಗ್ಗಗಳನ್ನು ಕಟ್ಟಿ ಒಂದು ಕೊನೆಯನ್ನು ಒಬ್ಬ ಆಳು, ಇನ್ನೊಂದು ಕೊನೆಯನ್ನು ಇನ್ನೊಬ್ಬನು ಹಿಡಿದು ಬುಟ್ಟಿಯನ್ನು ನೀರಿನ ಹೊಂಡದಲ್ಲಿ ತಳ್ಳಿ. ನೀರು ತುಂಬಿದ ಮೇಲೆ ಬೀಸಿ ಮೇಲ್ಗಡೆ ನಾಲೆಯೊಳಕ್ಕೆ ಸಾಗಿಸುತ್ತಾರೆ. ಒಂದೊಂದು ಸಾರಿಯೂ ಕೊಂಚವೇ ನೀರು ಮೇಲಕ್ಕೆ ಬಂದರೂ ವರ್ಷಕ್ಕೆ ೫ ಎಕರೆಗಳಿಗೆ ನೀರನ್ನು ಹಾಯಿಸಬಹುದು.

**೪. ಮರದ ದೋಣಿ** : "ಇದನ್ನು ಸುಮಾರು ೩ ಅಡಿ ಎತ್ತರಕ್ಕೆ ನೀರನ್ನು ಎತ್ತುವುದಕ್ಕೆ ಮಾತ್ರ ಉಪಯೊಗಿಸಬಹುದು. ಮರದ ದೋಣಿಯನ್ನು ಒಂದು ಅಕ್ಷದ ಮೇಲೆ ಲಂಬವಾಗಿ ಹಿಂದಕ್ಕೂ ಮುಂದಕ್ಕೂ ತಿರುಗುವ ಹಾಗೆ ಜೋಡಿಸಿರುತ್ತಾರೆ. ಅದರ ಒಂದು ಕೊನೆಯು ನೀರಿನಲ್ಲಿ ಅದ್ದಿದಾಗ ತುಂಬಿದಾಗ ನೀರು ಮತ್ತೊಂದು ಕೊನೆಗೆ ಕಟ್ಟಿರುವ ತೂಕದ ಸಹಾಯದಿಂದ ಮೇಲಕ್ಕೆ ಏರುತ್ತದೆ. ನೀರಿನ ಹೊಂಡಕ್ಕೆ ಅಡ್ಡಲಾಗಿ ಹಾಕಿದ ಮರದ ಹಲಗೆಯ ಮೇಲೆ ಒಬ್ಬ ಆಳು ನಿಂತು ಡೋಣಿಯ ಒಂದು ಕೊನೆಯನ್ನು ನೀರಿನ ಒಳಕ್ಕೆ ಕಾಲನಿಂದ ತಳ್ಳಿ ಇನ್ನೊಂದು ಕೊನೆಯನ್ನು ಮೇಲಕ್ಕೆ ಎತ್ತುತ್ತಾನೆ. ತೂಕ ಒತ್ತಾಸೆಯಿಂದ ಅದು ಮೇಲಕ್ಕೆ ಬಂದಾಗ ನೀರನ್ನು ನಾಲೆಯೋಳಗೆ ತಿರುಗಿಸುತ್ತಾನೆ".[೧೦] ಅಲ್ಲಿಂದ ನೀರು ತೋಟಕ್ಕೆ ಹೋಗುತ್ತದೆ.

**೫. ಏತ ಅಥವಾ ಪಿಕೋಟ** : "ಏತದ ಬಾವಿಯಿಂದ ನೀರನ್ನು ಸುಮಾರು ೨೦ ಅಡಿ ಎತ್ತರಕ್ಕೆ ಎತ್ತಬಹುದು. ಆದ್ದರಿಂದ ಇದನ್ನು ಆಳವಾದ ಬಾವಿಗಳಿಂದ ನೀರನ್ನು ಎತ್ತುವುದಕ್ಕೆ

ಉಪಯೋಗಿಸುತ್ತಾರೆ. ಬಾವಿಯ ದಡದಲ್ಲಿ ಉದ್ದವಾದ ಮರದ ಕಂಬವನ್ನು ನೆಡುತ್ತಾರೆ. ಅದರ ಮೇಲ್ಗಡೆಯ ಕೊನೆಗೆ ಇನ್ನೊಂದು ಮರದ ತೊಲೆಯು ಮೇಲಕ್ಕೂ ಕೆಳಕ್ಕೂ ಆಡುವ ಹಾಗೆ ಕಬ್ಬಿಣದ ಉದ್ದವಾದ ಮೊಳೆಗಳಿಂದ ತಗಲಿಸುತ್ತಾರೆ. ಈ ತೊಲೆಯು ಒಂದು ಕಡೆ ಉದ್ದವಾಗಿಯು ಎದುರುಗಡೆ ಗಿಡ್ಡವಾಗಿಯು ಇರುತ್ತದೆ. ಉದ್ದವಾಗಿರುವ ಕೊನೆಗೆ ಒಂದು ಮರದ ಇಲ್ಲವೇ ಗಟ್ಟಿ ಬಿದಿರಿನ ಗುಂಡು ಗಳುವನ್ನು ಬಿಗಿದು ಆ ಬಿದಿರಿನ ಕೆಳಗಡೆ ಕೊನೆಗೆ ನೀರಿನ ಬಕೇಟನ್ನು ತಗಲಿಸುತ್ತಾರೆ. ಬಕೇಟನ್ನು ಕಬ್ಬಿಣದಿಂದಲೂ, ಚರ್ಮದಿಂದಲೂ ಮಾಡಬಹುದು. ತೊಲೆಯ ಗಿಡ್ಡವಾಗಿರುವ ಕೊನೆಗೆ ಕಲ್ಲನ್ನೋ, ಮರಳು ತುಂಬಿದ ಗೋಣಿ ಚೀಲವನ್ನೋ ಕಟ್ಟುತ್ತಾರೆ. ಬಾವಿಯ ಅಂಚಿನಲ್ಲಿ ಒಬ್ಬ ಆಳು ನಿಂತು, ತನ್ನ ಭಾರವನ್ನು ಉಪಯೋಗಿಸಿ ಬಕೇಟನ್ನು ಬಾವಿಯೊಳಕ್ಕೆ ಇಳಿಸುತ್ತಾನೆ. ಅದು ತುಂಬಿದ ಮೇಲೆ ಎದುರುಗಡೆ ಕಟ್ಟಿರುವ ತೂಕದ ಸಹಾಯದಿಂದ ತಾನಾಗಿಯೇ ಮೇಲಕ್ಕೆ ಏಳುತ್ತದೆ."[೧೧] ಬಾವಿಯ ಅಂಚಿಗೆ ಬಂದಾಗ ಅದನ್ನು ನಾಲೆಯ ಕಡೆಗೆ ತಿರುಗಿಸುತ್ತಾನೆ.

ಈಜಿಪ್ತ ದೇಶದಲ್ಲಿ ನೈಲ್ ನದಿಯಿಂದ ನೀರನ್ನು ಬೇಸಾಯಕ್ಕಾಗಿ ಈ ಏತವನ್ನೆ ಪುರಾತನ ಕಾಲದಲ್ಲಿ ಉಪಯೋಗಿಸುತ್ತಿದ್ದುದು ಕಂಡುಬರುತ್ತದೆ. ಗದಗ ಜಿಲ್ಲೆಯಲ್ಲಿ ಇಂತಹ ಬಾವಿಗಳು ಸೊರಟೂರು, ಜಂತ್ಲಿಶಿರೂರ, ಕುರ್ತಕೋಟಿ, ನೀಲಗುಂದ, ಡಂಬಳ ಮುಂತಾದಕಡೆಗಳಲ್ಲಿ ಕಾಣಬಹುದು.

೬. **ಕಪಿಲೆ ಅಥವಾ ಮೋಟ್** : "ಕಪಿಲೆಯನ್ನು ದಕ್ಷಿಣ ಭಾರತದಲ್ಲಿ ಮರದಿಂದ ಮಾಡುತ್ತಾರೆ. ಉತ್ತರ ಭಾರತದಲ್ಲಿ ಚರ್ಮದಿಂದ ಮಾಡುತ್ತಾರೆ. ಒಂದು ಕಪಿಲೆ ನಾಲ್ಕರಿಂದ ಆರು ಸಲೆ ಅಡಿ ಹಿಡಿಯುವಷ್ಟು ದೊಡ್ಡದಾಗಿರುತ್ತದೆ. ಬಾವಿಯ ಪಕ್ಕದ ಗೋಡೆಗಳ ಮೇಲೆ ಎರಡು ಕಲ್ಲಿನ ಕಂಬಗಳ ಮೇಲೆ ಒಂದು ತೊಲೆಯನ್ನು ಎಳೆದು ಅದಕ್ಕೆ ಸಾಮಾನ್ಯವಾದ ಕಪ್ಪಿಯನ್ನೇ ಜೋಡಿಸುತ್ತಾರೆ. ಕಪ್ಪಿಯ ಮೇಲೆ ಓಡುವ ಹಗ್ಗದ ಕೆಳಗಣ ಕೊನೆಯನ್ನು ಕಪಿಲೆಗೂ ಇನ್ನೊಂದು ಕೊನೆಯನ್ನು ಮೇಲುಗಡೆ ಒಂದು ನೊಗಕ್ಕೂ ಕಟ್ಟಿರುತ್ತಾರೆ. ನೊಗಕ್ಕೆ ಎರಡು ಎತ್ತಗಳನ್ನು ಕಟ್ಟಬೇಕಾಗುತ್ತವೆ. ತುಂಬಿದ ಕಪಿಲೆಯನ್ನು ಮೇಲಕ್ಕೆತ್ತುವಾಗ ಎತ್ತುಗಳು ಇಳಿಜಾರದ ದಾರಿಯಲ್ಲಿ ಇಳಿಯುತ್ತವೆ. ಕಪಿಲೆಯು ಮೇಲಕ್ಕೆ ಬಂದ ಒಬ್ಬ ಆಳು ನಾಲೆಯ ಕಡೆಗೆ ತಿರುಗಿಸುತ್ತಾನೆ. ಖಾಲಿಯಾದ ಕಪಿಲೆಯನ್ನು ಬಾವಿಯೊಳಕ್ಕೆ ಇಳಿಸುವಾಗ ಎತ್ತುಗಳು ಏರಿಯ ಮೇಲಕ್ಕೆ ಹತ್ತಬೇಕು. ಕಪಿಲೆಯ ಬಳಿಯಲ್ಲಿ ಒಬ್ಬ ಆಳಲ್ಲದೇ ಎತ್ತುಗಳನ್ನು ನಡೆಸುವುದಕ್ಕೆ ಮತ್ತೊಬ್ಬ ಆಳು ಬೇಕು ಕಪಿಲೆಯಿಂದ ೫೦ ರಿಂದ ೬೦ ಅಡಿ ಆಳವಾದ ಬಾವಿಗಳಿಂದಲೂ ನೀರನ್ನು ಹೆಚ್ಚು ಶ್ರಮವಿಲ್ಲದೇ ಎತ್ತಬಹುದು".[೧೨] ಇಂತಹ ಬಾವಿಗಳನ್ನು ಗದಗ ಜಿಲ್ಲೆಯಲ್ಲಿ ಕಾಣಬಹುದು.

### ೪.೫. ಬಾವಿಗಳ ನಿರ್ಮಾಣದ ಉದ್ದೇಶ/ಕಾರ್ಯಗಳು:

ಬಾವಿಗಳನ್ನು ನೀರಿನ ಸೌಕರ್ಯಕ್ಕಾಗಿ ಮತ್ತು ಧಾರ್ಮಿಕ ಹಾಗೂ ಇತರ ಉದ್ದೇಶಗಳಿಗಾಗಿ ನಿರ್ಮಾಣ ಮಾಡಿದ್ದಾರೆ. ಬಾವಿಗಳು ಪ್ರಾಚೀನ ಕಾಲದಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿವೆ. ಇವುಗಳ ನಿರ್ಮಾಣದ ಉದ್ದೇಶ ಮತ್ತು ಅವುಗಳ ಕಾರ್ಯಗಳು ಈ ಕೆಳಗಿನಂತಿವೆ.

೧. ಉದ್ಯಾನವನಗಳು ಮತ್ತು ತೋಟಗಳು

೨. ಕುಡಿಯುವ ನೀರು

೩. ವಿಹಾರಾರ್ಥ

೪. ಧಾರ್ಮಿಕ ಉದ್ದೇಶ

೫. ಸಾಮಾಜಿಕ ಮತ್ತು ಇತರೆ

**೧. ಉದ್ಯಾನವನಗಳು ಮತ್ತು ತೋಟಗಳು :**

ಬಾವಿಗಳ ಸುತ್ತಲು ಪ್ರಾಚೀನವಾದ ದೇಗುಲ ಮತ್ತು ಉದ್ಯಾನವನ ಹಾಗೂ ತೋಟಗಳನ್ನು ಬೆಳೆಸಿರುವುದನ್ನು ಬಹುಮುಖ್ಯವಾಗಿ ಗದಗ ಜಿಲ್ಲೆಯಲ್ಲಿ ಕಾಣಬಹುದು. ಇವುಗಳ ಬೆಳವಣಿಗೆಗೆ ನೀರಿನ ಆವಶ್ಯಕತೆ ನಿರಂತರವಾಗಿ ಇರಬೇಕಾಗುತ್ತದೆ. ಆದಕಾರಣ ಬಾವಿಗಳ ನೀರಿನ ಉಪಯೋಗವನ್ನು ಕಂಡುಕೊಂಡು ಸುತ್ತಲೂ ಉದ್ಯಾನವನಗಳನ್ನು ಬೆಳೆಸುತ್ತಿದ್ದರು. ಉದ್ಯಾನವನಗಳು ಇರುವ ಸ್ಥಳಗಳಲ್ಲಿ ಬಾವಿಗಳನ್ನು ನಿರ್ಮಾಣ ಮಾಡುತ್ತಿದ್ದರು. ನೀರನ್ನು ಮೇಲೆತ್ತಿ ಕಾಲುವೆಗಳ ಮೂಲಕ ತೋಟಗಳಿಗೆ ಸಾಗಿಸುತ್ತಿದ್ದರು.\ ಇಂತಹ ಬಾವಿಗಳು ಗದಗ ಜಿಲ್ಲೆಯಲ್ಲಿ ಕಂಡುಬರುತ್ತವೆ. ಉದಾ: ಡಂಬಳದ ಜಪದಬಾವಿ, ಸೂರಟೂರಿನ ಪಲ್ಲೇದವರ ಬಾವಿ, ಉದ್ದಾರರ ಬಾವಿ, ಜಂತಲಿಯ ರೂಪನವರ ಬಾವಿ ಪ್ರಮುಖವಾಗಿವೆ. ಮುಂಡರಗಿ ಹತ್ತಿರದ ಕಲಕೇರಿ ಗ್ರಾಮದ ಶಾಸನದಲ್ಲಿ ಶಿಕ್ಷಕನ ಮಗ ಏತ ನೀರಾವರಿಗಾಗಿ ಬಾವಿಯನ್ನು ನಿರ್ಮಿಸಿದ ಉಲ್ಲೇಖವಿದೆ. ಕ್ರಿ.ಶ. ೧೧೯೫ರ ಲಕ್ಕುಂಡಿ ಶಾಸನದಲ್ಲಿ[೧೩] ಜೋಳ, ಭತ್ತಗಳ ಬೆಳೆಯುವ ಬೆಳೆಗಳ ವಿವರವನ್ನು ಶಿಲಾಶಾಸನದಲ್ಲಿ ನೀಡಿದ್ದಾರೆ. ಲಕ್ಕುಂಡಿಯ ನಾಗಾನಬಾವಿ ಎಂದೇ ಉಲ್ಲೇಖಿಸಿದ ಬಾವಿಯ ಮೇಲ್ಭಾಗದಲ್ಲಿ ಈ ಶಿಲಾಶಾಸನವಿದ್ದು, ಇದು ಕಪಲಿ ಬಾವಿಯ ಮೂಲಕ ತೋಟಕ್ಕೆ ಹೂದೋಟಕ್ಕೆ ನೀರನ್ನು ಮೇಲಕ್ಕೆ ಎತ್ತುವ ಚಿತ್ರವನ್ನು ಒಳಗೊಂಡಿದೆ.

ಈ ಮೇಲಿನ ಎಲ್ಲಾ ಅಂಶಗಳಿಂದ ತಿಳಿದುಬರುವುದೇನೆಂದರೆ ಬಾವಿಗಳ ಮೂಲಕ ನೀರನ್ನು ಉಪಯೋಗಿಸಿಕೊಂಡು ಉದ್ಯಾನಗಳನ್ನು ನಿರ್ಮಿಸುವುದು ಅಂದಿನ ಕಾಲದ ಒಂದು ಸಾಮಾಜಿಕ ಉದ್ದೇಶವಾಗಿರುವಂತೆ ಕಾಣುತ್ತದೆ. ಇದಲ್ಲದೆ ನಗರದ ಸೌಂದರ್ಯವನ್ನು ಹೆಚ್ಚಿಸಲು ಅಥವಾ ಪ್ರವಾಸಿಗರಿಂದ ಮತ್ತು ರಾಜಪರಿವಾರದವರು, ಇನ್ನಿತರ ಜನತೆಯ ವಿಹಾರಾರ್ಥವಾಗಿ ಉದ್ಯಾನವನ, ತೋಟಗಳನ್ನು ಬೆಳೆಸುವ ಮುಖ್ಯ ಉದ್ದೇಶವಾಗಿತ್ತು.

೧. ಕುಡಿಯುವ ನೀರು:

ಬಾವಿಗಳಿಂದ ಆಗುವಂತಹ ಬಹುಮುಖ್ಯವಾದ ಉಪಯೋಗವೆಂದರೆ ಪ್ರವಾಸಿಗರ ವ್ಯಾಪಾರಿಗಳ ಹಾಗೂ ಸೈನಿಕರ ತಂಗುದಾಣವಾಗಿ ಬಾವಿಗಳಿರುವ ಪ್ರದೇಶವನ್ನು ಅಂದಿನ ಕಾಲದಲ್ಲಿ ಉಪಯೋಗಿಸುತ್ತಿದ್ದು ಗಮನಾರ್ಹ ಅಂಶವಾಗಿದೆ. ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಈಗಿನ ಆಧುನಿಕ ಕಾಲದಂತೆ ಸಾರಿಗೆ ಸಂಪರ್ಕ ಸಾಧನಗಳ ಅಭಿವೃದ್ಧಿ ಆಗಿರಲಿಲ್ಲ. ಆದಕಾರಣ ಅಂದಿನ ಕಾಲದಲ್ಲಿ ಸಾರಿಗೆ ಸಂಪರ್ಕ ಸಾಧನಗಳಾಗಿ ಪ್ರಾಣಿಗಳು, ಗಾಡಿಗಳು ಮತ್ತು ರಥಗಳು ಬಳಕೆಯಲ್ಲಿ ಇದ್ದವು. ತ್ವರಿತವಾಗಿ ಮತ್ತು ವೇಗವಾಗಿ ಪ್ರಯಾಣ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಆದ ಕಾರಣ ಪ್ರವಾಸಿಗರು ರಾತ್ರಿಯ ವೇಳೆಯಲ್ಲಿ ಒಂದು ನಿರ್ದಿಷ್ಟವಾದ ಪ್ರದೇಶಗಳಲ್ಲಿ ರಾತ್ರಿಯನ್ನು ಕಳೆದು ನಂತರ ತಮ್ಮ ಪ್ರಯಾಣವನ್ನು ಮುಂದುವರಿಸುತ್ತಿದ್ದರು.

ಅಂದಿನ ಕಾಲದ ಸಮಾಜದಲ್ಲಿ ಜಾತ್ರೆಗಳನ್ನು ನಡೆಸುವುದು ರೂಢಿಯಲ್ಲಿತ್ತು. ಜಾತ್ರೆಗಳಿಗೆ ದೂರ ದೂರದ ಗ್ರಾಮಗಳ ಜನರು ಬರುತ್ತಿದ್ದರಿಂದ ಮತ್ತು ಸಾಮಾನ್ಯವಾಗಿ ಜಾತ್ರೆಗಳಲ್ಲಿ ಜನರು ಅಪಾರ ಸಂಖ್ಯೆಯಲ್ಲಿ ಸೇರುತ್ತಿದ್ದರಿಂದ ಅಲ್ಲಿ ವ್ಯಾಪಾರವು ನಡೆಯತ್ತಿತ್ತು. ಇಲ್ಲಿಗೆ ಬಂದಂಥ ಅಪಾರ ಜನಸಂಖ್ಯೆಗೆ ಕುಡಿಯಲು ನೀರನ್ನು ಬಾವಿಗಳು ಒದಗಿಸುತ್ತಿದ್ದವು. ಉದಾ: ದೇವಿಹಾಳದ ಹೊಳಲಮ್ಮ ದೇವಸ್ಥಾನಕ್ಕೆ ದವನದ ಹುಣ್ಣಿಮೆಯಂದು ನಡೆಯುವ ಜಾತ್ರೆಗೆ ಬೇರೆ ಬೇರೆ ಗ್ರಾಮದ ಜನ ಆಗಮಿಸುತ್ತಿರುವುದರಿಂದ ಅವರ ಬಳಕೆಗೆ ಇಲ್ಲಿ ಹೊಂಡಗಳು ನಿರ್ಮಾಣವಾಗಿರಬಹುದು. ಗದಗ ಜಿಲ್ಲೆಯ ಬಹುತೇಕ ಕಡೆಗಳಲ್ಲಿ ಇಂತಹ ಬಾವಿಗಳನ್ನು ಕಾಣಬಹುದು.

ಅ. ಅರವಟ್ಟಿಗೆಗಳು :

ಬಾವಿಗಳನ್ನು ಕಟ್ಟಿ ಅದನ್ನು ಅರವಟ್ಟಿಗೆಯಾಗಿ ಉಪಯೋಗಿಸುತ್ತಿದ್ದರು. ಅರವಟ್ಟಿಗೆ ಎಂದರೆ ಪ್ರವಾಸಿಗರಿಗೆ ಕುಡಿಯಲು ನೀರನ್ನು ಒದಗಿಸುವ ಸ್ಥಳ. ಇವುಗಳನ್ನು ಪ್ರವಾಸಿಗರ ತಂಗುದಾಣಗಳಾಗಿ ಮತ್ತು ರಾಜರುಗಳ ಹಾಗೂ ಸಾರ್ವಜನಿಕರ ವಿಹಾರಾರ್ಥವಾಗಿ ಉಪಯೋಗಿಸುತ್ತಿದುದು ಕಂಡುಬಂದಿದೆ. ಪ್ರಾಚೀನ ಕಾಲದಲ್ಲಿ ತೀವ್ರಗತಿಯ ಸಂಚಾರಿ ಸಾಧನಗಳು ಇಲ್ಲದೆ ಇದ್ದಾಗ ಪ್ರಯಾಣಿಕರು ಕಾಲ್ನಡಿಗೆಯಿಂದಲೇ ಪ್ರಯಾಣಿಸುತ್ತಿದ್ದರು. ಇದರ ಜೊತೆಗೆ ಎತ್ತಿನ ಬಂಡಿಗಳು ಕ್ರಮೇಣ ಅಸ್ತಿತ್ವಕ್ಕೆ ಬಂದವು. ಪ್ರಯಾಣಿಕರು ಪ್ರಯಾಣಿಸುವಾಗ ಬಾಯಾರಿಕೆ ನೀಗಿಸಲು ಅರಸ ಇಲ್ಲವೇ ಅಧಿಕಾರಿ ವರ್ಗದವರು ದಾರಿಯ ಪಕ್ಕದಲ್ಲಿ ಅರವಟ್ಟಿಗೆಯನ್ನು ನಿರ್ಮಿಸುತ್ತಿದ್ದು ಕಂಡು ಬರುವುದುಂಟು.

ಅರವಟ್ಟಿಗೆಗಳು ಪ್ರಾಚೀನತೆಯನ್ನು ಗಮನಿಸಿದರೆ ಅವುಗಳ ರಚನೆಕಾರನು ಮೌರ್ಯ ದೊರೆ ಅಶೋಕನೆಂದು ಹೇಳಿದರೆ ತಪ್ಪಾಗಲಾರದು. ಬೌದ್ಧ ಧರ್ಮ ಪ್ರಸಾರಕ್ಕಾಗಿ ಊರಿಂದ, ಊರಿಗೆ,

ದೇಶದಿಂದ ದೇಶಕ್ಕೆ ಹೋಗುವ ಸಂದರ್ಭದಲ್ಲಿ ನೀರಿನ ಸೌಕರ್ಯಕ್ಕಾಗಿ ಅರವಟ್ಟಿಗೆಗಳು ಸಾಮಾನ್ಯವಾಗಿ ದೇವಸ್ಥಾನಗಳಿಗೆ, ಅಗ್ರಹಾರಗಳಿಗೆ ಇಲ್ಲವೆ ಅನ್ನಛತ್ರಗಳಿಗಾಗಿ ಹೊಂದಿ ಕೊಂಡಿರುತ್ತಿದ್ದವು. ದಾನದ ರೂಪದಲ್ಲಿ ಬಂದ ಹಣದಿಂದ ಇವುಗಳನ್ನು ನಡೆಸಲಾಗುತ್ತಿತ್ತು. ಇಂತಹ ಅರವಟ್ಟಿಗೆಗಳು ಬೇಸಿಗೆ ಕಾಲದಲ್ಲಿ ೩ ತಿಂಗಳು ಅಥವಾ ೪ ತಿಂಗಳು ಕಾರ್ಯ ನಿರ್ವಹಿಸುತ್ತಿದ್ದವು. ಇದಕ್ಕೆ ನಿದರ್ಶನವಾಗಿ ಕ್ರಿ.ಶ. ೧೫೧೯ರ ಶಾಸನದಲ್ಲಿ[೧೪] ವಿಜಯನಗರ ಅರಸ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಮಾನ್ಯದ ಹೊಲದ ಧರ್ಮಶಾಸನದಲ್ಲಿ ಗದುಗಿನ ವೀರನಾರಾಯಣ ತೇರಬೀದಿಯ ಒಳಗಣ ಕೋಟೆಯ ಮುಂದೆ ಒಂದು ಅರವಟ್ಟಿಗೆ, ಬೆಟಗೇರಿ ಮತ್ತು ಬೆನಕೂಪ್ಪ ಗ್ರಾಮಗಳ ನಡುವಿನ ಉಭಯ ಮಾರ್ಗದ ದಾರಿಯಲ್ಲಿ ಒಂದು ಹೀಗೆ ಒಟ್ಟು ಎರಡು ಅರವಟ್ಟಿಗೆಗಳು ಕಂಡುಬರುತ್ತವೆ. ಬೆಟಗೇರಿಯ ಪೂರ್ವದಲ್ಲಿ ನಾಗಸಮುದ್ರದ ದಕ್ಷಿಣದಲ್ಲಿ ಲಕ್ಷ್ಮೀನಾರಾಯಣಪುರಕ್ಕೆ ಹೋಗುವ ಕಾಲುದಾರಿಯ ಉತ್ತರಕ್ಕೆ ಈ ೪ ಸೀಮೆಯ ನಡುವೆ ಬರುವ ಕೋಳಗದ ಬಳಿಯ ಭೂಮಿಯನ್ನು ಅರವಟ್ಟಿಗೆಯ ನಿರ್ವಹಣೆಗಾಗಿ ನೀಡಿದನು. ಈ ಅರವಟ್ಟಿಗೆಗೆ ಕೊಟ್ಟ ಮಾನ್ಯದ ಹೊಲವನ್ನು ವಂಶ ಪಾರಂಪರ್ಯವಾಗಿ ಉಂಬಳಿಯಾಗಿ ಅನುಭವಿಸಬೇಕೆಂದು ಶಾಸನದಿಂದ ತಿಳಿದುಬರುತ್ತದೆ. ಈ ಭೂಮಿದಾನವನ್ನು ಬಾಗಿಲನಾಯಕನ ಮಗ ನಾಯನಪ್ಪ ನಾಯಕನು ಪರುವತ್ತೊಡೆಯರಿಗೆ ದಾನ ನೀಡಿದನು. ಈ ದಾನವನ್ನು ತಿಮ್ಮಪ್ಪನಾಯಕನು ಅಯ್ಯನವರಿಗೆ ಉಂಬಳಿಯಾಗಿ ನೀಡಲಾಗಿದೆ. ಈ ಶಾಸನದಲ್ಲಿ ಪರವತೊಡೆಯರು ಈಗ ಪರವತಗೌಡರೆಂಬ ಹೆಸರಿನಿಂದ ಇಂದಿಗೂ ಈ ಭಾಗದಲ್ಲಿ ಭೂ ಒಡೆಯರಾಗಿದ್ದು ವಿಶೇಷವಾಗಿ ಕಂಡುಬರುತ್ತದೆ. ೬ನೇ ವಿಕ್ರಮಾದಿತ್ಯನ ಕ್ರಿ.ಶ. ೧೧೧೧ರ ರೋಣ ಶಾಸನದಲ್ಲಿ[೧೫] ಹೊಂಗರ ಕುಲದ ನಾಗವಿಷ್ಣ ರೋಣದಲ್ಲಿ ಅರವಟ್ಟಿಗೆಯನ್ನು ನಿರ್ಮಿಸಿ ಅದನ್ನು ನೋಡಿಕೊಂಡು ಹೋಗಲು ೫ ಗದ್ಯಾಣ ಬಂಗಾರದ ನಾಣ್ಯಗಳನ್ನು ಹಾಗೂ ಎಣ್ಣೆ ಗಾಣವನ್ನು ನೀಡಿದ ವಿಷಯ ಶಾಸನದಿಂದ ತಿಳಿದು ಬರುತ್ತದೆ. ರೋಣದ ಕ್ರಿ.ಶ. ೧೧೭೯ರ ಇನ್ನೊಂದು ಶಾಸನದಲ್ಲಿ[೧೬] ರೋಣದ ಅರವಟ್ಟಿಗೆಗೆ ಸಿಂಧಮಾಂಡಳಿಕರಾದ ಬಿಜ್ಜಣ ಮತ್ತು ವಿಕ್ರಮರಸನು ೨ ಮತ್ತರು ಭೂಮಿದಾನ ನೀಡಿದ ಬಗ್ಗೆ ಮಾಹಿತಿ ದೊರೆಯುತ್ತದೆ. ಹೀಗೆ ಅರವಟ್ಟಿಗೆಗಳು ದೇವಾಲಯದ ಮಠಗಳಿಗೆ ಹೊಂದಿಕೊಂಡಿರದಿದ್ದರೂ ಇವು ರಸ್ತೆ ಬದಿಯಲ್ಲಿದ್ದು ಪ್ರಯಾಣಿಕರ ದಾಹ ಇಂಗಿಸುತ್ತಿದ್ದವು. ಇವುಗಳನ್ನು ಧರ್ಮಸ್ಥಾನಗಳೆಂದೂ, ಇವುಗಳನ್ನು ನಡೆಸುವುದು ಸತ್ಕಾರ್ಯಗಳಲ್ಲಿ ಒಂದು ಎಂದು ತಿಳಿಯಲಾಗಿತ್ತು.

**ಬ. ಗ್ರಾಮಗಳ ಉಪಯೋಗ :**

ಈ ಬಾವಿಗಳನ್ನು ವ್ಯಾಪಾರಿಗಳು ಮತ್ತು ಪ್ರವಾಸಿಗಳಲ್ಲದೆಯೂ ಅವರ ಜೊತೆಯಲ್ಲಿ ಗ್ರಾಮದ ಜನತೆಯು ಇವುಗಳಿಂದ ಪ್ರಯೋಜನ ಪಡೆಯುತ್ತಿದ್ದರು. ಮುಖ್ಯವಾಗಿ ಕುಡಿಯುವ ನೀರಿಗಾಗಿ ಮತ್ತು ಇತರ ಗೃಹೋಪಯೋಗಕ್ಕಾಗಿ ಬಳಸಲ್ಪಡುತ್ತಿದ್ದವು. ಗ್ರಾಮದ ಒಳಭಾಗದಲ್ಲಿ ಈ

ರೀತಿಯ ಬಾವಿಯು ಇದ್ದರೆ, ಅದನ್ನು ಗ್ರಾಮಕ್ಕೆ ಸೇರಿದಂತಹ ಎಲ್ಲಾ ವರ್ಗದ ಜನರು ಬಳಸಬಹುದಿತ್ತು. ಗ್ರಾಮದ ಹೊರಭಾಗದಲ್ಲಿ ಇರುವಂತಹ ಬಾವಿಗಳನ್ನು ಮುಖ್ಯವಾಗಿ ಯಾತ್ರಿಕರು ಬಳಸುತ್ತಿದ್ದರು. ಇಲ್ಲಿ ಸಾರ್ವಜನಿಕರಿಗೂ ಅವಕಾಶವಿದ್ದಿತು. ಒಂದು ಗ್ರಾಮದಲ್ಲಿ ಕುಡಿಯುವ ನೀರಿನ ತೊಂದರೆಯು ಇದ್ದಂತಹ ಸಂದರ್ಭಗಳಲ್ಲಿ ದೂರದಲ್ಲಿ ಇರುವಂತಹ ಬಾವಿಯಿಂದ ಕಾಲುವೆಗಳ ಮೂಲಕ ನೀರನ್ನು ಸಾಗಿಸುತ್ತಿದ್ದರು.[೧೬] ನರಗುಂದ ತಾಲೂಕಿನ ಯಾವಗಲ್ಲಿನ ಶಾಸನದಲ್ಲಿ[೧೭] ಯಾವಗಲ್ಲ ಗ್ರಾಮದಲ್ಲಿ ಸಾರ್ವಜನಿಕರಿಗಾಗಿ ಬಾವಿಯನ್ನು ನಿರ್ಮಿಸಿದ ಉಲ್ಲೇಖವಿದೆ.

**೩. ವಿಹಾರಾರ್ಥ:**

ಬಾವಿಗಳನ್ನು ಮುಖ್ಯವಾಗಿ ವಿಹಾರಾರ್ಥವಾಗಿ ಉಪಯೋಗಿಸಲು ಕಟ್ಟುತ್ತಿರುವುದು ಕಂಡುಬರುತ್ತದೆ. ಈ ಬಾವಿಗಳನ್ನು ವಿಹಾರಾರ್ಥಿಗಳು ಬಳಸುತ್ತಿದ್ದರು ಎಂಬುದನ್ನು ಮತ್ತು ಇವುಗಳ ಆಸುಪಾಸಿನಲ್ಲಿ ಉದ್ಯಾನವನಗಳು ಇದ್ದವೆಂದು ತಿಳಿಯಲು ನಮಗೆ ಕ್ರಿ.ಶ. ೧೦ನೇ ಶತಮಾನದಲ್ಲಿ ಶಿವಕೋಟ್ಯಾಚಾರ್ಯನಿಂದ ರಚಿತವಾದ ವಡ್ಡಾರಾಧನೆಯ ಗ್ರಂಥದ ಕಥೆಗಳಲ್ಲಿ ಬರುವಂತಹ ಗುರುದತ್ತ ಭಟಾರರ ಕಥೆಯಿಂದ ತಿಳಿಯಬಹುದಾಗಿದೆ. ರಾಜ್ಯದ ರಾಜ ಪರಿವಾರದವರಿಗೆ ಮತ್ತು ಮುಖ್ಯವ್ಯಕ್ತಿಗಳಿಗೆ ಇಂತಹ ಬಾವಿಗಳನ್ನು ವಿಹಾರಕ್ಕಾಗಿಯೇ ಪ್ರತ್ಯೇಕವಾಗಿ ಕಟ್ಟಿಸಿರುವುದು ಕಂಡುಬರುತ್ತದೆ. ಇವುಗಳಲ್ಲಿ ಸಾರ್ವಜನಿಕರಿಗೆ ಯಾವುದೇ ರೀತಿಯಾದ ಪ್ರವೇಶ ಇರುವುದಿಲ್ಲ. ಬಹುಮುಖ್ಯವಾಗಿ ಅಂದಿನ ಕಾಲದಲ್ಲಿ ಕಟ್ಟಿದ ಇಂತಹ ಬಾವಿಗಳು ಅರಮನೆಯ ಆವರಣದಲ್ಲಿ ಕಂಡುಬಂದಿವೆ. ಇದರಿಂದ ತಿಳಿದು ಬರುವುದೇನೆಂದರೆ ಅರಮನೆಗೆ ಸಂಬಂಧಿಸಿದ ವ್ಯಕ್ತಿಗಳಿಗಾಗಿ ಮಾತ್ರ ಕೆಲವು ಬಾವಿಗಳನ್ನು ಪ್ರತ್ಯೇಕವಾಗಿ ಮೀಸಲು ಇಡುವುದು ರೂಢಿಯಲ್ಲಿದ್ದಿತು. ಅಂತಹ ಬಾವಿಗಳು ಗದಗ ಜಿಲ್ಲೆಯ ರೋಣದಲ್ಲಿ ಅರಮನೆ ಬಾವಿ, ಮತ್ತು ಗೌಡರ ಬಾವಿ ಕಂಡುಬರುತ್ತದೆ.

**೪. ಧಾರ್ಮಿಕ ಉದ್ದೇಶ :**

ಬಾವಿಗಳನ್ನು ನೀರಿನ ಸೌಕರ್ಯಕ್ಕಲ್ಲದೆಯೇ ಧಾರ್ಮಿಕ ಉದ್ದೇಶಗಳಿಗೂ ಬಳಸಿಕೊಳ್ಳಲಾಗಿದೆ. ಈ ಬಾವಿಗಳನ್ನು ಮುಖ್ಯವಾಗಿ ದೇವಾಲಯಗಳಿಗೆ ಹೊಂದಿಕೊಂಡಂತೆ ಇರುವುದರಿಂದಾಗಿ ಇವು ಧಾರ್ಮಿಕ ಕ್ಷೇತ್ರದಲ್ಲಿ ತಮ್ಮದೇ ಆದಂತಹ ಸ್ಥಾನಗಳನ್ನು ಪಡೆದುಕೊಂಡಿವೆ. ಜೈನ ಸಾಹಿತ್ಯ ಮತ್ತು ಕೆಲವು ಶಾಸನಗಳ ಪ್ರಕಾರ ಇವುಗಳನ್ನು ದೇವಾಲಯಗಳ ಜೊತೆಯಲ್ಲಿಯೇ ಕಟ್ಟುತ್ತಿದ್ದರು. ಶಾಸ್ತ್ರೋಕ್ತವಾಗಿ ದೇವಾಲಯಗಳು ಇರುವಂತಹ ಪ್ರದೇಶಗಳಲ್ಲಿ ನೀರಿನ ಸೌಕರ್ಯ ಇಲ್ಲದಿದ್ದರೆ ಅಂತಹ ಸ್ಥಳಗಳಲ್ಲಿ ದೇವರು ಇರುವುದಿಲ್ಲ ಎಂಬ ನಂಬಿಕೆ ಇದೆ. ಒಂದು ದೇವಾಲಯವನ್ನು ಕಟ್ಟಿದರೆ ಅದರ ಮುಂಭಾಗ ಅಥವಾ ಎಡಭಾಗದಲ್ಲಿ ಬಾವಿಯನ್ನು ಕಟ್ಟಲೇಬೇಕು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.[೧೮] ಇಂತಹ ಬಾವಿಗಳು ಗದಗಿನ ತ್ರೀಕೋಟೇಶ್ವರ ದೇವಾಲಯದ ಅಷ್ಟತೀರ್ಥ, ವೀರನಾರಾಯಣ

ದೇವಾಲಯದ ಕೋನೇರಿ ತೀರ್ಥ, ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದ ಗೌರಿದೇವಿ ಬಾವಿ, ಲಕ್ಷ್ಮೇಲಿಂಗನ ರಾಟಣದ ಬಾವಿ, ಲಕ್ಕುಂಡಿಯ ಮಾಣಿಕೇಶ್ವರದ ಪುಷ್ಕರಣಿಗಳು ಪ್ರಮುಖವಾಗಿವೆ.

ನದಿದಂಡೆಗಳ ಮೇಲೆ, ಕೆರೆಯ ದಂಡೆಗಳ ಮೇಲೆ ಮತ್ತು ಸಮುದ್ರದ ದಂಡೆಗಳ ಮೇಲೆ ಹಾಗೂ ನೀರಿನ ಸೌಕರ್ಯ ಇರುವಂತಹ ಸ್ಥಳಗಳಲ್ಲಿ ದೇವರನ್ನು ಪ್ರತಿಷ್ಠಾಪನೆ ಮಾಡಬೇಕು ಎಂದು ಶಾಸ್ತ್ರ ತಿಳಿಸುತ್ತದೆ. ಕೆಲವೊಂದು ಸಂದರ್ಭಗಳಲ್ಲಿ ನೀರು ಸಿಗದೇ ಇರುವಂತಹ ಸಂದರ್ಭಗಳಲ್ಲಿ ದೇವರನ್ನು ಪ್ರತಿಷ್ಠಾಪಿಸಬೇಕಾದರೆ ಅಂತಹ ಸ್ಥಳಗಳಲ್ಲಿ ಕೃತಕವಾಗಿ ನೀರಿನ ವ್ಯವಸ್ಥೆಯನ್ನು ಮಾಡಬೇಕು. ನೀರು ಇರುವಂತಹ ಸ್ಥಳದಿಂದ ಕಾಲುವೆಗಳ ಮೂಲಕ ನೀರು ಇರದೇ ಇರುವಂತಹ ಸ್ಥಳಕ್ಕೆ ಸಾಗಿಸಬೇಕು ಎಂಬುದುದಾಗಿದೆ. ನೀರು ಜೀವನಕ್ಕೆ ಅವಶ್ಯಕವಾಗಿ ಬೇಕಾಗಿರುವುದಲ್ಲದೇ ಅದು ಜೀವಿಗಳ ಬೆಳವಣಿಗೆಗೆ ಆಸರೆಯಾಗಿದೆ. ನೀರು ಫಲವತ್ತತೆಯ ಸಂಕೇತವಾಗಿ ಇರುವುದರಿಂದ ಮಾತೃದೇವತೆಗೆ ಹೋಲಿಸುತ್ತಿದ್ದರು. ವೇದಗಳ ಕಾಲದಲ್ಲಿ ನದಿಗಳನ್ನು ಪವಿತ್ರ ಪ್ರಾಣಿಯಾದ ಹಸುವಿಗೆ ಹೋಲಿಸುತ್ತಿದ್ದರು. ಪೌರಾಣಿಕವಾಗಿ ನೀರು ಫಲವತ್ತತೆಯ ಸಂಕೇತವಾಗಿ ಇಂದ್ರ ಮತ್ತು ವರುಣನ ಮೂಲ ಪ್ರತಿನಿಧಿಯಾಗಿ ಭೂಮಿಗೆ ಬಂದು ನದಿ, ಕೆರೆ ಮತ್ತು ಬಾವಿಗಳಲ್ಲಿ ಸಂಗ್ರಹಣೆಯಾಗುತ್ತದೆ. ಒಬ್ಬ ತಾಯಿಯು ತನ್ನ ಮಗುವಿಗೆ ಹಾಲುಣಿಸುವಾಗ ಹಾಲು ಕಡಿಮೆಯಾದರೆ ಆ ತಾಯಿಯು ಬಾವಿಯ ನೀರನ್ನು ಪೂಜಿಸಿದರೆ ಮಗುವಿಗೆ ಸಾಕಾಗುವಷ್ಟು ಹಾಲು ವೃದ್ಧಿಯಾಗುತ್ತದೆ ಎಂದು ವೇದಗಳ ಕಾಲದ ನಂಬಿಕೆಯಾಗಿತ್ತು. ಮಧ್ಯಕಾಲದಲ್ಲಿ ಧಾರ್ಮಿಕವಾಗಿ ಒಳ್ಳೆಯ ಕಾರ್ಯಗಳನ್ನು ಮಾಡಬೇಕೆಂದರೆ, ಸಮಾಜದ ಉನ್ನತ ವರ್ಗದವರು ಬಾವಿಗಳನ್ನು ಕಟ್ಟುತ್ತಿದ್ದರು. ಒಬ್ಬ ವ್ಯಕ್ತಿ ಸಮಾಜದಲ್ಲಿ ಒಳ್ಳೆಯ ಗೌರವವನ್ನು ಪಡೆಯಬೇಕಾದರೆ ಆತನು ತನ್ನ ಸ್ವಂತ ಖರ್ಚಿನಿಂದ ಬಾವಿಯನ್ನು ಸಾರ್ವಜನಿಕರ ಉಪಯೋಗಕ್ಕೆ ದಾನವಾಗಿ ನೀಡಿದರೆ, ಆತನು ದೇವರನ್ನು ಸಂತೋಷಪಡಿಸಿದಂತಾಗುತ್ತದೆ ಎಂದು 'ವಿಷ್ಣುಧರ್ಮೋತ್ತರ ಪುರಾಣ'ದಲ್ಲಿ ಹೇಳಲಾಗಿದೆ. ಮದುವೆಯಾದ ನಂತರ ಅನೇಕ ವರ್ಷಗಳ ಕಾಲ ಸಂತಾನ ಪ್ರಾಪ್ತಿಯಾಗದೇ ಇರುವಂತಹ ಗೃಹಿಣಿಯು ತೆಂಗಿನಕಾಯಿ, ಬೇಳೆಕಾಳು ಮತ್ತು ಹಾಲನ್ನು ಬಾವಿಗೆ ಅರ್ಪಿಸಿ ಪೂಜಿಸಿದರೆ ಸಂತಾನ ಪ್ರಾಪ್ತಿಯಾಗುತ್ತದೆ ಎಂದು ಅಂದಿನ ಜನರಲ್ಲಿ ನಂಬಿಕೆಯಿತ್ತು. ಮದುವೆಯಾದ ನವದಂಪತಿಗಳು ಬಾವಿಯ ನೀರನ್ನು ಪೂಜಿಸಿದರೆ ಅವರು ತಮ್ಮ ಸಂಸಾರವನ್ನು ನಡೆಸುತ್ತಾರೆ ಎಂಬ ನಂಬಿಕೆ ಇತ್ತು. ಇಂಥ ಬಾವಿಗಳನ್ನು ಗದಗ ಜಿಲ್ಲೆಯ ಗಜೇಂದ್ರಗಡದ ಪುಣ್ಯತೀರ್ಥ ಪುಷ್ಕರಣಿ, ಇಟಗಿಯ (ಭಿಮಾಂಬಿಕೆಯ ಬಾವಿ), ವರವಿಯ (ಅಂಬಲಿ ಹೊಂಡ,) ಜಂತಲಿಯ ಕೆರೆಕೋಡಿ (ಬಸವೇಶ್ವರ ಹೊಂಡ)ಗಳಲ್ಲಿ ಕಾಣಬಹುದು.

**೫. ಸಾಮಾಜಿಕ ಮತ್ತು ಇತರ ಕಾರ್ಯಗಳು:**

ಅಂದಿನ ಕಾಲದಲ್ಲಿ ಕೆಲವು ಹಬ್ಬಗಳನ್ನು ವಿಶೇಷವಾದ ಆಸಕ್ತಿಯಿಂದ ಮಾಡುತ್ತಿದ್ದನು.

ದಸರಾ ಎಳ್ಳ ಅಮವ್ಯಾಸೆ ಹಬ್ಬವನ್ನು ಬಹಳ ವಿಜೃಂಭಣೆಯಿಂದ ನವರಾತ್ರಿ ಹಬ್ಬವನ್ನಾಗಿ ಆಚರಿಸುತ್ತಿದ್ದರು. ಈ ಹಬ್ಬದ ಸಂದರ್ಭದಲ್ಲಿ ಊರಿನ ಜನತೆಯ ವಿಹಾರಕ್ಕಾಗಿ ಎಲ್ಲರೂ ಒಟ್ಟಿಗೆ ಸೇರಿಕೊಂಡು ಗ್ರಾಮದ ಹೊರ ಭಾಗಗಳಲ್ಲಿ ಬೀಡು ಬಿಡುತ್ತಿದ್ದರು. ಸಾಮಾನ್ಯವಾಗಿ ಅವರಿಗೆ ನೀರಿನ ಅವಶ್ಯಕತೆಯು ಇದ್ದದರಿಂದಾಗಿ ಅವರುಗಳು ಈ ಬಾವಿಗಳಲ್ಲಿ ನೀರು ಸಿಗುವುದರಿಂದ ಮತ್ತು ಇವುಗಳ ಆಸುಪಾಸಿನಲ್ಲಿ ಉದ್ಯಾನವನಗಳು, ಮರದ ತೋಪುಗಳು ಇರುವುದರಿಂದ ವಿಹಾರಕ್ಕೆ ಒಳ್ಳೆಯ ಪ್ರದೇಶಗಳಾಗಿದ್ದರಿಂದ ಇಲ್ಲಿ ಬೀಡು ಬಿಡುತ್ತಿರಬಹುದು. ರೋಣದ ಅರಮನೆ ಬಾವಿಯಲ್ಲಿ ನೀರು ದೊರೆಯುತ್ತಿತ್ತು, ಇದರಿಂದ ರಾಜರು ಇಲ್ಲಿ ತಮ್ಮ ನಿತ್ಯ ಕರ್ಮಗಳನ್ನು ಮಾಡುತ್ತಿರಬಹುದು. ಬಹುಶ: ಇದು ಹಂಪಿ ರಾಣಿ ಸ್ನಾನಗೃಹ ಇದ್ದಂತೆ ತೋರುತ್ತದೆ. ಆದರೆ ಇದು ತಳಭಾಗ ಬಿದ್ದಿದ್ದರಿಂದ ಇದರ ಬಗ್ಗೆ ಖಚಿತವಾಗಿ ಹೇಳವುದು ಸಾಧ್ಯವಾಗುತ್ತಿಲ್ಲ. ಇವುಗಳಷ್ಟೇ ಅಲ್ಲದೇ ಈ ಜಿಲ್ಲೆಯಲ್ಲಿ ಲಕ್ಷ್ಮೇಶ್ವರದ ಪಾಟೀಲ್‌ರ ಬಾವಿ, ಲಕ್ಕುಂಡಿ ಮಾಣಿಕ್ಕೇಶ್ವರ ಪುಷ್ಕರಣಿ ಮತ್ತು ಡಂಬಳದ ಜಪದಬಾವಿ ಮುಖ್ಯವಾಗಿ ಕಂಡುಬರುತ್ತವೆ. ರೋಣ ತಾಲ್ಲೂಕಿನ ಹೀರೆಹಾಳದ ಹೀರೆಹಳ್ಳದ ದಂಡೆಯಲ್ಲಿ ಪ್ರತಿವರ್ಷ ಎಳ್ಳಅಮವ್ಯಾಸೆ ದಿನದಂದು ಇಡೀ ಗ್ರಾಮದ ಜನರು ಇಲ್ಲಿಗೆ ತರತರಪವ ಅಡಿಗೆ ಮಾಡಿಕೊಂಡು ಬಂದು ಒಟ್ಟಿಗೆ ಕುಳಿತುಕೊಂಡು ಊಟ ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಕೆರೆ-ಬಾವಿಗಳು ನೀರಿನಿಂದ ತುಂಬಿದಾಗ ರಾಜನು ಮತ್ತು ಗ್ರಾಮದ ಮುಖ್ಯಸ್ಥನು ಇವುಗಳಿಗೆ ಪೂಜಿಸಿ ಬಾಗಿಣ ಅರ್ಪಿಸುವುದು ಇಂದಿನ ಸಮಾಜದಲ್ಲಿ ರೂಢಿಯಲ್ಲಿದೆ. ಇಂತಹ ಸಾಮಾಜಿಕ ಆಚರಣೆಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ.

**೪.೬. ಶಾಸನೋಕ್ತ ಪುಷ್ಕರಣಿ, ಬಾವಿ, ಹೊಂಡಗಳ ಸ್ವರೂಪ :**

**ನರಗುಂದದ ಸೋಮಾಪುರ ಬಾವಿ :**

ನರಗುಂದ ತಾಲೂಕಿನ ಸೋಮಾಪುರದ ಕ್ರಿ.ಶ.೧೦೮೦ರ ಶಾಸನದಲ್ಲಿ[೯]

ನಾನಾ ವಿಧಿಮಪ್ಪ ಚತ್ರರವಂಟಿಗೆ
ದಿಗ್ಗಿಗೆ ಶಾಲೆ ನನ್ದನಂ ಬಾವಿ ತಟಾಕಂ
ಗ್ಗಿವೀನೇಯಾರವಿ (ವಿಷ್ಣು) ಗ್ರಹಂ ಶಿವಾಲಯ

ಈಶ್ವರನಾಯಕ ಎಂಬ ರಾಯಭಾರಿಯೊಬ್ಬ ಅನೇಕ ಪುಷ್ಕರಣಿ, ಕೆರೆ, ಬಾವಿಯೊದನ್ನು ನಿರ್ಮಿಸಿ ಅವುಗಳ ನಿರ್ವಹಣೆಗೆ ಭೂಮಿ ದಾನ ನೀಡಿರುವುದನ್ನು ಈ ಶಾಸನ ಉಲ್ಲೇಖಿಸುತ್ತದೆ. ಅದಲ್ಲದೆ ಶಿವ ಮತ್ತು ವಿಷ್ಣು ದೇವಾಲಯಗಳನ್ನು ನಿರ್ಮಿಸಿ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿದ ಬಗ್ಗೆ ಮಾಹಿತಿ ಇದೆ. ಚಾಲುಕ್ಯ ವಂಶದ ವಂಶಾವಳಿಯನ್ನು ಹೇಳುತ್ತಾ ಶಾಸನದಲ್ಲಿ ಸೋವಿದೇವ ಪೆರ್ಮನಾಡಿ ಸಿಂಗದೇವ ಮತ್ತು ಶ್ರೀವಲ್ಲಭ ಎಂಬ ಅಧಿಕಾರಿಗಳು ಅನೇಕ ಕಡೆ

ನೀರಿನ ತೊಟ್ಟಿಗಳನ್ನು ಕಟ್ಟಿಸಿದನೆಂದು, ಭೋಜನ ಮನೆ, ಬಾವಿಗಳನ್ನು ನಿರ್ಮಿಸಿ ಒಂದು ನೀರಿನ ತೊಟ್ಟಿಗೆ ಈಶ್ವರ ಸಮುದ್ರವೆಂದು ದಾಖಲೆ ಮಾಡಿದ ವಿವರವಿದೆ. ಅಲ್ಲದೇ ಮೇಲ್ವಿಚಾರಣೆಗೋಸ್ಕರ ಭೂದಾನ ಮಾಡಿದನೆಂಬುವುದರ ದಾಖಲೆ ಕೂಡ ದೊರೆಯುತ್ತದೆ. ಇದರಿಂದ ಈ ಗ್ರಾಮದಲ್ಲಿ ನೀರಿನ ತೊಟ್ಟಿಗಳ ನಿರ್ಮಾಣ, ಬಾವಿಗಳ ನಿರ್ಮಾಣದಿಂದ ದೈನಂದಿನ ಉಪಯೋಗ ಕಾರ್ಯಗಳಿಗೆ ಸಹಕಾರಿಯಾಗಿದ್ದವು. ನೀರಿನ ತೊಟ್ಟಿ ಬಹುಶಃ ಬಾವಿಗಿಂತ ತುಸು ದೊಡ್ಡದು ಪುಷ್ಕರಣಿ ಮಾದರಿ ಎಂತಿರಬಹುದೆಂಬುದು ತೋರುತ್ತದೆ. ಇವೆಲ್ಲಾ ಅಂದಿನ ದಾನ ಪರತೆಯ ಪ್ರತೀಕವಾಗಿದೆ. ಹಸಿದು ಬಂದವರಿಗೆ ಊಟ ನೀಡುವುದು, ಬಾಯಾರಿದವರಿಗೆ ನೀರು ಕೊಡುವುದು ಮಾನವನ ಧರ್ಮದ ಮುಖ್ಯ ದಯೆಗಳಲ್ಲಿ ಒಂದು. ಈ ಬಾವಿಯು ಪ್ರಸ್ತುತವಾಗಿ ಸಾಧಾರಣ ಮಟ್ಟದಲ್ಲಿದೆ. ಇದರ ನೀರನ್ನು ಯಾವುದೇ ಕೆಲಸಕ್ಕೆ ಉಪಯೋಗಿಸುವುದಿಲ್ಲ.‘ ಇದು ವೃತ್ತಾಕಾರವಾಗಿ ಇದ್ದು, ಇದರ ಅಂತರ್ಜಲ ಕಡಿಮೆಯಾಗಿದೆ.

**ಲಕ್ಷ್ಮೇಶ್ವರದ ಸೋಮೇಶ್ವರ ದೇವಸ್ಥಾನದ ಪುಷ್ಕರಣಿ (ಗೌರಿದೇವಿ ಬಾವಿ) :**

"ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರವು ಐತಿಹಾಸಿಕವಾದ ಪಟ್ಟಣವಾಗಿದ್ದು, ಶಾಸನಗಳಲ್ಲಿ ಈ ಪಟ್ಟಣವನ್ನು ಪುಲಿಗೆರೆ, ಪುಲಿಕಾನಗರ ಮುಂತಾದ ಹೆಸರುಗಳಿಂದ ಕರೆದಿದ್ದಾರೆ. ಕ್ರಿ.ಶ. ೧೦೭೪ರ ಶಾಸನವು[೨೦] ಚಾಲುಕ್ಯ ಚಕ್ರವರ್ತಿ ಎರಡನೇ ಸೋಮೇಶ್ವರನ ಅಳ್ವಿಕೆಯಲ್ಲಿ ಪುಲಿಗೆರೆ-೩೦೦ನ್ನು ಮಹಾಮಂಡಳೇಶ್ವರ ಲಕ್ಷ್ಮರಸನೆಂಬವನು ಆಳುತ್ತಿದ್ದನೆಂದು ತಿಳಿಸುತ್ತದೆ. ಈತನು ತನ್ನ ಹೆಸರಿನಲ್ಲಿ ಲಕ್ಷ್ಮಣೇಶ್ವರ ದೇವಾಲಯವನ್ನು ನಿರ್ಮಿಸಿದ್ದರಿಂದ ಕ್ರಮೇಣ ಈ ಊರಿಗೆ ಲಕ್ಷ್ಮಣೇಶ್ವರ, ನಂತರ ಲಕ್ಷ್ಮೇಶ್ವರ ಎಂಬ ಹೆಸರು ಬಂದಿರಬಹುದೆಂದು ಊಹಿಸಲಾಗಿದೆ. ಈ ಊರಿನಲ್ಲಿ ಅನೇಕ ಶೈವ ಮತ್ತು ವೈಷ್ಣವ ದೇವಾಲಯಗಳು, ಜೈನ ಬಸದಿಗಳು ಹಾಗೂ ಅನೇಕ ಮಸೀದಿಗಳು ಕಂಡುಬರುತ್ತವೆ. ಸೋಮನಾಥ, ಲಕ್ಷ್ಮೇಶ್ವರ, ರಾಮೇಶ್ವರ, ಶೋಭನೇಶ್ವರ, ಬಾಳೇಶ್ವರ ಇವರು ಇಲ್ಲಿಯ ಮುಖ್ಯ ದೇವಾಲಯಗಳು. ಅನಂತನಾಥ ಬಸದಿ ಮತ್ತು ಶಂಖ ಜಿನಾಲಯಗಳು ಮುಖ್ಯವಾದ ಬಸದಿಗಳು. ಆದಿಲ್‌ಶಾಹಿ ಕಾಲದ ಜುಮ್ಮಾ ಮಸೀದಿ, ಸಿದ್ದಿ ಮಸೀದಿ, ಹಳೆ ಆಸಾರ್ ಮಸೀದಿ ಮುಂತಾದ ಮಸೀದಿಗಳು ಹಿಂದೂ ದೂದ್ ದರ್ಗಾ, ಮಲ್ಲಿಕ್ ಸಾದತ್ ದರ್ಗಾಗಳು ಈ ಊರಿನಲ್ಲಿವೆ. ಸೋಮೇಶ್ವರ ದೇವಾಲಯದ ಗರ್ಭಗುಡಿಯಲ್ಲಿ ಶಿವಲಿಂಗವಿಲ್ಲ, ಬದಲಾಗಿ ಉಮಾ-ಮಹೇಶ್ವರರ ವೃಷಭರೂಢ ಮೂರ್ತಿಯು ಇರುವುದು. ಚಿಕ್ಕ ಮಂಟಪದಲ್ಲಿ ಪ್ರವೇಶಿಸಿದ ನಂತರ ಗರ್ಭಗುಡಿಯ ಎಡಭಾಗದಲ್ಲಿ ಆದಯ್ಯನ ಸ್ಮೃತಿ ಸ್ಥಾನವಿದೆ. ಅದರ ಹತ್ತಿರವೇ ಒಬ್ಬ ಕಾವಡಿಕಾರನ ಉಬ್ಬು ಶಿಲ್ಪವಿದೆ.[೨೧] ಈ ಕಾವಡಿಕಾರನ ಬಗೆಗೆ ಅಲ್ಲಿನ ಪೂಜಾರಿಗಳಲ್ಲಿ ವಿಚಾರಿಸಿದಾಗ ಇದು ಶ್ರವಣ ಎಂಬ ಬಾಲಕನ ಶಿಲ್ಪ, ಅವನ ನಿತ್ಯ ಸ್ಮರಣೆಗಾಗಿ ನಾವು ನಮ್ಮ

ದೇಶವನ್ನೇ ಕಾವಡಿಯಾಗಿ ಭಾವಿಸಿ ದೇವಾಲಯದ ಹಿಂದಿನ ಭಾಗದಲ್ಲಿರುವ ಅಷ್ಟತೀರ್ಥದಿಂದ ಎರಡು ಕಲಶಗಳನ್ನು ತುಂಬಿಕೊಂಡು ಬರುತ್ತಿದ್ದನು ಎಂಬ ವಿಚಾರ ನಮಗೆ ದೊರೆಯುತ್ತದೆ.

ಮುಖ್ಯ ದೇವಾಲಯದ ಹಿಂಭಾಗದಲ್ಲಿ ಒಂದು ದೊಡ್ಡ ಬಾವಿ ಇದ್ದು, ಅದಕ್ಕೆ ಸುಂದರವಾದ ಪಾವಟಿಗಳನ್ನು ಇರಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಇಲ್ಲಿನ ಪುಷ್ಕರಣಿಯ ಹೂಳನ್ನು ತೆಗೆದು ಸ್ವಚ್ಛಗೊಳಿಸಿದಾಗ ಸುಂದರವಾದ ಬಾವಿಯು ಬೆಳಕಿಗೆ ಬಂದಿದೆ. ಈ ಪುಷ್ಕರಣಿಯನ್ನು ಗೌರಿ ಎಂಬ ಭಕ್ತೆಯು ಕಟ್ಟಿಸಿದಳೆಂದು ಸ್ಥಳೀಯರು ತಿಳಿಸುತ್ತಾರೆ. ಪ್ರಸ್ತುತ ಬಾವಿಗೆ ಸಂಬಂಧಿಸಿದಂತೆ ೩೦ಕ್ಕೂ ಅಧಿಕವಾದ ಶಾಸನಗಳು ದೊರಕಿವೆ. ಈ ಬಾವಿಯ ಬಾಗಿಲಿನ ದಪ್ಪ ಗೋಡೆಯಲ್ಲಿ ದಕ್ಷಿಣ ಭಾಗದಲ್ಲಿ ಒಂದು ಗೂಡು ಇದೆ. ಈ ಗೂಡಿನಲ್ಲಿ ೧೨ನೇ ಶತಮಾನದ ಒಂದು ಶಾಸನವಿದೆ.[೨೨]

ಇಟ್ಟಿಗೆ ಕಲು ಮರನೆಂಬುದನೊಟ್ಟಿದೊಡೆನುದ ದಾನಮಧಿಕ ಮೆನಲು ತಾಂ ಕಟ್ಟಿಸಿದಳ್ ಬಾವಿಯನಳವಟ್ಟಿರ ಗೌರಿ.

ದೇವಿ ಸೋಮೇಶ್ವರದೊಳ್ ॥ ಕಪೂರದ ಕರಣ್ಣಗೆಯೆಲೊಪ್ಪಿರೆ ವಜ್ರೋಪಳಂಗಳಿಂ ಕಟ್ಟಿಸಿದಳ್ ತಪ್ಪದೆ ಸೋಪಾನದ ಪರಿಜೊ

ಪ್ಪನೆನಲು ಗೌರಿದೇವಿ ಪುಣ್ಯಾಧಿಕೆಯೊ ॥ ಕೂಪಾರವಾರಿಯದು ಲವಣೋಪಚ ಯಮಗ್ತಸ್ಯಪಿತದ ವಿಶೇಷಮದೆಂದಾ ಪರಿಜನುಳಿದು ಗೌರಿಯ ಕೂಪಂ ಗಂಗೋದಮಾನಮಾದುದು ಜಗದೋಳ್ ॥ ಚಾರುವಿಚಿತ್ರ ....... ನಕೆ ಗರಿಯೊಳಾರೆಣೆರೂಡಿವೆತ್ತ ಮೈಳಾರದ ಬಾಬನುಂನೆಗ......ಕ್ರದ ಕಾಮನು ವ್ಯಾಕ್ಷಿಸಿಸೆಶಾಕಾರೆಯೆ".

ಇದು ಈ ಬಾವಿಯನ್ನು ಗೌರಿದೇವಿ ಎಂಬ ಸ್ತ್ರೀ ಕಟ್ಟಿಸಿದ್ದಾಳೆಂದು ತಿಳಿಸುತ್ತದೆ. ಕ್ರಿ.ಶ. ೧೩೫೩ರ ವಿಜಯನಗರ ಕಾಲದ ಶಾಸನವು ಚಳ್ಳಕೆರೆ ನಾಯಕನೆಂಬ ಅಧಿಕಾರಿಯು ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದನ್ನು ತಿಳಿಸಿದರೆ, ಕ್ರಿ.ಶ.೧೪೯೨ ಮತ್ತೊಂದು ಶಾಸನವು[೨೩] ದೇವಾಲಯದ ದಕ್ಷಿಣ ದ್ವಾರವನ್ನು ಜೀರ್ಣೋದ್ಧಾರ ಮಾಡಿದುದನ್ನು ಉಲ್ಲೇಖಿಸುತ್ತದೆ. ಈ ಬಾವಿಗೆ ಪೂರ್ವ ದಿಕ್ಕಿನಲ್ಲಿ ಪ್ರವೇಶವಿದ್ದು ಇಲ್ಲಿ ಒಂದು ತೋರಣವಿದೆ. ಈ ತೋರಣದಲ್ಲಿ ಕಂಬಗಳು, ಗೋಡೆಯಿಂದ ಹೊರ ಚಾಚಲ್ಪಟ್ಟ ಭಾಗಗಳು ಮತ್ತು ಹಣೆಪಟ್ಟಿಗಳಿವೆ. ಕಂಬಗಳ ಕೆಳಭಾಗ ಚೌಕಾಕಾರದಲ್ಲಿದ್ದರೆ ಮೇಲಿನ ಭಾಗ ಅಷ್ಟಭುಜಾಕೃತಿಯಲ್ಲಿದೆ. ಗೋಡೆಯಿಂದ ಹೊರ ಚಾಚಲ್ಪಟ್ಟ ಭಾಗಗಳು ಇಳಿಜಾರಾಗಿವೆ. ಹಣೆಪಟ್ಟಿ (ಬಾಗಿಲವಾಡ) ಕಪೋತದ ಮಾದರಿಯಲ್ಲಿದೆ. ಇದರ ಮೇಲೆ ಇನ್ನೊಂದು ಸಣ್ಣ ಕಪೋತವಿದೆ. ಏಳು ಮೆಟ್ಟಿಲುಗಳನ್ನು ಇಳಿದ ಮೇಲೆ ಒಂದು ಬಾಗಿಲು ಅಥವಾ ಸೇತುವೆಯಿದೆ".

ಈ ಬಾಗಿಲಿನ ಪೂರ್ವ ಮತ್ತು ಪಶ್ಚಿಮದಲ್ಲಿರುವ ಹಣೆಪಟ್ಟಿಗಳು ಅರೆಗಂಬ ಮತ್ತು ವಜ್ರಾಕಾರದ ಹೂಗಳಿಂದ ಅಲಂಕೃತವಾಗಿವೆ. ಈ ಹಣೆಪಟ್ಟಿಗಳನ್ನು ಮಾತ್ರ ಪದರುಗಲ್ಲಿನಿಂದ ಕಟ್ಟಿದರೆ ಇಡೀ ಬಾವಿಯನ್ನು ಗ್ರಾನೈಟ್‌ನಿಂದ ಕಟ್ಟಿದ್ದಾರೆ. ಈ ಗೂಡು 'ಐ' ಆಕಾರದ ಒಂದು ಕೋಣೆಯಿದ್ದಂತೆ ಕಾಣುತ್ತದೆ. ಈ ಬಾಗಿಲಿನಿಂದ ಕೆಳಗೆ ೧೨ ಮೆಟ್ಟಿಲುಗಳನ್ನು ಇಳಿದರೆ ಒಂದು ನಡುನಿಲ್ಲೆಡೆಯಿದೆ. ಇಲ್ಲಿಂದ ಬಾವಿಯ ಪ್ರವೇಶವು ಉತ್ತರ ದಿಕ್ಕಿಗೆ ತಿರುಗುತ್ತದೆ. ಇಲ್ಲಿಂದ ನಾಲ್ಕು ಮೆಟ್ಟಿಲುಗಳನ್ನಿಳಿದ ಮೇಲೆ ಇನ್ನೊಂದು ನಡುನಿಲ್ಲೆಡೆಯಿದೆ. ಇಲ್ಲಿ ಮತ್ತೆ ಪ್ರವೇಶ ಪಶ್ಚಿಮಕ್ಕೆ ತಿರುಗಿಕೊಳ್ಳುತ್ತದೆ. ಇಲ್ಲಿಂದ ೧೨ ಮೆಟ್ಟಿಲುಗಳನ್ನಿಳಿದರೆ ಇನ್ನೊಂದು ನಡುನಿಲ್ಲೆಡೆಯಿದೆ. ಇಲ್ಲಿಂದ ೧೫ ಮೆಟ್ಟಿಲುಗಳನ್ನಿಳಿದರೆ ಆಯತಾಕಾರದ ಬಾವಿ ಕಾಣುತ್ತದೆ.

ಬಾವಿಯ ಕೆಳಗಿನ ಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿಯೇ ಕೊರೆದಿದ್ದಾರೆ. ಮೇಲಿನ ಭಾಗವನ್ನು ಉದ್ದವಾದ ಗ್ರಾನೈಟ್ ಕಲ್ಲುಗಳಿಂದ ಕಟ್ಟಿದ್ದಾರೆ. ಬಾವಿಯಲ್ಲಿ ಅನೇಕ ಅಂತಸ್ತುಗಳಿವೆ. ಪ್ರತಿಯೊಂದು ಅಂತಸ್ತುಗಳಲ್ಲಿ ೪-೬ ಹಂತಗಳಿವೆ. ಪ್ರತಿಯೊಂದು ಅಂತಸ್ತು ಮುಂದೆ ಚಾಚಿಕೊಂಡಿದ್ದು ಒಂದು ಹಂತದಿಂದ ಬೇರ್ಪಟ್ಟಿದೆ. ಈ ರೀತಿಯ ಭಾಗಗಳು ಬಾವಿಯನ್ನು ಬಲಪಡಿಸಲು ಸಹಕರಿಸಿವೆ. ಈ ರೀತಿಯ ಭಾಗಗಳ ತುದಿಗಳು ಬಾವಿಯಲ್ಲಿ ಚಾಚಿಕೊಂಡಿವೆ. ಅಲ್ಲದೇ ಅನೇಕ ತೊಲೆಗಳನ್ನು ದಾರಿಯಲ್ಲಿ ಅಡ್ಡವಾಗಿ ಜೋಡಿಸಲಾಗಿದೆ. ಇವೂ ಸಹ ಬಾವಿಯನ್ನು ಬಲಪಡಿಸಿವೆ. ದಕ್ಷಿಣದ ಗೋಡೆಯ ತುದಿಯಲ್ಲಿ ನೀರೆತ್ತುವ ಜಗಲಿಯಿದೆ. ಬಾವಿಯ ಗೋಡೆಯ ತುದಿಯಲ್ಲಿ ವಕ್ರಾಕಾರವಾಗಿರುವ ಭಾಗವಿದೆ.

**ಯಳವತ್ತಿಯ ಗುಂಡಲಿಂಗನ ಬಾವಿ**

ಈ ಗ್ರಾಮವು ಗದಗದಿಂದ ನೈರುತ್ಯಕ್ಕೆ ೨೮ ಕಿ.ಮೀ ದೂರದಲ್ಲಿದೆ. ಈ ಬಾವಿಯು ಗ್ರಾಮದಿಂದ ಪಶ್ಚಿಮ ದಿಕ್ಕಿನಲ್ಲಿರುವ ಗುಂಡೇಶ್ವರ ದೇವಾಲಯದ ಬಲಭಾಗದಲ್ಲಿ ಕಂಡು ಬರುತ್ತದೆ. ಯಳವತ್ತಿಯು ಐತಿಹಾಸಿಕವಾಗಿ ಮಹತ್ವದ ಸ್ಥಳವಾಗಿದೆ. ಈ ಗ್ರಾಮ ಶಿರಹಟ್ಟಿಯಿಂದ ವಾಯುವ್ಯಕ್ಕೆ ೧೨ ಕಿ.ಮೀ ದೂರದಲ್ಲಿ ಇದ್ದು, ಇಲ್ಲಿಯವರೆಗೆ ೭ ಶಾಸನಗಳು ವರದಿಯಾಗಿವೆ. ಗುಂಡಲಿಂಗನ ಗುಡಿಯ ಆವರಣದಲ್ಲಿರುವ ಕಂಬದ ಮೇಲಿರುವ ಸುಮಾರು ೮ನೇ ಶತಮಾನದ ಶಾಸನ ಪತ್ತೆಯಾಯಿತು. ಊರಿನ ಮಾಯೆಗೊವಜ್ಜನ ಮಗನಾದ ಶ್ರೀ ಕುಮಾರನು ಕಂಬ ಮಾಡಿಸಿದ್ದನ್ನು ದಾಖಲಿಸಿದೆ. ಕ್ರಿ. ಶ. ೧೧೫೪ರ ಶಾಸನ[೨೪] ಮಾಗುಂಡಿ (ಈಗಿನ ಮಾಗಡಿ) ನೀಲಕಂಠ ದೇವರ ಶಿಷ್ಯರಾದ ಸಿಮನಮಲ್ಲಯ್ಯನು ಗುಂಡನಾಥ ದೇವರಿಗೆ ಪುಷ್ಕರಣಿ ಕಟ್ಟಿಸಿ ಭೂಮಿಯನ್ನು ದಾನ ಕೊಟ್ಟ ಅಂಶವನ್ನು ತಿಳಿಸುತ್ತದೆ. ಇಲ್ಲಿನ ಶಾಸನೋಕ್ತ ಗುಂಡೇಶ್ವರ ದೇವಾಲಯವು ಕೆರೆಯ ಏರಿಯ ಮೇಲಿದೆ. ಇದು ಗರ್ಭಗುಡಿ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದ್ದು

ಪೂರ್ವಾಭಿಮುಖವಾಗಿದೆ. ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದ್ದು ಇದರ ಬಾಗಿಲವಾಡವು ಸರಳವಾಗಿದೆ. ನವರಂಗದ ದೇವಕೋಷ್ಟಕಗಳಲ್ಲಿ ಸಪ್ತಮಾತ್ರಿಕೆಯ ಪಟ್ಟಿಕೆ, ಬ್ರಹ್ಮ, ಮಹೇಶ್ವರ, ವಿಷ್ಣು ಪೀಠಗಳಲ್ಲಿ ಶಿವಲಿಂಗವನ್ನು ಕಾಣಬಹುದು.

ಈ ಬಾವಿಗೆ ಪಶ್ಚಿಮಾಭಿಮುಖವಾಗಿ ಮೆಟ್ಟಿಲುಗಳನ್ನು ಅಳವಡಿಸಿದ್ದು ಇದು ಈಗ ಜೀರ್ಣೋದ್ಧಾರಗೊಂಡಿದೆ. ಇದು ದಿನಕ್ಕೆ ಮೂರು ಬಣ್ಣಗಳನ್ನು ಹೊಂದುತ್ತದೆ ಎಂಬ ಐತಿಹ್ಯ ಇದೆ. ಬೆಳಿಗ್ಗೆ ತಿಳಿ ನೀಲಿ, ಮಧ್ಯಾಹ್ನ ಕಂದುಬಣ್ಣಕ್ಕೆ ಹಾಗೂ ಸಾಯಂಕಾಲ ಕಪ್ಪು ಛಾಯೆಯ ಆಕಾರದಿಂದ ಕೂಡಿರುತ್ತದೆ. ಈ ಗ್ರಾಮದಲ್ಲಿ ಯಾರಿಗಾದರೂ ವಿಷಜಂತುಗಳು ಕಚ್ಚಿದಾಗ ಈ ಬಾವಿಯಲ್ಲಿ ಸ್ನಾನ ಮಾಡಿ ದೇವಾಲಯದ ದ್ವಾರಬಾಗಿಲನ್ನು ದಾಟಿದಾಗ ಗುಣಮುಖರಾಗುತ್ತಾರೆ ಎಂಬ ನಂಬಿಕೆ ಇದೆ.

**ಸೊರಟೂರು ಪಲ್ಲೆದವರ ಬಾವಿ:**

ಇದು ಗದಗ ಜಿಲ್ಲೆಯ ಗದಗ ತಾಲೂಕಿನಲ್ಲಿದೆ. ಸೊರಟೂರು ಗದಗ ಜಿಲ್ಲೆಯ ದೊಡ್ಡದಾದ ಗ್ರಾಮ. ಇದು ಗದಗದಿಂದ ದಕ್ಷಿಣಕ್ಕೆ ೨೨ ಕಿ.ಮೀ ದೂರದಲ್ಲಿದೆ. ಈ ಗ್ರಾಮ ಹಿಂದೆ ಅರಸರು ಹಾಗೂ ದಣಿ ದೇಸಾಯರು ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ದೇಶಗತಿ ಮನೆತನವೆಂದು ಹೆಸರುವಾಸಿಯಾದ ಶ್ರೀದಾನ ವೀರ ವೆಂಕಟಾದ್ರಿ ಶ್ರೀನಿವಾಸ ಬಹದ್ದೂರ ದೇಸಾಯಿ ಸೊರಟೂರ ಹಾಗೂ ಡಂಬಳವನ್ನು ತಮ್ಮ ವಶದಲ್ಲಿಟ್ಟುಕೊಂಡಿದ್ದರು. ಈ ಎರಡು ಗ್ರಾಮಗಳ ಆಡಳಿತವನ್ನು ದೇಸಾಯರು ಮಾಡಿಕೊಂಡ ಹೋಗುತ್ತಿರಲಾಗಿ ಅಂದರೆ ೧೮ನೇ ಶತಮಾನದಲ್ಲಿ ಸೊರಟೂರ ಹತ್ತಿರ ೨ ಕಿ.ಮೀ. ಉಳುಮೆ ಮಾಡುವ ಜಮೀನಿನಲ್ಲಿ ತಮ್ಮ ಕುಲದೇವರಾದ ಲಕ್ಷ್ಮೀವೆಂಕಟೇಶ ಮೂರ್ತಿಗಳನ್ನು ಉದ್ಭವಮೂರ್ತಿಗಳೆನ್ನುತ್ತಿದ್ದರು.[೨೫] ಅದೇ ಜಾಗದಲ್ಲಿ ವೆಂಕಟಾಪುರ ದೇವಸ್ಥಾನ ಎಂಬ ಹೆಸರಿನ ಗುಡಿಯನ್ನು ಕಟ್ಟಿಸಿದರು. ದೇವರ ಸೇವೆಗೆಂದು ೪೦ ಕೂರಿಗೆ ಭೂಮಿಯನ್ನು ಬಿಟ್ಟು ಉಳಿದ ಭೂಮಿಯನ್ನು ತಮ್ಮ ರಾಜ ಕಾರ್ಯಭಾರಕ್ಕೆ ಎಂದು ಸೊರಟೂರದಲ್ಲಿ ಒಂದು ವಾಡೆಯನ್ನು, ಡಂಬಳದಲ್ಲಿ ಒಂದು ವಾಡೆಯನ್ನು ಕಟ್ಟಿಸಿ ಎರಡು ಕಡೇ ತಾವೇ ನೋಡಿಕೊಂಡು ಹೋಗುತ್ತಿದ್ದರು. ಊರಲ್ಲಿ ಸೇವಕರು ವಾಲಿಕಾರ ಗೌಡರನ್ನು ನೇಮಿಸಿ ಊರ ರೈತರಿಂದ ಕಂದಾಯ ವಸೂಲಿ ಮಾಡಿಸಿ ತಮ್ಮ ರಾಜ್ಯಭಾರ ನಡೆಸುತ್ತಿದ್ದರು.

ಹಿಂದೆ ಈ ಸ್ಥಳದಲ್ಲಿ ಕ್ರಿ.ಶ. ೧೧೯೬ರಲ್ಲಿ ಹೊಯ್ಸಳ ಬಿಲ್ಲಮರಿಗೂ ಯಾದವರಿಗೂ ಇಲ್ಲಿ ಕಾಳಗವಾಯಿತು. ಅಂತೆಯೇ ಕಾಳಗವಾದ ಜಾಗವನ್ನು ಇಂದಿಗೂ “ರಕ್ತಮಾಣಿವು”ಎಂದು ಕರೆಯುವುದುಂಟು. ಇಂಥ ಹೊಯ್ಸಳ ರಾಜರ ಸ್ಥಾನವಾಗಿದ್ದ, ಇಂದು ಬಿದ್ದುಹೋದ ಎರಡು ಸುತ್ತಿನಕೋಟೆಯ ಅವಶೇಷ ಮಾತ್ರ ಕಾಣಬಹುದು. ಆದರೆ ೧೮ನೆಯ ಶತಮಾನದ ದೇಸಾಯರ

ಅರಮನೆ ಮಾತ್ರ ಇಂದಿಗೂ ಉಳಿದಿದೆ. ಅದನ್ನು ಈಗ ಗ್ರಾಮ ಪಂಚಾಯಿತಿ ಕಛೇರಿ ಮಾಡಿದ್ದಾರೆ. ಊರಲ್ಲಿ ವೀರಗಲ್ಲುಗಳು, ಮಹಾಸತಿ ಕಲ್ಲುಗಳು, ಶಿಲಾಶಾಸನಗಳು, ಕಲ್ಲುಮಂಟಪಗಳು, ಚಿತ್ರವಿಚಿತ್ರವಾದ ಶಿಲ್ಪಗಳು, ಕೊತ್ತಮ್ಮ, ಭೈರವೇಶ್ವರ, ಸೂರ್ಯನಾರಾಯಣ ವೀರಭದ್ರೇಶ್ವರ, ಕಲ್ಮೇಶ್ವರ ದೇವಾಲಯಗಳನ್ನು, ಜೈನ ಬಸದಿಗಳನ್ನು ಮತ್ತು ಊರ ಸುತ್ತ ಬುರುಜಗಳನ್ನು ಕಾಣಬಹುದು. ಅಲ್ಲಲ್ಲಿ ಕರಿಬಣ್ಣದ ಕಲ್ಲುಗಳಲ್ಲಿ ಶಿಲ್ಪ, ಶಾಸನಗಳನ್ನು ಕೆತ್ತಿ ಬಾವಿಗಳನ್ನು ನಿರ್ಮಿಸಿದ್ದಾರೆ.[೨೬] ಇಲ್ಲಿ ರಾಷ್ಟ್ರಕೂಟ ಅರಸರ ಶಾಸನಗಳು ಬಾದಾಮಿ ಚಾಲುಕ್ಯ, ಕಲ್ಯಾಣ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ವಾಸ್ತುಶಿಲ್ಪ ಹೊಂದಿರುವ ದೇವಾಲಯ ಗಳಿರುವುದರಿಂದ ಈ ಪ್ರದೇಶವು ಈ ವಂಶದ ಅರಸರ ಆಡಳಿತಕ್ಕೆ ಒಳಪಟ್ಟಿತೆಂದು ಹೇಳಬಹುದು. ಇಲ್ಲಿರುವ ಪ್ರಮುಖ ದೇವಾಲಯಗಳೆಂದರೆ ರಾಮೇಶ್ವರ, ನಾರಾಯಣ, ಭವಾನಿಶಂಕರ, ವೀರಭದ್ರ, ಈಶ್ವರ ಮುಂತಾದವುಗಳು. ಹೊಯ್ಸಳ ಮತ್ತು ಸೇವಣರ ನಡುವೆ ನಡೆದ ಯುದ್ಧದ ರಂಗಭೂಮಿ ಈ ಊರಾಗಿತ್ತು. ಈ ಊರಿನ ಹಿಂಭಾಗದ ಖಾಸಗಿ ಭೂಮಿಯಲ್ಲಿ ಕೆಲವು ಬಾವಿಗಳಿವೆ. ಇವುಗಳಲ್ಲಿ ಪಲ್ಲೇದವರ ಬಾವಿ ಮುಖ್ಯವಾದದು.

ಇದು ಚಿಕ್ಕ ಬಾವಿಯಾಗಿದ್ದು ಪೂರ್ವಕ್ಕೆ ಪ್ರವೇಶ ದಾರಿ ಇದೆ. ಬಾವಿಯ ಕೆಳಗಿನ ಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿ ಕೆತ್ತಲಾಗಿದೆ. ಮೇಲಿನ ಭಾಗವನ್ನು ನುಣುಪಾದ ಗ್ರಾನೈಟ್ ಕಲ್ಲಿನಿಂದ ಕಟ್ಟಿದ್ದಾರೆ. ಬಾವಿಯ ಪ್ರತಿಯೊಂದು ಮಟ್ಟ ಮೇಲೆ ಹೋದಂತೆ ಹಿಂದಕ್ಕೆ ಸರಿದಿದೆ. ಪ್ರವೇಶ ದಾರಿಯ ಉತ್ತರ ಮತ್ತು ದಕ್ಷಿಣದ ಗೋಡೆಗಳಲ್ಲಿ ಸಣ್ಣ ಗೂಡುಗಳಿವೆ. ಗೂಡುಗಳ ಪಕ್ಕದಲ್ಲಿ ಮುಂದೆ ಚಾಚಿಕೊಂಡಿರುವ ಪಟ್ಟಿಗಳಿವೆ. ಉತ್ತರದ ಗೋಡೆಯಲ್ಲಿರುವ ಗೂಡಿನ ಮೇಲೆ ಒಂದು ಶಾಸನವಿದೆ. (೧೨ನೇ ಶತಮಾನ) ಇದು ಗೂಡಿನ ತುದಿಯಲ್ಲಿರುವ ಈ ಶಾಸನವು[೨೭] 'ಸ್ವಸ್ತಿ ಶ್ರೀ ಪವಿತ್ರರಾಸಿಜೀಯರ ಶಿಸ್ಯ ಪಗೆವರ ಗಣ್ಡ ಧರ್ಮ್ಮ ಸೆಟ್ಟಿಯು ಮಾಡಿಸಿದ ಬಾವಿ' ಅಂದರೆ ಧರ್ಮಸೆಟ್ಟಿಯು ಈ ಬಾವಿಯನ್ನು ಕಟ್ಟಿಸಿದ್ದಾನೆಂದು ತಿಳಿಸುತ್ತದೆ. ದಕ್ಷಿಣದ ಗೋಡೆಯಲ್ಲಿರುವ ಗೂಡಿನಲ್ಲಿ ೧೨ನೇ ಶತಮಾನದ ನಾಗ ವಿಗ್ರಹವಿದೆ. ಈ ವಿಗ್ರಹದ ಕೆಳಗಿನ ಭಾಗದಲ್ಲಿ ಸುರುಳಿಯಾಕಾರದ ಸರ್ಪವಿದ್ದು ಮೇಲಿನ ಭಾಗದಲ್ಲಿ ಮನುಷ್ಯನ ರೂಪದಲ್ಲಿದೆ. ತಲೆಯ ಮೇಲೆ ೭ ಹೆಡೆಗಳಿವೆ; ಕೈಗಳಲ್ಲಿ ಮುಂದಕ್ಕೆ ಚಾಚಿಕೊಂಡಿರುವ ಕಲ್ಲುಗಳಿದ್ದು ಇವು ಮೆಟ್ಟಿಲುಗಳಾಗಿ ರೂಪುಗೊಂಡಿವೆ. ಬಾವಿಯ ಪ್ರವೇಶದ ಹತ್ತಿರ ಒಂದು ಕಲ್ಲಿನ ಮೇಲೆ ನಟರಾಜನ ವಿಗ್ರಹವಿದೆ. ಉತ್ತರಕ್ಕೆ ಶಿವನ ಬಿಡಿ ಶಿಲ್ಪವಿದೆ. ಶಿವನೊಂದಿಗೆ ಯತಿಗಳು, ಭಕ್ತರು, ಗಣೇಶ, ನಂದಿಗಳಿದ್ದು, ಇದು ಒಂದು ದೇವಸ್ಥಾನದ ಮಾದರಿಯಂತಿದೆ.

ದಕ್ಷಿಣದ ಗೋಡೆಯ ಮೇಲೆ ನೀರೆತ್ತುವ ಜಗಲಿಯಿದೆ. ಬಾವಿಯಲ್ಲಿ ಹಿಂದಕ್ಕೆ ಸರಿಯುತ್ತ ಹೋಗಿರುವ ಹಂತಗಳು ಬಾವಿಯ ಪ್ರವೇಶ ದಾರಿಯಲ್ಲಿಯೂ ಮುಂದುವರೆದಿವೆ. ಈ ಹಂತಗಳ ಮೇಲೆ ಮೂರು ಹಂತಗಳು ಲಂಬರೇಖೆಯಲ್ಲಿವೆ. ಈ ಹಂತದಲ್ಲಿ ಗೂಡುಗಳಿವೆ. ಇವುಗಳ ಮೇಲೆ

ಸರಳವಾದ ಮುಂದೆ ಚಾಚಿಕೊಂಡಿರುವ ಭಾಗವಿದೆ. ಇದರ ಮೇಲೆ ಇನ್ನೆರಡು ಹಂತಗಳು ಹಿಂದಕ್ಕೆ ಸರಿದಿವೆ. ಈ ಮೂರು ಹಂತಗಳು ಲಂಬರೇಖೆಯಲ್ಲಿವೆ. ಈ ಹಂತದಲ್ಲಿ ಗೂಡುಗಳಿವೆ. ಇವುಗಳ ಮೇಲೆ ಸರಳವಾದ ಮುಂದೆ ಚಾಚಿಕೊಂಡಿರುವ ಭಾಗವಿದೆ. ಇದರ ಮೇಲೆ ಇನ್ನೆರಡು ಹಂತಗಳು ಹಿಂದಕ್ಕೆ ಸರಿದಿವೆ. ಈ ಮೂರು ಹಂತಗಳು ಬಾವಿಯ ತುದಿಯ ಭಾಗದಲ್ಲಿ ಕಕ್ಷಾಸನವಾಗಿ ಮಾರ್ಪಟ್ಟಿವೆ.

**ಕೊಣ್ಣೂರಿನ ರಾಮಲಿಂಗ ಬಾವಿ**

ನರಗುಂದ ತಾಲೂಕಿನ ಪ್ರಾಚೀನ ಪಟ್ಟಣ ಕೊಣ್ಣೂರು. ಇದು ನರಗುಂದದಿಂದ ಈಶಾನ್ಯಕ್ಕೆ ೧೮ ಕಿ.ಮೀ ದೂರದಲ್ಲಿ ಮಲಪ್ರಭಾ ನದಿಯ ಬಲದಂಡೆ ಮೇಲಿದೆ. ಈ ಊರು ನರಗುಂದ-ಬಾಗಲಕೋಟೆ ರಸ್ತೆಯಲ್ಲಿ ಜಿಲ್ಲೆಯ ಗಡಿ ಗ್ರಾಮವಾಗಿದ್ದು, ಈ ಪಟ್ಟಣದ ಪ್ರಾಚೀನತೆಯನ್ನು ಬೃಹತ್ ಶಿಲಾಯುಗದ ಮಾನವರಷ್ಟು ಹಿಂದಕ್ಕೆ ಗುರುತಿಸಬಹುದಾಗಿದ್ದು, ಇಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಕಾಲಕ್ಕೆ ಸೇರಿದ ಸಮಾಧಿಗಳು ಲಭಿಸಿವೆ. ಪ್ರಾಚೀನ ಶಾಸನಗಳಲ್ಲಿ ಈ ಪಟ್ಟಣವನ್ನು ಪ್ರಾಚೀನ ಶಾಸನದಲ್ಲಿ ಕೊಳನೂರು ಎಂದೇ ಉಲ್ಲೇಖಗೊಂಡಿದೆ. ಹಿಂದೆ ಬೆಳ್ವೊಲ-೩೦೦ಕ್ಕೆ ಸೇರಿದ್ದು, ೩೦ ಪಳ್ಳಿಗಳ ಆಡಳಿತ ಕೇಂದ್ರವಾಗಿ ಕೋಳನೂರು-೩೦ ಎಂದೇ ಪ್ರಸಿದ್ಧವಾಗಿದೆ.

ಮೊದಲು ಕಣ್ವಾನೂರು ಎಂದೇ ಕರೆಯಲ್ಪಡುತ್ತಿದ್ದ ಈಗಿನ ಕೊಣ್ಣೂರು ಕಣ್ವ ಋಷಿಗಳ ತಪೋಭೂಮಿ, ಇದು ಮಲಪ್ರಭೆಯ ದಡದಲ್ಲಿರುವ ಕೊಣ್ಣೂರು ನರಗುಂದ ತಾಲೂಕಿನ ದೊಡ್ಡ ಊರುಗಳಲ್ಲಿ ಇದು ಒಂದು. ಇಲ್ಲಿ ಕೆಲವು ವೈಶಿಷ್ಟ್ಯಪೂರ್ಣವಾದ ದೇವಾಲಯಗಳು ಇವೆ. ಕ್ರಿ.ಶ. ಸುಮಾರು ೮೬೦ರ ಶಾಸನದಲ್ಲಿ[೨೮] ಬಂಕೆಯ ಅರಸ ಕಟ್ಟಿಸಿದ ಈಗಿನ ಪರಮೇಶ್ವರ ದೇವಾಲಯವು ಮೂಲತಃ ಜೈನಬಸದಿ, ಇದು ತೀರಾ ಸರಳವಾದ ದ್ವಾರಬಂಧವನ್ನು ಹೊಂದಿದ್ದು, ಈ ದೇವಾಲಯದ ಪೀಠದ ಮೇಲೆ ಕುಳಿತ ಶಿವಲಿಂಗವಿದೆ. ಅದರಂತೆ ತೀರ್ಥಂಕರ ಪೀಠದ ಅವಶೇಷಗಳು ಇವೆ. ಗರ್ಭಗುಡಿ, ಅಂತರಾಳ, ಮುಖಮಂಟಪಗಳನ್ನು ಹೊಂದಿದೆ. ಇದು ಊರಿನ ನದಿಯ ದಂಡೆಯ ಮೇಲೆ ಇರುವುದರಿಂದ ಇದನ್ನು ಕಾಶಿ ರಾಮೇಶ್ವರಕ್ಕೆ ಹೋಲಿಸಬಹುದಾಗಿದೆ. ಇಲ್ಲಿ ೧೦೧ ಲಿಂಗಗಳು ಕೆರೆಗಳು, ಬಾವಿಗಳು ಇವು ಕಾಶಿಗೆ ಸರಿಸಮವಾಗಲು ಒಂದು ಲಿಂಗ ಕಡಿಮೆಯಾಗಿದೆ ಎಂಬ ಐತಿಹ್ಯ ಉಂಟು. ದೇವಾಲಯದ ಬಲಭಾಗದಲ್ಲಿ ೩೦ ಅಡಿ ಸುತ್ತಳತೆ ಇರುವ ಬಾವಿಯು ಕಂಡುಬರುತ್ತದೆ. ಪಶ್ಚಿಮಾಭಿಮುಖವಾಗಿ ಮೆಟ್ಟಿಲುಗಳ ಮುಖಾಂತರ ಬಾವಿಯ ಒಳಕ್ಕೆ ಪ್ರವೇಶಿಸಬಹುದು. ಈಗ ಇದು ಮುಳ್ಳುಕಂಟಿಗಳಿಂದ ತುಂಬಿದ್ದರಿಂದ ಇದರ ಪ್ರಾಚೀನತೆಯನ್ನು ಗುರುತಿಸಲಾಗುವುದಿಲ್ಲ; ಆದರೆ ಇದರ ಈಗ ಕನಿಷ್ಠವಾಗಿದೆ.

**ಸೂಡಿಯ ನಾಗರಬಾವಿ:**

ಗದಗ ಜಿಲ್ಲೆಯ ರೋಣ ತಾಲೂಕಿನಲ್ಲಿರುವ ಸೂಡಿಯು ಪ್ರಾಚೀನ ಶಾಸನಗಳಲ್ಲಿ ಸೂಂಡಿ

ಎಂದು ಉಲ್ಲೇಖವಾಗಿದೆ. ಇದು ರೋಣದಿಂದ ಈಶಾನ್ಯಕ್ಕೆ ೧೯ ಕಿ.ಮೀ ದೂರದಲ್ಲಿ ರೋಣ-ಗಜೇಂದ್ರಗಡ ರಸ್ತೆಯಲ್ಲಿದೆ. ಹಿಂದೆ ಇದು ಕಿಸುಕಾಡು-೭೦ ಕ್ಕೆ ಸೇರಿತ್ತು. ರಾಷ್ಟ್ರಕೂಟ ಮತ್ತು ಚಾಲುಕ್ಯರ ಕಾಲದ ಅನೇಕ ಶಾಸನಗಳು ಇಲ್ಲಿಯ ದೇವಸ್ಥಾನಗಳಲ್ಲಿ ಕಂಡುಬರುತ್ತವೆ. ಇಲ್ಲಿ ಮಲ್ಲಿಕಾರ್ಜುನ, ಜೋಡುಕಳಶ, ಪಂಚಲಿಂಗೇಶ್ವರ, ಕಲ್ಮೇಶ್ವರ, ಗಣಪತಿ ದೇವಾಲಯವು ಪ್ರಮುಖವಾಗಿದೆ. ಒಂದನೆಯ ಸೋಮೇಶ್ವರನ ಕ್ರಿ.ಶ. ೧೦೬೧ರಲ್ಲಿ ಶಾಸನದಲ್ಲಿ[೩೯] ದಂಡನಾಯಕ ನಾಗದೇವನು ನಾಗೇಶ್ವರ ದೇವಾಲಯವನ್ನು ನಿರ್ಮಿಸಿ ಭೂದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಇದನ್ನು ನಾಗೇಶ್ವರ ದೇವಾಲಯವೆಂದೂ ಕರೆಯುತ್ತಾರೆ. ಮಲ್ಲಿಕಾರ್ಜುನ ದೇವಾಲಯ ಊರ ಮಧ್ಯದಲ್ಲಿದೆ. ಇದು ತ್ರಿಕೂಟಾಚಲವಾಗಿದೆ. ಈ ಗುಡಿಯ ಹತ್ತಿರದಲ್ಲಿಯೇ ಸುಂದರವಾದ ಮತ್ತು ವಿಶಿಷ್ಟ ಶಿಲ್ಪಕಲೆಯಿಂದ ಕೂಡಿದ ನಾಗರಬಾವಿ (ರಸಬಾವಿ) ಇದೆ.

ಜೋಡು ಕಳಶ ದೇವರ ಗುಡಿಯಲ್ಲಿರುವ ಕ್ರಿ.ಶ.೧೦೬೦ರ ನಾಗದೇವನ ಶಾಸನವು ಈ ನಾಗಗೊಂಡವನ್ನು ನಾಗದೇವನು ಕಟ್ಟಿಸಿದ್ದಾನೆಂದು ತಿಳಿಸುತ್ತದೆ.[೪೦] ಬಾವಿಯು ಚೌಕಾಕಾರದಲ್ಲಿದ್ದು ಪಶ್ಚಿಮಕ್ಕೆ ಮೆಟ್ಟಿಲುಗಳಿವೆ. ಬಾವಿಯ ಕೆಳಭಾಗದಲ್ಲಿ ಸ್ವಲ್ಪ ಭಾಗ ಮಾತ್ರ ಮುಂದಕ್ಕೆ ಚಾಚಿಕೊಂಡಿರುವ ಪಂತಗಳಿವೆ. ಮೆಟ್ಟಿಲುಗಳು ಪ್ರಾರಂಭವಾಗುವ ಪಂತದಲ್ಲಿ ಒಂದು ಚೌಕಟ್ಟು ಇದ್ದು, ಈಗ ಅರೆಗಂಬಗಳು ಮಾತ್ರ ಕಂಡುಬರುತ್ತವೆ. ಇಲ್ಲಿಂದ ಮೆಟ್ಟಿಲುಗಳ ಎರಡು ಸಾಲುಗಳು ಪ್ರಾರಂಭವಾಗಿ ಒಂದು ಸಾಲು ಉತ್ತರಕ್ಕೆ, ಇನ್ನೊಂದು ಸಾಲು ಪಶ್ಚಿಮಕ್ಕೆ ಹೋಗುತ್ತವೆ. ಇದೇ ರೀತಿಯ ಮೆಟ್ಟಿಲುಗಳು ಬಾವಿಯ ಇನ್ನುಳಿದ ಮೂರು ಬದಿಗಳಲ್ಲಿಯೂ ಕಂಡುಬರುವುದು ಒಂದು ವಿಶೇಷ. ಈ ಮೆಟ್ಟಿಲುಗಳನ್ನು ಬಾವಿಯಲ್ಲಿ ಈಜಾಡುವವರು ಆಯಾಸವಾದಾಗ ಬಂದು ನಿಲ್ಲಲು ಕಟ್ಟಿರಬಹುದು. ಈ ಮೆಟ್ಟಿಲುಗಳ ಮೇಲಿರುವ ಬಾವಿಯ ಗೋಡೆ ಲಂಬವಾಗಿದ್ದು ಇದು ದಾರಿಯವರೆಗೆ ಮುಂದುವರೆಯುತ್ತದೆ. ಈ ಹಂತದ ಮೇಲೆ ಮುಂದೆ ಚಾಚಿಕೊಂಡಿರುವ ಕಪೋತವಿದೆ. ಈ ಕಪೋತದ ಮೇಲೆ ನಡುನಿಲ್ಲೆಡೆಗಳು ಬಾವಿಯ ನಾಲ್ಕು ಬದಿಗಳಲ್ಲಿ ಮತ್ತು ದಾರಿಗಳಲ್ಲಿ ಕಂಡುಬರುತ್ತವೆ. ಕಪೋತವು ಅಲಂಕಾರರಹಿತ ಕೂಡುಗಳಿಂದ ಅಲಂಕೃತವಾಗಿದೆ. ಈ ನಡು ನಿಲ್ಲೆಡೆಯ ಮೇಲಿರುವ ಗೋಡೆಯು ದೇವಾಲಯದ ಗೋಡೆಗಳಂತೆ ಅಲಂಕೃತವಾಗಿದೆ. ಈ ಗೋಡೆಯ ಜಗಲಿ, ಪದ್ಮ (ಎತ್ತರದ), ತ್ರಿಪಟ್ಟ ಕುಮುದ, ಕಪೋತ, ತೊಲೆಗಳ (ಜಂತಿಗಳ) ಕೊನೆ ಮತ್ತು ಪದ್ಮಗಳಿಂದ ಕೂಡಿದ ಅಧಿಷ್ಠಾನವನ್ನೊಳಗೊಂಡಿದೆ.

ಚೌಕಾಕಾರ ಬಾವಿಯ ಮೂರು ಬದಿಯಲ್ಲಿರುವ ಭಿತ್ತಿಯು ಉದ್ದವಾದ ಅರೆಗಂಬಗಳಿಂದ ವಿಂಗಡಿಸಲ್ಪಟ್ಟಿದ್ದು, ಅನೇಕ ಉಬ್ಬು ಮತ್ತು ಗೂಡುಗಳಿಂದ ಅಲಂಕರಿಸಲ್ಪಟ್ಟಿದೆ. ಮಧ್ಯದ ಭಾಗ ಮೂರು ಬಾರಿ (ಸಲ) ಮುಂದೆ ಚಾಚಿಕೊಂಡು ಮಧ್ಯದಲ್ಲಿ ಸರಳವಾದ ಗೂಡನ್ನು ಹೊಂದಿದೆ. ಮೂಲೆಗಳಲ್ಲಿ ಕೋನಗಳುಳ್ಳ ಚಾಚಿಕೊಂಡಿರುವ ಭಾಗಗಳಿದ್ದು, ಇವು ಕೃತಕ ಗೂಡುಗಳಿಂದ ಅಲಂಕೃತವಾಗಿವೆ.

ಪ್ರಸ್ತರವು ಶಾಲ, ಕೂಟ, ಪಂಜರಗಳಿಂದ ಕೂಡಿದೆ.[೩೧] ದೇವಾಲಯದ ಗೋಡೆಯಂತಿರುವ ಅಲಂಕಾರಿಕ ಗೋಡೆಯು ಬಾವಿಯ ದಾರಿಯಲ್ಲಿಯೂ ಮುಂದುವರೆದಿದೆ. ದಾರಿಯ ಪೂರ್ವಕ್ಕೆ ಕೊನೆಯಲ್ಲಿ ಪ್ರವೇಶ ಮಂಟಪವಿದ್ದು, ಇದು ನಾಲ್ಕು ಅರೆಗಂಬಗಳ ಮೇಲೆ ನಿಂತಿದೆ. ಈ ಮಂಟಪದ ಗೋಡೆ ಮತ್ತು ಪ್ರಸ್ತರವು ದಾರಿಯ ಇತರೆ ಗೋಡೆಗಳಂತಿವೆ. ಉತ್ತರ ಮತ್ತು ದಕ್ಷಿಣದ ಗೋಡೆಗಳಲ್ಲಿ ಒಂದೊಂದು ಗೂಡುಗಳಿವೆ. ಬಾವಿಯ ದಾರಿಯು ಮಂಟಪದ ಪೂರ್ವ ಬದಿಯವರೆಗೆ ಮುಂದುವರೆದಿದೆ.

**ಲಕ್ಕುಂಡಿಯ ಮಾಣಿಕೇಶ್ವರ ಪುಷ್ಕರಣಿ :**

ಗದಗ ಜಿಲ್ಲೆಯ ಗದಗ ತಾಲೂಕಿನಲ್ಲಿರುವ ಲಕ್ಕುಂಡಿಯು ಗದಗದಿಂದ ೧೧ ಕಿ.ಮೀ ದೂರದಲ್ಲಿರುವ ಒಂದು ಪ್ರಾಚೀನ ಐತಿಹಾಸಿಕ ಕೇಂದ್ರ. ಶಾಸನಗಳಲ್ಲಿ ಇದನ್ನು ಲೊಕ್ಕಿಗುಂಡಿ ಎಂದು ಉಲ್ಲೇಖಿಸಿದ್ದಾರೆ. ಸುಮಾರು ೧೧ನೇ ಶತಮಾನದಿಂದ ಇದರ ಇತಿಹಾಸ ನಮಗೆ ಅಧಿಕೃತವಾಗಿ ತಿಳಿದುಬರುತ್ತದೆ. ಇದರ ಮೊದಲನೆಯ ಹೆಸರು 'ಲೊಕ್ಕಿಗುಂಡಿ'[೩೨] ಲೊಕ್ಕಿ ಎಂದರೆ ಲಕ್ಕಿ ಎಂಬ ಜಾತಿಯ ಒಂದು ಗಿಡ. ಗುಂಡಿ ಎಂದರೆ ತಗ್ಗಿನಿಂದ ಕೂಡಿದ ಪ್ರದೇಶ. ಲೊಕ್ಕಿ+ಗುಂಡಿ ಸೇರಿ ಲೊಕ್ಕಿಗುಂಡಿ ಆಯಿತೆಂದು ಹೇಳಲಾಗುತ್ತದೆ. ೧೧-೧೨ನೇ ಶತಮಾನದಲ್ಲಿ ಈ ಲೊಕ್ಕಿಗುಂಡಿಯು ಬೆಳ್ವೊಲ-೩೦೦[೩೩] ಎಂಬ ನಾಡಿನ ಒಂದು ಭಾಗವಾಗಿತ್ತು. ಆಗಿನ ಬೆಳ್ವೊಲದ ೧೮ ಅಗ್ರಹಾರಗಳಲ್ಲಿ ಇದು ಒಂದಾಗಿತ್ತು. ೮೦೦ ವರ್ಷಗಳ ಹಿಂದೆ ಹೊಯ್ಸಳರ ಉಪರಾಜಧಾನಿಯಾಗಿ ಮೆರೆಯುವ ಭಾಗ್ಯ ಈ ಲಕ್ಕುಂಡಿಗೆ ಒದಗಿತ್ತು. ಇಂತಹ ಚಾರಿತ್ರಿಕ ಹಿನ್ನೆಲೆಯನ್ನು ಈ ಊರಿನ ಪುರಾತನ ದೇವಾಲಯ, ಶಾಸನ, ಬಾವಿ ಸಾಹಿತ್ಯ ಕೃತಿಗಳು ಸಾರಿ ಸಾರಿ ಹೇಳುತ್ತವೆ. ಲಕ್ಕುಂಡಿಯನ್ನು ಪ್ರವೇಶಿಸುತ್ತಿದ್ದಂತೆ, ಇದೀಗ ಇದು ಕೇವಲ ಕಲಾವಶೇಷಗಳ ಸಮುಚ್ಚಯವೇನೋ ಎನಿಸುತ್ತದೆ. ಅವಶೇಷಗಳಾಗಿ ನಿಂತಿರುವ ಬಸದಿ, ದೇವಾಲಯಗಳು ಹಾಗೂ ಪುಷ್ಕರಣಿಗಳನ್ನು ನೋಡಿದರೆ ೮೦೦ ವರ್ಷಗಳ ಹಿಂದೆ ಇವುಗಳೆಲ್ಲ ಎಷ್ಟೊಂದು ವೈಭವದಿಂದ ಮೆರೆದಿದ್ದಿರಬಹುದೆಂದು ಊಹಿಸಬಹುದಾಗಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅನೇಕ ದೇವಾಲಯಗಳು, ಜೈನ ಬಸದಿಗಳು ಇಲ್ಲಿ ನಿರ್ಮಾಣಗೊಂಡಿದ್ದು, ಚಾಲುಕ್ಯ ವಾಸ್ತುಶಿಲ್ಪ ಕಲಾಕೇಂದ್ರವಾಗಿತ್ತು. ಇವರ ಕಾಲದಲ್ಲಿ ಈ ಊರು ಭವ್ಯತೆಯ ಪ್ರತೀಕವಾಗಿದ್ದು, ಹೊಯ್ಸಳ ಎರಡನೆಯ ಬಲ್ಲಾಳನ ಕಾಲದಲ್ಲಿ ಆತನ ಉಪರಾಜಧಾನಿಯಾಗಿತ್ತು. ಕ್ರಿ.ಶ. ೯ರಿಂದ ೧೨ನೇ ಶತಮಾನದವರೆಗೆ ಪ್ರಸಿದ್ಧ ನಗರವಾಗಿದ್ದು ಚಾಲುಕ್ಯರ ಪತನದ ನಂತರ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ದಾನಚಿಂತಾಮಣಿ ಅತ್ತಿಮಬ್ಬೆ ಇಲ್ಲಿಯ ಬಬ್ಬ ಪರಮ ಜಿನಭಕ್ತೆಯಾಗಿದ್ದಳು. ಈಕೆ ಜಿನಭಕ್ತಿಯ ಪ್ರತೀಕವಾಗಿ ಕ್ರಿ.ಶ. ೧೦೦೭ರಲ್ಲಿ[೩೪] ಬ್ರಹ್ಮಜಿನಾಲಯವನ್ನು ಕಟ್ಟಿಸಿದ ವಿಷಯ ಶಾಸನಗಳಿಂದ ತಿಳಿದುಬರುತ್ತದೆ. ಇದಲ್ಲದೇ ಇಲ್ಲಿರುವ ನಾಗನಾಥ ದೇವಾಲಯವೂ ಚಾಲುಕ್ಯರ ಕಾಲದ ಬಸದಿ ಎಂದು ಹೇಳಲಾಗುತ್ತದೆ. ಈ

ಬಸದಿಯ ಗರ್ಭಗೃಹ ಮತ್ತು ಅರ್ಧಮಂಟಪಗಳು ಸುಸ್ಥಿತಿಯಲ್ಲಿವೆ. ಗರ್ಭಗೃಹದ ಲಲಾಟದಲ್ಲಿ ಜಿನಬಿಂಬವಿದೆ. ಪಾಣಿಪೀಠವು ಜೈನಬಸದಿಯಲ್ಲಿರುವ ಪೀಠದಂತಿದ್ದು, ಅದರ ಮೇಲೆ ಶಿವಲಿಂಗವನ್ನು ಇರಿಸಲಾಗಿದೆ. ಇದನ್ನು ಗಮನಿಸಿದಾಗ ಮೊದಲು ಇದು ಜೈನ ಬಸದಿಯಾಗಿತ್ತು. ನಂತರ ಶಿವದೇವಾಲಯವಾಗಿದೆಯೆಂದು ಊಹಿಸಲಾಗಿದೆ. ಚಂದ್ರಮೌಳೇಶ್ವರ, ವಿರೂಪಾಕ್ಷ, ಲಕ್ಷ್ಮೀನಾರಾಯಣ, ಸೋಮೇಶ್ವರ, ನೀಲಕಂಠೇಶ್ವರ ವಿಶ್ವನಾಥ, ಮಲ್ಲಿಕಾರ್ಜುನ, ಮಾಣಿಕೇಶ್ವರ  ಮುಂತಾದವುಗಳು ಇಲ್ಲಿರುವ ದೇವಾಲಯಗಳಾಗಿದ್ದು,  ಸುಂದರ ಶಿಲ್ಪಕಲೆಯ ಪ್ರತೀಕವಾಗಿವೆ. ಈ ಗ್ರಾಮದಲ್ಲಿ ಒಂದು ಕಾಲಕ್ಕೆ ೧೦೧ ಬಾವಿಗಳು ಇದ್ದವೆಂದು ಹೇಳಲಾಗುತ್ತದೆ. ಇವುಗಳಲ್ಲಿ ಮುಸುಕಿನಬಾವಿ, ಛಬ್ಬೇರಬಾವಿ, ಕನ್ನೇರಬಾವಿ, ಪತ್ರಿಬಾವಿ, ಮಾಳಿಬಾವಿ, ಸಿದ್ಧರಬಾವಿ, ಹನುಮನಬಾವಿ, ಮಜ್ಜನಬಾವಿಗಳು ಅತ್ಯಂತ ಪ್ರಸಿದ್ಧವಾಗಿವೆ. ಮಾಣಿಕೇಶ್ವರ ದೇವಸ್ಥಾನದ ಬಾಗಿಲಲ್ಲಿರುವ ಎರಡು ಅಂತಸ್ತಿನ ಮಂಟಪದ ಸೋಪಾನಗಳ ಬಾವಿಯು ಬಹಳ ಸುಂದರವಾಗಿದೆ. ಬಾವಿಯಲ್ಲಿ ಪುಟ್ಟ ಪುಟ್ಟ ಗೋಪುರಗಳು ನಯನಮನೋಹರವಾಗಿವೆ. ಶಿಲಾಸ್ಥಂಭಗಳ ಜೋಡಣೆ ಬಹಳ ಶಿಸ್ತಿನಿಂದ ಕೂಡಿದೆ.[೩೫] ಲಕ್ಕುಂಡಿಯ ಇನ್ನೊಂದು ಮುಖ್ಯ ಆಕರ್ಷಣೆ ಸುಮಾರು ೮೦೦ ವರ್ಷಗಳ ಹಿಂದಿನ ಸೋಪಾನ ಬಾವಿಗಳು, ವಾಸ್ತುಕಲೆಯ ದೃಷ್ಟಿಯಿಂದ ಈ ಬಾವಿಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ಛಬ್ಬೇರಬಾವಿ, ಮುಸುಕಿನಬಾವಿ ಮುಂತಾದವುಗಳು ತಮ್ಮ ಕಲಾತ್ಮಕ ವಾಸ್ತು ವಿನ್ಯಾಸದಿಂದ ನೋಡುಗರ ಮನಸೂರೆಗೊಳ್ಳುತ್ತವೆ. ಈ ಬಾವಿಗಳು ಸಾಮಾನ್ಯವಾಗಿ ಚೌಕಾಕಾರ ಇಲ್ಲವೇ ಆಯತಾಕಾರವಾಗಿ ಇವೆ. ಬಾವಿಯ ನಾಲ್ಕುಬದಿಯ ಗೋಡೆಗಳನ್ನು ತಳಭಾಗದಿಂದ ಮೇಲ್ಭಾಗದವರೆಗೂ ಚಪ್ಪಡಿ ಕಲ್ಲುಗಳಿಂದ ಭದ್ರವಾಗಿ ನಿರ್ಮಿಸಿದ್ದಾರೆ. ತಳದಿಂದ ಮೇಲಕ್ಕೆ ಬಂದಂತೆಲ್ಲ ಬಾವಿಯ ಒಳವ್ಯಾಸ ಹೆಚ್ಚುತ್ತಾ ಹೋಗುತ್ತದೆ. ಬಾವಿಯ ಗೋಡೆಗಳಲ್ಲಿ ಪುಟ್ಟ ಗೂಡುಗಳನ್ನು ಹೊಂದಿರುವ ದೇವಕೋಷ್ಟಕಗಳನ್ನು ಒಳಗೊಂಡಿದೆ ಅವುಗಳಲ್ಲಿ ಈಗ ಯಾವುದೇ ಮೂರ್ತಿ ಕಂಡುಬರುವುದಿಲ್ಲ. ಬಾವಿಗಳಿಗೆ ಸುಂದರವಾದ ಮೆಟ್ಟಿಲುಗಳನ್ನು ನಿರ್ಮಿಸಿದ್ದಾರೆ. ಈ ಮೆಟ್ಟಿಲುಗಳಿಗೆ ಚಪ್ಪಡಿ ಕಲ್ಲುಗಳಿಂದ ವಿನ್ಯಾಸಗೊಳಿಸಿದ ಹಂದರವಿದೆ. ಬಾವಿಯೊಳಗೆ ಇಳಿದರೆ ಬಿರುಬಿಸಿಲಿನಲ್ಲಿ ಮೈ ತಂಪಾಗಿಸುತ್ತದೆ. ಇಂದಿಗೂ ಉಪಯೋಗದಲ್ಲಿರುವ ಈ ಪ್ರಾಚೀನ ಬಾವಿಗಳಿಗೆ ಈಗಲೂ ಹೊಲಗಳಿಗೆ ಪಂಪ್‌ಸೆಟ್ ಮೂಲಕ ಇದರ ನೀರನ್ನು ಬಳಸುತ್ತಾರೆ.

ವಿರೂಪಾಕ್ಷ ದೇವಾಲಯದ ಸಮೀಪದಲ್ಲಿ ಚಾಲುಕ್ಯರ ಶೈಲಿಯ ಮಾಣಿಕೇಶ್ವರ ದೇವಾಲಯವಿದೆ. ಈ ದೇವಾಲಯದ ಮುಂಭಾಗದಲ್ಲಿ ವಿಶಾಲವಾದ ಬಾವಿಯಿದೆ. ಇದನ್ನು ‘ಮಾಣಿಕೇಶ್ವರ ಕುಂಡ’[೩೬] ಎಂದು ಕರೆಯುತ್ತಾರೆ. ಇದು ಆಯತಾಕಾರದಲ್ಲಿರುವ ಬಾವಿ,ದಕ್ಷಿಣ ದಿಕ್ಕಿನಲ್ಲಿ ಉದ್ದವಾದ ದಾರಿಯಿದೆ. ಪಶ್ಚಿಮಕ್ಕೆ ಇನ್ನೊಂದು ಉದ್ದವಾದ ದಾರಿಯಿದೆ. ಪೂರ್ವಕ್ಕಿರುವ ದಾರಿ ‘ಎಲ್’ ಆಕಾರದಲ್ಲಿದೆ. ಎಲ್ಲ ಕಡೆಯ ದಾರಿಗಳಲ್ಲಿ ಮೆಟ್ಟಿಲುಗಳಿವೆ. ಬಾವಿಯ ಕೆಳಗಿನ ಭಾಗವನ್ನು  ಬಂಡೆಯಲ್ಲಿಯೇ

ಕೊರೆಯಲಾಗಿದೆ. ಮೇಲಿನ ಹಂತಗಳನ್ನು ಉದ್ದವಾದ ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದೆ. ಈ ಹಂತಗಳು ಮೆಟ್ಟಿಲುಗಳಂತೆ ಮುಂದೆ ಚಾಚಿಕೊಂಡಿವೆ. ೧೨ ಮೆಟ್ಟಿಲುಗಳ ಮೊದಲಿನ ಅಂತಸ್ತಿನ ಒಂದು ನಡು ನಿಲ್ಲೆಡೆಯಿಂದ ಈ ಹಂತದಲ್ಲಿ ಈಶಾನ್ಯ ಮತ್ತು ವಾಯವ್ಯ ಮೂಲೆಗಳಲ್ಲಿ ಎರಡು ಆಯತಾಕಾರದ ಜಗುಲಿಗಳಿವೆ. ಐದು ಮೆಟ್ಟಿಲುಗಳುಳ್ಳ ಎರಡನೆಯ ಅಂತಸ್ತಿನಲ್ಲಿ ಮತ್ತೆ ಚಿಕ್ಕ ನಡುನಿಲ್ಲೆಡೆಯಿದೆ. ಈ ಅಂತಸ್ತಿನ ಹಂತಗಳು ತುಂಬ ಕಡಿಮೆ ಪ್ರಮಾಣದಲ್ಲಿ ಮುಂದೆ ಚಾಚಿಕೊಂಡಿವೆ. ಈ ಅಂತಸ್ತಿನ ಮೇಲಿರುವ ಅಂದರೆ ಮೂರನೆಯ ಅಂತಸ್ತಿನಲ್ಲಿ ಆರು ಮೆಟ್ಟಿಲುಗಳಿದ್ದು ಇವು ಲಂಬರೇಖೆಯಲ್ಲಿ ಜೋಡಿಸಲ್ಪಟ್ಟಿವೆ. ಆರನೆಯ ಹಂತ ಕಪೋತವಾಗಿದ್ದು ಅಲಂಕಾರರಹಿತ ಕೂಡುಗಳನ್ನು ಹೊಂದಿದೆ. ಇಲ್ಲಿ ಸಹ ಚಿಕ್ಕದಾದ ನಡುನಿಲ್ಲೆಡೆಯಿದೆ. ನಾಲ್ಕನೆಯ ಅಂತಸ್ತು ಎಂಟು ಹಂತಗಳನ್ನೊಳಗೊಂಡಿದ್ದು ಇವು ಒಂದೇ ಲಂಬರೇಖೆಯಲ್ಲಿ ಜೋಡಿಸಲ್ಪಟ್ಟಿವೆ. ಎಂಟನೆಯ ಅಂತಸ್ತು ಮತ್ತೆ ಕಪೋತವಾಗಿದೆ. ಮೂರನೆಯ ಮತ್ತು ನಾಲ್ಕನೆಯ ಅಂತಸ್ತುಗಳಲ್ಲಿ ಪೂರ್ವ ಉತ್ತರ ಮತ್ತು ಪಶ್ಚಿಮ ಬದಿಗಳಲ್ಲಿ ಎರಡೆರಡು ಗೂಡುಗಳಿವೆ. ಈ ಗೂಡುಗಳನ್ನು ಪದರುಗಲ್ಲುಗಳಿಂದ ಕಟ್ಟಿದ್ದು ಇವು ಚಿಕ್ಕ ದೇವಾಲಯಗಳಂತೆ ಕಾಣುತ್ತವೆ. ಈ ಗೂಡುಗಳು ಚೌಕಟ್ಟು ದೊಡ್ಡ ಸೂರು ಮತ್ತು ದ್ವಿತಳವಿಮಾನಗಳನ್ನೊಳಗೊಂಡಿವೆ. ಎಲ್ಲ ಗೂಡುಗಳು ದ್ವಿತಳ ವಿಮಾನಗಳಾಗಿವೆ. ಕೆಲವು ಗೂಡುಗಳಲ್ಲಿ ಪೀಠಗಳು ಮಾತ್ರ ಇವೆ. ಗೂಡಿನ ಮೇಲೆ ಅಗಲವಾದ ಕಂಠವಿದೆ. ಕೂಡು ಅಲಂಕಾರರಹಿತವಾಗಿದೆ. ಈ ಕಪೋತವು ಕೊನೆಯ ಹಂತವಾಗಿದೆ. ದಕ್ಷಿಣ, ಪೂರ್ವ ಮತ್ತು ಪಶ್ಚಿಮಕ್ಕಿರುವ ಮೆಟ್ಟಿಲುಗಳ ಎರಡೂ ಬದಿಗಳಲ್ಲಿ ಒಂದೊಂದು ಗೂಡುಗಳಿವೆ. ಈ ಗೂಡುಗಳನ್ನು ದಾಟಿದ ಮೇಲೆ ಪ್ರವೇಶಮಂಟಪವಿದೆ. ಇದು ಎರಡು ಅಂತಸ್ತುಗಳಲ್ಲಿರುವ ಎರಡೂ ಅಂತಸ್ತುಗಳಲ್ಲಿ ಅನೇಕ ಕಂಬಗಳಿವೆ. ಈ ಬಾವಿಯ ಗೂಡುರಿನ ಬಾವಿಯ ಕಾಲಕ್ಕಿಂತ ಸ್ವಲ್ಪ ಅನಂತರದ ಕಾಲದ್ದು. ಮಾಣಿಕೇಶ್ವರ ದೇವಸ್ಥಾನವು ಒಂದು ಕಂಬದ ಮೇಲೆ ೧೨ನೆಯ ಶತಮಾನದ ಒಂದು ಶಾಸನವಿದೆ. ಈ ಶಾಸನವು ಗುರು ಕ್ರಿಯಾಶಕ್ತಿ ಪಂಡಿತನು ಬಾವಿಯ ಮೇಲೆ ಭೋಗಮಂಟಪ ಕಟ್ಟಿಸಿದ್ದನ್ನು ತಿಳಿಸುತ್ತದೆ. ಮತ್ತು ಬಡ್ಡಿಯರ ಬಸವೆಟ್ಟಿಯ ಉಲ್ಲೇಖವಿದೆ.

ಸಿದ್ಧರಬಾವಿ:

ಚೌಕಾಕಾರದಲ್ಲಿ ಈ ಬಾವಿಗೆ ಪೂರ್ವ ದಿಕ್ಕಿನಲ್ಲಿ 'ಎಲ್'ಆಕಾರದ ಪ್ರವೇಶವಿದೆ. ಈ ಪ್ರವೇಶವು ದಕ್ಷಿಣ ದಿಕ್ಕಿನಿಂದ ಪ್ರಾರಂಭವಾಗಿ ಉತ್ತರಕ್ಕೆ ಚಾಚಿ, ಪಶ್ಚಿಮಕ್ಕೆ ತಿರುಗಿ ಬಾವಿಯ ನೀರಿನ ಮಟ್ಟಕ್ಕೆ ಹೋಗುತ್ತದೆ. ದೊಡ್ಡದಾಗಿರುವ ಬಾವಿಯ ತಳಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿಯೇ ಕೊರೆಯಲಾಗಿದೆ. ಮೇಲಿನ ಭಾಗ ಐದು ಅಂತಸ್ತು (ಶ್ರೇಣಿ)ಗಳಿದ್ದು ಇದರಲ್ಲಿ ಅತೀ ಮೇಲಿನ ಹಾಗೂ ಕೆಳಗಿನ ಭಾಗಗಳು ಇತ್ತೀಚಿನ ಕಟ್ಟಡಗಳಾಗಿವೆ. ಕೆಲ ಭಾಗದಲ್ಲಿ ಮೆಟ್ಟಿಲುಗಳನ್ನು ಕಲ್ಲಿನಲ್ಲಿಯೇ ಕೊರೆದಿದ್ದಾರೆ. ಮೇಲಿನ ಪ್ರವೇಶ ದಾರಿಯಲ್ಲಿರುವ ಮೆಟ್ಟಿಲುಗಳನ್ನು ಕಟ್ಟಲಾಗಿದೆ. ದಕ್ಷಿಣದ ಗೋಡೆಯ ಮಧ್ಯಭಾಗದಲ್ಲಿ

ನೀರು ಮೇಲೆತ್ತುವ ಜಗುಲಿಯಿದೆ. ದಾರಿಯ ಪಶ್ಚಿಮ ಗೋಡೆಯ ತುದಿಯಲ್ಲಿ ಅಧಿಷ್ಠಾನದಂತೆ ಕಾಣುವ ಭಾಗವಿದೆ. ಇದು ಉಪಾನ ಎತ್ತರವಾದ ಪದ್ಮ, ಕಂಠ ಮತ್ತು ಕಪೋತಗಳನ್ನೊಳಗೊಂಡಿದೆ. ಕಪೋತದ ಮೇಲೆ ಕೆತ್ತನೆರಹಿತ ಕೂಡು ಉಬ್ಬುಗಳು ಇವೆ. ಮೊದಲು ಬಹುಶಃ ಬಾವಿಯ ಸುತ್ತಲೂ ಇತ್ತೆಂದು ಕಾಣುತ್ತದೆ. ಈ ರೀತಿಯ ಅಡಿಪಾಯವು (ತಳಪಾಯ) ಬಾವಿಯನ್ನು ಒರಟು ಮತ್ತು ಅಸಮರೂಪದ ಕಲ್ಲುಗಳಿಂದ ಕಟ್ಟಿದ್ದಾರೆ. ಪ್ರವೇಶದಾರಿಯ ಪೂರ್ವಕ್ಕಿರುವ ಗೋಡೆಯಲ್ಲಿ ಒಂದು ಸಣ್ಣ ಗುಡಿಯಿದೆ. ಇದರ ಮುಂಭಾಗವನ್ನು ಒಂದೇ ಕಲ್ಲಿನಲ್ಲಿ ಕೊರೆಯಲಾಗಿದೆ. ಅದರಲ್ಲಿಯೇ ಬಾಗಿಲಿನ ದ್ವಾರಬಂಧಗಳನ್ನು ಕೊರೆದಿದ್ದಾರೆ. ಚೌಕಟ್ಟಿನ ಪಕ್ಕಗಳಲ್ಲಿ, ರಂದ್ರಗಳುಳ್ಳ ಕಿಟಕಿಗಳಿವೆ. ಈ ಕಿಟಕಿಗಳು ಹಣೆಪಟ್ಟಿಯ ಮೇಲೂ ಮುಂದುವರಿದಿವೆ. ಲಲಾಟದ ಮೇಲೆ ಗಜಲಕ್ಷ್ಮಿಯ ವಿಗ್ರಹವಿದೆ. ದಾರಿಯ ಪಶ್ಚಿಮಕ್ಕಿರುವ ಗೋಡೆಯ ಮೇಲೆ ಇತ್ತೀಚೆಗೆ ಕಟ್ಟಿದ ಗೂಡಿನಲ್ಲಿ ಗರುಡ ಪೀಠದ ಮೇಲೆ ಹನುಮಾನನ ವಿಗ್ರಹವಿದೆ.

ಬಾವಿಯನ್ನು ಪ್ರವೇಶಿಸುವ ಸ್ಥಳದಲ್ಲಿ ಪದರುಗಲ್ಲಿನಲ್ಲಿ ಕಟ್ಟಿದ ತೋರಣವಿದೆ. ಮಡಚಿಕೊಂಡಿರುವ ತಳ, ಕೆಳಗೆ ಚೌಕಾಕಾರದ ದಿಮ್ಮಿಯನ್ನೊಳಗೊಂಡ ಚೌಕಾಕಾರದ ಕಂಬದ ದಿಂಡು, ಗಂಟೆ, ಪ್ರತಿಯೊಂದು ಭಾಗದಲ್ಲಿ ಉಬ್ಬಿದ ತ್ರಿಕೋನವಿರುವ ಚೌಕಾಕಾರದ ಕಲಶ, ಚೌಕಾಕಾರದ ಚೌಕಟ್ಟು, ಮತ್ತು ಬಾಗಿಲುವಾಡ ಇದ್ದು ಅದರ ಮೇಲೆ ಮಧ್ಯದಲ್ಲಿ ಗಜಲಕ್ಷ್ಮಿಯಿದೆ. ಮೇಲಿನ ಭಾಗ ಕಪೋತದಂತಿದ್ದು, ಕೂಡು ಕೀರ್ತಿಮುಖಗಳಿಂದ ಅಲಂಕೃತವಾಗಿದೆ. ಕೂಡುಗಳು ಹೂಗಳಿಂದ ತುಂಬಿವೆ. ಈ ಕೂಡು ಕೀರ್ತಿ ಮುಖಗಳು ಹಣೆಪಟ್ಟಿಯ ಹಿಂಭಾಗದಲ್ಲಿ ಇವೆ. ತೋರಣದ ಮೇಲಿರುವ ಕ್ರಿ.ಶ. ೧೯೯೫ರ ಶಾಸನವು[೩೬] ವಿಷ್ಣುಭಟ್ಟನ ಮಗ ಕೇಶವ ಮತ್ತು ಅಡಕೆಯರ ಕೇಶವ ದೇವರುಗಳು ಸಾರ್ವಿಯರ ಒಪ್ಪಿಗೆಯನ್ನು ಪಡೆದು ಪಡೆದು ನಾಗನಬಾವಿಯ ಧರ್ಮೇತದ ಸಂರಕ್ಷಣೆಗೆ ಪ್ರತಿವರ್ಷ ಕೇಣಿಯಿಂದ ಸಂಗ್ರಹವಾದ ಹನ್ನೆರಡು ಗದ್ಯಾಣಗಳನ್ನು ದಾನ ನೀಡಿದ್ದಾರೆಂದು ತಿಳಿಸುತ್ತದೆ. ಈ ಶಾಸನ ಹೊಯ್ಸಳ ವೀರಬಲ್ಲಾಳನ ಕಾಲದ್ದಾಗಿದೆ.

**ಪತ್ರೆಯವರ ಬಾವಿ :**

ಇದು ವಸ್ತುಸಂಗ್ರಹಾಲಯದ ಪಶ್ಚಿಮಕ್ಕಿದೆ. ಇದು ಚೌಕಾಕಾರದಲ್ಲಿರುವ ಒಂದು ಚಿಕ್ಕ ಬಾವಿ. ಪ್ರವೇಶ ದಾರಿಯು ಪೂರ್ವ ದಿಕ್ಕಿನಲ್ಲಿದೆ. ಬಾವಿಯ ತಳಭಾಗವನ್ನು ಕಲ್ಲಿನಲ್ಲಿಯೇ ಕೊರೆದು ಮೇಲಿನ ಭಾಗವನ್ನು ನುಣುಪಾದ ಉದ್ದವಾದ ಕಲ್ಲುಗಳಿಂದ ಕಟ್ಟಿದ್ದಾರೆ. ಆದರೆ ಇವತ್ತೂ ಬಹಳ ಕನಿಷ್ಠ ಮಟ್ಟದಲ್ಲಿದೆ.

**ಮಜ್ಜನಬಾವಿ :**

ಹಾಲಗೊಂಡ ಬಸವಣ್ಣ ದೇವಸ್ಥಾನದ ಹತ್ತಿರವಿರುವ ಮಜ್ಜನಬಾವಿ ವಾಸ್ತುಶಿಲ್ಪದಿಂದ

ಪ್ರಖ್ಯಾತಿ ಪಡೆದಿದೆ. ವಾಸ್ತುಶಿಲ್ಪ ದೃಷ್ಟಿಯಿಂದ ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಒಳಪಟ್ಟಿರುವ ಇದು ಅನೇಕ ವಿಶಿಷ್ಟತೆಗಳನ್ನು ಒಳಗೊಂಡಿದೆ. ಇದರಲ್ಲಿರುವ ಗುಲಾಬಿ ಬಣ್ಣದ ನೀರು ಸುವಾಸನೆಯಿಂದ ಕೂಡಿದ್ದು, ನೈಸರ್ಗಿಕ ವಿಚಿತ್ರವೆನಿಸಿದೆ. ಇದು ಮಜ್ಜನ (ಸ್ನಾನ) ಪ್ರಿಯರಿಗಾಗಿ ಇರುವ ಬಾವಿಯಾಗಿರುವುದರಿಂದ ಇದಕ್ಕೆ ಮಜ್ಜನ ಬಾವಿ ಎಂದು ಹೆಸರು ಬಂದಿದೆ. ಇದು ಲಕ್ಕುಂಡಿಯಲ್ಲಿರುವ ಎಲ್ಲಾ ಬಾವಿಗಳಿಗಿಂತಲೂ ಇದು ವಿಶಿಷ್ಟತೆಯಿಂದ ಕೂಡಿದೆ. ಇದು ಕಾಶಿವಿಶ್ವೇಶ್ವರ ದೇವಸ್ಥಾನದ ದಕ್ಷಿಣಕ್ಕಿದೆ. ಇದು ಚಿಕ್ಕ ಬಾವಿಯಾಗಿದ್ದರೂ ಸುಸ್ಥಿತಿಯಲ್ಲಿದೆ.

ಚೌಕಾಕಾರದಲ್ಲಿದ್ದು ದಕ್ಷಿಣಕ್ಕೆ ಪ್ರವೇಶ ದಾರಿಯಿದೆ. ದಾರಿಯ ದಕ್ಷಿಣ ದಿಕ್ಕಿನ ಕೊನೆಯಲ್ಲಿ ಪಶ್ಚಿಮ ಮತ್ತು ಪೂರ್ವಕ್ಕೆ ಮೆಟ್ಟಿಲುಗಳಿವೆ. ಪೂರ್ವಕ್ಕಿರುವ ಮೆಟ್ಟಿಲುಗಳನ್ನು ಇತ್ತೀಚೆಗೆ ಕಟ್ಟಿದ ಗೋಡೆಯಿಂದ ಮುಚ್ಚಲಾಗಿದೆ. ಬಾವಿಯು ಒಣಗಿದ್ದರಿಂದ ಬಾವಿಯ ತಳಭಾಗವು ಸ್ಪಷ್ಟವಾಗಿ ಗೋಚರಿಸುತ್ತದೆ. ಇದನ್ನು ಮೂರು ಅಂತಸ್ತುಗಳಲ್ಲಿ ಕಟ್ಟಿದ್ದಾರೆ. ಈ ಅಂತಸ್ತುಗಳು ಲಂಬವಾಗಿದ್ದು ಪ್ರತಿಯೊಂದು ಸ್ವಲ್ಪ ಮುಂದೆ ಚಾಚಿಕೊಂಡಿದೆ. ಲಕ್ಕುಂಡಿಯಲ್ಲಿರುವ ಎಲ್ಲಾ ಬಾವಿಗಳಿಗಿಂತ ಬಹಳ ವೈಶಿಷ್ಟ್ಯಪೂರ್ಣವಾದ ಬಾವಿ ಇದಾಗಿರುತ್ತದೆ. ದಕ್ಷಿಣಾಭಿಮುಖವಾಗಿ ಪ್ರವೇಶ ದ್ವಾರ ಹೊಂದಿರುತ್ತದೆ. ಈ ಬಾವಿಯ ನೀರು ಬೆಳಿಗ್ಗೆ ಮಧ್ಯಾಹ್ನ ಮತ್ತು ಸಂಜೆಯ ವೇಳೆಯಲ್ಲಿ ಜಲದ ವರ್ಣವು ಬದಲಿಸುತ್ತದೆ. ಕೆಲವು ಋತುಮಾನಗಳಲ್ಲಿ ಇದರ ನೀರು ಮಜ್ಜಿಗೆಯಂತೆ ಕಾಣುವುದರಿಂದ ಇದಕ್ಕೆ ಮಜ್ಜನ ಬಾವಿ ಎಂದು ಕರೆಯುವರು. ಇದು ಸುಮಾರು ೭೦ ಅಡಿ ಉದ್ದ, ೧೫ ಅಡಿ ಅಗಲ, ೧೨ರಿಂದ ೧೫ ಅಡಿ ಆಳವನ್ನು ಹೊಂದಿದೆ.

**ಛಬ್ಬೇರ ಬಾವಿ**

ಚೌಕಾಕಾರದಲ್ಲಿ ಈ ಬಾವಿಗೆ ಪೂರ್ವ ದಿಕ್ಕಿನಲ್ಲಿ 'ಎಲ್' ಆಕಾರದ ಪ್ರವೇಶವಿದೆ. ಈ ಪ್ರವೇಶವು ದಕ್ಷಿಣ ದಿಕ್ಕಿನಿಂದ ಪ್ರಾರಂಭವಾಗಿ ಉತ್ತರಕ್ಕೆ ಚಾಚಿ, ಪಶ್ಚಿಮಕ್ಕೆ ತಿರುಗಿ ಬಾವಿಯ ನೀರಿನ ಮಟ್ಟಕ್ಕೆ ಹೋಗುತ್ತದೆ. ದೊಡ್ಡದಾಗಿರುವ ಬಾವಿಯ ತಳಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿಯೇ ಕೊರೆಯಲಾಗಿದೆ. ಮೇಲಿನ ಭಾಗ ಐದು ಅಂತಸ್ತು (ಶ್ರೇಣಿ)ಗಳಿದ್ದು ಇದರಲ್ಲಿ ಅತೀ ಮೇಲಿನ ಹಾಗೂ ಕೆಳಗಿನ ಭಾಗಗಳು ಇತ್ತೀಚಿನ ಕಟ್ಟಡಗಳಾಗಿವೆ. ಕೆಲಭಾಗದಲ್ಲಿ ಮೆಟ್ಟಿಲುಗಳನ್ನು ಕಲ್ಲಿನಲ್ಲಿಯೇ ಕೊರೆದಿದ್ದಾರೆ. ಮೇಲಿನ ಪ್ರವೇಶ ದಾರಿಯಲ್ಲಿರುವ ಮೆಟ್ಟಿಲುಗಳನ್ನು ಕಟ್ಟಲಾಗಿದೆ. ದಕ್ಷಿಣದ ಗೋಡೆಯ ಮಧ್ಯಭಾಗದಲ್ಲಿ ನೀರು ಮೇಲೆತ್ತುವ ಜಗುಲಿಯಿದೆ. ದಾರಿಯ ಪಶ್ಚಿಮ ಗೋಡೆಯ ತುದಿಯಲ್ಲಿ ಅಧಿಷ್ಠಾನದಂತೆ ಕಾಣುವ ಭಾಗವಿದೆ. ಇದು ಉಪಾನ ಎತ್ತರವಾದ ಪದ್ಮ, ಕಂಠ ಮತ್ತು ಕಪೋತಗಳನ್ನೊಳಗೊಂಡಿದೆ. ಕಪೋತದ ಮೇಲೆ ಕೆತ್ತನೆರಹಿತ ಕೂಡು ಉಬ್ಬುಗಳು ಇವೆ. ಮೊದಲು ಬಹುಶಃ ಬಾವಿಯ ಸುತ್ತಲೂ ಇತ್ತೆಂದು ಕಾಣುತ್ತದೆ. ಈ ರೀತಿಯ ಅಡಿಪಾಯದ

(ತಳಪಾಯ) ಬಾವಿಯನ್ನು ಒರಟು ಮತ್ತು ಅಸಮರೂಪದ ಕಲ್ಲುಗಳಿಂದ ಕಟ್ಟಿದ್ದಾರೆ. ಪ್ರವೇಶ ದಾರಿಯ ಪೂರ್ವಕ್ಕಿರುವ ಗೋಡೆಯಲ್ಲಿ ಒಂದು ಸಣ್ಣ ಗುಡಿಯಿದೆ. ಇದರ ಮುಂಭಾಗವನ್ನು ಒಂದೇ ಕಲ್ಲಿನಲ್ಲಿ ಕೊರೆಯಲಾಗಿದೆ. ಅದರಲ್ಲಿಯೇ ಬಾಗಿಲಿನ ದ್ವಾರಬಂಧಗಳನ್ನು ಕೊರೆದಿದ್ದಾರೆ. ಚೌಕಟ್ಟಿನ ಪಕ್ಕಗಳಲ್ಲಿ ರಂಧ್ರಗಳುಳ್ಳ ಕಿಟಕಿಗಳಿವೆ. ಈ ಕಿಟಕಿಗಳು ಹಣೆಪಟ್ಟಿಯ ಮೇಲೂ ಮುಂದುವರಿದಿವೆ. ಲಲಾಟದ ಮೇಲೆ ಗಜಲಕ್ಷ್ಮಿಯ ವಿಗ್ರಹವಿದೆ. ಪ್ರವೇಶ ದಾರಿಯ ಪಶ್ಚಿಮಕ್ಕಿರುವ ಗೋಡೆಯ ಮೇಲೆ ಇತ್ತೀಚೆಗೆ ಕಟ್ಟಿದ ಗೂಡಿನಲ್ಲಿ ಗರುಡ ಪೀಠದ ಮೇಲೆ ಹನುಮಾನನ ಕೆತ್ತನೆ ಶಿಲ್ಪವಿದೆ.

ಬಾವಿಯನ್ನು ಪ್ರವೇಶಿಸುವ ಸ್ಥಳದಲ್ಲಿ ಪದರುಗಲ್ಲಿನಲ್ಲಿ ಕಟ್ಟಿದ ತೋರಣವಿದೆ. ಮಡಚಿಕೊಂಡಿರುವ ತಳ, ಕೆಳಗೆ ಚೌಕಾಕಾರದ ದಿಮ್ಮಿಯನ್ನೊಳಗೊಂಡ ಚೌಕಾಕಾರದ ಕಂಬದ ದಿಂಡು, ಗಂಟೆ, ಪ್ರತಿಯೊಂದು ಭಾಗದಲ್ಲಿ ಉಬ್ಬಿದ ತ್ರಿಕೋನವಿರುವ ಚೌಕಾಕಾರದ ಕಲಶ, ಚೌಕಾಕಾರದ ಚೌಕಟ್ಟು ಮತ್ತು ಬಾಗಿಲುವಾಡ ಇದ್ದು ಅದರ ಮೇಲೆ ಮಧ್ಯದಲ್ಲಿ ಗಜಲಕ್ಷ್ಮಿಯಿದೆ. ಮೇಲಿನ ಭಾಗ ಕಪೋತದಂತಿದ್ದು, ಕೂಡು ಕೀರ್ತಿಮುಖಗಳಿಂದ ಅಲಂಕೃತವಾಗಿದೆ. ಕೂಡುಗಳು ಹೂಗಳಿಂದ ತುಂಬಿವೆ. ಈ ಕೂಡು ಕೀರ್ತಿಮುಖಗಳು ಹಣೆಪಟ್ಟಿಯ ಹಿಂಭಾಗದಲ್ಲಿ ಇವೆ. ಈ ತೋರಣವ ಮೇಲಿರುವ ಶಾಸನವು ವಿಷ್ಣುಭಟ್ಟನ ಮಗ ಕೇಶವ ಮತ್ತು ಆಡಕೆಯರ ಕೇಶವ ದೇವರುಗಳು ಸಾಸಿರ್ವರ ಒಪ್ಪಿಗೆಯನ್ನು ಪಡೆದು ನಾಗಬಾವಿಯ ಧರ್ಮೇತರದ ಸಂರಕ್ಷಣೆಗೆ ಪ್ರತಿವರ್ಷ ಕೇಣಿಯಿಂದ ಸಂಗ್ರಹವಾದ ಹನ್ನೆರಡು ಗದ್ಯಾಣಗಳನ್ನು ದಾನ ನೀಡಿದ್ದಾರೆಂದು ತಿಳಿಸುತ್ತದೆ. ಈ ಶಾಸನ[೩೮] ಹೊಯ್ಸಳ ವೀರಬಲ್ಲಾಳನ ಕಾಲದ್ದದಾಗಿದೆ.

**ಕನ್ನೇರ ಬಾವಿ :**

೧೨ನೇ ಶತಮಾನದಲ್ಲಿ ನಿರ್ಮಿಸಲ್ಪಟ್ಟ ಈ ಕನ್ನೇರ ಬಾವಿಯು ಚಾಲುಕ್ಯ ಶೈಲಿಯನ್ನೇ ಹೋಲುತ್ತದೆ. ಉತ್ತರಾಭಿಮುಖವಾಗಿರುವ ಈ ಬಾವಿಯು ಸುಮಾರು ೩೦ ಅಡಿಗಳಷ್ಟು ಆಳವಾಗಿದ್ದು, ೫೦ ಅಡಿಗಳಷ್ಟು ಉದ್ದವಾಗಿದೆ. ಇದರ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಎರಡು ದೇಗುಲಗಳಿದ್ದು ಒಂದು ಹನುಮಂತನ ದೇಗುಲ ಇನ್ನೊಂದು ರಾಮ ಲಕ್ಷ್ಮಣ ಹಾಗೂ ಸೀತಾದೇವಿಯ ಉಬ್ಬು ಶಿಲ್ಪಗಳನ್ನು ಒಳಗೊಂಡ ಕೀರ್ತಿಮುಖವಿದೆ. ವಿವಾಹ ಪೂರ್ವದ ಕನ್ಯೆಯರು ಅಥವಾ ರಾಜಕುಮಾರಿಯರಿಗೆ ಈ ಬಾವಿ ಪವಿತ್ರವಾಗಿತ್ತು. ಕನ್ನೆಯರು ಈ ಬಾವಿಯಲ್ಲಿ ಸ್ನಾನ ಮಾಡುತ್ತಿದ್ದರೆಂಬ ಮಾತು ಜನಸಾಮಾನ್ಯರಲ್ಲಿ ಹಾಸುಹೊಕ್ಕಾಗಿದೆ. ಆದ್ದರಿಂದ ಇದನ್ನು ಕನ್ನೆಯರ ಬಾವಿ ಎಂದು ಕರೆಯುವ ಸಂಪ್ರದಾಯ ಬಹುವರ್ಷಗಳಿಂದ ಬಂದಿರಬಹುದು.

**ಹೊಸೂರಿನ ಕಲ್ಲುಬಾವಿ**

ಹೊಸೂರು ಗ್ರಾಮವು ಗದಗದಿಂದ ದಕ್ಷಿಣಕ್ಕೆ ೧೫ ಕಿ.ಮೀ ಅಂತರದಲ್ಲಿದ್ದು ಕ್ರಿ.ಶ.

೧೧೪೮ರ ಹೊಸೂರ ಶಾಸನದಲ್ಲಿ[೩೯] ಕಲ್ಲುಬಾವಿಯ ಪ್ರಸ್ತಾಪವಿದೆ. ಈ ಬಾವಿ ಮತ್ತು ತೋಟವನ್ನು ಅಲ್ಲಿಯ ದೇವಾಲಯವೊಂದಕ್ಕೆ ದಾನ ಕೊಟ್ಟಿದ್ದಾಗಿ ತಿಳಿಯುತ್ತದೆ. ಹೀಗೆ ಕೆರೆ, ಕೊಳ, ಹಳ್ಳ, ಬಾವಿಗಳಿಂದ ನೀರನ್ನು ಬಳಸಿಕೊಂಡು ಅಂದಿನ ಕಾಲದಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದರು. ಹೊಸೂರಿನ ಆಯಜ್ಜಗಾವುಂಡ ದಂಪತಿಗಳಿಗೆ ೧೩ ತೋಟಗಳಿದ್ದು ಅವುಗಳಲ್ಲಿ ಪಟ್ಟವರ್ಧನರ ಒಂದು ತೋಟ ಮತ್ತು ತವರಾಜನ ಒಂದು ತೋಟ ಹೀಗೆ ಎರಡು ತೋಟಗಳನ್ನು ದಾನ ಕೊಟ್ಟ ಉಲ್ಲೇಖಗಳು ಕಂಡುಬರುತ್ತವೆ. ಉಳಿದ ತೋಟಗಳಲ್ಲಿ ವಿವಿಧ ಬೆಳೆಗಳನ್ನು ಬೆಳೆಯುತ್ತಿದ್ದರು ಅವುಗಳಲ್ಲಿ ಎಲೆ ತೋಟ, ಮತ್ತು ಅಡಿಕೆ ತೋಟಗಳಿಗೆ ಪ್ರಾಧಾನ್ಯತೆಯನ್ನು ನೀಡಿದ್ದರು.

**ಗಜೇಂದ್ರಗಡದ ಮಾಲೋಜಿ ಬಾವಿ**

ಗಜೇಂದ್ರಗಡ ನಗರ ಧಾರವಾಡ ಜಿಲ್ಲೆಯ ಉತ್ತರದ ತುದಿ ಹಾಗೂ ರೋಣ ತಾಲೂಕಿನ ಪೂರ್ವ ಭಾಗದಲ್ಲಿದೆ. ಇದು ಕರ್ನಾಟಕದ ಬಹಳ ಹಳೆಯ ಐತಿಹಾಸಿಕ ನಗರ. ಗದುಗಿನಿಂದ ೫೪ ಕಿಲೋಮೀಟರ್ ದೂರದಲ್ಲಿದೆ. ಗದುಗಿನಿಂದ ಬರುವ ಪ್ರವಾಸಿಗರಿಗೆ ಗಜೇಂದ್ರಗಡ ಗುಡ್ಡವು ಇನ್ನೂ ಸುಮಾರು ೪೦ ಕಿಲೋ ಮೀಟರ್ ದೂರದಲ್ಲಿರುವಾಗಲೇ ಗಜೇಂದ್ರಗಡಕ್ಕೆ ಬರುವ ಪ್ರವಾಸಿಗರಿಗೆ ಕೈಬೀಸಿ ಕರೆದು ಸುಸ್ವಾಗತ ಕೋರುವಂತೆ ಎದ್ದು ಕಾಣುತ್ತದೆ. ಊರಿಗೆ ಗಜೇಂದ್ರಗಡ ಎಂಬ ಹೆಸರು ಅನ್ವರ್ಥವಾಗಿರುವುದಕ್ಕೆ ಹಲವು ಕಾರಣಗಳು ದೊರೆಯುತ್ತವೆ. ೧) ಮಹಿಷಾಸುರನ ಮಗ ಗಜಾಸುರನೆಂಬುವನು ಈ ಊರಿನ ಕೋಟೆಯಲ್ಲಿ ವಾಸವಾಗಿದ್ದುದರಿಂದ ಈ ಕೋಟೆಗೆ ಗಜೇಂದ್ರಗಡವೆಂಬ ಹೆಸರು ಬಂದಿದೆ. ೨) ಕೋಟೆಯ ಮೇಲೆ ನಿಂತು ಈ ಊರನ್ನು ವೀಕ್ಷಿಸಿದಾಗ ಪೂರ್ವ ಭಾಗದ ಗುಡ್ಡ ಆನೆಯ ತಲೆಯಂತೆ ಹಾಗೂ ಅದರ ಮುಂದಿನ ಭಾಗ ಆನೆಯ ಸೊಂಡಿಲಿನಂತೆ ಕಾಣುವುದರಿಂದ ಗಜೇಂದ್ರಗಡವೆಂಬ ಹೆಸರು ಬಂದಿತೆಂದು ಹೇಳುತ್ತಾರೆ.[೪೦] ಈ ಊರಿನ ಕೋಟೆಯನ್ನು ಛತ್ರಪತಿ ಶಿವಾಜಿ ಕಟ್ಟಿಸಿದನೆಂದು ಪ್ರತೀತಿ ಇದೆ. ಇಲ್ಲಿ ವಿರೂಪಾಕ್ಷ, ದುರ್ಗಾದೇವಿ, ರಾಮಲಿಂಗ ಮುಂತಾದ ದೇವಾಲಯಗಳು ವಿಜಯನಗರೋತ್ತರ ಶೈಲಿಯಲ್ಲಿದ್ದರೆ, ಪಾಂಡುರಂಗ ದೇವಾಲಯವು ಮರಾಠಾ ಶೈಲಿಯಲ್ಲಿದೆ. ಗಜೇಂದ್ರಗಡದಿಂದ ಐದು ಕಿ.ಮೀ. ದೂರದಲ್ಲಿ ಕಾಲಕಾಲೇಶ್ವರ ದೇವಾಲಯವಿದೆ. ಈ ದೇವಾಲಯದಲ್ಲಿ ಕಲ್ಯಾಣ ಚಾಲುಕ್ಯರಿಂದ ಪ್ರಾರಂಭವಾಗಿ ವಿಜಯನಗರ ಅರಸ ಇಮ್ಮಡಿ ಹರಿಹರನ ಕಾಲದವರೆಗಿನ ಶಾಸನಗಳು ಕಂಡುಬರುತ್ತವೆ. ೧೭–೧೮ನೇ ಶತಮಾನದಲ್ಲಿ ಘೋರ್ಪಡೆ ಮನೆತನದವರು ತಮ್ಮ ವಶಕ್ಕೆ ತೆಗೆದುಕೊಂಡರು. ಟಿಪ್ಪುಸುಲ್ತಾನನೊಂದಿಗೆ ಹೋರಾಡಿ ಸ್ವಾತಂತ್ರ್ಯ ಸಿಗುವವರೆಗೆ ತಮ್ಮ ವಶದಲ್ಲಿ ಉಳಿಸಿಕೊಂಡರು. ಘೋರ್ಪಡೆ ಅರಸರು ಸರ್ವಧರ್ಮ ಸಹಿಷ್ಣುಗಳಾಗಿದ್ದು ಅನೇಕ ಮಸೀದಿ, ಮಠಗಳನ್ನು ಕಟ್ಟಿಸಿದರು. ಅಲ್ಲದೇ ಅನೇಕ ಬಾವಿಗಳನ್ನು ಕಟ್ಟಿಸಿ ಜನರ ಮನ್ನಣೆಗೆ ಪಾತ್ರರಾಗಿದ್ದರು.

ಗಜೇಂದ್ರಗಡದಿಂದ ಉಣಚಗೇರಿಗೆ ಹೋಗುವ ದಾರಿಯ ಎಡಭಾಗಕ್ಕೆ ಈ ಬಾವಿಯಿದೆ. ಘೋರ್ಪಡೆ ಮನೆತನದ ಹಿಂದೂರಾವ್ ದೌಲತ್ತರಾವ್ ಘೋರ್ಪಡೆ ನಿಧನವಾದ ನಂತರ, ಆತನ ಮಗ ಮಾಲೋಜಿರಾಯನು ಈ ಸಂಸ್ಥಾನದ ಚುಕ್ಕಾಣಿ ಹಿಡಿದನು. ತನ್ನ ಹೆಸರು ಅಜರಾಮರವಾಗಿರಬೇಕೆಂದು ಕ್ರಿ.ಶ. ೧೮೮೧ರಲ್ಲಿ ವಿಶಿಷ್ಟವಾದ ಮಾಲೋಜಿ ಬಾವಿಯನ್ನು[೪೧] ನಿರ್ಮಿಸಿದನೆಂದು ತಿಳಿದುಬರುತ್ತದೆ. ಇದಕ್ಕೆ ಆಧಾರವಾಗಿ ಈ ಬಾವಿಯಲ್ಲಿ ಸುಬ್ರಹ್ಮಣ್ಯನ ಸಂಕೇತವಾದ ನಾಗರಾಜನ ಚಿತ್ರ ಕಂಡುಬರುತ್ತದೆ. ಬಾವಿಯು ಚೌಕಾಕಾರದಲ್ಲಿದ್ದು ಉತ್ತರ ದಿಕ್ಕಿನಲ್ಲಿ ಇಂಗ್ಲೀಷ್ ವರ್ಣಮಾಲೆಯ 'ಜಡ್' ಆಕಾರದಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಿದ್ದಾರೆ. ಮೊದಲು ಬಾವಿಯ ನಾಲ್ಕು ಭಾಗಗಳಲ್ಲಿ ಕಂಬಗಳುಳ್ಳ ಮೊಗಸಾಲೆ ಇದ್ದದ್ದು ಕಂಡುಬರುತ್ತದೆ. ಆದರೆ ಈಗ ಇದರ ಕುರುಹುಗಳು ಮಾತ್ರ ಕಾಣುತ್ತವೆ. ಬಾವಿಯ ನಾಲ್ಕೂ ಮೂಲೆಗಳಲ್ಲಿ ಇಂಗ್ಲೀಷ್ ವರ್ಣಮಾಲೆಯ 'ಎಲ್' ಮಾದರಿಯ ಆಕಾರದಲ್ಲಿ ಮೆಟ್ಟಿಲುಗಳಿದ್ದು, ಇವು ಭಾಗಶಃ ಮುಚ್ಚಲ್ಪಟ್ಟಿವೆ. (Covered) ಈ ಪ್ರವೇಶದ್ವಾರಗಳಿಗೆ ಕಮಾನುಗಳಿವೆ. ಬಾವಿಯ ತುದಿಯ ಭಾಗವು ವಿಜಯನಗರ ಕಾಲದ ಶೈಲಿಯಲ್ಲಿದೆ. ಇದರ ಕೆಳಗೆ ಅಗಲವಾದ ಕಂಠವಿದೆ. ಇದರ ಮೇಲೆ ಹೆಡೆಯುಳ್ಳ ಸರ್ಪ, ಹೆಡೆಯುಳ್ಳ ಸರ್ಪದ ಮುಂದೆ ಕುಳಿತು ಪುಂಗಿ ಊದುತ್ತಿರುವ ಮನುಷ್ಯ, ಪುಂಗಿ ಊದಿ ಹೆಡೆಯುಳ್ಳ ಸರ್ಪವನ್ನು ಬೆನ್ನಟ್ಟಿರುವ ಮನುಷ್ಯ, ಕೋತಿ ಆಡಿಸುವ ಮನುಷ್ಯರ ಉಬ್ಬು ಶಿಲ್ಪಗಳಿವೆ. ಇದರ ಕೆಳಗೆ ಸರಳವಾದ ಹಂತವಿದೆ. ಈ ಎಲ್ಲಾ ಹಂತಗಳು ಅಧಿಷ್ಠಾನದಂತೆ ಕಾಣುತ್ತವೆ. ಇದರ ಕೆಳಗೆ ಮೆಟ್ಟಿಲುಗಳಂತಿರುವ ಮತ್ತು ಮುಂದೆ ಚಾಚಿಕೊಂಡಿರುವ ನಾಲ್ಕು ಅಂತಸ್ತುಗಳಿವೆ. ಪ್ರತಿಯೊಂದು ಅಂತಸ್ತು ಎರಡು ಹಂತಗಳನ್ನು ಹೊಂದಿದೆ. ಇವುಗಳ ಕೆಳಗೆ ನೇರವಾದ ಗೋಡೆಯಿದೆ. ಬಾವಿಯನ್ನು ನೀಟಾಗಿ ಕಡೆದ ಮರುಳುಗಲ್ಲಿನ ದೊಡ್ಡ ಕಲ್ಲುಗಳಿಂದ ಕಟ್ಟಲಾಗಿದೆ. ಬಾವಿಯ ಕೆಳಗಿನ ಹಂತಗಳನ್ನು ಚಿಕ್ಕ ಒರಟು ಕಲ್ಲುಗಳಿಂದ ಕಟ್ಟಲಾಗಿದೆ. ಈಗ ಬಾವಿಯಲ್ಲಿ ನೀರಿಲ್ಲ. ಬಾವಿಯಲ್ಲಿ ದಕ್ಷಿಣದ ಬದಿಯ ನೀರನ್ನು ಮೇಲೆತ್ತಲು ಮುಂದೆ ಚಾಚಿಕೊಂಡಿರುವ ಒಂದು ಜಗುಲಿ ಇದೆ. ಈ ಜಗುಲಿಯ ಕೆಳಗಿನ ಭಾಗದಲ್ಲಿ ಪಲ್ಲಂಗದ ಮೇಲೆ ಕುಳಿತಿರುವ ವಿಲಾಸಿ ದಂಪತಿಗಳಿರುವ ಒಂದು ಚಿಕ್ಕ ಪಟ್ಟಿಕೆಯಿದೆ. ಮೇಲೆ ಮುಂದೆ ಚಾಚಿಕೊಂಡಿರುವ ಕೈಸಾಲೆ ಇದೆ. ಕೈಸಾಲೆಯ ಅಧಿಷ್ಠಾನವು ಕೆಳಗೆ ಬಾಗಿರುವ ಹಂತ. ಕಿರಿದಾದ ಲಂಬವಾಗಿರುವ ಪಾರ್ಶ್ವಗಳನ್ನು ಹೊಂದಿದ ತ್ರಿಪಟ್ಟ ಕುಮುದ, ಕಪೋತ ಕಂಠದಂತೆ ಕಾಣುವ ಮೇಲಕ್ಕೆ ಬಾಗಿರುವ ಹಂತಗಳನ್ನು ಹೊಂದಿದೆ. ಕಂಠದ ಮೇಲೆ ಶಿಲ್ಪಗಳನ್ನು ಅವು ಅರೆಗಂಬಗಳಿಂದ ಬೇರ್ಪಟ್ಟಿವೆ. ಮೇಲೆ ಪೂರ್ವ ಮತ್ತು ಪಶ್ಚಿಮಕ್ಕೆ ಒಂದೊಂದು ಮುಂದೆ ಚಾಚಿಕೊಂಡಿರುವ ಆನೆಗಳಿವೆ. ಉತ್ತರದ ಬದಿಯಲ್ಲಿ ಹಿಂಗಾಲುಗಳ ಮೇಲೆ ನಿಂತಿರುವ ವ್ಯಾಳಿಗಳಿದ್ದು ಇವು ಎತದ ಆಧಾರ ಕಂಬಗಳಂತಿವೆ. ಪಾರ್ಶ್ವಗಳಲ್ಲಿ ಗದೆ ಹಿಡಿದಿರುವ ದ್ವಾರಪಾಲಕರಿದ್ದಾರೆ.[೪೨] ಪಶ್ಚಿಮಕ್ಕಿರುವ ಮೊಗಸಾಲೆಯ ಮಧ್ಯದಲ್ಲಿ ಒಂದು ಸಣ್ಣ ಗುಡಿಯಲ್ಲಿ ಲಿಂಗವಿದೆ. ಲಿಂಗದ

ಮುಂದೆ ಮೊಗಸಾಲೆಯಲ್ಲಿ ನಂದಿಯಿದೆ. ಮೊಗಸಾಲೆಯ ಆಚೆ ಉತ್ತರದ ಕೊನೆಗೆ ಆಂಜನೇಯ ದೇವಸ್ಥಾನವಿದೆ. ದೇವಸ್ಥಾನದ ಮುಂದೆ ವಿಶಾಲವಾದ ಮಂಟಪವಿದೆ. ಇಲ್ಲಿ ಪಶ್ಚಿಮಕ್ಕೆ ಇನ್ನೊಂದು ಚಿಕ್ಕ ಗುಡಿಯಿದ್ದು ಈ ಗುಡಿಯ ಮುಂದೆ ಚಿಕ್ಕ ಮಂಟಪವಿದೆ. ಮೊಗಸಾಲೆಯ ದಕ್ಷಿಣ ಮತ್ತು ಉತ್ತರದ ಗೋಡೆಗಳಲ್ಲಿ ಸಣ್ಣ ಕಮಾನುಗಳುಳ್ಳ ನಾಲ್ಕು ಆಮೆಗಳಿವೆ. ಅದೇ ಅಂತಸ್ತಿನ ಉತ್ತರ ದಿಕ್ಕಿನಲ್ಲಿ ಒಂದು ಮೀನಿನ ಶಿಲ್ಪವಿದೆ. ಈ ಬಾವಿಯು ಸುಮಾರು ೫೦ ಅಡಿ ಆಳ, ಮೇಲ್ಭಾಗದ ಅಗಲ ೧೫*೧೫, ಕೆಳಭಾಗದ ಅಗಲ ೮*೮ ಆಕಾರವನ್ನು ಹೊಂದಿದೆ. ಪ್ರಸ್ತುತವಾಗಿ ಈ ಬಾವಿಯು ಕನಿಷ್ಠಮಟ್ಟದಲ್ಲಿದ್ದು, ಈಗ ಇದು ಕಸಕಡ್ಡಿಗಳಿಂದ ತುಂಬಿಕೊಂಡಿದೆ. ಇದನ್ನು ಜೀರ್ಣೋದ್ಧಾರಗೊಳಿಸಿದರೆ ಜಲ ಮರಳಿಬರುವ ಸಾಧ್ಯತೆಗಳು ಉಂಟು.

**ಕಾಲಕಾಲೇಶ್ವರ ದೇವಾಲಯದ ಅಂತರಗಂಗೆ :**

ದುಷ್ಟ ರಾಕ್ಷಸರನ್ನು ಸಂಹರಿಸಿ, ಶಿಷ್ಟರನ್ನು ರಕ್ಷಿಸಿ ಪಾವನ ಗಂಗೆಯನ್ನೇ ಅಂತರ ಗಂಗೆಯನ್ನಾಗಿಸಿ ಕೈಲಾಸದ ಸಕಲ ದೇವಗಣಗಳು ಅಮರಗಣಗಳು ಋಷಿ ಪುಂಗವರ ಇಚ್ಛೆಯ ಮೇರೆಗೆ ಸ್ವಯಂಭೂ ಲಿಂಗನಾಗಿ ಉದ್ಭವಿಸಿ ಭಕ್ತರಿಗೆ ಬೇಡಿದ್ದನ್ನು ಕೊಡುತ್ತಾ ಕಾಮಧೇನು ಕಲ್ಪವೃಕ್ಷವಾಗಿ ಕಾಲಕಾಲೇಶ್ವರ ಎಂಬ ನಾಮದಿಂದ ಮೆರೆದಿದೆ.[೪೩] ಈ ದೇವಾಲಯವು ಜಾಳಾಂದ್ರಗಿರಿ ಬೆಟ್ಟದ ಹಸಿರು ಸೊಬಗಿನ ಕಲ್ಪನೆಯ ಕೈಲಾಸದಲ್ಲಿರುವ ಕಾಲಕಾಲೇಶ್ವರ ಕ್ಷೇತ್ರದ ಪುಷ್ಕರಣಿಗಳು ಬರದಿಂದ ಬರಡಾಗಿದ್ದವು. ಭಕ್ತರ ಇಷ್ಟಾರ್ಥ ಸಿದ್ಧಿಸುವ ಪುಣ್ಯಕ್ಷೇತ್ರವೆಂದು ಮನ್ನಣೆ ಪಡೆದದ್ದು ಈ ಕ್ಷೇತ್ರದ ವಿಶೇಷ. ಇದು ಹಲವು ವಿಸ್ಮಯ ವೈಶಿಷ್ಟ್ಯತೆಗಳಿಂದ ಖ್ಯಾತಿಗಳಿಸಿರುವ ಶ್ರೀ ಕ್ಷೇತ್ರದ ಪುಷ್ಕರಣಿಗಳ ಬಗ್ಗೆ ಭಕ್ತರ ನಂಬಿಕೆ, ಭಕ್ತರ ಸಮರ್ಪಣೆ ಹೆಚ್ಚು ಸಂಕಷ್ಟಗಳನ್ನು ನಿವಾರಿಸುವ ನಂಬಿಕೆಯೇ ಇದಕ್ಕೆ ಮೂಲ. ಶಿವನು ತನ್ನ ಜಡೆಯಲ್ಲಿದ್ದ ಗಂಗೆಯನ್ನೇ ಪೂಜೆಗಾಗಿ, ಭಕ್ತರ ಶುಚಿತ್ವಕ್ಕಾಗಿ, ಗುಪ್ತ ಗಂಗೆಯನ್ನಾಗಿ ಪಡೆದಿದ್ದರಿಂದ ಸಾಕ್ಷಾತ್ಕರಿಸಿದನು. ಆಗ ಅಂತರಗಂಗೆ ಧುಮ್ಮಿಕ್ಕುವುದನ್ನು ಕಂಡು ನೆರೆದವರೆಲ್ಲ ಸಂತಸಗೊಂಡರು. ಗಂಗೆ ಹಾಗೂ ಬೋರಾಂಬೆಯನ್ನು ಭಕ್ತಿ ಸ್ತೋತ್ರಗಳಿಂದ ಸ್ತುತಿಸಿ ಹಾಡಿ ಹೊಗಳಿದರು ಎಂಬುವುದು ಇಲ್ಲಿನ ಜನರ ಅಭಿಪ್ರಾಯವಾಗಿದೆ.

**ಆನೆಗುಂದಿ ಹೊಂಡ :**

ಸಂತಾನಭಾಗ್ಯ ಇಲ್ಲದ ಆನೆಗುಂದಿ ಭಾಗದ ರಾಜದಂಪತಿ ಶ್ರೀ ಕ್ಷೇತ್ರದಲ್ಲಿ ಕಾಲಕಾಲೇಶ್ವರನ ದರ್ಶನ ಪಡೆದು, ಗಂಡು ಮಗುವಿನ ಸಂತಾನ ಪಡೆದರು. ಇಷ್ಟಾರ್ಥ ಸಿದ್ಧಿಸಿದ ಕಾರಣ ದಂಪತಿ ರುದ್ರಪಾದ ಬೆಟ್ಟದ ಕೆಳಗೆ ಬೃಹತ್ತಾದ ಏಕಶಿಲಾ ಕಿಂಕರನಾದ ಬಸವನ ಮೂರ್ತಿ ಶಿವನನ್ನೇ ತದೇಕಚಿತ್ತದಿಂದ ನೋಡುವ ಭಂಗಿಯಲ್ಲಿ ಕೆತ್ತಲಾಗಿದೆ. ಈ ಬಸವನ ಮುಂಭಾಗದಲ್ಲಿ ಆನೆಗುಂದಿ ಬಸವನ ಹೊಂಡವಿದೆ. ಇದು ತುಂಬಿ ಹರಿಯುವುದು ವಿಶೇಷ. ಇದು ಸುಮಾರು ೩೦ ಮೀಟರ್

ಸುತ್ತಳತೆ ಹೊಂದಿದ್ದು, ಇದು ಯಾವುದೇ ಕಟ್ಟಡವನ್ನು ಹೊಂದಿಲ್ಲ. ಇದು ಸುಮಾರು ೧೧ರಿಂದ ೧೫ ಅಡಿ ಆಳವನ್ನು ಹೊಂದಿದೆ. ಕಾಲಕಾಲೇಶ್ವರ ದೇವಾಲಯದ ಅಭಿಮುಖವಾಗಿ ಬೃಹತ್ತಾದ ಬಸವಣ್ಣನ ಮೂರ್ತಿಯನ್ನು ಸ್ಥಾಪಿಸಿದ್ದಾರೆ.

**ಕಾಲಕಾಲೇಶ್ವರದ ಪುಷ್ಕರಣಿ :**

ಉತ್ತರಾಭಿಮುಖವಾಗಿ ನೆಲೆಸಿರುವ ಕಾಲಕಾಲೇಶ್ವರ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಂತೆ ಕಾಲಕಾಲೇಶ್ವರ ಸನ್ನಿಧಿಗೂ ಒಂದು ಕಿ.ಮೀ ದೂರದಲ್ಲಿ ಪಶ್ಚಿಮಕ್ಕೆ ಅಭಿಮುಖವಾಗಿರುವ ಪುಣ್ಯ ಸ್ನಾನದ ಪುಷ್ಕರಣಿ ಇದೆ. ಇಲ್ಲಿಯ ಭಕ್ತರು ಭಕ್ತಿ ಸ್ನಾನವನ್ನು ಪೂರೈಸುವರು. ಪುಷ್ಕರಣಿಯಲ್ಲಿ ಸ್ನಾನ ಮಾಡುವುದರಿಂದ ಕರ್ಮಗಳು ತೊರೆದು ಪುಣ್ಯ ಪ್ರಾಪ್ತಿಯಾಗುತ್ತವೆ ಎನ್ನುವುದು ಪರಂಪರಾಗತವಾಗಿ ಬೆಳೆದುಬಂದಿರುವ ನಂಬಿಕೆ. ಶ್ರೀ ಕ್ಷೇತ್ರ ದರ್ಶನಕ್ಕೆ ಬರುವ ಭಕ್ತರು ಪುಷ್ಕರಣಿಯಲ್ಲಿ ಸ್ನಾನ ಮಾಡಿ ಕಾಲಕಾಲೇಶ್ವರ ಸನ್ನಿಧಿಗೆ ಪೂಜೆ ಸಲ್ಲಿಸುತ್ತಾರೆ. ಪುಷ್ಕರಣಿಯಲ್ಲಿ ಜಲ ನಿರಂತರ ಕ್ಷೀಣಿಸಿತ್ತು. ಆದರೆ ಈ ವರ್ಷ ತುಂತುರು ಮಳೆಯಿಂದ ಭರ್ತಿಯಾಗಿರುವುದು ಕ್ಷೇತ್ರದ ಹಿರಿಮೆಯ ಪ್ರತೀಕವನ್ನು ಮರುಕಳಿಸುತ್ತದೆ. ಪುಣ್ಯ ಸ್ನಾನದ ನಂತರ ಕಾಲಕಾಲೇಶ್ವರ ದರ್ಶನ ಪಡೆದು ಇಷ್ಟಾರ್ಥಗಳನ್ನು ಸಿದ್ಧಿಸು ದೇವಾ ಎಂದು ನಮನ ಸಲ್ಲಿಸುವರು.

**ಪುಣ್ಯತೀರ್ಥ (ಪುಷ್ಕರಣಿ) :**

ಸನ್ನಿಧಿಯಿಂದ ಕೆಳಗೆ ಇಳಿದರೆ ಅರ್ಧ ಕಿ.ಮೀ ದೂರದಲ್ಲಿ ಪುಣ್ಯ ತೀರ್ಥದ ಪುಷ್ಕರಣಿ ಇದೆ. ಈ ಪುಷ್ಕರಣಿಯ ಜಲ ಗಂಗಾ ನದಿಯಷ್ಟೇ ಶ್ರೇಷ್ಠ ಎಂಬ ಪೂಜನೀಯ ಭಾವನೆ ಇದೆ. ಇದನ್ನು ಭಕ್ತಿಯಿಂದ ಸೇವಿಸಿ ಮನೆಗೂ ಒಯ್ದು ಸಂಬಂಧಿಗಳಿಗೆ ವಿತರಿಸುವ ಸಂಪ್ರದಾಯವಿದೆ. ಹೊಸದಾಗಿ ವಿವಾಹವಾದವರು ಕ್ಷೇತ್ರಕ್ಕೆ ಭೇಟಿ ನೀಡಿದ ಬಳಿಕ ಮದುವೆ ಬಾಸಿಂಗಗಳನ್ನು ಪುಷ್ಕರಣಿಯಲ್ಲಿ ತೇಲಿ ಬಿಡುತ್ತಾರೆ. ಬಾಸಿಂಗಗಳನ್ನು ಪುಷ್ಕರಣಿಯಲ್ಲಿ ತೇಲಿ ಬಿಡವುದರಿಂದ ಸಂಸಾರಿಕ ಬದುಕು ಸುಖಿಯಾಗುತ್ತದೆ ಎಂಬ ನಂಬಿಕೆ ಇದೆ.

**ಗಜೇಂದ್ರಗಡದ ಕೋಟೆಯ ಹೊಂಡಗಳು:**

ಪೇಶ್ವೆಯವರಲ್ಲಿ ಪ್ರಥಮ ಪೇಶ್ವೆಯಾಗಿ ಆಳಿದ ಶ್ರೀ ಬಾಳಾಜಿ ಬಾಜಿರಾವ್ ಪೇಶ್ವೆಯವರು ಸುಮಾರು ೧೭೧೦ರಿಂದ ೧೭೫೭ರವರೆಗೆ ಮರಾಠಾ ಸಾಮ್ರಾಜ್ಯವನ್ನು ಉಳಿಸಿ ಬೆಳೆಸಿದರು. ಮರಾಠಾ ಸರದಾರರಲ್ಲಿ ಒಗ್ಗಟ್ಟನ್ನು ಕಾಯ್ದುಕೊಂಡು ಬಂದರು. ಶಿಥಿಲವಾಗಿ ಮುಗ್ಗರಿಸಿದ ಮೊಗಲ್ ಸಾಮ್ರಾಜ್ಯವನ್ನು ತನ್ನ ಹಿಡಿತಕ್ಕೆ ತರುವಲ್ಲಿ ಅವರ ಮಹತ್ವಾಕಾಂಕ್ಷೆ ಇನ್ನೇನು ಈಡೇರಿಯೇ ಬಿಟ್ಟಿತು ಎನ್ನುವರಷ್ಟರಲ್ಲಿ ಬಾಳಾಜಿ ಬಾಜಿರಾವ್ ಪೇಶ್ವೆಯ ದಂಡೆಯಾತ್ರೆ ಮುಂದುವರೆಯಿತು. ಇವರ ಕಾಲದಲ್ಲಿಯೇ ಗಜೇಂದ್ರಗಡ ಕೋಟೆಯ ರಚನೆ ನಡೆಯಿತು. ಗಜೇಂದ್ರಗಡ ಗುಡ್ಡದ ಮೇಲೆ ಈ

ಕೋಟೆಯ ರಚನೆಗೆ ಒಟ್ಟು ೧೫ ವರ್ಷಗಳ ಕಾಲ ಅವಿರತವಾಗಿ ನಡೆಯಿತು ಎಂದು ತಿಳಿದು ಬಂದಿದೆ. ಗಜೇಂದ್ರಗಡದ ಉತ್ತರ ದಿಕ್ಕಿಗೆ ಭದ್ರ ಕೋಟೆಯೋಪಾದಿಯಲ್ಲಿರುವ ಗುಡ್ಡವು ಸೃಷ್ಟಿಯೇ ರಚಿಸಿದ ಅದ್ಭುತ ರಮ್ಯನೋಟ. ಅನೇಕ ಜನ ಗಜೇಂದ್ರಗಡಕ್ಕೆ ಹೊಸದಾಗಿ ಬಂದವರು ಈ ಗುಡ್ಡವನ್ನು ನೋಡಿ ಆನಂದಭರಿತರಾಗದವರು ಯಾರು ಇಲ್ಲ. ಗಜೇಂದ್ರಗಡದಲ್ಲಿರುವ ಗುಡ್ಡವು ಪ್ರೇಕ್ಷಕರನ್ನು ಆಕರ್ಷಿಸುವುದಷ್ಟೇ ಅಲ್ಲ, ಅವರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ.[೪೪] ಕೋಟೆಯ ಬಾಗಿಲಿನಲ್ಲಿ ಹಾಯ್ದು ಒಳಗೆ ಹೋದರೆ ಗಜೇಂದ್ರಗಡ ಗುಡ್ಡದ ಮೇಲಿರುವ ವಿಶಾಲ ಭೂಮಿ ನಂತರ ಪಶ್ಚಿಮಕ್ಕೆ ಹೊರಳಿ ಎಂಟು, ಹತ್ತು ಪಾವಟಿಗೆ ಹತ್ತಿದ ನಂತರ ಕಾಣುವುದು ಮದ್ದಿನ ಮನೆ. ವೈರಿಗಳು ಮುತ್ತಿಗೆ ಹಾಕಿದರೆ ಅವರನ್ನು ಕೋಟೆಯ ಒಳಗಿನಿಂದಲೇ ಫಿರಂಗಿ ಹಾರಿಸಿ ಸದೆಬಡೆಯಲು ಬೇಕಾದ ಮದ್ದಿನ ಸಂಗ್ರಹ ಈ ಮನೆಯಲ್ಲಿ ಇರುತ್ತಿತ್ತು. ಈಗಲೂ ಈ ಮನೆಯಲ್ಲಿ ಮದ್ದಿನ ವಾಸನೆ ಬರುತ್ತಿದೆ. ಅದನ್ನು ದಾಟಿ ಸ್ವಲ್ಪ ದಕ್ಷಿಣಕ್ಕೆ ಬಂದರೆ ತೊಟ್ಟಿಲು ಹುಡೆ. ಇದನ್ನು ಗಜೇಂದ್ರಗಡ ಗುಡ್ಡದ ಕೆಳಗೆ ನಿಂತು ನೋಡುವವರಿಗೆ ಇದು ತೊಟ್ಟಲು ಹುಡೆ ಕಂಡಂತೆಯೇ ಕಾಣುತ್ತದೆ.[೪೫] ಆದ್ದರಿಂದ ಇದಕ್ಕೆ ತೊಟ್ಟಿಲು ಹುಡೆ ಎನ್ನುತ್ತಾರೆ. ಈ ತೊಟ್ಟಿಲು ಹುಡೇವುದಲ್ಲಿ ನಿಂತು ನೋಡಿದರೆ ಸುತ್ತಲೂ ಸುಮಾರು ೧೦ ರಿಂದ ೧೫ ಕಿಲೂ ಮೀಟರ್ ದೂರದವರೆಗಿನ ವಿಹಂಗಮ ನೋಟ ಸ್ಪಷ್ಟವಾಗಿ ಕಾಣುತ್ತದೆ. ಕೋಟೆ ಮತ್ತು ಹೊಂಡಗಳನ್ನು ಕಟ್ಟಲು ಉಪಯೋಗಿಸಿದ ಕಲ್ಲುಗಳ ಗಾತ್ರ ಅದ್ಭುತವಾಗಿದೆ. ಸುಮಾರು ಒಂದು ಮೀಟರ್ ಉದ್ದ ಒಂದು ಮೀಟರ್ ದಪ್ಪವುಳ್ಳ ಇಂಥ ಕಲ್ಲುಗಳನ್ನು ಹೇಗೆ ದುರ್ಗಮವಾದ ಗುಡ್ಡದ ಮೇಲೆ ಎತ್ತಿಟ್ಟು ಕಟ್ಟಿದರೋ ನೋಡಿದವರೆಲ್ಲರಿಗೂ ಆಶ್ಚರ್ಯವಾಗದಿರದು. ಮುಂದೆ ಸುಮಾರು ಒಂದು ಕಿಲೋಮೀಟರ್ ದೂರದವರೆಗೂ ಗುಡ್ಡಕ್ಕೆ ಹೊಂದಿಕೊಂಡಂತೆ ಕೋಟೆಯು ಹಬ್ಬಿಕೊಂಡಿದೆ. ಗುಡ್ಡದ ಎಲ್ಲ ದಿಕ್ಕುಗಳಿಗೂ ಕೋಟೆಯ ಗೋಡೆಯು ಹಬ್ಬಿದ್ದು ನೋಡುಗರ ಮನಸೆಳೆಯದೇ ಇರಲಾರದು.

**ಹೂಲಿ ಹೊಂಡ :**

ಪೂಲಿ ಪೊಂಡವು ಕೋಟೆಯ ಮಧ್ಯಭಾಗದಲ್ಲಿ ಕಂಡುಬರುತ್ತದೆ. ಈ ಹೊಂಡದ ಪಶ್ಚಿಮ ದಿಕ್ಕಿಗೆ ಒಂದು ಹುಲಿಯ ಪ್ರತಿಮೆ ಇದ್ದು, ಇದು ಪರಾಕ್ರಮದ ಸಂಕೇತ ನಂದಿಯ ಪ್ರತಿಮೆ ಹೊಂಡದ ಗೋಡೆಯ ಮೇಲ್ಭಾಗದಲ್ಲಿ ಇದ್ದು, ಇದು ಪೂಜ್ಯತೆಯ ಹಾಗೂ ನಮ್ರತೆಯ ಸಂಕೇತವಾಗಿದೆ. ಅಂದರೆ ಕೋಟೆ ಕಟ್ಟಿಸುವುದರ ಮನದಲ್ಲಿ ಇದನ್ನು ನೋಡಿದ ಎಲ್ಲರಿಗೂ ಹುಲಿಯ ಪರಾಕ್ರಮ, ನಂದಿಯ ಸೌಜನ್ಯತೆ ಬರಬೇಕು ಎಂಬ ಉದ್ದೇಶದಿಂದ ನಿರ್ಮಿಸಿರಬೇಕು. ಮುಂದೆ ಸ್ವಲ್ಪ ನಡೆದರೆ ಅಲ್ಲಿ ಮುಸ್ಲಿಂ ಸಂತ ಶಹಬಾದ ಮೆಹಬೂಬ್ ಸುಬಾನಿ ದರ್ಗಾ ಇದೆ.

**ಅಕ್ಕ-ತಂಗ್ಗಿಯರ ಹೊಂಡ :**

ಇದು ಗಜೇಂದ್ರಗಡದ ಘೋರ್ಪಡೆಯವರ ಕೋಟೆಯ ಪಶ್ಚಿಮ ದಿಕ್ಕಿನಲ್ಲಿ ಕಂಡುಬರುತ್ತದೆ.

ಈ ಹೊಂಡದ ಮುಂಭಾಗದಲ್ಲಿ ಪ್ರಾಚೀನವಾದ ದೇವಾಲಯವಿದ್ದು, ಇದರಲ್ಲಿ ಯಾವುದೇ ಮೂರ್ತಿಶಿಲ್ಪವಿರುವುದಿಲ್ಲ. ಈ ಹೊಂಡ ನೋಡಲು ಮನಮೋಹಕವಾಗಿದೆ. ಮಳೆಗಾಲದಲ್ಲಿ ಈ ಹೊಂಡಗಳ ಸೌಂದರ್ಯವನ್ನು ನೋಡಿಯೇ ಸವಿಯಬೇಕು. ಸುತ್ತಲೂ ಹಬ್ಬಿದ ಗುಡ್ಡದ ಪ್ರಶಾಂತ ವಾತಾವರಣ, ಗುಡ್ಡದ ಮೇಲೆ ಈ ಅಕ್ಕ-ತಂಗಿಯರ ಹೊಂಡ ಹಿಮಾಲಯದ ಮಾನಸ ಸರೋವರವನ್ನು ನೆನಪಿಗೆ ತರುತ್ತದೆ. ಒಂದು ಕಾಲಕ್ಕೆ ವೀರ ಯೋಧರ ಹಾಗೂ ಸೃಷ್ಟಿ ಸೌಂದರ್ಯದ ತಾಣವಾಗಿತ್ತು.

**ಹಜ್ರತ್ ಮಲಿಕ್ ಶಹದತ್ ಗುಮ್ಮಟ ಬಾವಿ:**

ಈ ಬಾವಿಯು ಲಕ್ಷ್ಮೇಶ್ವರದ ದಕ್ಷಿಣ ಭಾಗಕ್ಕಿದ್ದು ಮುಸಲ್ಮಾನರು ಪ್ರತಿದಿನ ತಪ್ಪದೇ ದರ್ಶನಕ್ಕೆ ಬರುತ್ತಾರೆ. ಈ ಗುಮ್ಮಟ ಬಾವಿಗೊಂದು ಪೌರಾಣಿಕ ಕಥೆಯಿದೆ. ವರವಿ ಮೌನೇಶ್ವರ ಶರಣರು ಬಾವಿಯನ್ನು ಕಡಿಯುತ್ತಿದ್ದಾಗ ಚಾಣಗಳನ್ನು ತೆಗೆದುಕೊಂಡು ತಾವೇ ಕಡಿದ ಈ ಬಾವಿಯ ನೀರು ಸಪ್ತಸಾಗರ ಬತ್ತಿದರೂ ಬತ್ತಬಹುದು. ನಾ ಕಡಿದ ಈ ಬಾವಿ ನೀರು ಬತ್ತಲಾರದು ಎಂದು ವರ ನೀಡಿದರಂತೆ.[೪೬] ಈ ಬಾವಿಯಲ್ಲಿ ನೀರು ಇರುವುದನ್ನು ಈಗಲೂ ನೋಡಬಹುದು. ಬಾವಿಯ ತಳಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿಯೇ ಕೊರೆಯಲಾಗಿದೆ. ಬಾವಿಯಲ್ಲಿ ನಾಲ್ಕು ಅಂತಸ್ತುಗಳಿವೆ. ಪ್ರತಿಯೊಂದು ಅಂತಸ್ತು ಮುಂದೆ ಚಾಚಿಕೊಂಡಿರುವ ಹಂತದಿಂದ ಬೇರ್ಪಟ್ಟಿದೆ. ದಕ್ಷಿಣ ದಿಕ್ಕಿನ ಮಧ್ಯ ಗೋಡೆಯ ನೀರು ಮೇಲೆತ್ತುವ ಜಗಲಿಯನ್ನು ಎತ್ತಿ ಹಿಡಿಯಲು ಸ್ವಲ್ಪ ಮುಂದೆ ಚಾಚಿಕೊಂಡಿದೆ. ಉತ್ತರದ ಬದಿಯಲ್ಲಿ ಒಂದು ಕಮಾನು ಇದ್ದು, ಇದು ಸೇತುವೆಗೆ ಆಧಾರವಾಗಿದೆ. ಈ ಕಮಾನು ಮುಂದೆ ಚಾಚಿಕೊಂಡಿರುವ ಕಲ್ಲುಗಳಿಂದ ರೂಪುಗೊಂಡಿದೆ. ಬಾವಿಯ ಮೆಟ್ಟಿಲುಗಳು ಉತ್ತರದ ಕಡೆಯಿಂದ ಪ್ರಾರಂಭವಾಗಿ ದಕ್ಷಿಣಕ್ಕೆ ಹೋಗುತ್ತವೆ. ನಂತರ ಪೂರ್ವಕ್ಕೆ ತಿರುಗಿ ಮತ್ತೆ ದಕ್ಷಿಣಕ್ಕೆ ತಿರುಗಿ ಬಾವಿಗೆ ಸೇರುತ್ತವೆ. ಬಾವಿಯ ಪ್ರವೇಶಬಾಗಿಲು ಭೂಮಿಮಟ್ಟದಿಂದ ಮೇಲಿದೆ. ಈ ಬಾಗಿಲಿಗೆ ಕಲ್ಯಾಣ ಚಾಲುಕ್ಯರ ಕಾಲದ ದೇವಸ್ಥಾನದ ಚೌಕಟ್ಟುಗಳನ್ನು ಉಪಯೋಗಿಸಲಾಗಿದೆ. ಇಸ್ಲಾಮಿಕ್ ಶೈಲಿಯಲ್ಲಿ ಹೂವಿನ ಆಕಾರದ ಗೋಡೆ ಭಾಗಗಳು ಬಾಗಿಲಿನ ಚೌಕಟ್ಟುಗಳನ್ನು ಜೋಡಿಸಿವೆ. ಬಾಗಿಲಿನ ಹಣೆಪಟ್ಟಿ ಸರಳವಾಗಿವೆ. ಮೇಲೆ ತೆನೆಗಳ ಅಲಂಕಾರಗಳಿವೆ. ಬಾವಿಯ ತುದಿ ಭಾಗದಲ್ಲಿ ಅರ್ಧ ಬಾಗಿದ ತುದಿಯುಳ್ಳ ಭಾಗವಿದೆ. ನೀರೆತ್ತುವ ಜಗಲಿಯು ಇಸ್ಲಾಮಿಕ್ ಶೈಲಿಯಲ್ಲಿರುವ ಹೂವಿನ ಆಕಾರದಲ್ಲಿರುವ ಗೋಡೆಯ ಭಾಗಗಳಿಂದ ಎತ್ತಿ ಹಿಡಿಯಲ್ಪಟ್ಟಿವೆ. ಮೇಲೆತ್ತಿದ ನೀರು ಎರಡು ಕಲ್ಲಿನ ಕಾಲುವೆಗಳಿಗೆ ಹರಿದು ಹೋಗುತ್ತಿತ್ತು. ನೈಋತ್ಯ ದಿಕ್ಕಿನಲ್ಲಿರುವ ಒಂದು ಕಾಲುವೆ ಈಗಲೂ ಸುಸ್ಥಿತಿಯಲ್ಲಿದೆ. ಇದು ನೀರಿನ ತೊಟ್ಟಿಗೆ ಜೋಡಿಸಲ್ಪಟ್ಟಿದೆ. ಈ ತೊಟ್ಟಿಗೆ ನೀರು ಒಳಗೆ ಬರಲು ಒಂದು ಸಿಂಹ ಮುಖದ ಪ್ರಣಾಳವಿದ್ದು ಇದನ್ನು ಯಾವುದೋ ದೇವಸ್ಥಾನದಿಂದ ತರಲಾಗಿದೆ.

**ಲಕ್ಷ್ಮೀಲಿಂಗ ದೇವಸ್ಥಾನದ ಹತ್ತಿರವಿರುವ ಬಾವಿ :**

ಈ ಬಾವಿ ಲಕ್ಷ್ಮೇಶ್ವರದ ಲಕ್ಷ್ಮೀಲಿಂಗ ದೇವಸ್ಥಾನದ ಉತ್ತರಕ್ಕೆ ಮುನ್ಸೀಫ್ ಕೋರ್ಟಿನ ಹತ್ತಿರವಿದೆ. ರಚನೆಯಲ್ಲಿ ಸೋಮೇಶ್ವರ ದೇವಸ್ಥಾನದ ಆವರಣದಲ್ಲಿರುವ ಬಾವಿಯಂತೆಯೇ ಇದೆ. ಆದರೆ ಇಲ್ಲಿ ತೋರಣ ಮತ್ತು ಸೇತುವೆಗಳಿಲ್ಲ. ಬಾವಿಗೆ ಪ್ರವೇಶ ದಕ್ಷಿಣ ದಿಕ್ಕಿನಿಂದ ಇದೆ. ದಾರಿಯು ಮೊದಲು ಪಶ್ಚಿಮಕ್ಕೆ ನಂತರ ಉತ್ತರಕ್ಕೆ ತಿರುಗಿ ಚೌಕಾಕಾರದ ಬಾವಿಗೆ ಸೇರುತ್ತದೆ. ಮೆಟ್ಟಿಲುಗಳ ಮಧ್ಯದಲ್ಲಿ ಕೆಲವು ನಕ್ಷ್ಮನಿಲ್ಲೆಡೆಗಳಿವೆ. ದಾರಿಯಲ್ಲಿ ಬೇರೆ ಬೇರೆ ಹಂತಗಳಲ್ಲಿ ಅಡ್ಡ ತೊಲೆಗಳನ್ನು ಹಾಕಿದ್ದಾರೆ. ಬಾವಿ ಗೋಡೆಯ ಹಂತಗಳು ಕೆಳಗೆ ಹೋದಂತೆ ಸ್ವಲ್ಪ ಸ್ವಲ್ಪವಾಗಿ ಮುಂದಕ್ಕೆ ಚಾಚಿಕೊಂಡಿವೆ. ಬಾವಿಯ ಗೋಡೆಯಲ್ಲಿ ಅನೇಕ ಅಂತಸ್ತುಗಳಿದ್ದು, ಇವು ಮುಂದಕ್ಕೆ ಚಾಚಿಕೊಂಡು ಒಂದು ಭಾಗದಿಂದ ಬೇರ್ಪಟ್ಟಿವೆ. ಮುಂದಕ್ಕೆ ಚಾಚಿಕೊಂಡಿರುವ ಈ ಭಾಗಗಳು ಗೋಡೆಗಳಿಂದ ಬಂದಿರುವ ಅನೇಕ ಕಲ್ಲುಗಳಿಂದ ಆಧಾರ ಪಡೆದಿವೆ. ಗೋಡೆಗಳಿಂದ ಬಂದಿರುವ ಬಾವಿಯ ತುದಿಯು ಬಾಗಿದಂತೆ ಇದೆ. ಬಾವಿಯಲ್ಲಿ ಈಗ ನೀರಿಲ್ಲ; ಎಂಟು ಅಂತಸ್ತುಗಳು ಕಾಣುತ್ತವೆ. ಒಂಭತ್ತನೇ ಅಂತಸ್ತು ಅವಶೇಷಗಳಿಂದ ತುಂಬಿದೆ.

**ದೇಸಾಯಿ ಬಾವಿ :**

ಈ ಬಾವಿಯು ಲಕ್ಷ್ಮೇಶ್ವರ ಗ್ರಾಮದ ಹತ್ತಿರ ದೇಸಾಯಿಯವರ ಹೊಲದಲ್ಲಿದೆ. ಚೌಕಾಕಾರ ದಲ್ಲಿರುವ ಈ ಬಾವಿಯನ್ನು ನೈಸರ್ಗಿಕ ಕಲ್ಲಿನಲ್ಲಿ ಕೊರೆಯಲಾಗಿದೆ. ಕಲ್ಲಿನಲ್ಲಿ ಕೊರೆದಿರುವ ಮೂರು ಮೀಟರ್ ಆಳದ ಬಾವಿಯ ಭಾಗ ಕಾಣುತ್ತದೆ. ಈ ಭಾಗದ ಮೇಲೆ ಬಾವಿಯ ಅತ್ಯಂತ ಕೆಳಗಿನ ಎರಡು ಹಂತಗಳ ಮೊದಲನೇ ಅಂತಸ್ತು. ಇದರ ಮೇಲೆ ನಾಲ್ಕು ಹಂತಗಳ ಎರಡನೆಯ ಅಂತಸ್ತು ಕಾಣುತ್ತವೆ. ಈ ಎರಡನೆಯ ಅಂತಸ್ತಿನ ಮೇಲೆ ಮೂರು ಮೀಟರ್ ಅಗಲವಾದ ನಡುನಿಲ್ಲೆಡೆಯಿದೆ. ಈ ನಡುನಿಲ್ಲೆಡೆ ಬಾವಿಯ ಎಲ್ಲ ಬದಿಗಳಿಗಿದ್ದು ಕಮಾನುಳ್ಳ ಮೊಗಸಾಲೆಯನ್ನು ಹೊಂದಿದೆ. ಆದರೆ ಪಶ್ಚಿಮದ ಬದಿಯಲ್ಲಿರುವ ಮೊಗಸಾಲೆ ಮಾತ್ರ ಪರಿಪೂರ್ಣವಾಗಿದೆ. ಉಳಿದ ಬದಿಗಳಲ್ಲಿರುವ ಕಮಾನುಗಳಿಗೆ ಗೋಡೆಯಲ್ಲಿ ಮುಂದಕ್ಕೆ ಚಾಚಿಕೊಂಡಿರುವ ಭಾಗಗಳು ಆಧಾರವಾಗಿವೆ. ಈ ಕಮಾನುಗಳನ್ನು, ಕಲ್ಲನ್ನು ಸ್ವಲ್ಪ ಸ್ವಲ್ಪವಾಗಿ ಮುಂದೆ ಚಾಚಿಕೊಂಡಿರುವಂತೆ ಮಾಡಿ ರಚಿಸಲಾಗಿದೆ. ಇಟ್ಟಿಗೆಯನ್ನು ಉಪಯೋಗಿಸಿಲ್ಲ. ಮಧ್ಯದ ಕಲ್ಲು ಕಮಾನಿನ ತುದಿಯಾಗಿದೆ. ಈ ಹಂತದಲ್ಲಿ ದಕ್ಷಿಣದ ಬದಿಯಲ್ಲಿ ಒಂದರ ಕೆಳಗೆ ಒಂದರಂತೆ ಮೂರು ಸೇತುವೆಗಳಿವೆ. ಕೆಳಗಿನ ಸೇತುವೆಯ ಕೆಳಭಾಗದಿಂದ ಬಾವಿಯ ಮೆಟ್ಟಿಲುಗಳು ಪ್ರಾರಂಭವಾಗಿವೆ. ದಕ್ಷಿಣದ ಬದಿಯಲ್ಲಿ ಮೊಗಸಾಲೆಯ ಮಟ್ಟದಲ್ಲಿ ಮೂರನೆಯ ಸೇತುವೆಗೆ ಹೊಂದಿಕೊಂಡಿರುವಂತೆ ಇನ್ನೊಂದು ಸೇತುವೆಯಿದೆ. ಇದರೆ ಮೇಲೆ ನಾಲ್ಕು ಕಂಬಗಳುಳ್ಳ ನಾಲ್ಕನೆಯ ಸೇತುವೆಯಿದೆ. ಇದರ ಮೇಲೆ ನಾಲ್ಕು ಕಂಬಗಳು ಮಡಿಕೆಯಂತಿರುವ ತಳಭಾಗ ೪-೮-೪ ಫನಾಕೃತಿ

ಮತ್ತು ಕಲಶದ ತುದಿಯನ್ನು ಹೊಂದಿರುವ ದಿಂಡು, ಹೊರಮೈ ದುಂಡಾಗಿರುವ ಅರೆಗಂಬ, ಕೆಳಭಾಗ ವಕ್ರವಾಗಿರುವ ಚೌಕಾಕಾರದ ಚೌಕಟ್ಟು ಬಾಗಿದ ಅಂಚುಳ್ಳ ಗೋಡೆಯ ಭಾಗಗಳನ್ನು ಹೊಂದಿವೆ.

ಮಂಟಪದ ಒಳಮಾಳಿಗೆಯ ಮೂಲೆಯಲ್ಲಿ ವಜ್ರಾಕಾರದ ಕಲ್ಲುಗಳಿಂದ ಮತ್ತು ಉಬ್ಬಿದ ಕಮಲದ ಹೂವುಗಳಿರುವ ಸಮತಟ್ಟಾದ ಕಲ್ಲಿನಿಂದ ಕೂಡಿದೆ. ಈ ಮಂಟಪದ ಮುಂಭಾಗದಲ್ಲಿ ದೇವಸ್ಥಾನದ ಬಾಗಿಲಿನಂತಿರುವ ಒಂದು ದೊಡ್ಡ ಹಣೆಪಟ್ಟಿಯಿದ್ದು ಇದು ಸರಳ ಲಲಾಟವನ್ನು ಹೊಂದಿದೆ. ಈ ಮಂಟಪದ ಕಂಬಗಳು ಹಣೆಪಟ್ಟಿ, ಒಳಮಾಳಿಗೆಯಲ್ಲಿರುವ ಕಲ್ಲುಗಳನ್ನು ಬೇರೆ ದೇವಸ್ಥಾನದಿಂದ ತಂದು ಉಪಯೋಗಿಸಿದಂತೆ ಕಾಣುತ್ತದೆ.[೪೭] ಈ ಮಂಟಪದ ಮಟ್ಟದಲ್ಲಿ ಪಶ್ಚಿಮದ ಗೋಡೆಯಲ್ಲಿ ಒಂದು ಗೂಡು ಇದೆ. ಬಾವಿಯ ಮೆಟ್ಟಿಲುಗಳು ದಕ್ಷಿಣದ ಬದಿಯಿಂದ ಪ್ರಾರಂಭವಾಗಿ ಮೊದಲು ಪಶ್ಚಿಮಕ್ಕೆ ತಿರುಗಿ ಪುನಃ ಉತ್ತರಕ್ಕೆ ತಿರುಗಿ ಬಾವಿಯಿದ್ದ ಭಾಗಕ್ಕೆ ಹೋಗುತ್ತವೆ. ದಾರಿಯ ದಕ್ಷಿಣದ ಗೋಡೆಯಲ್ಲಿ ಒಂದು ದೊಡ್ಡ ಗೂಡು ಇದೆ. ಮೊಗಸಾಲೆಯ ಭಾವಣಿಯ ಮೇಲ್ಭಾಗದಲ್ಲಿ ಬಾವಿಯ ಇನ್ನೊಂದು ಅಂತಸ್ತಿದೆ. ಈ ಅಂತಸ್ತಿನ ಮೇಲೆ ವಕ್ರವಾದ ಕಲ್ಲು ಇದ್ದು ಇದು ಭೂಮಿಮಟ್ಟಕ್ಕೆ ಆಸರೆಯಾಗಿದೆ.

### ಗುಮ್ಮಗೋಳದ ಗೋಣಿ ಬಸವೇಶ್ವರನ ಪುಷ್ಕರಣಿ

ಗುಮ್ಮಗೋಳ ಗ್ರಾಮವು ಗದಗದಿಂದ ಆಗ್ನೇಯಕ್ಕೆ ೫೬ ಕಿಮೀ ಅಂತರದಲ್ಲಿದೆ. ಮುಂಡರಗಿ ತಾಲೂಕಿನಲ್ಲಿ ವೀರಶೈವ ಮಠವೆಂದರೆ ಗುಮ್ಮಗೋಳದ ಗೋಣಿಬಸಪ್ಪನ ಮಠ, ಈ ಮಠವನ್ನು ಗೋಣಿಬಸಪ್ಪ ಎಂಬ ಪವಾಡ ಪುರುಷರು ನಿರ್ಮಿಸಿದ್ದಾರೆಂದು ಸ್ಥಳೀಯರು ತಿಳಿಸುತ್ತಾರೆ. ಆದರೆ ಮೂಲವಾಗಿ ಬಿಷ್ಟಪ್ಪಯ್ಯನೇ ತನ್ನ ಶಿಷ್ಯರಾದ ಗೋಣಿಬಸಪ್ಪನಿಗೆ ಈ ದೇವಾಲಯ ಮತ್ತು ಪುಷ್ಕರಣಿಯನ್ನು ನಿರ್ಮಿಸಿಕೊಟ್ಟನೆಂದು ಮಾಹಿತಿ ಇದೆ.[೪೮] ಈ ಗೋಣಿ ಬಸಪ್ಪನವರು ಮೂಲತಃ ಹರಪನಹಳ್ಳಿಯವರು. ಆ ಕಾಲದಲ್ಲಿ ಅವರ ಮೂಲ ಮಠವು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಕೊರ್ಲಹಳ್ಳಿಯಲ್ಲಿದ್ದು, ಅವರು ಈ ಪ್ರದೇಶದ ಪಂಚಗಣಾಧೀಶ್ವರರಾದ ಕೊಟ್ಟೂರೇಶ್ವರ, ಬಸವೇಶ್ವರ, ತಿಪ್ಪೇಸ್ವಾಮಿ, ಕೆಂಪಯ್ಯ, ಕೊಲಶಾಂತಾ ಮತ್ತು ಇವರಲ್ಲಿ ಒಬ್ಬರು ಗೋಣಿಬಸವೇಶ್ವರರು. ಈ ಪಂಚಾಗಣಾಧೀಶ್ವರರು ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗೆ ಹೋಗಿ ತಮ್ಮ ಪವಾಡಗಳನ್ನು ತೋರಿಸಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಪಂಚಗಣಾಧೀಶ್ವರರ ಕುರಿತು ಸ್ಥಳ ಪುರಾಣಗಳಿವೆ. ಕೊಟ್ಟೂರಿನಲ್ಲಿ ಕೊಟ್ಟೂರೇಶ್ವರ, ಹರಪನಹಳ್ಳಿಯಲ್ಲಿ ಕೆಂಪಯ್ಯ, ಅರಸಿಕೆರೆಯಲ್ಲಿ ಕೊಲಶಾಂತೇಶ, ನಾಯಕನಹಟ್ಟಿಯಲ್ಲಿ ತಿಪ್ಪೇಸ್ವಾಮಿ ಮತ್ತು ಕೊರ್ಲಹಳ್ಳಿಯಲ್ಲಿ ಗೋಣಿಬಸವೇಶ್ವರರು ನೆಲೆಸಿ ವೀರಶೈವ ಧರ್ಮವನ್ನು ಉದ್ಧಾರಗೊಳಿಸಿದರೆಂದು ಸ್ಥಳೀಯ ಪುರಾಣಗಳಿಂದ ತಿಳಿದುಬರುತ್ತದೆ. ಈ ಐದು ಸ್ಥಳಗಳಲ್ಲಿ

ಪಂಚಗಣಾಧೀಶ್ವರ ಭವ್ಯವಾದ ಮಠಗಳಿವೆ.[೫೦] ಆದರೆ ಗಣಾಧೀಶ್ವರರ ಹೆಸರಿನ ಎರಡು ಕಡೆಗಳಲ್ಲಿ ಸಮಕಾಲೀನವಾಗಿ ಕಟ್ಟಿದ ಮಠಗಳಲ್ಲಿ ಗೋಣಿಬಸವೇಶ್ವರ ಮಠವು ಮಾತ್ರ ಕಂಡುಬರುತ್ತದೆ.

ಈ ಮಠದ ವಿಸ್ತೀರ್ಣ ಸುಮಾರು ೫೦ ಮೀಟರ್ ಉದ್ದ ೧೫ ಮೀಟರ್ ಅಗಲವಿದೆ. ಇದು ಗರ್ಭಗೃಹ, ತೆರೆದ ಅಂತರಾಳ, ಅರ್ಧಮಂಟಪ, ಕಲ್ಯಾಣಿ (ಪುಷ್ಕರಣಿ) ಸಭಾಮಂಟಪ ಹಾಗೂ ಸುಂದರವಾದ ಗೋಪುರವನ್ನು ಒಳಗೊಂಡ ಪ್ರವೇಶ ದ್ವಾರವಿದೆ. ಇದನ್ನು ಸಂಪೂರ್ಣ ಇಟ್ಟಿಗೆ ಗಾರೆಯನ್ನು ಬಳಸಿ ನಿರ್ಮಾಣ ಮಾಡಿದ್ದಾರೆ. ಈ ಮಠದ ಒಳ ಆವರಣದಲ್ಲಿ ಸ್ಥಂಭಗಳು ವೈವಿಧ್ಯತೆಯಿಂದ ಕೂಡಿವೆ. ಈ ಮಠದ ಗರ್ಭಗೃಹದಲ್ಲಿ ಗೋಣಿಬಸವೇಶ್ವರ ಗದ್ದುಗೆ ಮತ್ತು ಅದರ ಮೇಲೆ ಪೀಠವನ್ನು ಹೊಂದಿದ ಶಿವಲಿಂಗವಿದೆ. ಗರ್ಭಗೃಹದ ದ್ವಾರ ಬಂಧವು ಮೂರು ಶಾಖೆಗಳಿಂದ ಕೂಡಿದ್ದು ಅವುಗಳು ಕ್ರಮವಾಗಿ ವಜ್ರ, ಪುಷ್ಪ, ಅರ್ಧ ಗಂಭದ ಅಲಂಕಾರಗಳಿವೆ. ಗರ್ಭಗೃಹದ ಪಕ್ಕದಲ್ಲಿ ಪೂಜಾ ಗವಿಗಳಿವೆ. ಅವುಗಳಲ್ಲಿ ನಂದಿಯ ವಿಗ್ರಹ ಮತ್ತು ಶಿವಲಿಂಗವಿದೆ. ಅದರ ಪಕ್ಕದಲ್ಲಿಯೇ ಜ್ಞಾನಮುದ್ರೆಯಲ್ಲಿ ಕುಳಿತ ಶಿಲ್ಪವಿದ್ದು ಇದು ಗೋಣಿಬಸಪ್ಪನವರೇ ಆಗಿರಬಹುದೆಂಬ ಸ್ಥಳೀಕರು ಅಭಿಪ್ರಾಯ. ಗರ್ಭಗೃಹದ ಎದುರಿಗೆ ತೆರೆದ ಅಂತರಾಳವಿದ್ದು ಮಧ್ಯದಲ್ಲಿ ಪುಷ್ಕರಣಿಯನ್ನು ಒಳಗೊಂಡಿದೆ. ಪುಷ್ಕರಣಿಯ ಮಂಟಪದ ಸುತ್ತಲೂ ೫ಳ ಸರಳ ಶಿಲ್ಪಗಳಿದ್ದು ಅವುಗಳಲ್ಲಿ ಬೃಂಗಿ, ವೀಣೆ ನುಡಿಸುತ್ತಿರುವ ಶಿಲ್ಪಗಳು, ನಂದಿಯ ಶಿಲ್ಪ ಮಾರುತಿ ಶಿಲ್ಪ ನೃತ್ಯ ಮಾಡುತ್ತಿರುವ ಮತ್ತು ಜ್ಞಾನಮುದ್ರೆಯಲ್ಲಿ ಕುಳಿತಿರುವ ಶಿಲ್ಪಗಳು ಕಂಡುಬರುತ್ತವೆ.

ಈ ಮಠದ ವಾಸ್ತುಶೈಲಿಯು ಮುಸ್ಲಿಂ ಕಲಾಶೈಲಿಯ ಕಮಾನುಗಳನ್ನು ಹೋಲುತ್ತವೆ. ಶೈಲಿಯ ದೃಷ್ಟಿಯಿಂದ ಈ ಮಠದ ಕಾಲವನ್ನು ಸುಮಾರು ಕ್ರಿ.ಶ. ೧೬ ಮತ್ತು ೧೭ನೇ ಶತಮಾನದಲ್ಲಿ ಆಗಿದೆ ಎಂದು ನಿರೂಪಿಸಬಹುದು.

**ನೀಲಗುಂದದ ಬಾವಿ :**

ಈ ಗ್ರಾಮವು ಗದಗ ಜಿಲ್ಲಾಕೇಂದ್ರದಿಂದ ನೈರುತ್ಯಕ್ಕೆ ೨೩ ಕಿ.ಮೀ ದೂರದಲ್ಲಿದೆ. ಈ ಬಾವಿಯು ಗ್ರಾಮದಿಂದ ಪಶ್ಚಿಮ ದಿಕ್ಕಿನಲ್ಲಿರುವ ವೀರನಾರಾಯಣ ದೇವಾಲಯದ ಬಲಭಾಗದಲ್ಲಿ ಕಂಡು ಬರುತ್ತದೆ. ಈ ಪ್ರದೇಶವು ಮೊದಲಿಗೆ ಮುಳಗುಂದ-೧೨ರ ವಿಭಾಗಕ್ಕೆ ಒಳಪಟ್ಟಿದ್ದುದಾಗಿ ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಕ್ರಿ.ಶ. ೮೬೬ರ ನೀಲಗುಂದ ಶಾಸನವನ್ನು[೮೯] ಸಂಪಾದಿಸಿಕೊಟ್ಟ ಜೆ.ಎಫ್.ಫ್ಲಿಟ್ ಅವರು ಈ ಶಾಸನದ ಪ್ರಸ್ತಾವನೆಯಲ್ಲಿ ನೀಲಗುಂದ ಮುಳಗುಂದ ಹನ್ನೆರಡರ ಗ್ರಾಮವೆಂಬುವುದು ಸಕಾರಣಗಳೊಂದಿಗೆ ಚರ್ಚಿಸಿದ್ದಾರೆ. ಬಿ.ಎಸ್.ಕುಲಕರ್ಣಿಯವರು ಮುಳಗುಂದದ ಪ್ರಾಚೀನತೆಯನ್ನು ಪ್ರಸ್ತಾಪಿಸುತ್ತ ಅದು ಬೆಳ್ವೊಲ ಮುನ್ನೂರರ ನಾಡಿನಲ್ಲಿ ಸಮಾವೇಶಗೊಂಡಿತ್ತು. ಶಾಸನಗಳಲ್ಲಿ ನೀರಗುಂದ ಎಂದರೆ ಕಾಲಾಂತರದಲ್ಲಿ ಇದು ಭಾಷಿಕ ಬದಲಾವಣೆ ಪ್ರಕ್ರಿಯೆಗೆ

ಒಳಗಾಗಿ ನೀಗುಂದ>ನೀರಗುಂದ>ನೀಲಗುಂದ ಎಂದಾಗಿದೆ. ಇಲ್ಲಿ ನೀಲ ಎಂಬುದಕ್ಕೆ ನೀಲಿ ಅಥವಾ ಕಪ್ಪು ಬಣ್ಣಗಳಿಂದ ಅರ್ಥೈಸಿದರೆ, ಗುಂದ ಎಂಬುದು ಇಲ್ಲಿಯ ಬೆಟ್ಟಗುಡ್ಡಗಳನ್ನು ಸೂಚಿಸುತ್ತದೆ. ಈ ಗ್ರಾಮದ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಕಪ್ಪಾದ ಬೃಹತ್ ಬಂಡೆಗಳಿಂದ ಕೂಡಿದ ಬೆಟ್ಟಗಳಿವೆ. ಇವುಗಳಿಂದಾಗಿ ಈ ಗ್ರಾಮಕ್ಕೆ ನೀಲಗುಂದ ಎಂಬ ಹೆಸರು ಬಂದಂತೆ ತೋರುತ್ತದೆ. ಇದು ನಿಸರ್ಗ ಮೂಲದಿಂದ ಬಂದ ಸ್ಥಳನಾಮವಾಗಿದೆ.

ಈ ಬಾವಿಯು ವೀರನಾರಾಯಣ ದೇವಾಲಯದ ಬಲಭಾಗದಲ್ಲಿ ಕಂಡುಬಂದಿದ್ದು, ಇದು ಆಯತಕಾರವಾಗಿದೆ. ಎತ್ತರದ ಕಟ್ಟೆಯ ಮೇಲೆ ನಿರ್ಮಿಸಿ ಗ್ರಾನೈಟ್ ಕಲ್ಲನ್ನು ಬಳಸಿದ್ದಾರೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡು ನಂತರ ಬ್ರಿಟಿಷರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿರಬೇಕು. ಪ್ರಾಚೀನ ಕಾಲದಲ್ಲಿ ಈ ಬಾವಿಯ ನೀರನ್ನು ದೇವಾಲಯದ ಪೂಜಾಕಾರ್ಯಗಳಿಗೆ ಬಳಸುತ್ತಿದ್ದರು. ನಂತರ ದಿನಗಳಲ್ಲಿ ಈ ನೀರನ್ನು ಕುಡಿಯಲು ಮತ್ತು ದಿನನಿತ್ಯದ ಕಾರ್ಯಗಳಿಗೆ ಬಳಸಲು ಉಪಯೋಗಿಸುತ್ತಿದ್ದಾರೆ. ಈ ಬಾವಿಯ ನೀರನ್ನು ಮೇಲಕ್ಕೆ ಎತ್ತಲು ಇದಕ್ಕೆ ಗಡೆಗಳನ್ನು ಅಳವಡಿಸಿದ್ದಾರೆ. ಇದು ಸುಮಾರು ೩೫ ಅಡಿ ಆಳ ಹೊಂದಿದ್ದು, ಇವತ್ತಿಗೂ ಕೂಡ ಉತ್ತಮ ರೀತಿಯಲ್ಲಿ ಈ ಬಾವಿಯನ್ನು ಗ್ರಾಮಸ್ತರು ಕಾಪಾಡಿಕೊಂಡು ಬಂದಿದ್ದಾರೆ.

**ಡಂಬಳದ ಜಪದ ಬಾವಿ :**

ಈ ಬಾವಿಯು ಗ್ರಾಮದಿಂದ ವಾಯವ್ಯಕ್ಕೆ ಪೂರ್ವಾಭಿಮುಖವಾಗಿದ್ದು, ೧೨-೧೩ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದೆ. ಬಾವಿಯ ಸುತ್ತಲಿನ ಪರಿಸರವು ಪ್ರಾಚೀನ ಡಂಬಳ ಪಟ್ಟಣದ ವಸತಿ ಪ್ರದೇಶವಾಗಿತ್ತು. ಚೌಕಾಕಾರದ ಈ ಬಾವಿಯನ್ನು ಕಪ್ಪು ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಇದರ ಆಳ ಸುಮಾರು ಹದಿನೈದರಿಂದ ಇಪ್ಪತ್ತು ಅಡಿಗಳು. ಒಳಗೋಡೆಯನ್ನು ಕಲ್ಲಿನಿಂದ ಭದ್ರವಾಗಿ ಕಟ್ಟಿದ್ದು ಮೇಲ್ಭಾಗದಲ್ಲಿ ಸುತ್ತಲೂ ಚಿಕ್ಕಮಂಟಪ(ಗೂಡು)ಗಳಿವೆ. ಇಂಥ ಗೂಡುಗಳನ್ನು ಬಾವಿಯ ಪ್ರವೇಶದಲ್ಲಿ ಕೂಡ ನಿರ್ಮಿಸಲಾಗಿದೆ. ಈ ಮಂಟಪಗಳ, ಸೌಂದರ್ಯ ಹೆಚ್ಚಿಸಲು ಅವುಗಳಿಗೆ ಶಿಖರ ಭಾಗವನ್ನು ಕೆತ್ತಿದ್ದಾರೆ. ಕದಂಬರ-ನಾಗರ ಶೈಲಿಯ ಶಿಖರವನ್ನು ಈ ಮಂಟಪಗಳು ಹೊಂದಿವೆ. ಬಾವಿಯ ನಿರ್ಮಾಣದ ಬಗೆಗೆ ಯಾವ ಮಾಹಿತಿಗಳು ಕಂಡು ಬಂದಿಲ್ಲ. ಆದರೂ ನಿರ್ಮಾಣದ ಶೈಲಿ ಹಾಗೂ ಅಲಂಕಾರ ಗಮನಿಸಿದರೆ ಹನ್ನೊಂದರಿಂದ ಹನ್ನೆರಡನೆಯ ಶತಮಾನದ ಕಾಲಾವಧಿಯಲ್ಲಿ ಇದನ್ನು ಕಟ್ಟಿರಬಹುದು ಎಂದು ತೋರುತ್ತದೆ. ಸದ್ಯ ಬಾವಿಯ ಸುತ್ತಲೂ ಗಿಡಗಂಟೆ ಹಾಗೂ ಮುಳ್ಳುಕಂಟಿಗಳು ಬೆಳೆದಿದ್ದು ಅಲ್ಲಲ್ಲಿ ಅದರ ಗೋಡೆ ಭಾಗವು ಉದುರಿದೆ.

**ತ್ರಿಕೋಟೇಶ್ವರ ದೇವಾಲಯದ ಬಾವಿ**

ಗದಗ-ಬೆಟಗೇರಿಯಲ್ಲಿ ಒಟ್ಟು ೧೨ ಪ್ರಾಚೀನ ದೇವಾಲಯಗಳಲ್ಲಿ ಶ್ರೀ ತ್ರಿಕೋಟೇಶ್ವರ

ದೇವಾಲಯವು ಅತ್ಯಂತ ಪ್ರಾಚೀನವಾದುದು. ಈ ದೇವಾಲಯದ ಪಶ್ಚಿಮಕ್ಕೆ ಹಾಗೂ ಉತ್ತರಕ್ಕೆ ದ್ವಾರಬಾಗಿಲುಗಳನ್ನು ಹೊಂದಿದೆ.

ತ್ರಿಕೋಟೇಶ್ವರ ಎಂಬ ಮೂರು ಲಿಂಗಗಳುಳ್ಳ ಗರ್ಭಗುಡಿ, ಅಂತರಾಳ, ನಾಲ್ಕು ಮಧ್ಯ ಕಂಬಗಳುಳ್ಳ ಸಭಾ ಮಂಟಪ, ೪೨ ಕಂಬಗಳಿರುವ ಇನ್ನೊಂದು ಸಭಾ ಮಂಟಪ, ಸೂರ್ಯ ದೇವಾಲಯ, ಸರಸ್ವತಿ, ಅಷ್ಟಭುಜ ಗಣಪತಿ, ಈಶ್ವರ ದೇವಾಲಯಗಳು ಆವರಣದಲ್ಲಿ ಕಂಡು ಬರುತ್ತವೆ. ಈ ದೇವಾಲಯದ ಮುಂದೆ ಭವ್ಯವಾದ ಬಾವಿ ಇದ್ದು ಇದನ್ನು ನಾಲ್ಕು ಹಂತಗಳಲ್ಲಿ ನಿರ್ಮಿಸಿದ್ದಾರೆ. ಇದಕ್ಕೆ ಪಶ್ಚಿಮಾಭಿಮುಖವಾಗಿ ಪ್ರವೇಶದ್ವಾರವಿದ್ದು ಇದು ಕಲ್ಲಿನ ಕಟ್ಟಡವನ್ನೇ ಹೊಂದಿದೆ. ಈ ನೀರನ್ನು ಪೂಜಾ ಕಾರ್ಯಗಳಿಗೆ ಬಳಸಲಾಗುತ್ತದೆ. ದಕ್ಷಿಣಾಭಿಮುಖವಾಗಿ ಕಪಿಲೆಯನ್ನು ಒಳಗೊಂಡಿದ್ದು ಇದರ ಮೂಲಕ ನೀರನ್ನು ಎತ್ತುತ್ತಿದ್ದರು. ಇದು ಪ್ರವೇಶ ದ್ವಾರದಲ್ಲಿ ಇಕ್ಕಟ್ಟಾಗಿದ್ದು ಮುಂದೆ ಸಾಗಿದಂತೆ ಚೌಕಾಕಾರವಾಗಿ ನಿರ್ಮಿಸಿದ್ದಾರೆ. ಇದರ ಆಳ ೭೦ ಮೀ. ಉದ್ದ–೨೫ ಮೀ, ಅಗಲ–೧೦ ಮೀ. ಇದೆ. ಇಂದಿನ ವರೆಗೂ ನೀರು ಬತ್ತಿರುವುದಿಲ್ಲ.

**ಲಕ್ಷ್ಮೇಶ್ವರದ ಅಗಸ್ತ್ಯತೀರ್ಥಗಳು :**

ಲಕ್ಷ್ಮೇಶ್ವರ ಗ್ರಾಮದಿಂದ ೨ ಕಿ.ಮೀ. ಅಂತರದಲ್ಲಿ ಪೂರ್ವಭಾಗದಲ್ಲಿ ೨ ಕೊಳಗಳು ಕಂಡುಬರುತ್ತವೆ. ಒಂದು ದೇವಾಲಯದ ಮುಂಭಾಗದಲ್ಲಿ ಮತ್ತೊಂದು ಎಡಭಾಗದಲ್ಲಿ ಕಂಡುಬರುತ್ತವೆ. ಇವುಗಳನ್ನು ಸ್ಥಳೀಯರು ಅಗಸ್ತ್ಯ ತೀರ್ಥಗಳೆಂದು ಕರೆಯುತ್ತಾರೆ. ಅಗಸ್ತ್ಯ ಮುನಿ ದಕ್ಷಿಣ ಭಾರತದ ಯಾತ್ರೆಯ ಕಾಲಕ್ಕೆ ಲಕ್ಷ್ಮೇಶ್ವರದಲ್ಲಿ ವಾಸವಾಗಿ ನಂತರ ಆ ಕೊಳದಲ್ಲಿ ಸ್ನಾನ ಮಾಡಿ ಸೋಮೆಶ್ವರ ದೇವರ ದರ್ಶನ ಪಡೆದಿದ್ದರಿಂದ ಈ ಕೊಳಗಳಿಗೆ ಅಗಸ್ತ್ಯ ತೀರ್ಥಗಳೆಂದು ಕರೆಯಲಾಗಿದೆ. ಈ ದೇವಾಲಯ ಮತ್ತು ಕೊಳಗಳು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಪಟ್ಟಿವೆ. ಇದೆ ತರಹ ಕೊಳಗಳು ವಿಜಯನಗರ ಕಾಲದಲ್ಲಿ ಇದ್ದವೆಂದು ಹೇಳಬಹುದು. ಉದಾ: ಹಂಪಿಯ ಮಹಾನವಮಿ ದಿಬ್ಬದ ಹತ್ತಿರವಿರುವ ಪುಷ್ಕರಣಿಯು ಇದೇ ಆಕಾರವನ್ನು ಹೂಲುತ್ತದೆ. ಇದೇ ತರಹದ ಪುಷ್ಕರಣಿಗಳನ್ನು ಸಂಡೂರು ಪರಿಸರದಲ್ಲಿ ಕೂಡ ಕಾಣಬಹುದು.[೫೦]

**೪.೭. ಶಾಸನೋಕ್ತವಲ್ಲದ ಪುಷ್ಕರಣಿ, ಬಾವಿ, ಹೊಂಡಗಳ ಸ್ವರೂಪ:**

**ಗದುಗಿನ ರಾಚೋಟೇಶ್ವರ ದೇವಾಲಯದ ಹೊಕ್ಕುತುಂಬುವ ಬಾವಿ**

ಈ ಬಾವಿಯು ಗದುಗಿನ ಪಶ್ಚಿಮ ದಿಕ್ಕಿನಲ್ಲಿರುವ ಒಕ್ಕಲಗೇರಿಯ ಓಣಿಯಲ್ಲಿ ಕಂಡುಬರುತ್ತದೆ. ಬಾವಿಯ ಬಲಭಾಗದಲ್ಲಿ ರಾಚೋಟೇಶ್ವರ ವೀರಭದ್ರ ದೇವಸ್ಥಾನ ಹಾಗೂ ಎಡಭಾಗದಲ್ಲಿ ಗರಡಿಮನೆ ಕಂಡು ಬರುತ್ತದೆ. ಇದು ವಾಸ್ತುಶೈಲಿಯ ಆಧಾರದ ಮೇಲೆ ೧೭–೧೮ನೇ ಶತಮಾನಕ್ಕೆ ಸೇರಿದ್ದಾಗಿದೆ. ಈ ಬಾವಿಯ ಫೋಟೋಗ್ರಫಿ ಮಾಡುವಾಗ ನನಗೆ ಎರಡು ಅಪ್ರಕಟಿತ ಶಾಸನಗಳು ಕಂಡವು. ಇವು ಪ್ರವೇಶದ ದ್ವಾರದ ಕಮಾನಿನ ಗೋಡೆಯಲ್ಲಿ ೭ ರಿಂದ ೮ ಸಾಲುಗಳನ್ನು ಹೊಂದಿದೆ.

ಈ ಬಾವಿಯು ಪೂರ್ವಾಭಿಮುಖವಾಗಿದ್ದು ಮೆಟ್ಟಿಲುಗಳ ಮೂಲಕ ಪ್ರವೇಶ ಮಾಡಿ ಎಡಗಡೆಗೆ ತಿರುಗಿ ನೀರಿನ ಆಳಕ್ಕೆ ತಲುಪಬಹುದು. ಈ ಬಾವಿಯು ಇಂಗ್ಲೀಷ್ ವರ್ಣಮಾಲೆ ಯಲ್ಲಿರುವ 'ಎಲ್' ಆಕಾರದಲ್ಲಿ ಕಂಡುಬರುತ್ತದೆ. ಇದು ಒಟ್ಟು ನೆಲಮಟ್ಟದಿಂದ ಎತ್ತರ ೮೦ ಅಡಿ ಆಳವನ್ನು ಹೊಂದಿದೆ. ಮೇಲ್ಭಾಗದಲ್ಲಿ ಒಟ್ಟು ಉದ್ದ ೫೦ ಅಡಿ, ಅಗಲ ೨೫ ಅಡಿ ಹೊಂದಿದೆ. ಇದನ್ನು ಒರಟಾದ ಕಲ್ಲುಗಳಿಂದ ನಿರ್ಮಾಣ ಮಾಡಲಾಗಿದೆ ಮತ್ತು ಇದರ ದಕ್ಷಿಣ ದಿಕ್ಕಿಗೆ ಏತವನ್ನು ಅಳವಡಿಸಿರುತ್ತಾರೆ.

**ಬೆಳಟ್ಟಿಯ ರಾಮಲಿಂಗೇಶ್ವರ ಮಠದ ಬಾವಿ :**

ಬೆಳಟ್ಟಿಯು ಗದಗದಿಂದ ದಕ್ಷಿಣ ದಿಕ್ಕಿಗೆ ೩೨ ಕಿ.ಮೀ ಶಿರಹಟ್ಟಿ ತಾಲ್ಲೂಕು ಕೇಂದ್ರದಿಂದ ೧೮ ಕಿ.ಮೀ. ಅಂತರದಲ್ಲಿದೆ. ಬೆಳಟ್ಟಿಯಲ್ಲಿ ಹಲವಾರು ಶಾಸನಗಳಿರುವುದಾಗಿ ವರದಿಯಾಗಿವೆ. ಆದರೆ ಇಂದು ಕೆಲವು ಮಾತ್ರ ಲಭ್ಯವಿದೆ. ಶಾಸನಗಳಲ್ಲಿ ಬೆಳಟ್ಟಿ ಎಂದು ಉಲ್ಲೇಖಿತವಾಗಿರುವ ಈ ಊರು ಪ್ರಾಚೀನ ಕಪ್ಪಲಟ್ಟಿ, ಬೆಳಟ್ಟಿ, ಮುಂತಾದ ಎರಡು ಅಥವಾ ಮೂರು ಗ್ರಾಮಗಳೂ ಸೇರಿ ಬೆಳಟ್ಟಿ ಆಗಿದೆ ಎಂದು ಸ್ಥಳೀಯರು ತಿಳಿಸುತ್ತಾರೆ. ಬೆಳಟ್ಟಿಯಿಂದ ಶಿರಹಟ್ಟಿಗೆ ಹೋಗುವ ಮಾರ್ಗದ ಬಲಬದಿಯ ಗುಡ್ಡದಲ್ಲಿರುವ ಈ ದೇವಾಲಯವನ್ನು ರಾಮಲಿಂಗೇಶ್ವರ ಮಠವೆಂದು ಕರೆಯುತ್ತಾರೆ. ಸ್ವಾಭಾವಿಕ ಗುಡ್ಡದ ಕಲ್ಲು ಗವಿಯು ಬಂಡೆಗಳ ನಡುವೆ ಗರ್ಭಗೃಹದಂತಿರುವ ನೈಸರ್ಗಿಕ ರಚನೆಯಿದಾಗಿದೆ.ಅದರಲ್ಲಿ ಪ್ರಾಚೀನ ಕಾಲದ ಶಿವಲಿಂಗವಿದೆ. ಇದು ಶೈಲಿಯ ದೃಷ್ಟಯಿಂದ ಕ್ರಿ.ಶ.ಸುಮಾರು ೧೦-೧೧ ನೇ ಶತಮಾನಕ್ಕೆ ಸೇರಸಬಹುದಾಗಿದೆ.[೫೧] ಈ ದೇವಾಲಯದ ಎಡಬದಿಗೆ ವೃತ್ತಾಕಾರವಾದ ಬೃಹತ್‌ದಾದ ಬಾವಿಯನ್ನು ಕಾಣಬಹುದು. ಈ ಬಾವಿಯು ದೇವಾಲಯದ ಜೊತೆಗೆ ನಿರ್ಮಾಣವಾಗಿದೆ ಎಂದು ಅಲ್ಲಿಯ ಜನರ ಹಾಗೂ ಮಠದ ಸ್ವಾಮಿಗಳ ಅಭಿಪ್ರಾಯ. ಈ ಮಠ ಗ್ರಾಮದಿಂದ ಸು ೧ ½ ಕಿ.ಮೀ.ಅಂತರದಲ್ಲಿರವುದರಿಂದ ಈ ಮಠಕ್ಕೆ ನೀರಿನ ಅವ್ಯಶಕತೆ ಇದ್ದದ್ದರಿಂದ ಬಾವಿ ತೊಡಿರಬಹದು ಎಂಬವುದು ಗೊತ್ತಾಗುತ್ತದೆ. ಬಾವಿ ನೀರನ್ನು ದೇವಾಲಯದ ದಿನ ನಿತ್ಯದ ಪೂಜಾಕಾರ್ಯಗಳಿಗೆ ಹಾಗೂ ವಟುಗಳು ಇದೇ ನೀರನ್ನು ಉಪಯೋಗಿಸುತ್ತಿದ್ದರು. ಈ ಬಾವಿಯ ಕಟ್ಟಡ ಹಾಳಾಗಿದ್ದರಿಂದ ಇದರ ಸ್ಥಿತಿ ಕನಿಷ್ಟವಾಗಿದೆ. ಬಾವಿಗೆ ಇಳಿಯಲು ಮೆಟ್ಟಿಲುಗಳನ್ನು ನಿರ್ಮಿಸಿದ್ದರು. ಈ ಬಾವಿಯ ಪಕ್ಕದಲ್ಲಿ ಪ್ರಾಚೀನ ಕಾಲದ ಅವಶೇಷಗಳು ಬಿದ್ದದ್ದರಿಂದ ಈ ಬಾವಿಯನ್ನು ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದುರಾಗಿರಬಹುದು ಎಂದು ಗುರುತಿಸಬಹುದು.

**ಕಪ್ಪತ್ತಗಿರಿಯ ಬೆಂಡೆಕೊಳ್ಳ**

ಕಪ್ಪತ್ತಗಿರಿಯು ಗದಗದಿಂದ ದಕ್ಷಿಣ ದಿಕ್ಕಿಗೆ ೧೫ ಕಿ.ಮೀ ಮುಂಡರಗಿ ತಾಲ್ಲೂಕು ಕೇಂದ್ರದಿಂದ ೨೩ ಕಿ.ಮೀ. ಅಂತರದಲ್ಲಿದೆ. ಈ ಬೆಟ್ಟದ ಹಿಂಬದಿಯ ಅಂಚಿನಲ್ಲಿ ಆಳವಾದ ಒಂದು ಕಂದರ

ಕಾಣಿಸುವುದು. ಅದೇ ಮಾರ್ಗವಾಗಿ ಸ್ವಲ್ಪದೂರ ಸಾಗಿದರೆ ಎಡಬದಿಯಲ್ಲಿ ಒಂದು ಆಳವಾದ ಕೊಳವಿದ್ದು ಆ ಕೊಳವನ್ನು ಹುಣಸೆ ಕೊಳವೆಂದು ಕರೆಯುತ್ತಾರೆ. ಈ ಕೊಳದ ಮಡಿಲಲ್ಲಿ ಹುಣಸೆ ಮರಗಳ ಸಂಖ್ಯೆ ಹೆಚ್ಚಾಗಿ ಇರುವುದರಿಂದ ಅದಕ್ಕೆ ಹುಣಸೆಕೊಳ್ಳ ಎಂಬ ಹೆಸರು ಬಂದಿದೆ. ಈ ಕೊಳದ ಎಡೆಯಲ್ಲಿ ಶ್ರೀ ಸಿದ್ರಾಮೇಶ್ವರ ಪಡಿ ಇದ್ದು, ಆ ಪಡಿಯು ಇಂದು ಕಣ್ಣುಕಪ್ಪಡಿಗಳು ವಾಸಿಸುವ ಆಗರವಾಗಿದೆ. ಆ ಕಣ್ಣು ಕಪ್ಪಡಿಗಳ ಹಿಕ್ಕೆಯನ್ನು ಕಪ್ಪತ್ತಗಿರಿಯ ಸುತ್ತಲಿನ ಗ್ರಾಮದವರು ತಮ್ಮ ಬೆಳೆಗಳಿಗೆ ಮೇಲು ಗೊಬ್ಬರವಾಗಿ ಬಳಸಲು ತರುತ್ತಿದ್ದರು. ಇತ್ತೀಚೆಗೆ ಆಳವಾದ ಕೊಳದಲ್ಲಿ ಪ್ರಾಣಿಗಳ ಭೀತಿಯಿಂದ ಅದು ಅವರಿಗೆ ಲಭ್ಯವಾಗುವುದಿಲ್ಲ. ಅದೇ ಬೆಟ್ಟದ ಸಾಲಿನಲ್ಲಿ ಆಳವಾದ ಕಂದರದಲ್ಲಿ ಬೆಂಡೆಕೊಳ್ಳ ಕಾಣಿಸುವುದು. ಈ ಸುಂದರವಾದ ಕಂದರದ ಅಂತರಾಳದಲ್ಲಿ ಮಂಜಿನ ಡೋಣಿ ಇದ್ದು ಅದು ಸೊರಟೂರು ಗ್ರಾಮದಿಂದ ೫ ಕಿ.ಮೀ ದೂರವಿದ್ದು ಅದರ ಎರಡೂ ಪಕ್ಕದಲ್ಲಿ ಉಪ್ಪಿನಪಡಿ ಇದೆ. ಮಂಜಿನ ಡೋಣಿಯು ಚಿರಕಾಲ ತಿಳಿನೀರಿನಿಂದ ತುಂಬಿಕೊಂಡಿದ್ದು ಇದು ದಿವಸಕ್ಕೆ ಮೂರು ತರಹದ ಬಣ್ಣಗಳನ್ನು ಹೊಂದುತ್ತದೆ ಎಂಬುದು ಅಲ್ಲಿನ ಜನರ ನಂಬಿಕೆಯಾಗಿದೆ. ಶಿವಯೋಗಿಗಳ ಅಭಿಪ್ರಾಯದಂತೆ ಉಪ್ಪಿನ ಪಡಿಯಲ್ಲಿ ಕಲ್ಲಿನ ಪದರಿನ ಎಳೆಗಳಲ್ಲಿ ಉಪ್ಪು ಉಗಮಗೊಳ್ಳುತ್ತಿದ್ದು ಆ ಬೆಟ್ಟದ ಒಡಲಿನಲ್ಲಿ ಹರಿದು ಬರುವ ಆ ಉಪ್ಪಿನಲ್ಲಿ ಔಷಧಿಯ ಗುಣಾಂಶವಿದೆ. ಆದ್ದರಿಂದ ಆ ಪಡಿಯ ಉಪ್ಪು ತಿಂದರೆ ಮುಪ್ಪಿಲ್ಲ ಕಪ್ಪತ್ತಗಿರಿಯ ಸೊಪ್ಪು ತಿಂದರೆ ಸಾವಿಲ್ಲ.[೫೨] ಎಂಬುದು ಕಪ್ಪತ್ತಗಿರಿಯ ಸುತ್ತಲಿನ ಗ್ರಾಮದ ಜನತೆಯ ಆಡುನುಡಿಯಾಗಿದೆ.

### ಕಪ್ಪತ್ತಗಿರಿಯ ಗಂಗಾದೇವಿ ಬಾವಿ

ಗಂಗಾದೇವಿ ಬಾವಿಯು ಮಾರುತಿ ದೇವಸ್ಥಾನದ ಸಮೀಪದಲ್ಲಿ ಕಂಡುಬರುತ್ತದೆ. ಶ್ರೀ ಗಂಗಾದೇವಿಯ ಸನ್ನಿಧಿಗೆ ಸಾವಿರಾರು ಭಕ್ತರು ಸ್ನಾನಕ್ಕಾಗಿ ಬರುತ್ತಾರೆ. ಜಾತ್ರಾ ದಿನಗಳಲ್ಲಂತೂ ಅತ್ಯಧಿಕ ಭಕ್ತರು ಸೂರ್ಯೋದಯದ ಮುನ್ನ ಎದ್ದು ಗಂಗಾದೇವಿಯ ನೀರಿನಿಂದ ಸ್ನಾನ ಮಾಡಿ ಪೂಜೆ ಪುನಸ್ಕಾರ ಪೂರೈಸಿಕೊಂಡು ಮುಂದೆ ಪ್ರಯಾಣ ಬೆಳೆಸುತ್ತಾರೆ.

ಈ ಬಾವಿಗೆ ಇಳಿಯಲು ನೂರೊಂದು ಮೆಟ್ಟಿಲುಗಳಿದ್ದು ವೃತ್ತಾಕಾರವಾಗಿದೆ. ಗಂಗಾದೇವಿ ಸಾನ್ನಿಧ್ಯದಲ್ಲಿ ಭಕ್ತರು ಪವಿತ್ರ ಸ್ನಾನದಿಂದ ದೇಹಕ್ಕೆ ಭಾರವಾದ ಪಾಪ ಕರ್ಮಗಳೆಲ್ಲವುಗಳಿಂದ ಮುಕ್ತರಾಗಿ ಒಳ್ಳೆಯ ಉತ್ಸಾಹದಿಂದ ಬೆಟ್ಟವನ್ನು ಹತ್ತುತ್ತಾರೆ. ಈ ಬಾವಿಯು ೫೦ ಅಡಿ ಆಳವನ್ನು ಹೊಂದಿದ್ದು ಇದು ೪೦ ಅಡಿ ಸುತ್ತಳತೆಯನ್ನು ಹೊಂದಿದೆ.

### ಜಂತ್ಲಿಯ ಕೆರೆಕೋಡಿ ಬಸವಣ್ಣನ ಹೊಂಡ

ಈ ಗ್ರಾಮವು ಗದಗ ಜಿಲ್ಲಾಕೇಂದ್ರದಿಂದ ಆಗ್ನೇಯ ದಿಕ್ಕಿಗೆ ೨೩ ಕಿ.ಮೀ. ಮುಂಡರಗಿ ತಾಲ್ಲೂಕುಕೇಂದ್ರದಿಂದ ೨೮ಕಿ.ಮೀ. ಅಂತರದಲ್ಲಿದೆ. ಇದು ಗ್ರಾಮದಿಂದ ಪೂರ್ವ ದಿಕ್ಕಿನಲ್ಲಿ

ಕಂಡುಬಂದಿದ್ದು, ಇದರ ಸಮೀಪದಲ್ಲಿ ಬಸವೇಶ್ವರನ ಪಾದಗಟ್ಟಿ ಹಾಗೂ ಪ್ರಾಚೀನವಾದ ಹನುಮಂತನ ದೇವಾಲಯವು ಕಂಡುಬರುತ್ತದೆ. ಇದು ಒಟ್ಟು ೨೨ ಅಡಿ ಆಳ, ೮x೮ (ಉದ್ದxಅಗಲ) ಚೌಕಾಕಾರದ ಆಕಾರದಲ್ಲಿ ಕಂಡುಬರುತ್ತದೆ. ಇದನ್ನು ಬೃಹತ್ತಾದ ಬಂಡೆಗಳನ್ನು ಉಪಯೋಗಿಸಿ ನಿರ್ಮಾಣ ಮಾಡಿದ್ದಾರೆ. ಗ್ರಾಮದ ಜಾತ್ರೆಯ ಸಂದರ್ಭದಲ್ಲಿ ಲಘು ರಥವನ್ನು ಇಲ್ಲಿಗೆ ಕರೆತಂದು ಈ ಹೊಂಡಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಹೊಂಡದ ನೀರನ್ನು ಊರಿನ ಜನರು ಬಟ್ಟೆ ತೊಳೆಯಲು ಹಾಗೂ ಇನ್ನಿತರ ಕೆಲಸ ಕಾರ್ಯಗಳಿಗೆ ಉಪಯೋಗಿಸುತ್ತಾರೆ.

**ದೇವಿಹಾಳದ ಹೊಂಡಗಳು:**

ಈ ಗ್ರಾಮವು ಶಿರಹಟ್ಟಿಯಿಂದ ೧೪ ಕಿ.ಮೀ. ಅಂತರದಲ್ಲಿದೆ. ಗ್ರಾಮದ ಪಶ್ಚಿಮ ಭಾಗದಲ್ಲಿ ಎತ್ತರದ ಗುಡ್ಡದ ಮೇಲೆ ಶಿವಾಜಿಯ ಕೋಟೆ ಇದ್ದು, ಇದರೊಳಗೆ ಹೊಳಲಮ್ಮನ ಗುಡಿ ಕಂಡುಬರುತ್ತದೆ. ಇದಕ್ಕೆ ಸಂಬಂಧಿಸದ ೫ ಹೊಂಡಗಳು ಶಿವಾಜಿಯ ಆಡಳಿತದ ಕಾಲಾವಧಿಯಲ್ಲಿ ನಿರ್ಮಾಣಗೊಂಡಿವೆ ಎಂದು ಅಲ್ಲಿಯ ಜನರ ಅಭಿಪ್ರಾಯವಾಗಿದೆ. ಅವುಗಳೆಂದರೆ ಸ್ನಾನದ ಹೊಂಡ, ಮುಸರೆ ಹೊಂಡ, ಮದ್ದಿನ ಹೊಂಡ, ಆನೆ ಹೊಂಡ, ಮುಟ್ಟುದೋಷ ಹೊಂಡ ಮತ್ತು ಬಟ್ಟಲು ಬಾವಿಗಳು ಪ್ರಮುಖವಾಗಿವೆ. ಎರಡು ಬಾವಿಗಳು ವೃತ್ತಾಕಾರದಲ್ಲಿದ್ದು, ಅವುಗಳಿಗೆ ಗ್ರಾನೈಟ್ ಕಲ್ಲುಗಳನ್ನು ಬಳಸಿ ನಿರ್ಮಿಸಿದ್ದಾರೆ. ಉಳಿದ ಮೂರು ಬಾವಿಗಳು ನೈಸರ್ಗಿಕ ಕಲ್ಲಿನಲ್ಲಿ ನಿರ್ಮಾಣಗೊಂಡಿವೆ. ಈ ಪರಿಸರದಲ್ಲಿ ಹೊಳಲ್ಲಮ್ಮ ದೇವಾಲಯವು ತುಂಬಾ ಪ್ರಸಿದ್ಧವಾಗಿದೆ. ಇದು ಗರ್ಭಗೃಹ, ಅಂತರಾಳ. ನವರಂಗ, ಮುಖಮಂಟಪಗಳನ್ನು ಒಳಗೊಂಡಿರುತ್ತದೆ. ಗರ್ಭಗೃಹದಲ್ಲಿ ಪ್ರಾಚೀನವಾದ ಹೊಳಲ್ಲಮ್ಮನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಿಯ ವಿಗ್ರಹವು ವಿಜಯನಗರೋತ್ತರ ಶೈಲಿಯಲ್ಲಿದೆ. ಇದು ಆದಿಲಕ್ಷ್ಮಿಯ ಅವತಾರವೆಂದು ಕರೆಯುತ್ತಾರೆ. ಆದರೆ ದೇವಿಯ ಮೂರ್ತಿಗೆ ವಸ್ತ್ರ ಮತ್ತು ಹೂವುಗಳಿಂದ ಅಲಂಕರಿಸಿರುವುದರಿಂದ ಇದರ ಮೂಲಸ್ವರೂಪ ಗೋಚರಿಸುವುದಿಲ್ಲ. ಈ ಪರಿಸರದ ಸುತ್ತಮುತ್ತಲಿನ ಪ್ರದೇಶವು ಜನಪದ ಮತ್ತು ಮೌಖಿಕ ಪರಂಪರೆಯಲ್ಲಿ ರಣಮಲ್ಲಖಾನ್ ಎಂಬ ಮುಸ್ಲಿಂ ಅರಸರ ಅಧೀನದಲ್ಲಿತ್ತು.[೫೩] ಈ ದೇವಾಲಯದ ರಕ್ಷಣೆಗಾಗಿ ಶಿವಾಜಿಯು ೩೫ ಎಕರೆ ವಿಸ್ತೀರ್ಣದಲ್ಲಿ ೮ ಹುಡೆವುಗಳನ್ನು ಒಳಗೊಂಡಂತೆ ಬೃಹತ್ತಾದ ಕೋಟೆಯನ್ನು ನಿರ್ಮಾಣ ಮಾಡಿರುತ್ತಾನೆ. ಈ ದೇವಾಲಯಕ್ಕೆ ಪ್ರತಿ ಅಮವಾಸ್ಯೆಯಲ್ಲಿ ನೂರಾರು ಸಂಖ್ಯೆಯಲ್ಲಿ ಭಕ್ತಾದಿಗಳು ಆಗಮಿಸಿ ದೇವಿ ಆಶೀರ್ವಾದವನ್ನು ಪಡೆದು ಪುನೀತರಾಗುತ್ತಾರೆ. ಈ ದೇವಾಲಯಕ್ಕೆ ಬರುವ ಭಕ್ತಾದಿಗಳ ಅನುಕೂಲಕ್ಕಾಗಿ ಪ್ರತ್ಯೇಕವಾಗಿ ಹೊಂಡಗಳನ್ನು ನಿರ್ಮಿಸಿದ್ದಾರೆ.

**ಸ್ನಾನದ ಹೊಂಡ (ಬಾರಿ ಹೊಂಡ) :**

ಇದು ದೇವಾಲಯದ ಹಿಂದೆ ಕಂಡುಬರುತ್ತದೆ. ಈ ದೇವಾಲಯಕ್ಕೆ ಬರುವ ಭಕ್ತಾದಿಗಳು ಇದರಲ್ಲಿ ಸ್ನಾನ ಮಾಡಿ ದೇವಿ ದರ್ಶನವನ್ನು ಪಡೆಯುತ್ತಾರೆ. ಇದು ಸುಮಾರು ೫ ಅಡಿ ಆಳ

ಇದ್ದು, ೨೦x೩೦ ಅಡಿ ವಿಸ್ತೀರ್ಣವನ್ನು ಹೊಂದಿದೆ. ಇದನ್ನು ನೈಸರ್ಗಿಕ ಕಲ್ಲಿನಲ್ಲಿ ಕೊರೆದು ನಿರ್ಮಾಣ ಮಾಡಿದ್ದಾರೆ. ಇದರಲ್ಲಿರುವ ನೀರು ಬೇಸಿಗೆಯಲ್ಲಿ ಬತ್ತುವುದಿಲ್ಲ ಎಂದು ಸ್ಥಳೀಯರು ತಿಳಿಸುತ್ತಾರೆ.

**ಮುಸರಿ ಹೊಂಡ :**

ಇದು ದೇವಾಲಯದ ಎಡಬದಿಗೆ ಬಂದರೆ ಈ ಹೊಂಡ ಕಾಣುತ್ತದೆ. ಇದು ಎತ್ತರವಾಗಿದ್ದು, ಇದಕ್ಕೆ ಗೋಡೆಯನ್ನು ನಿರ್ಮಿಸಿದ್ದಾರೆ. ಪ್ರತಿ ತಿಂಗಳು ಅಮವಾಸ್ಯೆ ಮತ್ತು ಜಾತ್ರೆಯ ಸಂದರ್ಭದಲ್ಲಿ ಆಗಮಿಸುವ ಸಾವಿರಾರು ಭಕ್ತಾದಿಗಳಿಗೆ ಅನುಕೂಲಕ್ಕಾಗಿ ಅವರು ಊಟ ಮಾಡಿದ ಮೇಲೆ ಪಾತ್ರೆಗಳನ್ನು ಇದೇ ಹೊಂಡದಲ್ಲಿ ತೊಳೆಯಲು ಪ್ರಾರಂಭಿಸಿದ್ದರಿಂದ ಈ ಹೊಂಡಕ್ಕೆ ಮುಸುರಿ ಹೊಂಡ ಎಂದು ಹೆಸರು ಬಂದಿರಬೇಕು. ಇವತ್ತಿಗೆ ಕೂಡ ಇದರ ಆಚರಣೆ ಇದೆ. ಇದರ ಉದ್ದೇಶ ಊಟ ಮಾಡಿದ ಅನ್ನ ಯಾರು ತುಳಿಯಬಾರದು ಎಂಬ ಕಾರಣದಿಂದ ಇದನ್ನು ನಿರ್ಮಿಸಿರಬೇಕು.

**ಆನೆ ಹೊಂಡ :**

ಈ ಹೊಂಡವು ದೇವಾಲಯದ ಪಶ್ಚಿಮ ದಿಕ್ಕಿನಲ್ಲಿ ಕಂಡು ಬರುತ್ತದೆ. ಇದರ ನೀರು ಯಾವಾಗಲೂ ತಿಳಿ ನೀಲಿ ಆಕಾರದಲ್ಲಿ ಇರುವುದು ವಿಶೇಷವಾಗಿದೆ. ಇದು ೧೫ ಅಡಿ ಆಳವನ್ನು ಹೊಂದಿದ್ದು. ಶಿವಾಜಿ ಆಳ್ವಿಕೆಯ ಕಾಲದಲ್ಲಿ ಇಲ್ಲಿ ಆನೆಗಳಿಗೆ ನೀರು ಕುಡಿಸಲು ಮತ್ತು ಅವುಗಳಿಗೆ ಮೈ ತೊಳೆಯಲು ಇದೇ ನೀರನ್ನು ಉಪಯೋಗಿಸುತ್ತಿದ್ದರಿಂದ ಇದಕ್ಕೆ ಆನೆ ಹೊಂಡ ಎಂದು ಹೆಸರು ಬಂದಿರಬೇಕು ಎಂಬದು ಅಲ್ಲಿಯ ಜನರಿಂದ ತಿಳಿದುಬರುತ್ತದೆ.

**ಮುಟ್ಟುದೋಷ ಹೊಂಡ :**

ಇದು ದೇವಾಲಯದ ದಕ್ಷಿಣ ದಿಕ್ಕಿನಲ್ಲಿ ಕಂಡುಬರುತ್ತದೆ. ಭಕ್ತಾದಿಗಳಿಗೆ ಏನಾದರೂ ದೋಷಗಳಿದ್ದರೆ ಅವರು ಈ ಹೊಂಡದಲ್ಲಿ ಸ್ನಾನ ಮಾಡಿದರೆ ದೋಷಮುಕ್ತವಾಗುತ್ತವೆ ಎಂಬ ನಂಬಿಕೆ ಜನರಲ್ಲಿ ಮೂಡಿದೆ. ಈ ಪರಿಸರದಲ್ಲಿ ಯಾರಿಗಾದರೂ ವಿಷಜಂತುಗಳು ಕಚ್ಚಿದಾಗ ಇಲ್ಲಿ ಬಂದು ಇದರ ನೀರನ್ನು ಸ್ವೀಕರಿಸಿದರೆ ಅಥವಾ ಸ್ನಾನ ಮಾಡಿ ದೇವಿ ದರ್ಶನ ಪಡೆದರೆ ಅದರಿಂದ ಮುಕ್ತವಾಗುತ್ತಾರೆ ಎಂಬುದು ಜನರ ನಂಬಿಕೆ.

**ಮದ್ದಿನ ಹೊಂಡ :**

ಇದು ದೇವಾಲಯದ ಪೂರ್ವ ದಿಕ್ಕಿನಲ್ಲಿ ಕಂಡುಬರುತ್ತದೆ. ಈ ಐದು ಹೊಂಡಗಳಲ್ಲಿ ಅತ್ಯಂತ ದೊಡ್ಡ ಹೊಂಡ ಎಂದರೆ ಮದ್ದಿನ ಹೊಂಡ. ಈ ಹೊಂಡದಲ್ಲಿ ಮೊದಲಿಗೆ ಶಿವಾಜಿಯ ಕಾಲದಲ್ಲಿ ಮದ್ದುಗಳನ್ನು ಶೇಕರಿಸಲು ಉಪಯೋಗಿಸುತ್ತಿದ್ದನು, ನಂತರ ಇದರಲ್ಲಿ ನೀರು ನಿಲ್ಲಲು

ಅರಂಭಗೊಂಡ ನಂತರ ಇದಕ್ಕೆ ಮದ್ದಿನ ಹೊಂಡ ಎಂಬ ಹೆಸರು ಬಂದಿರಬೇಕು. ಈ ಹೊಂಡಕ್ಕೆ ಸುತ್ತಲು ಬೃಹತ್ತದಾದ ಕಲ್ಲಿನ ಗೋಡೆಯನ್ನು ನಿರ್ಮಿಸಿದ್ದಾರೆ. ಇವೊತ್ತಿಗೂ ಇದು ಉತ್ತಮ ರೀತಿಯಲ್ಲಿ ಇದೆ. ಈ ಹೊಂಡದ ನೀರು ಬೇಸಿಗೆ ಕಾಲದಲ್ಲಿ ಬತ್ತುವುದಿಲ್ಲ ಎಂದು ಅಲ್ಲಿಯ ಸ್ಥಳೀಯರ ಅಭಿಪ್ರಾಯವಾಗಿದೆ.

**ಹೊಳೆ ಆಲೂರಿನ ಎಚ್ಚರೇಶ್ವರ ಮಠದ ಬಾವಿ :**

ಕರ್ನಾಟಕದ ಉತ್ತರ ಭಾಗದ ಧಾರವಾಡ ಜಿಲ್ಲೆಯ ಉತ್ತರ ಗಡಿಗುಂಟ ಹರಿದುಬಂದ ಮಲಪ್ರಭಾ ನದಿಯ ಬಲಪಾರ್ಶ್ವದಲ್ಲಿ ಹಬ್ಬಿಕೊಂಡ ಹೊಳೆಆಲೂರು ಹಿಂದೆ ಚಾರಿತ್ರಿಕವಾಗಿ ವಟಪುರವೆಂಬ ಹೆಸರಿನಲ್ಲಿ ಬಹಳ ಪ್ರಸಿದ್ಧವಾಗಿತ್ತು. ಬೆಳ್ವಲನಾಡಿನಲ್ಲಿ ಇದು ಕಾಳಿನ ಕಣಜವಾಗಿದ್ದ ಈ ನಾಡು ತನ್ನ ಫಲವತ್ತಾದ ಮಣ್ಣಿನ ಶಕ್ತಿಯಾಗಿ ಫಲಸಂಪತ್ತಿನ ಆಗರವಾಗಿತ್ತು. ಇಂಥ ನಾಡಿನಲ್ಲಿ ನೆಲೆಸಿದ ಈ ಮಹಾತ್ಮರು ಸಮಾಜದಲ್ಲಿಯ ಕೆಲವು ಅನಿಷ್ಟಗಳನ್ನು ದೂರ ಮಾಡಿದಲ್ಲದೆ ಅಜ್ಞಾನ ಅಂಧಕಾರಗಳನ್ನು ತೊಲಗಿಸಿ ತುಂಬಾ ಹೆಸರು ಗಳಿಸಿದ ಕಥೆಗಳಿಗಿಂತೂ ರೋಮಾಂಚನಗೊಳ್ಳುವಂತಿದೆ. ಈಗ ಸುಮಾರು ೩೦೦ ವರ್ಷಕ್ಕೆ ಮುನ್ನ ತಮ್ಮ ಹಲವಾರು ಚಮತ್ಕಾರ ಕಾರ್ಯಗಳ ಮೂಲಕ ಜನರಲ್ಲಿ ತಿಳುವಳಿಕೆ ಮೂಡಿಸಿ ತಮ್ಮ ತಮ್ಮಲ್ಲಿರುವ ದೋಷಾಸೂಯೆಗಳನ್ನು ಕೈಬಿಡುವಂತೆ ಪ್ರೇರೇಪಿಸಿ ಮಾರ್ಗದರ್ಶನ ಮಾಡಿ ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವದಿಂದಾಗಿ ಶ್ರೀ ಎಚ್ಚರೇಶ್ವರರು ತುಂಬಾ ಪೂಜ್ಯನಿಯ ವ್ಯಕ್ತಿಎನಿಸಿದ್ದರಲ್ಲದೆ ಹೊಳೆಆಲೂರಿನ ಕುಲದೈವರಾಗಿದ್ದಾರೆ.

ಈ ಮಠದ ಮುಂದೆ ಒಂದು ದೊಡ್ಡದಾದ ವೃತ್ತಾಕಾರವಾದ ಬಾವಿಯನ್ನು ನಿರ್ಮಿಸಿದ್ದಾರೆ. ಇದು ಆಧುನಿಕ ಕಟ್ಟಡ ಶೈಲಿಯನ್ನು ಒಳಗೊಂಡಿದ್ದರಿಂದ ಇದು ಆಧುನಿಕ ಕಾಲದಲ್ಲಿ ನಿರ್ಮಾಣಗೊಂಡಿರಬಹುದು. ಮಠಕ್ಕೆ ಬಳಸಿದ ಕಲ್ಲುಗಳನ್ನು ಈ ಬಾವಿಗೆ ಬಳಸಿದ್ದರಿಂದ ಈ ಬಾವಿಯನ್ನು ಅದೇ ಕಾಲದಲ್ಲಿ ನಿರ್ಮಾಣಗೊಂಡಿದೆ ಎಂದು ಸ್ಪಷ್ಟವಾಗುತ್ತದೆ. ಈ ಬಾವಿಯ ನೀರನ್ನು ಮೊದಲಿಗೆ ಮಠದ ಪೂಜಾಕಾರ್ಯಗಳಿಗೆ ಬಳಸುತ್ತಿದ್ದರು. ನಂತರ ಕ್ರಮೇಣವಾಗಿ ಹೊಳೆಯ ನೀರನ್ನು ಬಳಸಲು ಪ್ರಾರಂಭಿಸಿದರು. ಆದರೆ ಪ್ರಸ್ತುತವಾಗಿ ಈ ಬಾವಿಯಲ್ಲಿ ಜಲವಿರುವುದಿಲ್ಲ ಆದ್ದರಿಂದ ಈ ಬಾವಿ ಬತ್ತಿ ಹೊಗಿದ್ದರಿಂದ ಈಗ ಕಸಕಡ್ಡಿಗಳಿಂದ ತುಂಬಿದೆ. ಊರಿನ ಗ್ರಾಮಸ್ತರು ಹಾಗು ಪಂಚಾಯಿತಿಯವರು ಇದರ ಕಡೆ ಗಮನಹರಿಸಿದರೆ ನೀರಿನ ಜಲ ಉಕ್ಕಬಹುದು.

**ವರವಿಯ ಅಂಬಲಿ ಹೊಂಡ :**

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ವರವಿ ಗ್ರಾಮವು ಮೋನಪ್ಪಯ್ಯನ ಪ್ರಮುಖ ಜಾಗೃತ ಸ್ಥಳಗಳಲ್ಲಿ ಒಂದಾಗಿದೆ. ಇಲ್ಲಿ ಹಿಂದು ಮುಸ್ಲಿಂ ವಾಸ್ತುಶಿಲ್ಪದ ಮೋನಪ್ಪಯ್ಯನ ವಿಶಾಲವಾದ

ಮಂದಿರವಿದೆ. ಬಾದಷಾಹನ ಆಡಳಿತಾಧಿಕಾರಿ ಒಬ್ಬನಿಂದ ಈ ಗುಡಿ ನಿರ್ಮಾಣಗೊಂಡಿರಬೇಕು. ಬಿಜಾಪುರದ ಬಾದಷಾಹ ಈ ದೇವಾಲಯವನ್ನು ಕಟ್ಟಿಸಿದನೆಂದು ಜನ ಹೇಳುತ್ತಾರೆ. ಪ್ರತಿ ವರ್ಷ ಶ್ರಾವಣ ಮಾಸದ ಕೊನೆಯ ಸೋಮವಾರದಿಂದ ಐದು ದಿನಗಳ ವರೆಗೆ ವೈಶಿಷ್ಟ್ಯಪೂರ್ಣವಾದ ದೊಡ್ಡ ಜಾತ್ರೆ ಇಲ್ಲಿ ಜರುಗುತ್ತದೆ. ಮೋನಪ್ಪಯ್ಯನ ಕಾವ್ಯಗಳ ವಿವರಣೆಯಲ್ಲಿ ಗ್ರಾಮದ ಹೊರವಲಯದ ಹಳ್ಳದ ದಂಡೆಯಲ್ಲಿ ಗುಂಡಿ ತೋಡಿ ಆ ಊರು ಮಹಿಳೆಯರಿಗೆ ನೀರು ತೋರಿಸಿ ಊರು ಜನರಿಂದ ಹೊಗಳಿಸಿಕೊಳ್ಳುತ್ತಾನೆ. ಆ ಗುಂಡಕ್ಕೆ ಅಂಬಲಿ ಗುಂಡ (ಆಮ್ಲತೀರ್ಥ)[೫೪] ಎಂದು ಕರೆಯುತ್ತಾರೆ. ತಾನು ಎಡವಿದ ಕಲ್ಲಿನಲ್ಲಿ ಲಿಂಗದ ಕುರುಹು ತೋರಿಸಿ ಅದನ್ನು ಪೂಜೆಗೊಳ್ಳುವಂತೆ ಮಾಡುತ್ತಾನೆ. ಗ್ರಾಮದ ಸಮೀಪದ ಗುಡ್ಡದಲ್ಲಿ ಕುರಿ ಕಾಯ್ದ ಕುರುಹಾಗಿ ಕುರಿ ಹೆಜ್ಜೆ ಗುರುತುಗಳು ಕಾಣಸಿಗುತ್ತವೆ. ಮೋನಪ್ಪಯ್ಯನ ವಚನಗಳಲ್ಲಿ ಅಂಬಲಿ ಹೊಂಡದ ಬಗ್ಗೆ ಪ್ರಸ್ತಾಪವಿದೆ.

"ವರವಿಯ ಪುರದಲ್ಲಿರುವ ಕಲ್ಲೆಲ್ಲ ದೇವರು  
ಹರಿಯುವ ಸಾಗರವೆಲ್ಲ ಘನ ತೀರ್ಥವೆಂದಿನ್ನು  
ಕಿರಿಯನು ಚೆನ್ನಬಸವಣ್ಣ"[೫೫]

ಮುಂತಾದ ವಚನಗಳಲ್ಲಿ ತಾನು ನೆಲೆಸಲು ವರವಿಗೆ ಬಂದಿರುವ ಉದ್ದೇಶದಿಂದ, ವರವಿಯ ಮಹತ್ವವನ್ನು ಮೋನಪ್ಪಯ್ಯ ಹೇಳಿಕೊಂಡಿದ್ದಾನೆ. ತನ್ನ ಸಂಚಾರದ ವೇಳೆಯಲ್ಲಿ ಅನೇಕ ಕಡೆಗಳಲ್ಲಿ ನೀರಿನ ಐತಿಹ್ಯದ ಕುರಿತು ಮಾಹಿತಿಯಿದೆ.

ಜಕ್ಕಮ್ಮಯೆನುತಲೆ ಜಲಧಿಯ ಪೊಕ್ಕನು  
ದಕ್ಕಮ್ಮ ಯನಗೆ ಎನುತಲೆ ಶರಣೆಂದು  
ಚಿಕ್ಕನು ಚೆನ್ನ ಬಸವಣ್ಣ ಶರಣೆನಲಿಕ್ಕೆ  
ಉಕ್ಕುತ ಬಂದಳು ಜಲದಮ್ಮ"[೫೬]

ಎಂಬ ಈ ವಚನದಲ್ಲಿ ನೀರಿನ ಬಗ್ಗೆ ಮಾಹಿತಿಯಿದೆ. ಮೋನಪ್ಪಯ್ಯನು ತೋರಿದ ಅಂಬಲಿ ಹೊಂಡ ವರವಿಯಲ್ಲಿ ಈಗಲೂ ಇದೆ.

ಇನ್ನೊಂದು ಐತಿಹ್ಯದ ಪ್ರಕಾರ– ವರವಿ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ದಂಡೆಯ ಮೇಲೆ ವಯೋವೃದ್ಧ ಸಾಧುವಿನ ವೇಷದಲ್ಲಿ ಮೌನೇಶ್ವರ ಸ್ವಾಮಿಯು ಒಣಗಿದ ಹಳ್ಳದ ಭವಣೆ ಕಂಡು ಏನೋ ಯೋಚಿಸುತ್ತಾ ಕುಳಿತಿದ್ದನು. ಬೇಸಿಗೆ ಬಂದಿತೆಂದರೆ ಅಲ್ಲಿ ಕುಡಿಯುವ ನೀರಿನ ಬರವೇ ಕಾಡುತ್ತಿದ್ದರಿಂದ ಹಳ್ಳದಲ್ಲಿ ಒರತೆಯನ್ನು ತಗೆದು, ಪರಟೆ–ಲೋಟದಿಂದ ಸೋಸಿ ಒಂದು ಕೊಡ ನೀರು ಒಯ್ಯಬೇಕಾದರೆ ಒಂದೊಂದು ಗಂಟೆಯೇ ಬೇಕಾಗುತ್ತಿತ್ತು. ಹತ್ತಾರು ಜನರಿರುವ ಕುಟುಂಬಕ್ಕೆ ಕುಡಿಯಲು ಬೇಕಿರುವ ಹತ್ತಾರು ಕೊಡ ನೀರು ಸಂಗ್ರಹಿಸಬೇಕಾದರೆ ಒಬ್ಬಂಟಿಗ ಸೊಸೆಯಾದರೂ

ಮನೆಗೆಲಸ ನೋಡಿಕೊಂಡು ಮಾಡಬೇಕೆಂದರೆ ತುಂಬಾ ಆಯಾಸಪಡಬೇಕಿತ್ತು. ಆಗ ಮೌನೇಶ್ವರ ಸಾಧುವು ಚಿಲುಮೆಗೆ ತಂಬಾಕು ತುಂಬಿ ಸೇದಲು ಬೆಂಕಿ ಇಲ್ಲದೇ ಬರುವವರ ದಾರಿಯನ್ನೇ ನಿರೀಕ್ಷಿಸುತ್ತಿದ್ದನು. ಎರಡು ಗಂಟೆ ಕಳೆದರೂ ಒಬ್ಬ ಹೆಣ್ಣುಮಗಳ ವಿನಃ ಬೇರಾವ ಗಂಡಸು ಕಾಣಲಿಲ್ಲ. ಕೊನೆಗೆ ಅನಿವಾರ್ಯತೆಯಿಂದ ಆ ಸ್ತ್ರೀಯನ್ನೇ ಮಾತನಾಡಿಸಬೇಕಾಯಿತು. ಅಮ್ಮ ಈ ಮುದಿ ಸಾಧುವು ಚಿಲುಮೆಯನ್ನು ಸೇದಬೇಕೆಂದು ಬಯಸಿ ಮೂರು ತಾಸಿನಿಂದಲೂ ಕುಳಿತಿದ್ದಾನೆ. ನೀನಷ್ಟು ಬೆಂಕಿನನ್ನು ತಂದುಕೊಟ್ಟರೆ ನಿನ್ನ ಕಷ್ಟ ಪರಿಹಾರವಾಗುವಂತಹ ಒಂದು ಕಾರ್ಯವನ್ನು ನೆರವೇರಿಸಿಕೊಡುವೆ. ನನ್ನ ಬಯಕೆ ಈಡೇರಿಸುತ್ತಿಯಾ ತಾಯಿ ಎಂದು ಕೇಳಿದನು. ಮನೆಗೆ ನೀರು ಹೊತ್ತು ಹೊತ್ತು ಮನೆಯವರೆಗೆ ರೊಟ್ಟಿ ಬಡಿದು ಬಡಿದು ಸುಸ್ತಾಗಿದ್ದ ಒಬ್ಬರ ಮನೆಯ ಸೊಸೆ ಈ ಸಾಧುವಿಗೆ ಬೆಂಕಿ ತರುವ ಶ್ರಮ ಬೇರೆ ವಹಿಸಲು ಸಾಧ್ಯವಾದೀತೆ? ನೋಡಪ್ಪ ನಾನು ಒಬ್ಬ ಅಧಿನಳಾದ ಸೊಸೆ; ನನ್ನ ಮನೆಯ ಕೆಲಸಗಳನ್ನು ಪೂರೈಸಿ ಮಲಗಬೇಕಾದರೆ ಅರ್ಧ ರಾತ್ರಿ ಕಳೆದುಹೋಗುತ್ತದೆ. ಮತ್ತೆ ಬೆಳಿಗ್ಗೆ ಒಂದು ಜಾವ ಮೊದಲೇ ಎದ್ದು ಸ್ನಾನ ಮಾಡಿ ರೊಟ್ಟಿ ಬಡಿಯಲಾರಂಬಿಸಬೇಕು. ಆಗ ನೀರು ತುಂಬುವುದನ್ನು ಬಿಟ್ಟು ನಿನ್ನ ಬೆಂಕಿಗಾಗಿ ಮನೆಗೆ ಹೋದರೆ ಮನೆಯವರು ಬೆಂಕಿ ಬೆಂಕಿ ಆದಾರು ಎಂದು ಲಿಂಗವಂತ ರಡ್ಡಿ ಮನೆತನದವರಾದ ಕೇಸಕ್ಕಿಯವರ ಸೊಸೆ ಜಕ್ಕವ್ವ ಹೇಳಿದಳು. ಅದನ್ನು ಕೇಳಿದ ಸದ್ಗುರು ಮೌನೇಶನು ನಿನ್ನ ಮನೆಗೆ ಹೋಗು ಬೆಂಕಿ ತರುವಷ್ಟರೊಳಗಾಗಿ ಒರತೆಯಿಂದ ನೀರೆತ್ತಿ ಕೊಡ ತುಂಬಿಸುತ್ತೇನೆ, ಮೌನೇಶ ನಿನಗೆ ಒಳ್ಳೆಯದು ಮಾಡುತ್ತಾನೆ ಹೋಗು ಎಂದನು. ಮೌನೇಶನ ಮಹಿಮೆಯನ್ನು ಕೇಳಿದವಳು ಎಂದಾದರೂ ಬೇಸರ ದುಃಖವಾದಾಗ ಮೌನೇಶ ನನ್ನ ಮೊರೆ ಕೇಳಿ ಕಾಪಾಡು ಎಂದು ಸ್ಮರಿಸುತ್ತಿರುವವಳು ಆದ ಜಕ್ಕವ್ವ ಚಕ್ಕನೇ ಬೆಂಕಿ ತರಲು ಮನೆಗೆ ಹೋದಳು.

ಆಗ ಮೌನ ಮುನಿ ಪುಂಗವನು ಗಂಗಾ ನಿನಗೊಂದು ಸಲ ಹೇಳಿದ್ದೆ, ನಾನು ಕರೆದಾಗ ಹರಿದು ಬರಬೇಕೆಂದು ಒಪ್ಪಿಕೊಂಡಂತೆ ಈಗ ನಾನು ಇರುವಲ್ಲಿಗೆ ಬಾ ಎಂದು ಕಠಾರದಿಂದ ಬಂಡೆಗಲ್ಲಿಗೆ ತಿವಿಯಲು ಪ್ರವಾಹ ಆಗಮಿಸಿತು. ನೀರು ಬೀಳುವಲ್ಲಿ ಒಂದು ಕೊಡ ಮುಳುಗುವಷ್ಟು ಹೊಂಡ ಮಾಡಿದನು. ಆಗ ಸಾಧ್ವಿ ಜಕ್ಕವ್ವ ಬೆಂಕಿ ತಂದು ಕೊಟ್ಟಳು. ಮಗಳೆ ಈ ಹೊಂಡದಿಂದ ಬೇಕಾದಷ್ಟು ನೀರನ್ನು ಕಷ್ಟವಿಲ್ಲದೇ ಒಯ್ಯಬಹುದು; ನಿನಗಾಗಿಯೇ ಕಾಶಿಯ ಗಂಗೆಯೇ ಆಗಮಿಸಿದ್ದಾಳೆ. ಅಲ್ಲದೇ ಈ ನೀರಿನಲ್ಲಿ ನುಚ್ಚನ್ನು ಸುರುವಿ ಬೆಂಕಿಯಿಲ್ಲದೇ ಒಲೆಯ ಮೇಲೆ ಇಟ್ಟರೂ ಮಧುರವಾಗಿ ಅಂಬಲಿ ಸಿದ್ಧವಾಗುವುದು. ಇದರಂತೆಯೇ ಅನುದಿನವು ಮಾಡಿಕೊಳ್ಳಬಹುದು ಎಂದು ಹೇಳಿ ಅದೃಶ್ಯನಾದನು. ಅಂದಿನಿಂದ ಮಾಡಲಾರಂಭಿಸಿದ ಅಂಬಲಿ ಅಮೃತಕ್ಕೂ ಮೀರಿದ ರುಚಿವುಳ್ಳದ್ದಾಗಿ ರುವುದನ್ನು ಅರಿತು ಸೊಸೆ ಜಕ್ಕವ್ವಳಲ್ಲಿ ವಿಚಾರಿಸಲಾಗಿ ಸಾಧುವಿನಿಂದಾದ ಘಟನೆಯನ್ನು ಸವಿಸ್ತಾರವಾಗಿ ನಿವೇದಿಸಿ ಇದು ಬಹುಶಃ ನನ್ನಪ್ಪ ಮೌನೇಶನ ಶಕ್ತಿಯೇ ಎಂದು ತಿಳಿದುಕೊಂಡಳು. ಅಂದಿನಿಂದ

ಅದಕ್ಕೆ ಅಂಬಲಿ ತೀರ್ಥವೆಂದೇ (ಅಮ್ಲ) ಕರೆಯಲಾರಂಭಿಸಿರುತ್ತಾರೆ. ಈ ತೀರ್ಥ ಈಗಲೂ ಇದೇ ಹೆಸರಿನಿಂದ ಕರೆಯಲ್ಪಡುತ್ತದೆ.

**ಬೆಂತೂರಿನ ಬೂದೀಶ್ವರ ಸ್ವಾಮಿಗಳ ಮಠದ ಬಾವಿ :**

ಗದಗದಿಂದ ಈ ಗ್ರಾಮವು ಸುಮಾರು ೨೮ ಕಿ.ಮೀ ಅಂತರದಲ್ಲಿ ಇದ್ದು, ಇದು ಗ್ರಾಮದಿಂದ ಪೂರ್ವದಿಕ್ಕಿನಲ್ಲಿದೆ. ಮಠದಿಂದ ಈ ಬಾವಿಯು ಈಶಾನ್ಯ ದಿಕ್ಕಿಗೆ ಕಂಡುಬರುತ್ತದೆ. ಇದನ್ನು ಫಕ್ಕೀರಪ್ಪ ಬಸಪ್ಪ ಆಲೂರ ಇವರು ಈ ಬಾವಿಯನ್ನು ನಿರ್ಮಿಸಿ ಮಠಕ್ಕೆ ದಾನವಾಗಿ ಬಿಟ್ಟಿದ್ದಾರೆ. ಇದರ ಕಟ್ಟಡ ಶೈಲಿಯನ್ನು ಗಮನಿಸಿದಾಗ ಇದು ಆಧುನಿಕ ಕಾಲದ್ದು ಎಂದು ಗುರುತಿಸಬಹುದು. ಇದರ ಪಕ್ಕದಲ್ಲಿಯೇ ಪ್ರಾಚೀನವಾದ ಕೆರೆ ಇದ್ದುದರಿಂದ ಯಾವಾಗಲೂ ನೀರಿನಿಂದ ತುಂಬಿಕೊಂಡಿರುತ್ತಿತ್ತು. ಮೊದಲಿಗೆ ಈ ಬಾವಿಯ ನೀರನ್ನು ಮಠದ ಪೂಜಾಕಾರ್ಯಗಳಿಗೆ ಮತ್ತು ಗ್ರಾಮದ ಜನರು ಕುಡಿಯಲು ಉಪಯೋಗಿಸುತ್ತಿದ್ದರು. ಆದರೆ ಈಗ ಕೆರೆ ಬತ್ತಿ ಹೋಗಿದ್ದರಿಂದ ಇದರಲ್ಲಿ ಜಲಸಂಪತ್ತು ಕಡಿಮೆಯಾಗಿದೆ; ಪ್ರಸ್ತುತ ಇದರ ಸ್ಥಿತಿ ಸಾಧಾರಣವಾಗಿದೆ.

**ಚಿಂಚಲಿ ಬಾವಿ :**

ಈ ಗ್ರಾಮವು ಗದಗದಿಂದ ದಕ್ಷಿಣ ದಿಕ್ಕಿಗೆ ಸುಮಾರು ೨೩ ಕಿ.ಮೀ ಗಳ ಅಂತರದಲ್ಲಿದೆ. ಈ ಬಾವಿಯನ್ನು ಗ್ರಾಮಸ್ಥರು ಕಲ್ಲುಬಾವಿ ಎಂದು ಕರೆಯುತ್ತಾರೆ. ಇದು ಚೌಕಾಕಾರವಾಗಿದ್ದು, ಗ್ರಾನೈಟ್ ಶಿಲೆಗಳಿಂದ ನಿರ್ಮಿಸಿದ್ದಾರೆ. ಇದರ ದಕ್ಷಿಣ ದಿಕ್ಕಿಗೆ ಏತದ ನಡು ನಿಲ್ಲಡೆಯನ್ನು ಒಳಗೊಂಡಿದ್ದು ಈಗ ಇದರ ಮೇಲೆ ಗಿಡ ಮರಗಳು ಬೆಳೆದಿದ್ದರಿಂದ ಇದು ಸರಿಯಾಗಿ ಗೋಚರಿಸುವುದಿಲ್ಲ. ಇದಕ್ಕೆ ಉತ್ತರ ದಿಕ್ಕಿನ ಮೂಲಕ ಪ್ರವೇಶ ದ್ವಾರವಿದ್ದು ಮೆಟ್ಟಿಲುಗಳ ಮೂಲಕ ನೀರಿನ ಆಳವನ್ನು ತಲುಪಬಹುದು. ಈ ಬಾವಿಯು ನೋಡಲು ಬಹಳ ಸುಂದರವಾಗಿದ್ದು ಏತದ ನಡುನಿಲ್ಲಡೆ ಕೆಳಭಾಗದಲ್ಲಿ ಎರಡು ಚಕ್ರಗಳ ಚಿತ್ರವನ್ನು ಕಾಣಬಹುದು. ಇದರ ನೀರನ್ನು ಬಳಸದೇ ಇದ್ದದ್ದರಿಂದ ಈ ನೀರು ನೀಲಿ ಬಣ್ಣಕ್ಕೆ ತಿರುಗಿದೆ.

**ಹರ್ತಿ ಬಾವಿ**

ಈ ಗ್ರಾಮವು ಗದಗದಿಂದ ದಕ್ಷಿಣ ದಿಕ್ಕಿಗೆ ೧೦ ಕಿ.ಮೀ ಅಂತರದಲ್ಲಿದೆ. ಈ ಗ್ರಾಮ ಕೂಡ ಪ್ರಾಚೀನ ಕಾಲದಲ್ಲಿ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಒಳಪಟ್ಟಿದ್ದು, ಇಲ್ಲಿ ಸೋಮೇಶ್ವರ, ಈಶ್ವರ, ಬಸವಣ್ಣ ದೇವಾಲಯಗಳು ಕಂಡುಬರುತ್ತವೆ. ಹರ್ತಿ ಬಸವಣ್ಣನ ಗುಡ್ಡದ ಎಡಭಾಗದಲ್ಲಿ ಕಲ್ಲು ಬಾವಿ ಕಂಡುಬರುತ್ತದೆ. ಇದು ಪಾಟೀಲರ ಹೊಲದಲ್ಲಿ ಇದ್ದು ಇದರ ಮೇಲ್ಭಾಗವನ್ನು ಗ್ರಾನೈಟ್ ಶಿಲೆಗಳಿಂದ ನಿರ್ಮಿಸಿರುತ್ತಾರೆ. ತಳಭಾಗವು ಸುಮಾರು ೧೦ ಅಡಿ ಆಳದವರೆಗೆ ಕಲ್ಲಿನಲ್ಲಿಯೇ ಕೊರೆದು ಬಾವಿಯನ್ನು ನಿರ್ಮಿಸಿರುತ್ತಾರೆ. ಈ ಬಾವಿಯ ಪೂರ್ವ ದಿಕ್ಕಿಗೆ ಏತದ ನಡುನಿಲ್ಲಡೆ

ಇದ್ದು ಬಹುಶಃ ಪ್ರಾಚೀನ ಕಾಲದಲ್ಲಿ ಇದು ಕೂಡ ಏತದ ವ್ಯವಸ್ಥೆಗೆ ಒಳಪಟ್ಟಿದ್ದು ಎತ್ತುಗಳ ಮುಖಾಂತರ ನೀರನ್ನು ಎತ್ತಿ ಹೊಲಗಳಿಗೆ ಹಾಯಿಸುತ್ತಿದ್ದರು. ಈ ಬಾವಿಯ ನೀರಿನಿಂದ ಕನಿಷ್ಠ ೨ ರಿಂದ ೩ ಎಕರೆ ನೀರಾವರಿ ಕೃಷಿಯನ್ನು ಮಾಡಿದ್ದರು.

**ಬೆಣಚಮಟ್ಟಿಯ ಬಾವಿ :**

ಬೆಣಚಮಟ್ಟಿ ಗ್ರಾಮವು ಗದಗದಿಂದ ಈಶಾನ್ಯಕ್ಕೆ ೭೦ ಕಿ.ಮೀ. ಅಂತರದಲ್ಲಿದೆ. ಈ ಬಾವಿಯು ಗ್ರಾಮದಿಂದ ಒಂದು ಕಿ.ಮೀ ಅಂತರದಲ್ಲಿದ್ದು, ಇದು ಗಜೇಂದ್ರಗಡದಿಂದ ಬೆಣಚಮಟ್ಟಿಗೆ ರಸ್ತೆಯ ಬಲಭಾಗದಲ್ಲಿ ಕಂಡುಬರುತ್ತದೆ. ಕೆರೆಯ ಸಮೀಪದಲ್ಲಿಯೇ ಇದೆ. ಈ ಬಾವಿಯು ಆರು ಕೋನಗಳನ್ನು ಒಳಗೊಂಡಿದೆ. ಈ ಬಾವಿಗೆ ಕೆಂಪಾದ ಮತ್ತು ಉದ್ದವಾದ ಕಲ್ಲುಗಳನ್ನು ಬಳಸಿರುತ್ತಾರೆ. ಈ ಬಾವಿಯಲ್ಲಿ ಗೋಡೆಗಳ ಮೇಲೆ ಮೀನು ಮತ್ತು ಶಂಖ ಚಕ್ರಗಳ ಚಿತ್ರಗಳನ್ನು ಬಿಡಿಸಿದ್ದಾರೆ. ಇದಕ್ಕೆ ಏತದ ಮೂಲಕ ನೀರನ್ನು ಎತ್ತಿ ಕೃಷಿಗೆ ಬಳಸುತ್ತಿದ್ದರು. ಬಾವಿಯ ಮೇಲ್ಭಾಗದಲ್ಲಿ ಯಾವುದೇ ರೀತಿಯ ಕಟ್ಟಡಗಳು ಕಂಡುಬಂದಿಲ್ಲ. ಈಗ ಇದರ ಸ್ಥಿತಿ ಸಾಧಾರಣವಾಗಿದೆ. ಇದರ ನೀರನ್ನು ಪಂಪಸೆಟ್ ಮೂಲಕ ಕೃಷಿಗೆ ನೀರನ್ನು ಬಳಸುತ್ತಾರೆ.

**ಗದುಗಿನ ಕೋನೇರಿ ತೀರ್ಥ :**

ಇದು ಗದುಗಿನ ಮಧ್ಯಭಾಗದ ವೀರನಾರಾಯಣದ ದೇವಾಲಯದ ಎದುರಿಗೆ ಕಂಡು ಬರುತ್ತದೆ. ಇದು ಅತ್ಯಂತ ಬೃಹತ್ತಾದ ತೀರ್ಥವಾಗಿರುತ್ತದೆ. ಈ ತೀರ್ಥಕ್ಕೆ ಪೂರ್ವ ಪಶ್ಚಿಮ ದಿಕ್ಕಿನಲ್ಲಿ ಪ್ರವೇಶ ದ್ವಾರಗಳು ಇರುತ್ತವೆ. ಈ ತೀರ್ಥದ ಪಶ್ಚಿಮದ ದಿಕ್ಕಿನಲ್ಲಿ ಮಾರುತಿ ದೇವಾಲಯವು ಇದ್ದು ಇದು ಗರ್ಭಗೃಹ ಮತ್ತು ಅಂತರಾಳವನ್ನು ಒಳಗೊಂಡಿದೆ. ಈ ತೀರ್ಥವು ಸುಮಾರು ೧೨೦ ಅಡಿ ಉದ್ದವಿದ್ದು ೪೫ ಅಡಿ ಅಗಲವಿದೆ, ೫೦ ಅಡಿ ಆಳವನ್ನು ಹೊಂದಿದೆ. ಈ ತೀರ್ಥದ ಸುತ್ತಲೂ ಮೆಟ್ಟಿಲಾಕಾರದಲ್ಲಿ ಇದ್ದು ಮೆಟ್ಟಿಲುಗಳ ಮೂಲಕ ನೀರಿನ ಆಳಕ್ಕೆ ತಲುಪಬಹುದು. ಈ ತೀರ್ಥದ ಮಧ್ಯಭಾಗದಲ್ಲಿ ಎತ್ತರವಾದ ಅಧಿಷ್ಠಾನವನ್ನು ಒಳಗೊಂಡ ಮಂಟಪವನ್ನು ಕಾಣಬಹುದು. ವೃತ್ತಾಕಾರವಾದ ನಾಲ್ಕು ಕಂಬಗಳನ್ನು ಈ ಮಂಟಪಕ್ಕೆ ಅಳವಡಿಸಿರುತ್ತಾರೆ. ಈ ತೀರ್ಥದ ಉತ್ತರ ದಿಕ್ಕಿಗೆ ಏತದ ವ್ಯವಸ್ಥೆಯನ್ನು ಅಳವಡಿಸಿರುತ್ತಾರೆ. ಇದು ೫೫ ಅಡಿ ಆಳವನ್ನು ಹೊಂದಿರುತ್ತದೆ. ಇದರ ಅಗಲ ೬ ಅಡಿ ಆಗಿದೆ. ಈ ತೀರ್ಥದ ಸುತ್ತಲೂ ಅತಿಕ್ರಮಣದಿಂದ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಈ ತೀರ್ಥದ ಸಮೀಪದಲ್ಲಿ ಮೈಲಾರಲಿಂಗೇಶ್ವರ ಹಾಗೂ ವೀರನಾರಾಯಣನ ದೇವಸ್ಥಾನ ಕಂಡುಬರುತ್ತದೆ.

**ಐತಿಹ್ಯ:**

ಪಾಂಡವರ ವಂಶಜನಾದ ಜನಮೇಜಯನು ತೀರ್ಥಯಾತ್ರೆ ಮಾಡುತ್ತಾ ಕೃತಪುರಕ್ಕೆ ಆಗಮಿಸಿ ಆ ಪುರವನ್ನು ಕಂಡು ಬಹಳ ಸಂತೋಷಪಟ್ಟನು. ನಂತರ ಜನಮೇಜಯನು ಕೋನೇರಿ

ತೀರ್ಥಕ್ಕೆ ಬಂದು, ಈ ತೀರ್ಥವು ಹೇಗೆ ಹುಟ್ಟಿಕೊಂಡಿತು ಎಂಬ ಪ್ರಶ್ನೆಯನ್ನು ತ್ರಿಕಾಲಜ್ಞರಾದ ಭಗವಾನ್ ವ್ಯಾಸ ಮಹರ್ಷಿಗಳನ್ನೇ ಕೇಳಿದನು.

ಆಗ ವ್ಯಾಸ ಮಹರ್ಷಿಗಳು ಇದು ಬಹಳ ಹಿಂದೆ ಕೋನೇರಿ ಎಂಬ ಪ್ರಸಿದ್ಧ ಬ್ರಾಹ್ಮಣನು ಇಲ್ಲಿ ನೆಲೆಸಿದ್ದನು. ಶ್ರೀ ವೆಂಕಟೇಶನ ಭಕ್ತನಾದ ಆತ ಪ್ರತಿ ವರ್ಷ ಯಾತ್ರೆಗೆ ಹೋಗುತ್ತಿದ್ದನು ಆತ ೪೮ ಸಲ ಯಾತ್ರೆ ಮಾಡಿರಬಹುದು. ಕ್ರಮೇಣ ವೃದ್ಧನಾದಾಗ ಆತ ಬಹಳ ಚಿಂತೆಗೆ ಒಳಗಾದನು. ವೃದ್ಧನು ಆದ ನನಗೆ ಒಂದು ಹೆಜ್ಜೆಯನ್ನು ಸಹ ಮುಂದಿಡಲು ಆಗುತ್ತಿಲ್ಲ ಆದ್ದರಿಂದ ನನಗೆ ಹೇಗೆ ತಾನೆ ವೆಂಕಟೇಶ್ವರ ದರ್ಶನವಾದೀತು?

ಪರಾಧೀನನಾದ ವೃದ್ಧನಾದ ನನಗೆ ಈಗ ಮರಣವೇ ಸರಿಯೆಂದು ತೋರುತ್ತದೆ. ಎಂದು ಚಿಂತಿಸುತ್ತಿದ್ದ, ಆ ಕೋನೇರಿ ವಿಪ್ರನ ಸ್ವಪ್ನದಲ್ಲಿ ಶ್ರೀ ಶೇಷಾಚಲೇಶ್ವರರು ಪ್ರತ್ಯಕ್ಷನಾಗಿ ಭಕ್ತ ಕೋನೇರಿ ಖಿನ್ನನಾಗದಿರು, ನಾನು ಎಂದೆಂದಿಗೂ ನಿನ್ನ ಹೃದಯದಲ್ಲಿಯೇ ವಾಸಿಸುವೆ. ಅಂತರಂಗದ ದರ್ಶನಕ್ಕಿಂತಲು ಬಾಹ್ಯದರ್ಶನವು ದೂರವಿರುವುದು. ವಿಪ್ರ ಕೋನೇರಿ ಈ ಧನವನ್ನು ತೆಗೆದುಕೋ ಇದರಿಂದ ಇಲ್ಲಿ ಲೋಕ ಹಿತಕರವಾದ ಕೋನೇರಿ ಎಂಬ ಹೆಸರಿನಿಂದ ಪಾವನ ತೀರ್ಥ ನಿರ್ಮಿಸು ಎಂದು ಹೇಳಿದನು. ಅಲ್ಲದೇ ತೀರ್ಥದಲ್ಲಿ ಪ್ರತಿದಿನ ಸ್ನಾನ ಮಾಡಿ ಪ್ರಭುವಾದ ಶ್ರೀ ವೀರನಾರಾಯಣನ ದರ್ಶನ ಪಡೆದು ಇದರಿಂದ ನಿತ್ಯವು ಯಾತ್ರಾ ಫಲವನ್ನು ಹೊಂದುವೆ; ಇದರಲ್ಲಿ ಸಂಶಯವೇ ಇಲ್ಲ. ಈ ರೀತಿ ತಿಳಿಸಿದ ನಾರಾಯಣನು ಅಲ್ಲಿಯೇ ಅದೃಶ್ಯನಾದನು. ಒಡನೆಯೇ ಆ ವಿಪ್ರನಿಗೆ ಎಚ್ಚರಿಕೆಯಾಗಿ ಆತನ ಎರಡೂ ಕೈಗಳಲ್ಲಿ ಧನ ತುಂಬಿದ್ದವು, ನಂತರ ಕೋನೇರಿಯು ವಿದ್ವಾಂಸರಾದ ತಮ್ಮ ಮಕ್ಕಳನ್ನು ಕರೆದು ಸ್ವಪ್ನದಲ್ಲಿ ಶ್ರೀ ಹರಿಯು ಮಾಡಿದ ಪರಮಾನುಗ್ರಹವನ್ನು ತಿಳಿಸಿದನು. ಆ ಧನವನ್ನು ಮಕ್ಕಳ ಕೈಗೆ ಕೊಟ್ಟು ವೀರನಾರಾಯಣನ ದೇವಾಲಯದ ಸಮೀಪದಲ್ಲಿ ಮೆಟ್ಟಿಲುಗಳನ್ನು ಒಳಗೊಂಡ ಬಾವಿಯನ್ನು ನಿರ್ಮಿಸಿದನು. ಆ ಪವಿತ್ರ ತೀರ್ಥದಲ್ಲಿ ಗುಪ್ತಗಾಮಿನಿ ನದಿಯ ನೀರಿನಿಂದ ತುಂಬಿತು. ವಿಪ್ರ ಕೋನೇರಿ ಅದರಲ್ಲಿ ಅನುದಿನವೂ ಮಿಂದು ಶ್ರೀ ವೆಂಕಟೇಶ್ವರನ ಸ್ವರೂಪವೇ ಆದ ವೀರನಾರಾಯಣನನ್ನು ವಿಧಿವತ್ತಾಗಿ ಪೂಜಿಸಿದನು. ಆ ತೀರ್ಥ ಸ್ನಾನದಿಂದ ಕುಷ್ಠರೋಗಿಗಳ ರೋಗವು ಮಾಯವಾಗುವುದು ಮತ್ತು ತೀರ್ಥ ಜಲದ ಪಾನದಿಂದ ಇತರೆ ರೋಗಗಳು ಗುಣಮುಖವಾಗುತ್ತವೆ ಎಂಬ ನಂಬಿಕೆಯಿತ್ತು. ಈ ರೀತಿ ಕೋನೇರಿ ದೇವಪತಿ ವೀರನಾರಾಯಣನನ್ನು ಪೂಜಿಸಿ ವೃದ್ಧಾಪ್ಯದಿಂದ ಮರಣ ಹೊಂದಿದನು.

**ಯಳವತ್ತಿಯ ಮಳಲಮ್ಮನ ಬಾವಿ :**

ಯಳವತ್ತಿ ಗ್ರಾಮವು ಗದಗದಿಂದ ೩೦ ಕಿ.ಮೀ. ಅಂತರದಲ್ಲಿದೆ. ಗ್ರಾಮದಿಂದ ಪೂರ್ವ ದಿಕ್ಕಿಗೆ ಈ ಬಾವಿಯು ಕಂಡುಬಂದಿದ್ದು ಇಡೀ ಗ್ರಾಮದ ಜನರಿಗೆ ಕುಡಿಯುವ ನೀರಿನ ಏಕೈಕ

ಸಿಹಿನೀರಿನ ಬಾವಿಯಾಗಿದೆ. ಇದಕ್ಕೆ ಮಳಲಮ್ಮನ ಬಾವಿ ಎಂದು ಕರೆಯುವರು. ಈ ಬಾವಿಗೆ ಈ ಹೆಸರು ಬರಲು ಒಂದು ಐತಿಹ್ಯವಿದೆ. ಹೊಳಲಮ್ಮ ಮತ್ತು ಮಳಲಮ್ಮ ಎಂಬ ಇಬ್ಬರು ಅಕ್ಕತಂಗಿಯರು. ಹೊಳಲಮ್ಮ ದೇವರ ಆಶೀರ್ವಾದದಿಂದ ಶ್ರೀಮಂತಗಡಗುಡ್ಡ ಸೇರಿದರೆ ತಂಗಿಯಾದ ಮಳಲಮ್ಮನು ಬಂದು ಈ ಬಾವಿಯನ್ನು ಸೇರಿಕೊಂಡಳಂತೆ ಬಾವಿಯನ್ನು ಸೇರುವ ಮುನ್ನ ಅಲ್ಲಿ ನೀರು ಇಲ್ಲದಿದ್ದಾಗ ಕಟ್ಟಿಗೆ ಹೊರಸನ್ನು ಹಾಕಿಕೊಂಡು ಬಾವಿಯ ಆಳದ ಅಂಗಳದಲ್ಲಿ ಮಲಗಿದಾಗ ದೇವರಿಗೆ ಅವಳ ಮೊರೆ ಕೇಳಿ ಮೈಮೇಲೆ ಮಳಲು ಎರಚಿದನಂತೆ. ಆಗ ಮಳಲಮ್ಮನು ಹೊರಸು ಸಹಿತ ಮಾಯವಾಯಿತಂತೆ ಬಾವಿಯ ಆಳದಲ್ಲಿ ಹೊರಸಿನಷ್ಟು ಚೌಕಾಕಾರವಿದೆ. ಆದರೆ ಇದು ಎಷ್ಟು ಆಳವಾಗಿದೆ ಎಂಬುದು ತಿಳಿದುಬಂದಿಲ್ಲ. ಹೊಳಲಮ್ಮನ ಆಶೀರ್ವಾದದಿಂದ ಬಾವಿಯಲ್ಲಿ ಸಮೃದ್ಧ ಜಲ ಉದ್ಭವಿಸಿತಂತೆ. ಬಾವಿಯಲ್ಲಿ ನೀರು ತುಂಬಿ ಹೊರಗೆ ಚೆಲ್ಲುತ್ತಿರುವಾಗ ಮಳಲಮ್ಮನಲ್ಲಿ ಜನರು ಮೊರೆಯಿಟ್ಟಾಗ ನೀರು ಕಡಿಮೆಯಾಯಿತಂತೆ. ಕಡಿಮೆ ಪ್ರಮಾಣದಲ್ಲಿ ಅಂತರ್ಜಲವಾಗಿ ಉಕ್ಕಿ ಬರುವ ಈ ನೀರು ಶ್ರೀ ಗಣೇಶನ ಮೂರ್ತಿಯ ಮೇಲೆ ಅಭಿಷೇಕದಂತೆ ಬೀಳುತ್ತದೆ. ಇಂದಿಗೂ ಸಹ ಯಳವತ್ತಿಯ ಜನರು ಈ ಬಾವಿಯ ನೀರನ್ನೇ ಕುಡಿಯುತ್ತಿದ್ದಾರೆ. ಬರಗಾಲದಂತಹ ಸಂದರ್ಭದಲ್ಲಿಯೂ ನೀರಿನ ಕೊರತೆ ಕಂಡುಬಂದಿಲ್ಲ. ಆ ಬಾವಿಯಲ್ಲಿ ನೀರು ಬತ್ತುವುದಿಲ್ಲ. ಯುವಕರು ಬಾವಿಗಿಳಿದು ಆಳದಲ್ಲಿ ಕೈಹಾಕಿದರೆ ಇಂದಿಗೂ ಸಹ ಉಸುಕು ಮತ್ತು ಶಂಖಗಳು ದೊರೆಯುತ್ತವೆ. ಇದರಂತೆ ಇನ್ನೊಂದು ವಿಶೇಷ ಮರಳು ಬಾವಿ ಇದೆ. ಇದು ಬೃಹತ್ತಾಕಾರದ ಕಲ್ಲುಗಳಿಂದ ಜಕಣಾಚಾರಿಯಿಂದ ನಿರ್ಮಿಸಲ್ಪಟ್ಟಿದೆ. ಈ ಬಾವಿಯೊಳಗಿನ ನೀರು ಒಂದು ದಿನದಲ್ಲಿ ಮೂರು ಬಣ್ಣಕ್ಕೆ ಪರಿವರ್ತನೆಗೊಳ್ಳುತ್ತದೆ. ಇದು ಇಂದಿಗೂ ನಡೆದಿರುವ ಸತ್ಯ ಋಷಿಮುನಿಗಳು ಕೊಟ್ಟ ಶಾಪವೇ ಕಾರಣವೆಂದು ಹಿರಿಯರು ಹೇಳುತ್ತಾರೆ.

**ಗೊಜನೂರಿನ ಬಾವಿಗಳು :**

ಗೊಜನೂರು ಗ್ರಾಮ ಗದಗದಿಂದ ೩೬ ಕಿ.ಮೀ ಅಂತರದಲ್ಲಿದೆ. ಗೊಜನೂರಿಗೆ ಸಮೀಪ ಐತಿಹಾಸಿಕ ಸ್ಥಳ ಲಕ್ಷ್ಮೇಶ್ವರವಿದೆ. ಗೊಜನೂರಿನಲ್ಲಿ ಅತ್ಯಂತ ಹಳೆಯ ಕಾಲದ ಐದು ಬಾವಿಗಳಿವೆ. ಅವು ಯಾವವೆಂದರೆ ೧) ಸೇದುಬಾವಿ-ಗಡೆಯಕ್ಕೆ ಹಗ್ಗ ಹಾಕಿ ನೀರು ಸೇದುತ್ತಿರುವದರಿಂದ ಇದಕ್ಕೆ ಸೇದುವ ಬಾವಿ ಎಂದು ಕರೆದರು. ೨) ತೆಗ್ಗಿನ ಬಾವಿ–ಹಗ್ಗವಿಲ್ಲದೇ ಬಾವಿಯಲ್ಲಿ ಹೊಕ್ಕು ಅಥವಾ ಇಳಿದು ನೀರು ತುಂಬುವ ಕಾರಣ ಇದಕ್ಕೆ ಹೊಕ್ಕು ತುಂಬುವ ಬಾವಿ ಅಥವಾ ತೆಗ್ಗಿನ ಬಾವಿ ಎಂದು ಕರೆದರು, ೩) ಗುಬ್ಬಿಯ ಬಾವಿ–ಈ ಬಾವಿಯ ಕಲ್ಲಿನ ಪಡಕಿನಲ್ಲಿ ಹೆಚ್ಚು ಗುಬ್ಬಿಗಳು ವಾಸಿಸುತ್ತಿರುವುದರಿಂದ ಇದಕ್ಕೆ ಗುಬ್ಬಿಯ ಬಾವಿ ಎಂದು ಕರೆದರು, ೪) ದರಗಾ ಬಾವಿ–ಅಂಬಾಶವಾಲಿ ಮತ್ತು ಅಂಕುಶವಾಲಿ ದರ್ಗಾ ಹತ್ತಿರ ಬಾವಿ ಇರುವ ಕಾರಣ ದರ್ಗಾಬಾವಿ ಎಂದು ಕರೆದರು, ೫) ಹೊಸಬಾವಿ ಕುಡಿಯುವ ನೀರಿಗಾಗಿ ಮಾಗಡಿಯ ರಸ್ತೆಯ ಕಡೆಗೆ ಒಂದು

ಬಾವಿಯನ್ನು ನಿರ್ಮಿಸಿದರು ಅದಕ್ಕೆ ಹೊಸಬಾವಿ ಎಂದು ಕರೆದರು. ಮೂರು ನಾಲ್ಕು ದಶಕಗಳ ಹಿಂದೆ ಕುಡಿಯುವ ನೀರಿಗಾಗಿ ಈ ಬಾವಿಯನ್ನು ಅವಲಂಬಿಸಿದ್ದರು. ಈಗ ಸಧ್ಯ ಯಾವ ಬಾವಿಯ ನೀರನ್ನು ಕುಡಿಯುತ್ತಿಲ್ಲ. ಆದರೆ ಕೆಲವೊಂದಿಷ್ಟು ಬಾವಿಗಳು ದುರಸ್ತಿಯಾಗದೇ ಹುಗಿದುಹೋಗಿವೆ.

**ಗದುಗಿನ ಪಂಚರಹೊಂಡ ;**

ಶ್ರೀ ವೀರನಾರಾಯಣ ದೇವಸ್ಥಾನದಿಂದ ನಗರೇಶ್ವರ ದೇವರ ಗುಡಿಯ ಮುಂದೆ ಹಾಯ್ದು ಜೋಡುಮಾರುತಿ ದೇವಸ್ಥಾನದವರೆಗೆ ಹೋಗುವ ಮಾರ್ಗದಲ್ಲಿ ಎಡಗಡಗಡ ಪೂರ್ವಾಭಿಮುಖವಾಗಿ ಒಂದು ಜುಮ್ಮಾಮಸೀದಿ ಇದ್ದು, ಅದು ಮೊದಲು ಬ್ರಾಹ್ಮಣರಿಗೆ ಸಂಬಂಧಿಸಿದ ಶ್ರೀ ಪ್ರಸನ್ನ ವೆಂಕಟರಮಣ ದೇವಾಲಯವಿತ್ತೆಂದೂ ೧೭ನೇ ಶತಮಾನದಲ್ಲಿ ಔರಂಗಜೇಬನ ಕಾಲಕ್ಕೆ ಬಂಕಾಪುರ ಕಿಲ್ಲೆಯನ್ನು ಗೆದ್ದ ಅವನ ಸೈನ್ಯಾಧಿಕಾರಿ ದಿಲೇರಖಾನ ತಿರುಗಿ ದಿಲ್ಲಿಗೆ ಹೋಗುವಾಗ ಅಲ್ಲಿದ್ದ ವೆಂಕಟರಮಣ ದೇವಸ್ಥಾನವನ್ನು ನಾಶ ಮಾಡಿ ಅದೇ ಜಾಗದಲ್ಲಿ ಜುಮ್ಮಾ ಮಸೀದಿಯನ್ನು ಕಟ್ಟಿಸಿದನೆಂದೂ ದಿಲ್ಲಿಯಿಂದ ಅವನು ಮುಸಲ್ಮಾನ ಎಂಜನಿಯರುಗಳು ಹಾಗೂ ಗೌಂಡಿಗಳನ್ನು ಇಲ್ಲಿಗೆ ಕಳುಹಿಸಿ ಇದನ್ನು ಕಟ್ಟಿಸಿದನೆಂದು ಹೇಳಲಾಗುತ್ತದೆ.

ಈಗಿನ ಪಂಚರಹೊಂಡವೇ ಆಗ ವೆಂಕಟೇಶ ದೇವರ ತೀರ್ಥವಾಗಿತ್ತು. ಇದು ಜುಮ್ಮಾ ಮಸೀದಿಯ ಎದುರುಗಡೆಯೆ ಇದೆ. ಆಗ ಅಲ್ಲಿದ್ದ ವೆಂಕಟೇಶ್ವರ ದೇವಾಲಯವು ಈಗ ಹಳೇಸರಾಪ ಬಜಾರಿನ ಅಂಬಾಭವಾನಿ ಗುಡಿಯ ಹಿಂಭಾಗದಲ್ಲಿ ಇದೆ. ಮುಸಲ್ಮಾನ ಅರಸರ ಉಪಟಳದಿಂದಾಗಿ ಅಲ್ಲಿಯ ಮೂರ್ತಿಯನ್ನು ಅರ್ಚಕರು ಮನೆಯ ಹಿಂಭಾಗದೆ ಈ ಮೂರ್ತಿಯು ಪ್ರತಿಷ್ಠಾಪಿಸಿದರು. ಅರ್ಚಕರು ಈಗಲೂ ಮನೆಯ ಹಿಂಬಾಗಿಲಿನಿಂದಲೇ ಗುಡಿಯೊಳಗೆ ಬರುತ್ತಾರೆ.

೧೮೫೦ರಲ್ಲಿ ಗುರುಚಾರ್ಯ ಗುಡಿ ಎನ್ನುವವರು ಅರ್ಚಕರಿದ್ದುದು ಪಂಚ ಕಮಿಟಿ ಪಟ್ಟಿಯಿಂದ ತಿಳಿದುಬರುತ್ತದೆ. ಈಗಲೂ ಇದೇ ಮನೆತನದವರೇ ಇಲ್ಲಿ ಅರ್ಚಕರಾಗಿ ಮುಂದುವರೆದಿರುವರು. ಗುಡಿಯ ಮುಂದಿನ ಭಾಗದಲ್ಲಿ ಶಿರಹಟ್ಟಿ, ಸತ್ಯಪ್ಪನವರ, ಗುಡಿ, ಹರಿದಾಸ, ಹರಕಾರಿ ಮುಂತಾದ ಮನೆತನಗಳ ಮಸೀದಿ ಇದ್ದು, ಇವರ ಕಾಲದಲ್ಲೂ ಇದ್ದವು. ಈಗಲೂ ಕಂಡುಬರುತ್ತವೆ. ಹರಕಾರಿ ಮನೆತನವರು ಮಾತ್ರ ಇಲ್ಲ. ಮಸೀದಿ ಎದುರಿಗೆ ಇರುವ ಶಿರಹಟ್ಟಿ ಆಚಾರ್ಯರ ಮನೆಯಲ್ಲಿ 'ಪಂಚಮುಖಿ ಪ್ರಾಣದೇವರ' ಪೂಜೆ ಈಗಲೂ ನಡೆಯುತ್ತಿದೆ.[೨೬] ಹೀಗಾಗಿ ಇದು ಸಹ ಆಗ ಬ್ರಾಹ್ಮಣ ಕೇರಿ ಆಗಿತ್ತು. ಆಗಿನ ಕಾಲದ ಗುಡಿಯ ಅವಶೇಷಗಳು ಮಸೀದಿಯಲ್ಲಿ ಇವೆ. ಈಗಿರುವ ಮಸೀದಿಯ ಬುನಾದಿ ಹಾಗೂ ಗೋಡೆಗಳು ವೆಂಕಟೇಶ ದೇವಸ್ಥಾನದ ಅವಶೇಷಗಳೇ ಆಗಿವೆ. ಆಗಿನ ಕಾಲದ ಕೆಲವು ಕಲ್ಲಿನ ತೊಲೆ, ಜಂತಿಗಳು ಇರುವುದನ್ನು ಕಾಣಬಹುದು. ಶ್ರೀ ವೆಂಕಟೇಶ್ವರ ದೇವಸ್ಥಾನದ ಜಾಗದಲ್ಲಿ ಜುಮ್ಮಾ ಮಸೀದಿ ಕಟ್ಟಿದಾಗಿನಿಂದ ಜನರಲ್ಲಿ ಅಸಮಾಧಾನವಿದ್ದು, ಇದು

ಶಾಂತವಾಗಲು ಬಹುಶ; ಪಂಚ ಟ್ರಸ್ಟ್ ಕಮಿಟಿಯಲ್ಲಿ ಒಬ್ಬ ಮುಸಲ್ಮಾನ ಸಮಾಜದ ಪಂಚರನ್ನು ತೆಗೆದುಕೊಂಡಿರಬಹುದು. ಈಗಲೂ ಪಂಚಕಮಿಟಿಯಲ್ಲಿ ಮುಸಲ್ಮಾನ ಸದಸ್ಯರೊಬ್ಬರಿದ್ದಾರೆ. ಗದಗಿನಲ್ಲಿ ಧಾರ್ಮಿಕ ಭಾವೈಕ್ಯವು ಹೀಗೆ ಸಾಧ್ಯವಾಗಿದೆ.

**ಅಸುಂಡಿಯ ಉದ್ದಾರರವರ ಏತನೀರಾವರಿ ಬಾವಿ :**

ಗದಗ ಜಿಲ್ಲಾ ಕೇಂದ್ರದಿಂದ ೫ ಕಿ.ಮೀ ದೂರದಲ್ಲಿದೆ. ಇದು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿದೆ. ಸುಮಾರು ೩೬ ಅಡಿ ಎತ್ತರವಿದೆ. ಈ ಬಾವಿಯ ನಿರ್ಮಾಣದ ಕಾಲ, ಕಟ್ಟಿಸಿದ ವ್ಯಕ್ತಿಗಳ ಬಗ್ಗೆ ಮಾಹಿತಿ ಇಲ್ಲ. ಸ್ಥಳೀಯರು ಇದನ್ನು ಉದ್ದಾರರವರ ಬಾವಿಯೆಂದು ಕರೆಯುತ್ತಾರೆ. ಈ ಬಾವಿಗೆ ಉತ್ತರಾಭಿಮುಖವಾಗಿ ಕಪ್ಪಲಿಯನ್ನು ಒಳಗೊಂಡಿದ್ದು ಅದು ಈಗ ಹಾಳಾಗಿದೆ. ಕಪ್ಪಲಿಗುಂಟ ಮೂರು ಮೀಟರ್ ಉದ್ದವಾದ ಕಾಲುವೆಯನ್ನು ನೋಡಬಹುದು. ಈಗಲೂ ಈ ಬಾವಿಯ ನೀರು ೫ ಎಕರೆ ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುತ್ತದೆ. ಈ ಪ್ರದೇಶದಲ್ಲಿ ಗೋವಿನಜೋಳ, ಶೇಂಗಾ, ಹುರುಳಿ, ತೊಗರಿ ಹಾಗೂ ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ.

ಒಟ್ಟಾರೆಯಾಗಿ ಬಾವಿ ನೀರಾವರಿ ಹೆಚ್ಚಾಗಿ ವುಯಕ್ತಿಕವಾಗಿತ್ತು. ಈ ನೀರಾವರಿಗಳ ನೀರಿನ ಪಂಪುವ ಕ್ರಮ ವ್ಯಕ್ತಿ ಮತ್ತು ಬೆಳೆ ಮತ್ತು ಭೂಮಿಯ ಸ್ವರೂಪಗಳನ್ನು ಅವಲಂಬಿಸಿಕೊಂಡಿದೆಯೆಂದು ಹೇಳಬಹುದು. ಬಾವಿಗಳಿಂದ ನೀರು ಹಾಯಿಸುವುದು ನೀರಾವರಿಯ ಸರಳ ರೂಪ. ಭೂಮಿಯಲ್ಲಿ ಹುದುಗಿರುವ ಅನೇಕ ಸಂಪತ್ತುಗಳಲ್ಲಿ ನೀರು ಒಂದು ಮಳೆ ಸರಿಯಾಗಿ ಬಾರದ ಮತ್ತು ನದಿ, ಹಳ್ಳ, ಹೊಳೆ, ಕೆರೆ ಇವುಗಳ ಅನುಕೂಲವಿಲ್ಲದ ಸ್ಥಳಗಳಲ್ಲಿ ಭೂಮಿಯಲ್ಲಿ ಅಡಗಿಕೊಂಡು ನೀರನ್ನು ಎತ್ತಿ ಬೆಳೆಗಳಿಗೆ ಕೊಡಲಾಗುತ್ತದೆ. ಇದನ್ನು ಕಾರ್ಯಗತ ಮಾಡಲು ರೈತರು ಸಾಮಾನ್ಯ ಬಾವಿ, ಕೊಳವೆ ಬಾವಿ, ಏತ ಬಾವಿ ಇತ್ಯಾದಿಗಳನ್ನು ತೋಡಿಸುವುದಗತ್ಯ. ಸಾಮಾನ್ಯ ಬಾವಿಗಳು ಬಹಳ ಪುರಾತನ ಕಾಲದ ಬಾವಿಗಳಾಗಿದ್ದು, ಇವು ಗದಗ ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಕಂಡುಬರುತ್ತವೆ. ಈ ಜಿಲ್ಲೆಯ ಅತಂತ್ಯ ಪುರಾತನ ಬಾವಿಗಳೆಂದರೆ ಹೊಸೂರಿನ ಕಲ್ಲುಬಾವಿ ಆದರೆ ಇದು ಕನಿಷ್ಟಮಟ್ಟದಲ್ಲಿರುವುದರಿಂದ ಇವರ ಅವಶೇಷಗಳನ್ನು ಗುರುತಿಸುವುದು ಕಷ್ಟಕರವಾಯಿತು. ವಾಸ್ತುಶಿಲ್ಪ ಒಳಗೊಂಡು ಅತಂತ್ಯ ಸುಂದರ ಕಲಾಶೈಲಿಯ ಬಾವಿಗಳೆಂದರೆ ಲಕ್ಕುಂಡಿಯ ಮಾಣಿಕೇಶ್ವರ ಬಾವಿ, ಡಂಬಳದ ಜಪದ ಬಾವಿ, ಸೂಡಿಯ ನಾಗರಬಾವಿ, ರೋಣದ ಅರಮನೆ ಬಾವಿ, ಗೌಡರ ಬಾವಿಗಳು ಪ್ರಮುಖವಾಗಿ ಕಂಡುಬರುತ್ತವೆ. ಬಾವಿಯ ನೀರನ್ನು ಎಲ್ಲಾ ತರಹದ ನೀರು ಬೆಳೆಗೆ ಯೋಗ್ಯವೆಂದು ಹೇಳಲಾಗದು. ಕೇವಲ ಸಿಹಿನೀರನ್ನು ಮಾತ್ರ ಬಳಸಬಹುದು. ಜಿಲ್ಲೆಯಲ್ಲಿ ಅತಿ ಹೆಚ್ಚು ಬಾವಿಗಳು ರೋಣ, ಶಿರಹಟ್ಟಿ, ಮುಂಡರಗಿ ತಾಲೂಕಿನಲ್ಲಿ ಕಂಡುಬರುತ್ತವೆ. ಶಿರಹಟ್ಟಿ ಮತ್ತು ಮುಂಡರಗಿ ತಾಲೂಕಿಲ್ಲಿ ಏತದ ಬಾವಿಗಳನ್ನು ಹೆಚ್ಚಾಗಿ ಕಂಡುಬರುತ್ತವೆ. ಈ ಜಿಲ್ಲೆಯಲ್ಲಿ ಅತಿ ದೊಡ್ಡ ಪುಷ್ಕರಣಿ ಎಂದರೆ ಗದುಗಿನ ಕೋನೇರಿ ಹೊಂಡ ಎಂದು ಹೇಳಬಹುದು.

## ೪.೮. ಬಾವಿಗಳ ಇಂದಿನ ಸ್ಥಿತಿ-ಗತಿಗಳು;

ಭಾರತದ ನೀರಿನ ಮೂಲಗಳು ಕ್ರಮೇಣ ಬತ್ತಿ ಹೋಗುತ್ತಿವೆ. ೩೦ ವರ್ಷದ ನೀರಿನ ಮೂಲಗಳು ಈಗ ಇಲ್ಲ. ಅಪಾರವಾಗಿ ಅಂತರ್ಜಲದ ಶೋಷಣೆ ನಡೆಯುತ್ತಿದೆ. ಲಾಭದತ್ತ ಹೆಜ್ಜೆ ಹಾಕಿರುವ ಕೃಷಿ ಪೈಪೋಟಿ ಅಂತರ್ಜಲದ ಶೋಷಣೆಗೆ ಹೆಚ್ಚು ಕಾರಣವಾಗಿದೆ. ಕರ್ನಾಟಕದಲ್ಲಿ ನೀರು ಸಮೃದ್ಧವಾಗಿ ಇದೆ. ಹಳ್ಳ, ಕೊಳ್ಳ, ನದಿ, ಸಮುದ್ರ ಎಲ್ಲಾ ರೀತಿಯಿಂದಲೂ ನೀರು ಆವೃತವಾಗಿದೆ. ಜೀವ ವೈವಿಧ್ಯತೆಯ ಕೊಂಡಿಗಳಾಗಿದ್ದ ನಮ್ಮ ಕೆರೆಗಳನ್ನು ನಮ್ಮ ರಾಜಕಾರಣ ನುಂಗಿ ಹಾಕಿದೆ. ಪ್ರಸ್ತುತವಾಗಿ ಬಾವಿಗಳನ್ನು ಬತ್ತಿಸುವ ಕಾರ್ಯಕ್ರಮ ಭರದಿಂದ ಸಾಗಿದೆ. ಭೂದಾಹ ಮನುಷ್ಯನನ್ನು ಕ್ರೂರಿಯನ್ನಾಗಿಸಿ ಒಂದು ಕಾಲಕ್ಕೆ ಇಲ್ಲಿ ಬಾವಿ ಇತ್ತು ಆ ನೀರನ್ನೇ ಕುಡಿಯುತಿದ್ದೆವು ಎಂಬುದನ್ನು ನಂಬಲಾರದ ಸ್ಥಿತಿಗೆ ತಂದಿದ್ದೇವೆ. ಹಾಗೆಯೇ ನಾವು ಜಲಮೂಲಗಳನ್ನು ನಾಶ ಮಾಡಿಕೊಂಡು ನಮ್ಮದೇ ಆದ ಸಂಸ್ಕೃತಿ ನೆಲೆಗಳನ್ನು ನಾವೇ ನಾಶ ಮಾಡಿಕೊಳ್ಳುತ್ತಿದ್ದೇವೆ. ನಮ್ಮ ಇಂತಹ ಘೋರವಾದ ದಬ್ಬಾಳಿಕೆಯಿಂದ ನಮ್ಮನ್ನು ಕಾಪಾಡುವವರು ಯಾರಿದ್ದಾರೆ ? ಸಾವಿಗಿಂತ ಸಾವು ಬರಬಹುದೆಂಬ ಭಯ ಘೋರವಾದದ್ದು. ಇಂಥ ಭಯವನ್ನೇ ಬದುಕುವ ಸ್ಥಿತಿ ಯಾವಾಗಲೂ ಭೀಕರವಾಗಿರುವವು. ಕರ್ನಾಟಕದ ಜಲ ಮೂಲಗಳನ್ನು ದಿನದಿಂದ ದಿನಕ್ಕೆ ಅಧೋಗತಿಗೆ ತಳ್ಳುತ್ತಿದ್ದೇವೆ.

ಗದಗ ಜಿಲ್ಲೆಯಲ್ಲಿರುವ ಹೆಚ್ಚು ಬಾವಿಗಳು ಕಲ್ಯಾಣ ಚಾಲುಕ್ಯರ ಕಾಲದ ಪ್ರಸಿದ್ಧ ಅರಸರಾದ ೧ನೇ ಸೊಮೇಶ್ವರ, ೨ ನೆಯ ಸೊಮೇಶ್ವರ, ೬ ನೆಯ ವಿಕ್ರಮಾದ್ಯಿತನ ಕಾಲಾವಧಿಯಲ್ಲಿ ರಚನೆಗೊಂಡವುಗಳಾಗಿವೆ. ಪ್ರಮುಖವಾಗಿ ವಿಜಯನಗರ, ಅಧಿಲ್‌ಷಾಹಿಗಳ, ಬ್ರಿಟಿಷರ ಮತ್ತು ಸ್ವತಂತ್ರ ನಂತರದ ಬಾವಿಗಳು ಕಂಡುಬರುತ್ತವೆ. ಬಾವಿಗಳು ರಚನೆಯಾಗುವ ಅವಧಿಯಲ್ಲಿ ಗದಗ ಜಿಲ್ಲೆಯ ಜನಸಂಖ್ಯೆಯು ಕಡಿಮೆಯಿತ್ತು. ಹಾಗೂ ಮಳೆಯ ಪ್ರಮಾಣ ಹೆಚ್ಚಿತ್ತು. ಆದರೆ ಇವತ್ತಿನ ದಿನದಲ್ಲಿ ಮಳೆಯ ಪ್ರಮಾಣ ಕಡಿಮೆಯಿದ್ದು, ಜಿಲ್ಲೆಯ ಜನಸಂಖ್ಯೆ ಹೆಚ್ಚಾಗಿದೆ. ಅಂದು ಜಿಲ್ಲೆಯ ಜನರಿಗೆ ನೀರಿನ ಸೌಕರ್ಯ ಒದಗಿಸಲು ನಿರ್ಮಿಸಲಾದ ಬಾವಿಗಳನ್ನು ಇಂದು ನೆಲಸಮ ಮಾಡಿಕೊಂಡು ಬೃಹತ್ ನಿವೇಶನಗಳನ್ನು ನಿರ್ಮಿಸುವ ಯೋಜನೆಗಳು ಜನರಲ್ಲಿ ತಲೆದೋರಿದೆ. ಅಂದಿನವರು ನಿರ್ಮಿಸಿಕೊಟ್ಟ ಬಾವಿಗಳನ್ನು ಇಂದಿನವರು ಸಂರಕ್ಷಿಸಿಕೊಂಡು ಹೋಗುತ್ತಿರುವರೇ, ಹೋಗುತ್ತಾರೆಯೇ ಎಂಬುದು ಸಂಶಯದ ಮಾತು. ನೀರಿನ ಅಬಾವಿರುವ ಇಂದಿನ ದಿನಮಾನದಲ್ಲಿ ಹಿಂದಿನವರು ನಿರ್ಮಿಸಿದ ಬಾವಿಗಳು ಇಂದಿನವರೆಗೆ ಜೀವನಾಡಿಗಳಾಗಿವೆ.

ಜಲ ಸರಂಕ್ಷಣೆಯ ಮಹತ್ವವನ್ನು ಹಿಂದಿನವರು ಚೆನ್ನಾಗಿ ಅರಿತುಕೊಂಡಿದ್ದರಿಂದಲೇ ಅಂದು ಕೆರೆಗಳನ್ನು ನಿರ್ಮಿಸಿ ಇಂದಿನ ಸಮುದಾಯಕ್ಕೆ ಮಹದುಪಕಾರ ಮಾಡಿದ್ದಾರೆ. ಇಂದಿನ ಸರಕಾರವು ಕೈಕೊಂಡ ಜಲಸರಂಕ್ಷಣಾ ಅಂದೋಲನವನ್ನು ಹುಟ್ಟು ಹಾಕಿದವರೇ ಹಿಂದಿನ ಜನರು. ಅಂದು

ಅವರು ನಿರ್ಮಿಸಿದ ಬಾವಿಗಳನ್ನು ಹಾಳುಗೆಡುಹದೆ ಸುಸ್ಥಿತಿಯಲ್ಲಿಟ್ಟುಕೊಂಡು ಭೂಮಿಯ ಅಂತರ ಜಲಮಟ್ಟವನ್ನು ಕಾಯ್ದುಕೊಳ್ಳಬೇಕಾಗಿರುವುದು ಪ್ರತಿಯೋಬ್ಬರ ಆದ್ಯ ಕರ್ತವ್ಯ. ಆದರೆ ಇಂದಿನ ಜನರು ಆಧುನಿಕ ಬೆಳವಣಿಗೆಗೆ ಮಾರುಹೋಗಿ ಬಾವಿಗಳನ್ನು ನಿರ್ಲಕ್ಷಿಸುತ್ತಿರುವುದನ್ನು ಕಾಣಬಹುದು. ಇಂದರಿಂದ ಮುಂದಿನ ದಿನಮಾನಗಳಲ್ಲಿ ಮುಂದಿನ ಪೀಳಿಗೆಯವರಿಗೆ ಅಂತರ್ಜಲ ಕೊರತೆಯುಂಟಾಗಿ ನೀರಿನ ಅಭಾವ ಉಂಟಾಗುತ್ತದೆ.

ಗದಗ ನಗರದ ದಕ್ಷಿಣ ಭಾಗಕ್ಕೆ ಇರುವ ಭೀಷ್ಮಕೆರೆಯು ಅಂದಿನ ಇಡೀ ಗದಗ ನಗರದಲ್ಲಿರುವ ಬಾವಿಗಳಿಗೆ ಅಂತರ್ಜಲವಾಗಿ ನೀರನ್ನು ಒದಗಿಸುತ್ತಿತ್ತು. ಮಳೆ ಬಂದಾಗ ಮಾತ್ರ ಸ್ವಲ್ಪ ಪ್ರಮಾಣದಲ್ಲಿ ನೀರನ್ನು ಸಂಗ್ರಹಿಸಿಕೊಂಡಿರುತ್ತದೆ. ಗದಗದಲ್ಲಿರುವ ರಾಚೋಟೇಶ್ವರ ದೇವಾಲಯದ ಹೊಕ್ಕು ತುಂಬುವ ಬಾವಿ, ಬೃಹತ್ ಕಟ್ಟಡವನ್ನು ಒಳಗೊಂಡ ಗದಗಿನ ಕೋನೇರಿ ಹೊಂಡ, ಗಜೇಂದ್ರಗಡದ ಪುಣ್ಯತೀರ್ಥ ಪುಷ್ಕರಣಿ, ಲಕ್ಷ್ಮೇಶ್ವರದ ಬಾವಿಗಳು, ಅಗತ್ಸತೀರ್ಥಗಳು ಪ್ರಾಚೀನ ಚರಿತ್ರೆಗೆ ಕೈಗನ್ನಡಿ. ಆದರೆ ಇವತ್ತು ಇವುಗಳು ಕಣ್ಮರೆಯತ್ತ ಸಾಗುತ್ತಿವೆ. ದಯವಿಟ್ಟು ಇದಕ್ಕೆ ಸಂಬಂಧಿಸಿದ ಇಲಾಖೆಯವರು ಮತ್ತು ಸಂಬಂಧಪಟ್ಟ ಅಧಿಕಾರಿಗಳು ಇದರತ್ತ ಗಮನಹರಿಸಿ ಇವುಗಳನ್ನು ಜೀರ್ಣೋದ್ಧಾರ ಕೈಗೋಂಡರೆ ಚರಿತ್ರೆಯನ್ನು ಉಳಿಸಿದಂತಾಗುತ್ತದೆ. ಇದರಿಂದ ಇಂದು ನಗರದ ತುಂಬಲ್ಲಾ ನೀರಿನ ಬೇಡಿಕೆ ಹೆಚ್ಚಾಗಿದೆ. ಅಷ್ಟಲ್ಲದೆ ಇವರಿಗೆ ತುಂಗಭದ್ರ ನದಿಯಿಂದ ಇಂದು ಕುಡಿಯಲು ನೀರನ್ನು ೮ ರಿಂದ ೧೦ ದಿನಗಳೂಮ್ಮೆ ಸರಬರಾಜು ಮಾಡಲಾಗುತ್ತಿದೆ.

**ಟಿಪ್ಪಣಿಗಳು :**

೦೧. ಚಂದ್ರಶೇಖರ್ ಎಚ್., ೨೦೦೧, **ಕರ್ನಾಟಕದ ಕೆಲ ಪುರಾತನ ಬಾವಿಗಳು ಅವಲೋಕನ,** ಪು.೧೯೧,

೦೨. ಬೆಳಗೆರೆ ಕೃಷ್ಣಮೂರ್ತಿ., ೨೦೧೧, **ಬೇಸಾಯವ ಮಾಡಿ,** ಪು. ೩೪

೦೩. ಅದೇ.

೦೪. ಸದಾಶಿವ ಜಿ.ಸಿ., ೨೦೦೧, **ಮಧ್ಯಕಾಲೀನ ಕರ್ನಾಟಕದ ಮಾಳಿಗೆ ಬಾವಿಗಳು,** ಪು. ೧೧೩

೦೫. ಧ್ರುವನಾರಾಯಣ ಎಂ., (ಕನ್ನಡ ಅನುವಾದ) ಸಿ.ಟಿ.ಎಂ. ಕೊಟ್ರಯ್ಯ., (ಆಂಗ್ಲ ಮೂಲ) ೨೦೦೧, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಪು. ೧೦೨.

೦೬. ಹರಿಹರ ಶ್ರೀನಿವಾಸರಾವ್., ೨೦೧೦, **ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ ತಂತ್ರಜ್ಞಾನ,** ಪು. ೬೩.

೦೭. ಅದೇ, ಪು. ೬೫.

೦೮. ಅದೇ.

೦೯. ಭಟ್ಟ ಕಪನೀತ., ೧೯೯೬, **ನೀರಾವರಿ,** ಪು. ೨೦.

೧೦. ಅದೇ, ಪು. ೨೧.

೧೧. ಅದೇ, ಪು. ೨೨.

೧೨. ಅದೇ, ಪು. ೨೩.

೧೩. SII- XI, No. 209,

೧೪. SII- XVIII, No. 280.

೧೫. SII- XI P-II, No. 159, P No. 203

೧೬. SII- XI P-II, No. 159, P No. 203

೧೭. SII- XV, No. 263, P No. 318

೧೮. ಸದಾಶಿವ ಜಿ.ಸಿ., ೨೦೦೧, **ಪೂರ್ವೋಕ್ತ,** ಪು. ೫೬

೧೯. K I-V, NO-16

೨೦. ಭೋವಿ ಎಂ ಬಿ., ೨೦೧೦, **ಲಕ್ಷ್ಮೇಶ್ವರದ ಶಾಸನಗಳು,** ಕನವಳ್ಳಿ ಸದಾನಂದ ಹಾಗೂ ಕೆರಮನಿ ಸಿ. ವ್ಹಿ.,(ಸಂ) **ತಿರುಳ್‌ಗನ್ನಡನಾಡು ಪುಲಿಗೆರೆ,** ಪು. ೧೧

೨೧. ಗಾಯಕ್ವಾಡ್ ವಿಠಲರಾವ್.,(ಕನ್ನಡ ಅನು)ಢೇರೆ ಚಿಂತಾಮನಿ ರಾಮಚಂದ್ರ (ಮರಾಠಿ ಮೂಲ)., ೨೦೧೨, **ಶಿಖರ ಸಿಂಗಣಾಪುರದ ಶ್ರೀ ಶಂಭುಮಹಾದೇವ,** ಪು. ೫೮೬

೨೨. ಪಾಟೀಲ್ ವಿನೋದ., ೨೦೦೫, **ಕರ್ನಾಟಕದ ಪ್ರಾಚೀನ ಬಾವಿಗಳು,** ಪು. ೫೬

೨೩. ಕೆರಮನಿ ಸಿ. ವ್ಹಿ., ೨೦೧೦, **ಲಕ್ಷ್ಮೇಶ್ವರದ ಇಂದು,** ಕನವಳ್ಳಿ ಸದಾನಂದ ಹಾಗೂ ಕೆರಮನಿ ಸಿ. ವ್ಹಿ., (ಸಂ) **ತಿರುಳುಗನ್ನಡ ನಾಡು ಪುಲಿಗೆರೆ** ಪು. ೯೯.

೨೪. SII- XX, P-II, No. 193.

೨೫. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೬೧.

೨೬. ಅದೇ, ಪು. ೬೨.

೨೭. SII- XV, No. 534, Page no-362

೨೮. SII- XI, P-I, No. 47, Page no-45-46

೨೯. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೪೧

೩೦. ಅದೇ, ಪು. ೪೨.

೩೧. ಅದೇ.

೩೨. SII- XI, P-II, No. 49, P No. 202.

೩೩. SII- XV, P-II, No. 35, P No. 558.

೩೪. SII- XI, P-I, No. 28, P No. 52.

೩೫. ಹರಿದಾಸ ಎಂ. ಎಚ್., ೨೦೦೮, ಗದುಗಿನ ಶ್ರೀ ವೀರನಾರಾಯಣ ಸ್ವಾಮಿ, ಪು. ೮೦.

೩೬. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೪೨

೩೭. SII- XV, No. 209, P No. 231-232.

೩೮. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೪೬

೩೯. SII- XI, P-I No. 47, P No. 45-46. ಕ್ರಿ.ಶ. 1148

೪೦. ಮುದೇನೂರ ಶಂಕರಪ್ಪ., ೨೦೧೧, **ಗಜೇಂದ್ರಗಡ-ನಡೆದು ಬಂದ ದಾರಿ,** ಪುಟ-೮.

೪೧. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೪೦.

೪೨. ಅದೇ, ಪು. ೪೦.

೪೩. ಬಾರಕೇರ ಚಂದ್ರಕಾಂತ., ೨೦೧೩, **ಇಷ್ಟಾರ್ಥ ಸಿದ್ಧಿಯೇ ಕಾಲಕಾಲೇಶ್ವರ,** ಕರ್ನಾಟಕ ದರ್ಶನ,

೪೪. ಮುದೇನೂರು ಶಂಕ್ರಪ್ಪ., ೨೦೧೧, **ಪೂರ್ವೋಕ್ತ,** ಪು. ೨೪.

೪೫. ಅದೇ, ಪು. ೨೬

೪೬. ಕೆರಮನಿ ಸಿ. ವ್ಹಿ., ೨೦೧೦, **ಲಕ್ಷ್ಮೇಶ್ವರದ ಇಂದು,** ಕನವಳ್ಳಿ ಸದಾನಂದ ಹಾಗೂ ಕೆರಮನಿ ಸಿ. ವ್ಹಿ.,(ಸಂ) **ತಿರುಳುಗನ್ನಡ ನಾಡು ಪುಲಿಗೆರೆ** ಪು. ೯೯

೪೭. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೫೭-೫೮

೪೮. ಪಾಟೀಲ್ ವಿನೋದ., ೨೦೦೫, **ಪೂರ್ವೋಕ್ತ,** ಪು. ೬೦

೪೯. ಬಿಷ್ಟಪ್ಪಯ್ಯ ಮಹಾಪುರುಷ., ೧೯೯೪, **ಹಂಪಿಯ ಶ್ರೀ ವಿರುಪಾಕ್ಷದೇವಾಯಲಯದ ನಿರ್ಮಾಪಕ** ಪು. ೧೮

೫೦. ವಾಸುದೇವನ್ ಸಿ.ಎಸ್. ಹಾಗೂ ಇತರರು., ೨೦೦೭, **ಕರ್ನಾಟಕ ದೇವಾಲಯ ಕೋಶ; ಗದಗ ಜಿಲ್ಲೆ,** ಪು. ೬೭.

೫೧. ಬಡಿಗೇರ ವಾಸುದೇವ, ೨೦೧೨, **ಸಂಡೂರು ಪರಿಸರದ ಕಾರ್ತಿಕೇಯ ತಪೋವನ,** ಪು. ೬೫.

೫೨. ವಾಸುದೇವನ್ ಸಿ.ಎಸ್. ಹಾಗೂ ಇತರರು., ೨೦೦೭, **ಕರ್ನಾಟಕ ದೇವಾಲಯ ಕೋಶ; ಗದಗ ಜಿಲ್ಲೆ,** ಪು. ೨೫೫.

೫೩. ಸಂಕಿನಮಠ ಶಿವಾನಂದಯ್ಯ., ೨೦೧೨, **ಶ್ರೀ ಹೊಳಲಮ್ಮದೇವಿ ಚರಿತ್ರಾಮೃತ,** ಪು. ೩೩

೫೪. ಪಡಶೆಟ್ಟಿ ಎಂ.ಎನ್., ೧೯೯೨, **ತಿಂಥಣಿ ಮೌನೇಶ್ವರರ ಒಂದು ಅಧ್ಯಯನ,** ಪು. ೬೬

೫೫. ಅದೇ, ಪು. ೬೬

೫೬. ಅದೇ, ಪು. ೬೭

೫೭. ಹರಿದಾಸ ಎಂ ಎಚ್., ೨೦೧೦, **ಪೂರ್ವೋಕ್ತ,** ಪು. ೪೯-೫೦.

## ಅಧ್ಯಾಯ ೫

# ಕೆರೆ-ಬಾವಿಗಳ ನಿರ್ಮಾಣ ಮತ್ತು ನಿರ್ವಹಣೆ

**೫.೧. ನಿರ್ಮಾಣ**

೫.೧.೧. ಕೆರೆ ನಿರ್ಮಾಣದ ಉದ್ದೇಶ.

೫.೧.೨ ಕೆರೆಗಳ ನಿರ್ಮಾಣ

೫.೧.೩. ಕೆರೆಗಳನ್ನು ನಿರ್ಮಿಸಲು ಅಗತ್ಯವಾದ ಅಂಶಗಳು

೫.೧.೪. ಕೆರೆಗಳನ್ನು ನಿರ್ಮಿಸಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆಕ್ರಮಗಳು

೫.೧.೫. ವಿವಿಧ ಕಾಲಘಟ್ಟದಲ್ಲಿ ನಿರ್ಮಾಣಗೊಂಡ ಕೆರೆಗಳು

೫.೧.೬. ಕೆರೆಗಳ ರಚನಾ ವಿಧಾನ.

೫.೧.೭. ತಾಂತ್ರಿಕತೆ.

೫.೧.೭.೧. ಜಲಾನಯನ ಪ್ರದೇಶ

೫.೧.೭.೨. ಕೆರೆಯ ಅಂಗಳ

೫.೧.೭.೩. ಅಚ್ಚುಕಟ್ಟು ಪ್ರದೇಶ

೫.೧.೭.೪. ಕೆರೆಯ ಏರಿ

೫.೧.೭.೫. ಕಾಲುವೆ

೫.೧.೭.೬. ತೂಬು

೫.೧.೭.೭. ಕೋಡಿ

**೫.೨. ನಿರ್ವಹಣೆ**

೫.೨.೧. ಕೆರೆಗಳ ನಿರ್ವಹಣೆಗೆ ಪ್ರಮುಖ ವ್ಯಕ್ತಿಗಳ ಪಾತ್ರ.

೫.೨.೨. ಕೆರೆಗಳ ಸಂರಕ್ಷಣೆ

೫.೨.೩. ಸಾಮಾನ್ಯ ಸಂರಕ್ಷಣೆಯ ಕ್ರಮಗಳು

೫.೨.೪. ಕೆರೆ-ಬಾವಿಗಳ ದುರಸ್ತಿ ಮತ್ತು ನಿರ್ವಹಣೆ

೫.೨.೫. ಸರಣಿ ಕೆರೆಗಳು

೫.೨.೬. ಕೆರೆಗಳ ನೀರಿನ ಹಂಚಿಕೆ ಮತ್ತು ಬಳಕೆ

೫.೨.೭. ವಿದೇಶಿ ಬರಹಗಾರರು ಕಂಡಂತೆ ಕೆರೆ-ಬಾವಿಗಳ ನಿರ್ವಹಣೆ

೫.೨.೮. ಕೆರೆಗಳ ನಿರ್ವಹಣೆಗೆ ಬಿಟ್ಟ ದಾನದತ್ತಿಗಳ ವಿಧಾನಗಳು.

೫.೨.೯. ಕೆರೆಗಳು ಮತ್ತು ಸಮುದಾಯ

೫.೨.೮. ಕೆರೆಗಳ ನಿರ್ಮಾಣದಲ್ಲಿ ಶಿಲ್ಪಿಗಳ ಪಾತ್ರ.

೫

# ಕೆರೆ-ಬಾವಿಗಳ ನಿರ್ಮಾಣ ಮತ್ತು ನಿರ್ವಹಣೆ

## ೫.೧. ನಿರ್ಮಾಣ

ಕೆರೆಗಳ ನಿರ್ಮಾಣದಲ್ಲಿ ನಮ್ಮ ಪೂರ್ವಿಕರು ಅಳವಡಿಸಿಕೊಂಡಿರುವ ವಿಧಾನಗಳ ಬಗ್ಗೆ ನಮಗೆ ಸಿಗುವ ಮಾಹಿತಿ ಬಹುಮಟ್ಟಿಗೆ ಇಲ್ಲವೇ ಇಲ್ಲ ಎನ್ನಬಹುದು. ಅವರು ಕಟ್ಟೆಯ ಎರಡು ಕಡೆಯ ಇಳಿಜಾರುಗಳನ್ನು ಯಾವ ಸೂತ್ರವನ್ನು ಅವಲಂಬಿಸಿ ನಿರ್ಮಿಸುತ್ತಿದ್ದರು. ಕೋಡಿಯನ್ನು ನಿರ್ಮಿಸುವಾಗ ಯಾವ ಅಂಶವನ್ನು ಅನುಸರಿಸುತ್ತಿದ್ದರು. ಈ ಬಗೆಯ ಪ್ರಶ್ನೆಗಳಿಗೆ ನಮಗೆ ಯಾವ ಉತ್ತರವೂ ಸಿಗುವುದಿಲ್ಲ. ನಮ್ಮ ಪೂರ್ವಿಕರು ಯಾವ ಲಿಖಿತ ದಾಖಲೆಗಳನ್ನು ಇಟ್ಟಿರುವುದಿಲ್ಲ. ಅಲ್ಪಸ್ವಲ್ಪ ವಿಷಯವಾಗಿ ನಮಗೆ ಮಾಹಿತಿ ಸಿಗುವುದು 'ಪೌರಮಾಮಲ ಶಾಸನ'[೧] ದಿಂದ ಪೌರಮಾಮಿಲ ಇರುವುದು ಆಂಧ್ರಪ್ರದೇಶದ ಕಡಪ ಜಿಲ್ಲೆಯ ಒಡವೇಲು ತಾಲೂಕಿನಲ್ಲಿ ಕೆರೆಯ ಹೆಸರು 'ಅನಂತಸಾಗರ' ಇದನ್ನು ಕಟ್ಟಿಸಿದ್ದು ೧೪ನೇ ಶತಮಾನದಲ್ಲಿ ವಿಜಯನಗರ ಅರಸರ ಆಳ್ವಿಕೆಯಲ್ಲಿ. ಈ ಶಾಸನದಿಂದ ನಮಗೆ ತಿಳಿಯುವ ಮುಖ್ಯ ಅಂಶವೆಂದರೆ ಕೆರೆ ಕಟ್ಟಲು ಮುಖ್ಯವಾಗಿ ಕಟ್ಟೆಯ ಭದ್ರವಾದ ಬುನಾದಿ ಮತ್ತು ಕೆರೆಯ ಅಂಗಳ ನೀರು ಸೋರಿ ಹೋಗದಂತಿರುವಂತಹ ಭೂಮಿಯಾಗಿರಬೇಕೆಂಬುದರ ಬಗ್ಗೆ ಮಹತ್ವವನ್ನು ನೀಡಿರುವುದು. ಈ ಅಂಶಗಳು ಇಂದಿಗೂ ಸಹ ಗಮನಾರ್ಹ. ಕೆರೆ ಜಲಾಶಯಗಳ ನಿರ್ಮಾಣದಲ್ಲಿ ಇದರಿಂದ ನಮಗೆ ತಿಳಿಯುವುದೇನೆಂದರೆ ನಮ್ಮ ಪೂರ್ವಿಕರು ಕೆರೆ ನಿರ್ಮಾಣದಲ್ಲಿ ವೈಜ್ಞಾನಿಕ ದೃಷ್ಟಿಯನ್ನು ಹೊಂದಿದ್ದರು. ಉದಾ: ಡಂಬಳ ಕೆರೆ, ಬಾಗೆವಾಡೆ ಕೆರೆ, ದೇವಿಹಾಳ ಕೆರೆ ಇತ್ಯಾದಿ.

ಈ ಕಾಲದಲ್ಲಿ ಸುಲಭವಾಗಿ ಸಿಗುತ್ತಿದ್ದ ಮಣ್ಣು ಕಲ್ಲನ್ನು ಉಪಯೋಗಿಸಿಯೇ ಈ ಎಲ್ಲಾ ಕೆರೆಗಳ ನಿರ್ಮಾಣವು ನಡೆಯುತ್ತಿತ್ತು. ಅಲ್ಲದೇ ಬೃಹತ್ ಜಲಾಶಯಗಳನ್ನು ಕಟ್ಟುವ ಅವಶ್ಯಕತೆಯೇ ಅವರಿಗೆ ಇರಲಿಲ್ಲ. ಪ್ರತಿಯೊಂದು ಗ್ರಾಮವು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿರುತ್ತಿತ್ತು. ಆದ್ದರಿಂದ ಅಂದಿನ ಕೆರೆ ತಮ್ಮ ಗ್ರಾಮಕ್ಕೆ ಸೀಮಿತವಾಗಿರುತ್ತಿದ್ದವು.[೨] ಅವುಗಳಲ್ಲಿ ವಿಶೇಷವಾದ ವೈಶಿಷ್ಟ್ಯಗಳು ಇರುತ್ತಿರಲಿಲ್ಲ, ಪ್ರಾಚೀನ ಕಾಲದಿಂದ ಇಂದಿಗೂ ಉಳಿದಿರುವ ಹಲವು

ಕೆರೆಗಳನ್ನು ಪರಿಶೀಲಿಸಿದರೆ ನಮಗೆ ನಮ್ಮ ಪೂರ್ವಜರು ಕುಶಲತೆ ವಿಶಿಷ್ಟ ದೃಷ್ಟಿಯ ಬಗ್ಗೆ ಅಲ್ಪಸ್ವಲ್ಪ ಮಾಹಿತಿ ಸಿಗುತ್ತದೆ.

ಈ ಹಿಂದಿನ ಅಧ್ಯಾಯದಲ್ಲಿ ಮುಖ್ಯವಾಗಿ ಅಧ್ಯಯನಕ್ಕೆ ಸಂಬಂಧಿಸಿದ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ, ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ನಿರ್ಮಾಣವಾದ ಕೆರೆ-ಬಾವಿಗಳು ಕುರಿತು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಾಯವು ಕೂಡ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ನಿರ್ಮಾಣವಾದ ಕೆರೆ- ಬಾವಿಗಳ ನಿರ್ಮಾಣದ ತಾಂತ್ರಿಕತೆ ಮತ್ತು ಉದ್ದೇಶ, ಕೆರೆಗಳ ರಚನಾ ವಿಧಾನಗಳಲ್ಲಿನ ವಿಶೇಷವಾದಂತಹ ವಿಚಾರಗಳನ್ನು ಒಳಗೊಂಡಿದ್ದು, ಕೆರೆಗಳ ನಿರ್ವಹಣೆ ಸಂರಕ್ಷಣೆ ಸಾಮಾನ್ಯ ರಕ್ಷಣಾ ವಿಧಾನಗಳು, ಮುಖ್ಯವಾಗಿ ಕೆರೆಗಳಿಗೆ ನೀರಿನ ಮೂಲಗಳು ಯಾವುವು ಸರಪಣಿ ಕೆರೆಗಳ ಅನುಕೂಲ ಹಾಗೂ ಕೆರೆಗಳ ನಿರ್ವಹಣಾ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಂತಹ ಸ್ಥಳೀಯ ಆಡಳಿತ ವರ್ಗದವರ ವಿವರ ಹಾಗೂ ನೀರಗಂಟಿಗಳ ನೀರಿನ ಹಂಚಿಕೆ ಮತ್ತು ಬಳಕೆಯನ್ನು ಹೇಗೆ ಮಾಡುತ್ತಿದ್ದರು ಎಂಬ ವಿಷಯಗಳನ್ನು ಕುರಿತು ಚರ್ಚಿಸಿದೆ.

**೫.೧.೧. ಕೆರೆ ನಿರ್ಮಾಣದ ಉದ್ದೇಶ**

"ಕೆರೆಯಂ ಕಟ್ಟಿಸು ಭಾವಿಯಂ ಸವೆಸು ದೇವಗಾರಮಂ ಮಾಡಿಸು
ಜ್ಜೆರೆಯಾಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬದ
ರ್ಗೆರೆ ವಟ್ಟಾಗಿರು ಶಿಷ್ಟರಂ ಪೊರೆಯನ್ನುತ್ತಿಂತೆಲ್ಲವಂ ಪಿಂದೆ
ತಾ. ಯೆಂದಳ್ವಾಲೆರೆವಂದು ತೊಟ್ಟು ಕಿವಿಯಾಳ್ ಲಕ್ಷ್ಮೀದರಾ ಮಾತ್ಯನಾ"[೩]

ತಾಯಿ ಹಾಲುಣಿಸುವಾಗ ಕಂದನಿಗೆ ಕಿವಿಯಲ್ಲಿ ಹೇಳುವ ಈ ಪಿಸುಮಾತು ಹಿಂದಿನವರು ತಮ್ಮ ನಿಜ ಜೀವನದಲ್ಲಿ ಪಾಲಿಸಬೇಕಾದ ನಿಯಮಗಳಾಗಿವೆ. ಇವುಗಳಲ್ಲಿ ಕೆರೆ ಬಾವಿಗಳ ನಿರ್ಮಾಣವು ಪ್ರಥಮ ಪ್ರಾಶಸ್ತ್ಯದಲ್ಲಿ ಸೇರಿರುವುದು ವಿಶೇಷವಾದುದು. ಇದರಿಂದ ಅಂದಿನ ಪರಿಸ್ಥಿತಿಯಲ್ಲಿ ಕೆರೆಬಾವಿಗಳು ನಿರ್ಮಾಣವು ಹೆಚ್ಚಿನ ಮಹತ್ವ ಹೊಂದಿದ್ದು ಸ್ಪಷ್ಟವಾಗಿದೆ.

ಪ್ರಾಚೀನ ಕಾಲದಲ್ಲಿ ನಿರ್ಮಿತವಾದಂತಹ ಕೆರೆಗಳು ಕೇವಲ ತಮ್ಮ ಸಂಬಂಧಿಕರ ನೆನಪಿಗಾಗಿ ಕೆರೆಗಳನ್ನು ನಿರ್ಮಿಸದೆ ಆಡಳಿತದ ದೃಷ್ಟಿಕೋನದಿಂದ ಆರ್ಥಿಕತೆಯನ್ನು ಹೆಚ್ಚಿಸುವ ಉದ್ದೇಶದಿಂದ ರಾಜ್ಯದ ಹಿತದೃಷ್ಟಿಯಿಂದ ವ್ಯವಸಾಯದ ಉಪಯೋಗಕ್ಕಾಗಿ ಕೆರೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಕೆರೆಗಳನ್ನು ನಿರ್ಮಿಸುವುದರಿಂದ ಜನರು ಸಹ ಒಂದೆಡೆ ನೆಲೆ ನಿಂತು ಜೀವನ ಸಾಗಿಸಲು ಹಾಗೂ ಕೃಷಿಯನ್ನು ಅಭಿವೃದ್ಧಿಪಡಿಸಲು ಅನುಕೂಲವಾಗುತ್ತಿತ್ತು. ರೈತರು ಕೇವಲ ಮಳೆಯನ್ನು ಆಶ್ರಯಿಸಿದ್ದರು. ಆದರೆ ಕೆರೆಗಳ ನಿರ್ಮಾಣದಿಂದ ಬೇಸಿಗೆಯಲ್ಲಿ ಬೆಳೆಯನ್ನು ಬೆಳೆಯಲು ಅತ್ಯಂತ ಉಪಯುಕ್ತವಾಗುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ.

### ೫.೧.೨. ಕೆರೆಗಳ ನಿರ್ಮಾಣ

ಕರ್ನಾಟಕದಲ್ಲಿ ಅತ್ಯಧಿಕವಾಗಿ ಕೆರೆಗಳು ಏಕೆ ನಿರ್ಮಾಣಗೊಂಡವು ಎಂಬ ಪ್ರಶ್ನೆಯು ನಮ್ಮಲ್ಲಿ ಉದ್ಭವಿಸುತ್ತದೆ. ಇದಕ್ಕೆ ಉತ್ತರವನ್ನು ನಾವು ಇಂದಿನ ಮತ್ತು ಪ್ರಾಚೀನ ಕಾಲದ ಹವಾಮಾನಗಳನ್ನು ಪರಿಶೀಲಿಸಿದಾಗ ಇತ್ತೀಚೆಗೆ ನಡೆಸಿದ ಸಂಶೋಧನೆಗಳಿಂದ ಇಂದಿನ ಹವಾಮಾನವು ಮತ್ತು ಹದಿನೈದನೆಯ ಶತಮಾನದ ಹವಾಮಾನವು ಒಂದೇ ಆಗಿತ್ತೆಂದು ದೃಢಪಟ್ಟಿದೆ. ಕ್ರಿ.ಶ. ೧೧ನೇ ಶತಮಾನದಿಂದೀಚೆಗೆ ಹವಾಮಾನದಲ್ಲಿ ವ್ಯತ್ಯಯ ಉಂಟಾಗತೊಡಗಿತು.[೪] ೧೫ನೇ ಶತಮಾನದ ಹವಾಮಾನವು ಇಂದಿನ ಹವಾಮಾನದಂತಿರುವುದರಿಂದ ಈಗಿರುವಂತೆಯೇ ಧಾರವಾಡ ಮತ್ತು ಕೊಪ್ಪಳ ಒಳಗೊಂಡ ಮಧ್ಯೆ ಮತ್ತು ಉತ್ತರ ಭಾಗಗಳು ಮಳೆಯನ್ನು ಸಾಕಷ್ಟು ಪಡೆಯುತ್ತಿರಲಿಲ್ಲವೆಂದು ಹೇಳಬಹುದು. ಈ ಕಾರಣದಿಂದಾಗಿ ಅಂದಿನ ಕಾಲದಲ್ಲಿ ಕೃತಕ ಜಲ ಸಂಗ್ರಹಗಳ ಅವಶ್ಯಕತೆಯುಂಟಾಯಿತು. ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅಧಿಕವಾಗಿ ಕೆರೆ-ಬಾವಿಗಳನ್ನು ನಿರ್ಮಿಸಲಾಯಿತು. ಇದರೊಂದಿಗೆ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಪೂರೈಸುವ ಸಲುವಾಗಿ ಹೆಚ್ಚುವರಿ ಭೂಮಿಯನ್ನು ಕೃಷಿಗೆ ಒಳಪಡಿಸಲಾಯಿತು. ಇವುಗಳಿಗೆ ನೀರನ್ನು ಪೂರೈಸಲು ಕೃತಕ ಜಲಸಂಗ್ರಹಗಳಾದ ಕೆರೆಗಳು ಹೆಚ್ಚು ಬಳಕೆಗೆ ಬಂದವು.

ಗದಗ ಪ್ರದೇಶ ಪ್ರಾಯಶಃ ಮೊದಲಿನಿಂದಲೂ ಕಡಿಮೆ ಮಳೆ ಬೀಳುವ ಪ್ರದೇಶ ವಿರುವಂತೆ ತೋರುತ್ತದೆ. ಹಾಗೆಂದೇ ಈ ಭಾಗದಲ್ಲಿ ಆಳಿದ ರಾಜ ಮನೆತನಗಳು ಕಾಲಕಾಲಕ್ಕೆ ನೀರಾವರಿ ಮೂಲಗಳನ್ನು ಜೀರ್ಣೋದ್ಧಾರ ಮಾಡಿಸಿರುವುದು ಕಂಡು ಬರುತ್ತದೆ. ಹಿಂದೆ ಅವರು ಕಲ್ಪಿಸಿದ ನೀರಾವರಿ ವ್ಯವಸ್ಥೆ ಇಂದಿಗೂ ಸಹ ಎಷ್ಟೋ ಕಡೆ ಉಳಿದು ಬಂದಿದ್ದು ಈಗಲೂ ಪ್ರಯೋಜನಕಾರಿಯಾಗಿದೆ. ಈ ಪ್ರದೇಶದಲ್ಲಿ ಬಹುಸಂಖ್ಯೆಯ ಕೆರೆ, ಹೊಂಡ, ಬಾವಿಗಳಿದ್ದು ಅವುಗಳಲ್ಲಿ ಒಂದೊಂದನ್ನು ಪ್ರತ್ಯೇಕ ಗುಂಪಾಗಿ ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಿದೆ. ಪ್ರಸ್ತುತ ಗದಗ ಪರಿಸರ ಹಾಗೂ ಕೇಂದ್ರವಾಗಿರುವ ಪ್ರದೇಶದಲ್ಲಿ ಹಿಂದಿನ ಕಾಲದಲ್ಲಿ ಕೆರೆಗಳ ಮೂಲಕ ರೂಪಿಸಲಾದ ನೀರಾವರಿ ವ್ಯವಸ್ಥೆ ಹೇಗಿತ್ತು ಮತ್ತು ಆ ಪ್ರದೇಶದ ಬೆಳವಣಿಗೆಯಲ್ಲಿ ಅದರ ಪಾತ್ರ ಏನಿದ್ದಿರಬಹುದು; ಈ ಬಗೆಗಿನ ಪರಿಶೀಲನೆ ಕುತೂಹಲಕಾರಿಯಾಗಿರುತ್ತದೆ. ಈ ಕುರಿತು ಶಾಸನಗಳು ಗದಗ ಪ್ರದೇಶದಲ್ಲಿ ಕಂಡು ಬರುತ್ತವೆ.

ನಿಸರ್ಗದ ಭೌಗೋಳಿಕ ಲಕ್ಷಣ ಮಳೆಯ ಅತಿವೃಷ್ಟಿ ಮತ್ತು ಅನಾವೃಷ್ಟಿಯ ಸ್ವಭಾವವನ್ನರಿತು ಕೆರೆಗಳನ್ನು ವಿವಿಧ ಭೂಮಟ್ಟದಲ್ಲಿ ಒಂದಕ್ಕೊಂದು ಹೊಂದಿಕೊಂಡಿರುವಂತೆ ನಿರ್ಮಿಸಿರುತ್ತಾರೆ. ಇದರಿಂದಾಗಿ ಮೊದಲ ಕೆರೆಯು ಮೇಲ್ಮಟ್ಟದಲ್ಲಿದ್ದು ಮಳೆಯ ನೀರು ಅದರಲ್ಲಿ ಸಂಗ್ರಹಗೊಳ್ಳುತ್ತದೆ. ಹೆಚ್ಚುವರಿ ನೀರು ಸಂಗ್ರಹವಾಗುತ್ತದೆ. ಈ ವಿಶಿಷ್ಟ ಪದ್ಧತಿಯಿಂದ ಒಮ್ಮೆ ಹೆಚ್ಚುವರಿ ನೀರು ಮೊದಲ

ಕೆರೆಗೆ ಬಂದರೂ, ಕೆರೆಯು ಒಡೆಯದಂತೆ ಇರುತ್ತದೆ. ಹಾಗೂ ನೀರು ಪೋಲಾಗುವುದನ್ನು ಸಹ ಎರಡನೆಯ ಕೆರೆಯು ತಪ್ಪಿಸುತ್ತದೆ.[೫] ಇಂತಹ ಕೆಲವು ಕೆರೆಗಳ ಸಮೂಹವನ್ನು ಗದಗ ಜಿಲ್ಲೆಯ ಡಂಬಳ, ಕುರ್ತಕೋಟಿ, ಚಿಕ್ಕಹಂದಿಗೋಳ, ಶ್ಯಾಗೋಟಿ ಗ್ರಾಮಗಳಲ್ಲಿ ನೋಡಬಹುದು.

ಕೆಲವು ಸಮಯದಲ್ಲಿ ನೀರಾವರಿ ಕೆರೆಗಳನ್ನು ಚಿಲುಮೆಯ ಬಾವಿಗಳಿಂದ ಹಾಗೂ ನೀರು ಸಂಗ್ರಹವಾಗುವ ಆಯಕಟ್ಟಿನ ಸ್ಥಳಗಳಲ್ಲಿ ಅನುಕೂಲ ನೋಡಿ ನಿರ್ಮಿಸಲಾಗುತ್ತಿತ್ತು. ಹೀಗಾಗಿ ಎರಡೂ ಮೂಲಗಳಿಂದ ನೀರು ಸಂಗ್ರಹಿಸಲಾಗುತ್ತಿತ್ತು.

ಕೆರೆಗಳನ್ನು ಕಟ್ಟಿಸುತ್ತಿದ್ದುದು ಬಹುಮಟ್ಟಿಗೆ ದಂಡನಾಯಕರು. ಕೆಲವು ಕೆರೆಗಳನ್ನು ದೇವಸ್ಥಾನಗಳು ತಮ್ಮ ತಮ್ಮ ನಿಧಿಯಿಂದ ಕಟ್ಟಿಸುತ್ತಿದ್ದರು.[೬] ಅಲ್ಲದೆ ಬಹುಮಟ್ಟಿಗೆ ಪುಣ್ಯ ಸಂಪಾದನೆಗಾಗಿ ಕೆಲವೊಮ್ಮೆ ಕೆರೆಗಳನ್ನು ತಮ್ಮ ಹತ್ತಿರದ ಅಥವಾ ಪ್ರಿಯ ಬಂಧುಗಳ ನೆನಪಿಗಾಗಿ ಕಟ್ಟಿಸಲಾಗುತ್ತಿತ್ತು ಮತ್ತು ತತ್ಸಂಬಧಿತ ಕೆಲಸಗಳ ವೆಚ್ಚವನ್ನು ನೋಡಿದರೆ ಕೆರೆ ನಿರ್ಮಾಣವನ್ನು ಲಾಭದೃಷ್ಟಿಯಿಂದ ಕೈಗೆತ್ತಿಕೊಳ್ಳುವುದು ಸಾಧ್ಯವಿರಲಿಲ್ಲ. ಜನರಿಗೆ ನೀರು ಒದಗಿಸಲು ಕೆರೆಗಳು ಬೇಕು; ಅದನ್ನು ಧರ್ಮಕಾರ್ಯವೆಂದು ಕಟ್ಟಿಸಲಾಗುತ್ತಿತ್ತು.

ಈವರೆಗೆ ನಾವು ಅತಿ ಪ್ರಾಚೀನ ಕಾಲದಿಂದ ಇವತ್ತಿನವರೆಗಿನ ಕೆರೆ ನೀರಾವರಿಯ ಇತಿಹಾಸವನ್ನು ಗುರುತಿಸಿದ್ದೇವೆ. ಹಿಂದಿನ ಕಾಲದಲ್ಲಿ ಹಾಗೂ ಈಗ ಆ ಕೆಲಸಗಳು ನಿರ್ಮಾಣ ಹಾಗೂ ಸಂರಕ್ಷಣೆಗಾಗಿ ಮತ್ತು ನಿರ್ವಹಣೆಗಾಗಿ ಅನುಸರಿಸಲಾದ ಕ್ರಮಗಳು, ಅವುಗಳ ನಿರ್ವಹಣೆಗಾಗಿ ಮಾಡಲಾದ ವ್ಯವಸ್ಥೆಗಳು, ಅವುಗಳಲ್ಲಿ ನೀರು ಹಂಚಿಕೆಯ ವಿಧಾನ, ನಿರ್ಮಾಣದ ವೆಚ್ಚ ಹಾಗೂ ಫಲಾನುಭವಿಗಳಿಗೆ ವಿಧಿಸಬೇಕಾದ ನೀರು ತೆರಿಗೆ ದರಗಳು ಇವುಗಳನ್ನೆಲ್ಲಾ ತಿಳಿದುಕೊಳ್ಳದೆ ಇದ್ದರೆ ಅಧ್ಯಯನ ಪೂರ್ಣವಾಗುವುದಿಲ್ಲ. ನೀರಾವರಿ ಆಡಳಿತದ ಈ ಅಧ್ಯಯನ, ಹಿಂದಿನ ವಿಧಾನಗಳಿಂದ ನಾವು ಅರಿಯಲು ಸಹಾಯಕವಾಗುತ್ತದೆ.

ನಮ್ಮ ಹಿಂದಿನವರು ಕಟ್ಟಿದ ಬಹುಪಾಲು ಕೆರೆಗಳು ಚಿಕ್ಕದಾಗಿದ್ದವು. ಅವುಗಳಲ್ಲಿ ಅನೇಕ ಕೆರೆಗಳು ಕಣ್ಮರೆಯಾಗಿವೆ. ಕಾಲಕಾಲಕ್ಕೆ ದುರಸ್ತಿಯಾದ ಹಾಗೂ ಜೀರ್ಣೋದ್ಧಾರವಾದಂಥ ಕೆಲವು ದೊಡ್ಡ ಕೆರೆಗಳು ಉಳಿದುಕೊಂಡಿವೆ. ಅವು ಸಹ ಕಳೆ ಹೂಳು ತುಂಬಿಕೊಂಡು ಅಸಡ್ಡೆಗೆ ಒಳಗಾಗಿವೆ. ಭಾರಿ ನೀರಾವರಿ ಕಾಲುವೆ ವ್ಯೂಹದ ಅಚ್ಚುಕಟ್ಟು ಪ್ರದೇಶಗಳಲ್ಲಿರುವ ಕೆರೆಗಳಾದರೂ ಆ ಕಾಲುವೆ ವ್ಯೂಹದಿಂದ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಹರಿದು ಬರುವ ಜಲಪ್ರವಾಹದ ದೆಸೆಯಿಂದಾಗಿ ಇನ್ನೂ ಉಪಯುಕ್ತವಾಗಿವೆ.[೭] ಕೆರೆ, ಏರಿ ಇತ್ಯಾದಿಗಳು ವಿನ್ಯಾಸ ಹಾಗೂ ರಚನೆ ಬಗ್ಗೆ ನಿರ್ಮಾಪಕರಿಗೆ ಇದ್ದ ಜ್ಞಾನಕ್ಕೆ ಸಾಕ್ಷಿಯಾಗಿವೆ. ಇನ್ನೂರು ಮುನ್ನೂರು ವರ್ಷಗಳಿಂದಲೂ ಬಳಕೆಯಲ್ಲಿವೆ.

### ೫.೧.೩. ಕೆರೆಗಳನ್ನು ನಿರ್ಮಿಸಲು ಅಗತ್ಯವಾದ ಅಂಶಗಳು:

ಕ್ರಿ.ಶ. ೧೩೬೯ ಬುಕ್ಕರಾಯನ ಪೂರುಮಾಮಿಲ್ಲ ಶಾಸನದ ಪ್ರಕಾರ ಕೆರೆಯನ್ನು ನಿರ್ಮಿಸಲು ಪ್ರಮುಖವಾದ ಕೆಲವು ಅಂಶಗಳು ಈ ಕೆಳಗಿನಂತಿವೆ.

೧. ರಾಜನು ಸಂತೃಪ್ತನಾಗಿಯೊ, ಸಂತೋಷದಿಂದ ಕೂಡಿದವನಾಗಿಯೂ ಮತ್ತು ಆಚಂದ್ರಾರ್ಕವಾಗಿ ಹೆಸರು ಗಳಿಸಿಕೊಳ್ಳುವವನಾಗಿ (ಇರಬೇಕು) ಅಂಥವನು ಕೆರೆಯ ನಿರ್ಮಾಣಕ್ಕೆ ತೊಡಗಿಕೊಳ್ಳಬೇಕು.

೨. ಜಲಶಾಸ್ತ್ರದಲ್ಲಿ (ಪಯಸ್‌ಶಾಸ್ತ್ರ)ದಲ್ಲಿ ನೈಪುಣ್ಯತೆಯನ್ನು ಹೊಂದಿದ ಬ್ರಾಹ್ಮಣನು ಈ ಕಾರ್ಯದಲ್ಲಿ ತೊಡಗಬೇಕು.

೩. ಉತ್ತಮ ಜೇಡಿಮಣ್ಣು ಕೂಡಿರುವಂತಹ ಪ್ರದೇಶವನ್ನು (ಕೆರೆ ಕಟ್ಟುವುದಕ್ಕೆ ಆಯ್ದುಕೊಳ್ಳಬೇಕು).

೪. ನದಿಯ ನೀರಿನ ಆಶ್ರಯವು ಅಥವಾ ಬುಗ್ಗೆಯ ಕೆರೆಯಿಂದ ಸುಮಾರು ಮೂರು ಯೋಜನಗಳಷ್ಟು ದೂರದಲ್ಲಿರಬೇಕು.

೫. ಬೆಟ್ಟಗಳ ಸಾಲುಗಳು ಇದ್ದಲ್ಲಿ, ಅವುಗಳನ್ನು ಕೆರೆಯನ್ನು ನಿರ್ಮಿಸಲು ಉಪಯೋಗಿಸಿ ಕೊಳ್ಳಬೇಕು.

೬. (ಬೆಟ್ಟಗಳ) ನಡುವಿನ (ಕಣಿವೆ) ಪ್ರದೇಶದಲ್ಲಿ ಅತಿ ದೊಡ್ಡದಲ್ಲದ ಮತ್ತು ಸದೃಢವಾದ ಗೋಡೆ (ಏರಿ)ಯನ್ನು (ಕಟ್ಟಬೇಕು).

೭. (ಕೆರೆಯ ಪ್ರದೇಶದಲ್ಲಿ) ಸಮೀಪದಲ್ಲಿ ಫಲ ಕೊಡುವ ಭೂಮಿಯಿರಬೇಕು.

೮. ಕೆರೆಯ ನೀರಿನ ಹರವು ವಿಸ್ತೀರ್ಣವಾಗಿರಬೇಕು, ಹಾಗೆಯೇ ಆಳವಾಗಿಯೂ ಇರಬೇಕು.

೯. ಸಮೀಪದಲ್ಲಿಯೇ ಕಲ್ಲುಗಣಿಗಳು ಇದ್ದು ಅಲ್ಲಿ ಉದ್ದವಾದ ಮತ್ತು ಸಮನಾದ ಕಲ್ಲುಗಳು ದೊರೆಯಬೇಕು.[೮]

೧೦. (ಕೆರೆಯ)ಸಮೀಪದಲ್ಲಿರುವ ಜಮೀನು ಫಲವತ್ತಾಗಿರಬೇಕು ಹಾಗೂ ಅಲ್ಲಿ ಹಣ್ಣು, ಹಂಪಲುಗಳು ವನಗಳು ಇರಬೇಕು ಮತ್ತು ಜಮೀನು ಸಮನಾಗಿ ಏರಿಳಿತವಿಲ್ಲದೇ ಇರಬೇಕು.

೧೧. (ಕೆರೆಯ)ತೂಬುಗಳಲ್ಲಿನ ಕಲ್ಲು ಅಥವಾ ನಿಯಂತ್ರಕಗಳ ಭದ್ರವಾಗಿರಬೇಕು ಮತ್ತು ಇದನ್ನು ನೀರಿನ ಒತ್ತಡದಿಂದ ಕಾಪಾಡುವಷ್ಟು ಸದೃಢವಾಗಿರಬೇಕು.

೧೨. ಕೆರೆಗಳನ್ನು ಕಟ್ಟುವ ತಂತ್ರಜ್ಞಾನವನ್ನು ಹೊಂದಿರುವಂತಹ ಹನ್ನೆರಡು ಮಂದಿಯಿರಬೇಕು ಮತ್ತು ಅವರೆಲ್ಲರೂ ಮೇಲೆ ಉಲ್ಲೇಖಿಸಿದ ಹನ್ನೊಂದು ಅಂಶಗಳನ್ನು ಅರಿತಿರಬೇಕು.

### ೫.೧.೪. ಕೆರೆಗಳನ್ನು ನಿರ್ಮಿಸಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು :

೧. ಕೆರೆಯಿಂದ ನೀರು ಸ್ರವಿಸಬಾರದು.

೨. ಕೆರೆಯ ಪಾತ್ರದಲ್ಲಿ ಮಣ್ಣು ಉಪ್ಪಿನಂಶದಿಂದ ಕೂಡಿರಬಾರದು.

೩. ಎರಡು ರಾಜ್ಯಗಳ ನಡುವಿನ ಗಡಿ ಪ್ರದೇಶವನ್ನು ಆಯ್ಕೆ ಮಾಡಬಾರದು.

೪. ಕೆರೆಯ ಮಧ್ಯಭಾಗವನ್ನು (ಕೂರ್ಮ ಪ್ರದೇಶ) ಗಮನಿಸಬೇಕು, ಅವು ಎತ್ತರ ಅಥವಾ ಉಬ್ಬಾಗಿರಬಾರದು.

೫. ಅತ್ಯಲ್ಪ ನೀರು ಬರುವ ಪ್ರದೇಶವನ್ನು ಆಯ್ಕೆ ಮಾಡಬಾರದು ಮತ್ತು ಅತಿ ಹೆಚ್ಚು ಆಯಕಟ್ಟು ಇರುವ ಜಾಗವನ್ನು ಆರಿಸಬಾರದು.

೬. ಸ್ವಲ್ಪ ಜಮೀನಿದ್ದು ಅಧಿಕ ನೀರು ಬರುವಂತಹ ಜಾಗವನ್ನು ಆಯ್ಕೆ ಮಾಡಬಾರದು.[೯]

ಭಾರತದ ಆದಿಇತಿಹಾಸದಲ್ಲಿ ಅನೇಕ ಸಾಹಿತ್ಯ ಕೃತಿಗಳು ರಚಿತವಾದವು. ಅವುಗಳು ಧಾರ್ಮಿಕ, ಸಾಮಾಜಿಕ, ಕಥಾವಳಿ, ರಾಜಕೀಯ ಪುರಾಣ, ಔಪಯೋಗಿಕ ಶಾಸ್ತ್ರಗಳೇ ಮುಂತಾದವುಗಳಲ್ಲದೇ ವಿದೇಶಿಯರಿಂದ ರಚಿತವಾದ ವಿದೇಶಿ ಪ್ರವಾಸ ಬರಹಗಳು, ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿ ಇದ್ದಂತಹ ವ್ಯವಸಾಯ ಪದ್ಧತಿ, ನೀರಾವರಿ ವ್ಯವಸ್ಥೆ ಮುಂತಾದವುಗಳ ಬಗ್ಗೆ ತಿಳಿಸುತ್ತವೆ. ಇವುಗಳ ನಿರ್ಮಾಣ ಅವುಗಳ ಬಳಕೆ, ರಕ್ಷಣೆ ಪೋಷಣೆ ಇವೇ ಮುಂತಾದ ವಿಷಯಗಳನ್ನು ಕುರಿತು ಚರ್ಚಿಸಿದೆ.

ಭಾರತದ ಅತ್ಯಂತ ಪ್ರಾಚೀನ ಕೃತಿಗಳಲ್ಲಿ 'ಮನು ಧರ್ಮಶಾಸ್ತ್ರವು'[೧೦] ಒಂದು. ಈ ಕೃತಿಯಲ್ಲಿ ನಾಲೆಗಳನ್ನು ಕುರಿತು ಹೇಳುವಾಗ, ಇದಕ್ಕೆ ಯಾರಾದರೂ ಯಾವುದೇ ವಿಧವಾದ ಧಕ್ಕೆಯನ್ನು ಉಂಟುಮಾಡಿದ್ದಲ್ಲಿ ಅಂತಹವರಿಗೆ ಮರಣ ದಂಡನೆಯೇ ಶಿಕ್ಷೆ ಎಂದು ಬರೆದಿದ್ದಾನೆ. ಇದರಿಂದ ಪ್ರಾಚೀನ ಭಾರತದಲ್ಲಿ ಕೃಷಿಗೆ ಮತ್ತು ನೀರಾವರಿ ವ್ಯವಸ್ಥೆಗೆ ಎಷ್ಟರಮಟ್ಟಿನ ಮಹತ್ವವನ್ನು ನೀಡಲಾಗಿತ್ತು ಎಂಬುದು ತಿಳಿಯುತ್ತದೆ.

ಈ ದೇಶದ ಎರಡು ಶಿಷ್ಟ ಮಹಾಕಾವ್ಯಗಳಲ್ಲಿ ಒಂದಾದ ಮಹಾಭಾರತದ ಅನುಶಾಸನ ಪರ್ವವು ಮಹಾರಾಜನಾದಂತಹವನು ಕೈಗೊಳ್ಳಬೇಕಾದ ಪ್ರಜಾಹಿತಾತ್ಮಕ ಕಾರ್ಯಗಳಲ್ಲಿ ಕೆರೆಗಳ ನಿರ್ಮಾಣವು ಒಂದು ಎಂದು ತಿಳಿಸುತ್ತದೆ.[೧೧] ಅದಲ್ಲದೇ ನಾಲೆಗಳ ನಿರ್ಮಾಣವು ಒಂದು ಎಂದು ತಿಳಿಸುತ್ತದೆ. ಮತ್ತೊಂದು ಸಂದರ್ಭವು ಕುತೂಹಲಕಾರಿಯಾಗಿದೆ. ಇದರಲ್ಲಿ ನಾರದನು ಧರ್ಮ ರಾಜನಿಗೆ ಎಚ್ಚರಿಸಿ ಮಳೆಯನ್ನೇ ನೆಚ್ಚಿಕೊಂಡು ಬೇಸಾಯಕ್ಕೆ ತೊಡಗಬಾರದೆಂತಲೂ ಹಾಗೂ ಕೆರೆ ಮತ್ತು ಸರೋವರಗಳನ್ನು ನಿರ್ಮಿಸಿಕೊಂಡು ಬೇಸಾಯಕ್ಕೆ ತೊಡಗಬೇಕು ಎನ್ನುತ್ತಾನೆ. ಪ್ರಾಚೀನ ಭಾರತದಲ್ಲಿಯೂ ಹವಾಮಾನವು ಒಂದೇ ರೀತಿಯಾಗಿ ಇರದೆ ಮಳೆಯು ಕೆಲವೊಮ್ಮೆ ಬರುತ್ತಿರಲಿಲ್ಲ. ಇದರಿಂದ ನಾವು ಅಂದಿನ ಪ್ರಾಚೀನ ಹವಾಮಾನವನ್ನು ಕುರಿತಂತೆ ನಮ್ಮ ನಿಲುವನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಎರಡನೆಯದಾಗಿ ಮಳೆಯ ನೀರಿನ ಪರ್ಯಾಯ ವ್ಯವಸ್ಥೆಗೆ ಕೆರೆ ಮತ್ತು ಸರೋವರಗಳ ನಿರ್ಮಾಣಗಳ ಕಾರ್ಯವನ್ನು ಅಂದಿನ ರಾಜರು ಕೈಗೆತ್ತಿಕೊಳ್ಳುತ್ತಿದ್ದರು.

ಇವುಗಳು ಪ್ರಾಚೀನ ಭಾರತದ ಕೆರೆಗಳ ನಿರ್ಮಾಣವನ್ನು ಕುರಿತಂತೆ ನಮಗೆ ಸಿಗುವ ಪುರಾತನ ದಾಖಲೆಗಳು.

ಗದಗ ಜಿಲ್ಲೆಯಲ್ಲಿ ಪ್ರಭುತ್ವ ನಡೆಸಿದ ಅನೇಕ ರಾಜಮನೆತನಗಳು ನೀರಾವರಿಯ ಚೌಕಟ್ಟಿನ ಕಾರ್ಯಚಟುವಟಿಕೆಗಳಿಗೆ ಪ್ರೋತ್ಸಾಹದಾಯಕ ಕ್ರಮಗಳನ್ನು ಕೈಗೂಂಡಿರುವುದು ಲಭ್ಯವಿರುವ ಹಲವು ಶಾಸನಗಳಿಂದ ಸಮೀಕ್ಷೆಯಿಂದ ವ್ಯಕ್ತವಾಗುತ್ತವೆ. ರಾಜರು, ರಾಜ ಕುಟುಂಬದವರು, ಸಾಮಂತರು, ಅಧಿಕಾರಿಗಳು, ಸಮುದಾಯದೊಂದಿಗೆ ನೀರಾವರಿ ಪದ್ಧತಿಯ ಬೆಳವಣಿಗೆ, ವಿಶೇಷವಾಗಿ ಕೆರೆಗಳ ನಿರ್ಮಾಣ ಕುರಿತಂತೆ ಗದಗ ತಾಲೂಕಿನ ಹೆಂಡಿಗಲ್ ಶಾಸನ[೧೨] ಆರನೇ ವಿಕ್ರಮಾದಿತ್ಯನ ಕಾಲದ್ದಾಗಿದ್ದು, ಅದರಂತೆ ಮಾಧವನ ಮಗ ಪ್ರತಿಕಾಂತಚಂದನು ಕೆರೆಯ ನೀರ್ಮಾಣಕ್ಕೆ ಅಡಿಪಾಯ ಹಾಕಿದ್ದನ್ನು ಉಲ್ಲೇಖಿಸುವುದಲ್ಲದೆ, ಅದರ ನಿರ್ಮಾಣಕ್ಕಾಗಿ ಅರವತ್ತನಾಲ್ಕು ಮಹಾಜನರಿಂದ ಭೂಮಿಯನ್ನು ಕೊಂಡುಕೊಂಡು 'ದತ್ತಿ' ಬಿಟ್ಟಿರುವುದನ್ನು ದಾಖಲಿಸಿದೆ. ಕೆಲವು ಶಾಸನಗಳಲ್ಲಿ ಜನ ಸಮುದಾಯಗಳು ಗ್ರಾಮಮಟ್ಟದಲ್ಲಿ ಸಂಘಟಿತ ಗುಂಪುಗಳಾಗಿ ನೀರಾವರಿ ಚಟುವಟಿಕೆಗಳಲ್ಲಿ ನೇರವಾಗಿ ತೊಡಗಿಕೊಂಡಿರುವುದನ್ನು ಗದಗ ತಾಲೂಕು ಕುರ್ತಕೋಟಿ ಶಾಸನದಲ್ಲಿ[೧೩] ಇನ್ನೂರು ಜನ ಮಹಾಜನರು ಕೆರೆಗಾಗಿ ಭೂಮಿಯನ್ನು ದಾನ ನೀಡಿರುವುದು ಉಲ್ಲೇಖಿಸವುದು. ಗದಗ ಶಾಸನದಲ್ಲಿ[೧೪] ಮದ್ದಿಮಯ್ಯ ನಾಯಕ ದೇವಾಲಯ ಛತ್ರ ಮತ್ತು ಕೆರೆ ನಿರ್ಮಾಣಕ್ಕೆ ಭೂಮಿ ಮತ್ತು ಹಣವನ್ನು ದಾನ ನೀಡಿರುವುದನ್ನು ಉಲ್ಲೇಖಗೊಂಡಿದೆ. ನರಗುಂದ ತಾಲೂಕಿನ ಮುತ್ತಗಿ ಶಾಸನದಲ್ಲಿ[೧೫] ಅರಸರಗಳು ಕೆರೆಗೆ ದಾನ ನೀಡಿರುವುದನ್ನು ಉಲ್ಲೇಖಿಸಿದೆ. ರೋಣ ತಾಲೂಕಿನ ಹಿರೇಮಣ್ಣೂರು ಶಾಸನದಲ್ಲಿ[೧೬] ಮಹಾಮಂಡಲೇಶ್ವರ ಚಾವುಂಡರಸ ಹಿರೇಮಣ್ಣೂರು ಹಿರಿಯ ಕೆರೆಗೆ  ನೀಡಿರುವ ದಾನಗಳನ್ನು ದಾಖಲಿಸಿದೆ. ಅನೇಕ ಜನ ಸೈನಿಕ ಅಧಿಕಾರಿಗಳು ಸಹ ಕೆರೆ, ನೀರಾವರಿಯಂತಹ ಚಟುವಟಿಕೆಗಳಲ್ಲಿ ತೊಡಗಿರುವುದು ಗದಗ ತಾಲೂಕಿನ ಕುರ್ತಕೋಟಿ ಶಾಸನದಲ್ಲಿ[೧೭] ದಂಡನಾಯಕ ವಾಮದೇವಯ್ಯ ಕೆರೆಗೆ ನೀಡಿರುವ ದಾನವನ್ನು ನೀಡಿದ ಬಗ್ಗೆ ಉಲ್ಲೇಖವಿದೆ. ಹಾಗೆಯೇ ರೋಣ ತಾಲೂಕಿನ ಜಕ್ಕಲಿ ಶಾಸನದಲ್ಲಿ[೧೮] ದಂಡನಾಯಕ ಮಹಾದೇವಯ್ಯ ಜಕ್ಕಲಿ ಕೆರೆ ನಿರ್ಮಾಣಕ್ಕೆ ನೀಡಿದ ಭೂದಾನದ ಬಗ್ಗೆ ತಿಳಿಸುತ್ತದೆ. ಇಂತಹ ಮಹೋನ್ನತ ಕಾರ್ಯಚಟುವಟಿಕೆಗಳಲ್ಲಿ ಯುವರಾಜರೂ ಸಹ ಹಿಂದೆ ಬಿದ್ದಿರಲಿಲ್ಲ ಎನ್ನುವುದಕ್ಕೆ ಮೊರಬ ಶಾಸನದಲ್ಲಿ[೧೯] ಜಯಸಿಂಗದೇವ ಯುವರಾಜನಾಗಿ ಕುಂದೂರು–೧೦೦೦, ಪುಲಿಗೆರೆ–೩೦೦, ಬೆಳ್ವೊಲ–೩೦೦ ಆಳುವಾಗ ನೊಳಂಬ ಸಮುದ್ರ ಕೆರೆಗೆ ಬಿಟ್ಟ ಭೂದಾನವನ್ನು ಉಲ್ಲೇಖಿಸುತ್ತದೆ. ಕೆರೆ ನಿರ್ಮಾಣದಂತಹ ಚಟುವಟಿಕೆಗಳಲ್ಲಿ ಮಹಿಳೆಯರು ಸಹ ಪಾಲ್ಗೊಂಡಿರುವುದಕ್ಕೆ ಹಲವು ಶಾಸನಗಳು ಮಾಹಿತಿ ನೀಡುತ್ತವೆ. ಉದಾ: ರೋಣ ತಾಲೂಕಿನ ಬೆಳವಣಿಕಿ ಶಾಸನದಲ್ಲಿ[೨೦] ಚಾವುಂಡಮಯ್ಯನ ಪತ್ನಿ ಶಾಂತಿಕಬ್ಬೆ ಅಗ್ರಹಾರದ ಆಳ ಮಹಾಜನರು ಮುತ್ತಿಲಿಗೆರೆ ಕೆರೆ ನಿರ್ಮಿಸುವುದಕ್ಕಾಗಿ

ಭೂಮಿಯನ್ನು ದತ್ತಿ ನೀಡಿದ್ದಾರೆ. ಮುಂಡರಗಿ ತಾಲೂಕಿನ ಹೈತಾಪುರ ಶಾಸನದಲ್ಲಿ[೨೧] ಮಹಾಸಾಮಂತ ಬಿಜ್ಜಳನ ಹೆಂಡತಿ ಕೆರೆ ನಿರ್ಮಿಸಿದ ಬಗ್ಗೆ ಕಾಣುತ್ತೇವೆ.

ಕೆರೆ ನೀರಾವರಿ ಪ್ರಾಯೋಜಕತ್ವ ಮತ್ತು ಪಾಲ್ಗೊಳ್ಳುವಿಕೆಯಲ್ಲಿ ಹಲವು ಖಾಸಗಿಯವರು ಭಾಗಿಗಳಾಗಿದ್ದರು ಎಂಬುವುದಕ್ಕೆ ಗದಗ ತಾಲೂಕಿನ ಚಿಂಚಲಿ ಸ್ಥಂಭಶಾಸನದಲ್ಲಿ[೨೨] ಒಬ್ಬ ಖಾಸಗಿ ವ್ಯಕ್ತಿ ಗೋಸಾಸ ಕೆರೆ ಮತ್ತು ಒಂದು ತೋಟವನ್ನು ಚಿಂಚಲಿಯ ಮಹಾಜನರ ಪಾದ ಪೂಜೆಯ ನಂತರ ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ. ನರಗುಂದ ತಾಲೂಕಿನ ದಂಡಾಪುರ ಶಾಸನದಲ್ಲಿ[೨೩] ಕೆರೆಗೆ ದತ್ತಿ ನೀಡಿದ್ದನ್ನು ದಾಖಲಿಸಿ ಸಮಾಜದ ವಿವಿಧ ವರ್ಗದ ಜನರು ನೀಡಿದ ಹಣದ ದೇಣಿಗೆಯನ್ನು ಉಲ್ಲೇಖಿಸಲ್ಪಟ್ಟಿದೆ.

**೫.೧.೫. ಕೆರೆಗಳ ರಚನೆ ವಿಧಾನ :**

ಚಕ್ರಪಾಣಿ ಮಿಶ್ರ ರಚಿಸಿದ ವಿಶ್ವವಲ್ಲಭ ಗ್ರಂಥದಲ್ಲಿ[೨೪] ಆರು ವಿಧದ ಕೆರೆಗಳ ರಚನೆಯನ್ನು ಕ್ರಮವಾಗಿ ದುಂಡಾಕಾರ, ಚೌಕಾಕಾರ, ಅಧಿಕಕೋನಾಕೃತಿ, ಅರ್ಧ ವರ್ತುಲಾಕಾರ ಹಾಗೂ ಆಯತಾಕಾರ, ಅರ್ಧಚಂದ್ರಾಕಾರ ಎಂದು ತಿಳಿಸಿದ್ದಾನೆ. ಇಲ್ಲಿ ಸಾಮಾನ್ಯವಾಗಿ ಕೆರೆಗಳು ಗೋಲಾಕಾರವಾಗಿಯೇ ಇರುತ್ತವೆ. ಕೆರೆಯ ಒಡ್ಡುಗಳು ಮಾತ್ರ ನೇರವಾಗಿರದೆ ಹಾವಿನ ಚಲನೆಯಂತೆ ಅಂಕುಡೊಂಕಾಗಿಯೇ ಇರುತ್ತದೆ. ಕಾರಣ ನೀರಿನ ಒತ್ತಡವನ್ನು ತಡೆಯಲು ಹಾಗೂ ಭದ್ರವಾಗಿ ಇರಲು ಈ ರೀತಿಯಾಗಿ ಮಾಡಿರುವುದನ್ನು ಕೆರೆ ನಿರ್ಮಾಣಕಾರರ ಜಾಣ್ಮೆಗೆ ಹಿಡಿದ ಕನ್ನಡಿಯಾಗಿದೆ. ಹಿಂದಿನ ರಾಜರ ಕಾಲದ ಕೆರೆಗಳು ಸಹ ಈ ಮೇಲಿನ ರಚನಾ ವಿಧಾನವನ್ನು ಒಳಗೊಂಡಿರುವುದನ್ನು ಕಾಣಬಹುದು.

ಕೆರೆಯನ್ನು ನಿರ್ಮಿಸುವಾಗ ಅಗತ್ಯವಾಗಿ ಏರಿಗೆ ಹಾಕುವ ಮಣ್ಣು ಜಿಗುಟಾಗಿದ್ದು ಗಟ್ಟಿಯಾಗುವ ಗುಣವುಳ್ಳದ್ದಾಗಿರಬೇಕು. "ಏರಿ ನಿಲ್ಲಿಸುವ ಕೆರೆ ಏರಿಯೇ ನೀರು ಕುಡಿದರೆ". "ಹೊಲದ ಮೇರೆಗಳನ್ನು ಗುರುತಿಸಲು ಹಾಕಿದ ಬೇಲಿಯೇ ಹೊಲವನ್ನು ಮೇದರೆ" "ಮನೆಯೊಡತಿಯೇ ಮನೆಯಲ್ಲಿ ಕಳ್ಳತನ ಮಾಡಿದರೆ" ಮುಂತಾದ ಕನ್ನಡ ನಾಣ್ಣುಡಿಯಂತೆ ಪ್ರಾಚೀನ ಕಾಲದಲ್ಲಿನ ಕೆರೆಗಳ ನಿರ್ಮಾಣದ ರಚನಾ ವಿಧಾನದಲ್ಲಿ ಈ ರೀತಿಯ ಅಂಶವನ್ನೊಳಗೊಂಡಂತೆ ನಿರ್ಮಾಣ ಮಾಡಿದ್ದಾರೆ.[೨೫] ಅವರಿಗೆ ಸೂಕ್ತ ರೀತಿಯಲ್ಲಿ ಗುಣಮಟ್ಟ ದಿಂದ ಕೂಡಿದಂತಹ ಮಣ್ಣನ್ನು ಹಾಕಿ ಏರಿಯ ಒಳ ಮತ್ತು ಹೊರ ಇಳಿಜಾರು ಸೂಕ್ತ ಹಾಗೂ ಉತ್ತಮ ಗುಣಮಟ್ಟದಿಂದ ಕೂಡಿರುವಂತೆ ನಿರ್ಮಿಸಿರುವುದು ಕಂಡು ಬರುತ್ತದೆ.

ಕೆರೆಯಲ್ಲಿ ನಿಂತ ನೀರಿನ ಆಳ ಮತ್ತು ವಿಸ್ತಾರ ಬಹಳವಾದರೆ ಅಲೆಗಳುಂಟಾಗುತ್ತವೆ. ನೀರಿನ ಅಲೆಗಳು ಬಂದು ಕೆರೆಯ ಏರಿಯನ್ನು ಅಪ್ಪಳಿಸುತ್ತವೆ. ಅಪ್ಪಳಿಸಿದ ಅಲೆಗಳು ಹಿಂದೆ

ಸರಿಯುವಾಗ ಏರಿಯ ಗಟ್ಟಿ ಮಣ್ಣನ್ನು ಹಿಂದೆ ಎಳೆಯುವ ಪ್ರಯತ್ನ ಮಾಡುತ್ತವೆ.[೨೬] ಈ ಪ್ರಯತ್ನದಲ್ಲಿ ಅದು ಅನೇಕ ಕಡೆ ಸಫಲವಾಗಿ ಏರಿಯ ಇಳಿಜಾರು ವಕ್ರವಾಗಿ ತನ್ನ ಗುಣವನ್ನು ಕಳೆದುಕೊಂಡು ಕೆರೆ ಒಡೆಯುವುದು, ಕೆರೆಯ ಒಲ ಇಳಿಜಾರಿಗೆ ಕಲ್ಲುಗಳ ಹೊದಿಕೆ ಹಾಕುವ ರೂಢಿಯು ಬಳಕೆಯಲ್ಲಿ ಬಂದು ನೀರಿನ ಆಳಗಳಿಂದ ಆಗುವ ಹಾನಿಯು ಕಡಿಮೆಯಾಗಿದೆ.

ಅಂದಿನ ದಿನಗಳಲ್ಲಿ ಕೆರೆಗಳ ಕೆಲವು ಭಾಗಗಳನ್ನು ನಿರ್ಮಿಸಿ ತಮ್ಮ ಯಥಾಶಕ್ತಿ ಕೊಡುಗೆಯನ್ನು ನೀಡಿದ ಉದಾಹರಣೆಗಳು ಲಭ್ಯವಿದೆ. ಕೆರೆಯ ತೂಬು, ಏರಿ, ಕೋಡಿ, ನಾಲೆಗಳ ನಿರ್ಮಾಣ ಮುಂತಾದವುಗಳು ಸಹ ಕೆರೆಯನ್ನು ನಿರ್ಮಿಸುವುದಷ್ಟೇ ಪ್ರಾಮುಖ್ಯತೆ ಪಡೆದಿತ್ತು ಎಂಬ ವಿಷಯವು ಶಾಸನಗಳ ಅಧ್ಯಯನದಿಂದ ತಿಳಿದುಬರುವ ವಿಷಯವಾಗಿದೆ.

**೫.೧.೬. ತಾಂತ್ರಿಕತೆ:**

ನೀರಾವರಿ ತಂತ್ರಜ್ಞಾನ ಕುರಿತಂತೆ ನಮ್ಮಲ್ಲಿ ಪ್ರತ್ಯೇಕವಾದ ಪ್ರಾಚೀನ ಲಿಖಿತ ಗ್ರಂಥಗಳಿಲ್ಲ. ಹಾಗೆಂದಾಕ್ಷಣ ಅದರ ಕುರಿತು ನಮ್ಮ ಪೂರ್ವಜರಿಗೆ ತಿಳುವಳಿಕೆ ಇದ್ದಿಲ್ಲವೆಂದಲ್ಲ; ಬರೆದಿಡುವ, ದಾಖಲಿಸುವ ಪರಿಪಾಠವಿರಲಿಲ್ಲ. ಭಾರತೀಯರದು ಮೌಖಿಕ ಪರಂಪರೆಯ ಜ್ಞಾನ. ತಲೆಮ್ಹಾರಿನಿಂದ ತಲೆಮಾರಿಗೆ ಮೌಖಿಕವಾಗಿ ಹರಿದು ಬಂದ ಜ್ಞಾನವೇ ಅವರ ಬದುಕಿಗೆ ದಾರಿ ದೀಪವಾಗಿತ್ತು. ಅವರಿಗಿದ್ದ ನೀರಾವರಿ ತಂತ್ರಜ್ಞಾನವನ್ನು ಅಳಿದುಳಿದ ಅನೇಕ ಪ್ರಾಚೀನ ಜಲಾಶಯಗಳಲ್ಲಿ ಇಂದಿಗೂ ಕಾಣಬಹುದು. ಕೆರೆಗಳ ಕುರಿತು ನಮ್ಮ ಹಿರಿಯರಾಗಿದ್ದ ಸೂಕ್ಷ್ಮಜ್ಞಾನವನ್ನು ಕೆರೆಗಳನ್ನು ಸರಪಳಿ ವ್ಯವಸ್ಥೆಯಲ್ಲಿ ಕಟ್ಟಿರುವುದು, ಏರಿಯನ್ನು ಡೊಂಕಾಗಿ ಕಟ್ಟಿರುವುದು, ತೂಬು ಮತ್ತು ಕೋಡಿಗಳ ವಿನ್ಯಾಸದಲ್ಲಿ ಸ್ಪಷ್ಟವಾಗಿ ಕಾಣಬಹುದು. ಅಷ್ಟೇ ಏಕೆ? ಕೆರೆ ನಿರ್ಮಾಣದ ಸ್ಥಳದ ಆಯ್ಕೆಯಲ್ಲಿ ಅವರು ತೋರಿಸಿರುವ ಜಾಣ್ಮೆ ಇಂದಿಗೂ ಅವಿಸ್ಮರಣೀಯ. ಕೆರೆಯ ತಂತ್ರಜ್ಞಾನದ ವಿಷಯದಲ್ಲಿ ದಕ್ಷಿಣ ಭಾರತದ ರಾಜವಂಶಗಳು ಹೆಚ್ಚು ಪರಿಣಿತರಾಗಿದ್ದೆಂಬುದಕ್ಕೆ ಆಂಧ್ರಪ್ರದೇಶದ ಕಡಪಾ ಜಿಲ್ಲೆಯ ಪೊರುಮಾಮಿಲ್ಲ ಶಾಸನವೇ ಸಾಕ್ಷಿ.[೨೭] ಪ್ರಾಚೀನ ಕಾಲದ ಅರಸರು ನಿರ್ಮಿಸಿದ ಅನೇಕ ಕೆರೆಗಳು ಈಗಲೂ ಬಳಕೆಯಲ್ಲಿರುವದು ಅವರಿಗಿದ್ದ ನೀರಾವರಿ ತಂತ್ರಜ್ಞಾನಕ್ಕೆ ಸ್ಪಷ್ಟ ಆಧಾರ. ಗದಗ ಜಿಲ್ಲೆಯ ಕೆರೆಗಳ ಕುರಿತು ಶಿಲಾಶಾಸನ, ತಾಮ್ರಪಟಗಳು ಮಾಹಿತಿ ಒದಗಿಸುತ್ತವೆ. ಕೆರೆಯ ರಚನೆಯಲ್ಲಿ ಬಹುಮುಖ್ಯವಾದ ಅಂಗಗಳ ರಚನೆಯಲ್ಲಿ ಬಳಸಿದ ತಾಂತ್ರಿಕತೆ ಕುರಿತು ಹೇಗೆ ಕೆಳಗಿನಂತೆ ನೋಡಬಹುದು.

೧. ಜಲಾನಯನ ಪ್ರದೇಶ.
೨. ಕೆರೆಯ ಅಂಗಳ
೩. ಅಚ್ಚುಕಟ್ಟು ಪ್ರದೇಶ
೪. ಏರಿ
೫. ತೂಬು
೬. ಕೋಡಿ
೭. ಕಾಲುವೆ

೧. ಜಲಾನಯನ ಪ್ರದೇಶ :

ಭೂಮಿಯ ಮೇಲಿನ ಎಲ್ಲಾ ನೀರಿಗೂ ಮಳೆಯೇ ಆಧಾರ. ನೆಲಕ್ಕೆ ಬಿದ್ದ ಮಳೆಯಲ್ಲಿ ಕೆಲವು ಭಾಗವನ್ನು ಸಸ್ಯಗಳು ಹೀರಿಕೊಳ್ಳುತ್ತವೆ. ಕೆಲವೊಂದು ಭಾಗ ಭೂಮಿಯ ಒಳಗೆ ಇಳಿದು ಅಂತರ್ಜಲವಾಗಿ ಮಾರ್ಪಾಡಾಗುತ್ತದೆ. ಕೆಲವೊಂದು ಭಾಗ ಭೂಮಿಯ ಮೇಲೆ ಹರಿದು, ಹಳ್ಳ, ಹೊಳೆಯನ್ನು ಕೂಡಿಕೊಳ್ಳುತ್ತದೆ. ಕೆರೆಯನ್ನು ಸಾಮಾನ್ಯವಾಗಿ ಗುಡ್ಡ, ಬೆಟ್ಟ, ದಿನ್ನೆಗಳ ಹತ್ತಿರದಲ್ಲಿ ನಿರ್ಮಿಸಲಾಗುತ್ತದೆ. ಮಳೆಯ ನೀರು ಕೆರೆಗೆ ಹರಿದು ಬರುವ ಪ್ರದೇಶ, ಕೆರೆಯ ಅಂಗಳದ ಹಿಂಭಾಗವೇ ಜಲಾನಯನ ಪ್ರದೇಶ. ಕೆರೆಯಲ್ಲಿ ಸಂಗ್ರಹವಾಗಿರುವ ನೀರು ಜಲಾನಯನ ಪ್ರದೇಶವನ್ನು ಅವಲಂಬಿಸಿರುತ್ತದೆ. ಜಲಾನಯನ ಪ್ರದೇಶ ಕಾಡಿನಿಂದ ಕೂಡಿದ ಮಳೆ ಬೀಳುವ ಪ್ರದೇಶವಾಗಿರಬೇಕು. ಕೆರೆಯನ್ನು ತಲುಪುವ ನೀರಿನ ಪ್ರಮಾಣ ಜಲಾನಯನ ಪ್ರದೇಶದ ವಿಸ್ತಾರಕ್ಕೂ ಅಲ್ಲಿ ಬೀಳುವ ಮಳೆಯ ಪ್ರಮಾಣಕ್ಕೂ ಸಂಬಂಧವಿರುತ್ತದೆ.

೨. ಕೆರೆಯ ಅಂಗಳ :

ಕೆರೆಗೆ ಅಡ್ಡಲಾಗಿ ಏರಿ ಕಟ್ಟಿದಾಗ ಅದರ ಹಿಂದೆ ನೀರು ಸಂಗ್ರಹವಾಗುತ್ತದೆ. ಆ ಪ್ರದೇಶವೇ ಕೆರೆಯ ಅಂಗಳ. ಕೆರೆಯ ಅಂಗಳದ ಮಣ್ಣು ಜಿಗುಟಾಗಿದ್ದು ಜೇಡಿಮಣ್ಣಾಗಿದ್ದರೆ ಒಳಿತು. ನೀರು ಸೋರಿ ಹೋಗಬಾರದು ಮತ್ತು ಅಂಗಳವೇ ನೀರು ನುಂಗಬಾರದು. ಅಂಗಳದಲ್ಲಿ ಅಲ್ಲಲ್ಲಿ ದಿನ್ನೆಗಳಿರಬಾರದು. ಆ ನೀರು ಎಷ್ಟು ಪ್ರದೇಶದಲ್ಲಿ ನಿಲ್ಲುವುದೋ ಆ ಪ್ರದೇಶ ಕೆರೆಯ ನೀರಿನ ಹರವು. ಅದನ್ನೇ ಸಾಮಾನ್ಯವಾಗಿ ಕೆರೆಯ ಅಂಗಳ ಎನ್ನುತ್ತಾರೆ.

೩. ಅಚ್ಚುಕಟ್ಟು ಪ್ರದೇಶ :

ಕೆರೆಯ ಕಾಲುವೆ ಜಾಲಕ್ಕೂ ಕಾಲುವೆಯ ನೀರು ಗುರುತ್ವಾಕರ್ಷಣದಿಂದ ನದಿಯನ್ನೋ, ಕೊಳ್ಳವನ್ನೋ ತಲುಪುವ ಸ್ಥಳಕ್ಕೂ ನಡುವೆ ಇರುವ ಭೂಪ್ರದೇಶಕ್ಕೆ ಅಚ್ಚುಕಟ್ಟು ಪ್ರದೇಶ ಎಂದು ಹೆಸರು. ಕೆರೆಯ ಅಚ್ಚುಕಟ್ಟು ಪ್ರದೇಶವೆಂದರೆ ನೀರು ಸಂಗ್ರಹವಾಗುವ ವಿರುದ್ಧ ದಿಕ್ಕಿನ ಪ್ರದೇಶ, ಏರಿಯ ಹೊರಮುಖವೆಂತಲೂ ಹೇಳಬಹುದು. ನೀರಾವರಿ ಪ್ರದೇಶ, ಅಚ್ಚುಕಟ್ಟು, ಆಯಕಟ್ಟು, ಎಂಬ ಪದಪ್ರಯೋಗಳನ್ನು ಶಿಲಾಶಾಸನಗಳಲ್ಲಿ ಕಾಣಬಹುದು. ಅಚ್ಚುಕಟ್ಟು ಪ್ರದೇಶವನ್ನು ಅದರ ಗುಣಕ್ಕನುಗುಣವಾಗಿ ಉತ್ತಮ, ಮಧ್ಯಮ, ಕನಿಷ್ಠವೆಂದು ವಿಂಗಡಿಸುವ ರೂಢಿ ಇದ್ದುದು ಶಾಸನಗಳಿಂದ ತಿಳಿದು ಬರುತ್ತದೆ.

೪. ಏರಿ :

ಕೆರೆಯ ಅಥವಾ ಜಲಾಶಯದ ಅತ್ಯಂತ ಮುಖ್ಯಭಾಗ ಏರಿ ಅಥವಾ ಕಟ್ಟೆ. ಸಾಮಾನ್ಯವಾಗಿ ನಮ್ಮ ಎಲ್ಲಾ ಕೆರೆಗಳ ಏರಿಗಳು ಮಣ್ಣಿನ ಕಟ್ಟೆಗಳೇ. ಏಕೆಂದರೆ ಮಣ್ಣು ಸುಲಭವಾಗಿ ಬೇಕಾದಷ್ಟು

ಸಿಗುವುದು. ಹಳೆಯ ಕೆರೆಗಳ ಏರಿಗಳು ಬಹುಮಟ್ಟಿಗೆ ಸ್ಥಳದ ಪರಿಸ್ಥಿತಿ ಹಾಗೂ ಭದ್ರತೆಯ ಅಗತ್ಯಗಳಿಗೆ ಅನುಗುಣವಾಗಿರುತ್ತವೆ. ಏರಿಯನ್ನು ಒಡ್ಡು, ಅಡ್ಡಕಟ್ಟೆ ಎಂದು ಕರೆಯುವರು. ಕೆರೆಯ ಅತಿಮುಖ್ಯವಾದ ಅಂಗವೆಂದರೆ ಏರಿ. ಮನುಷ್ಯನಿಗೆ ಎದೆಗಟ್ಟಿ ಇದ್ದ ಹಾಗೆ ಕೆರೆಗೆ ಏರಿ ಗಟ್ಟಿಯಾಗಿರಬೇಕು.[೨೮] ನೀರಿನ ಒತ್ತಡವನ್ನು ತಡೆದುಕೊಂಡು ಗಟ್ಟಿಯಾಗಿ ನಿಲ್ಲುವ ಸಾಮರ್ಥ್ಯ ಅದಕ್ಕಿರಬೇಕು. 'ಏರಿ ನಿರ್ಮಾಣವಾದರೆ ಕೆರೆ ನಿರ್ಮಾಣವಾದಂತೆಯೇ'. ಏರಿಗೆ ಮಣ್ಣನ್ನು ತುಂಬುವುದಕ್ಕನು ಗುಣವಾಗಿ ಏರಿಯನ್ನು ಮೂರು ಪ್ರಕಾರಗಳಾಗಿ ವಿಂಗಡಿಸಬಹುದು. ಕರ್ನಾಟಕದಲ್ಲಿ ಕೆರೆಯ ಏರಿಯ ನಿರ್ಮಾಣಕ್ಕೆ ಉತ್ತರ ಕರ್ನಾಟಕವನ್ನು ಹೊರತು ಪಡಿಸಿ ಉಳಿದ ಪ್ರದೇಶಗಳಲ್ಲಿ ಒಂದೇ ತೆರನಾದ ಮಣ್ಣನ್ನು ಬಳಸುವುದು ರೂಢಿಯಲ್ಲಿರುತ್ತದೆ. ಎರಡನೆಯ ಪ್ರಕಾರದ ಏರಿಯ ನಿರ್ಮಾಣ ಚಿತ್ರದುರ್ಗ, ಬೆಳಗಾವಿ, ಧಾರವಾಡ ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ.

ಎರಡನೇ ಪ್ರಕಾರದ ಏರಿಯ ನಿರ್ಮಾಣಕ್ಕೂ ಮೂರನೇ ಪ್ರಕಾರದ ನಿರ್ಮಾಣಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ. ಮೂರನೇ ಪ್ರಕಾರದಲ್ಲಿ ಏರಿಯ ಮಧ್ಯಕ್ಕೆ ಜಿಗುಟು ಮಣ್ಣಿನ ಬದಲು ಜೇಡಿಮಣ್ಣು ಬಳಸುವರು. ಇಲ್ಲವೇ ಕಲ್ಲುಗಾರೆಯ ನಡುಗೋಡೆ ನಿರ್ಮಿಸುವುದು; ಈ ಪ್ರಕಾರದ ಏರಿಯ ರಚನೆಗಳು ಗದಗ ಜಿಲ್ಲೆಯಲ್ಲಿ ಕಂಡು ಬರುತ್ತವೆ. ಯಾವುದೇ ಪ್ರಕಾರದ ಏರಿಯ ನಿರ್ಮಾಣಕ್ಕೆ, ಕಪ್ಪು ಮಣ್ಣನ್ನು ಬಳಸಬಾರದು. ಕಪ್ಪು ಮಣ್ಣಿನ ಏರಿ ಬಿಸಿಲಿಗೆ ಬಿರಿಯುವ ಸಾಧ್ಯತೆಗಳು ಬಹಳ ಹೆಚ್ಚು. ಮಣ್ಣಿನ ಏರಿಯನ್ನು ಕಟ್ಟುವಾಗ ಜೇಡಿಮಣ್ಣನ್ನು ಅಧಿಕ ಪ್ರಮಾಣದಲ್ಲಿ ಬಳಸಬೇಕು. ಏರಿಯ ಮಣ್ಣನ್ನು ಹಂತ ಹಂತವಾಗಿ ದಮ್ಮಸ ಮಾಡಿ ರೋಲರ್ ದಿಂದ ಗಟ್ಟಿಗೊಳಿಸಬೇಕು. ಒಂದೇ ವರ್ಷದಲ್ಲಿ ಏರಿಯ ಕೆಲಸ ಮುಗಿಯುವುದು ಕಷ್ಟ. ಹಿಂದಿನ ವರ್ಷ ಮಾಡಿದ ಏರಿಯ ಕೆಲಸವನ್ನು ಮುಂದುವರಿಸುವಾಗ ಹಳೆಯ ಮಣ್ಣಿನೊಂದಿಗೆ ಹೊಸಮಣ್ಣು ಬೆರೆಸುವಾಗ ಅಡ್ಡಲಾಗಿ, ಮೆಟ್ಟಿಲು ಮಾಡಿ ದುರಸ್ತಿಗೊಳಿಸಬೇಕು. ಹಳೆ ಮತ್ತು ಹೊಸ ಮಣ್ಣು ಸರಿಯಾಗಿ ಬೆರೆಯುವಂತೆ ನೋಡಿಕೊಳ್ಳಬೇಕು. ಒಂದು ವರ್ಷದಲ್ಲಿ ೬ ಮೀಟರ್‌ಗಿಂತ ಹೆಚ್ಚಾಗಿ ಹೊಸಮಣ್ಣನ್ನು ಸೇರಿಸಬಾರದು. ಸ್ವಲ್ಪ ದಿನಗಳ ನಂತರ, ನೆತ್ತಿನ ಮೇಲಿನ ಮಣ್ಣಿನ ಭಾರಕ್ಕೆ ಏರಿ ಕುಸಿಯುವುದು ಸ್ವಾಭಾವಿಕ. ಅದಕ್ಕಾಗಿ ಏರಿಯನ್ನು ನಿಗದಿಯಾದ ಎತ್ತರಕ್ಕೆ ೧೦-೧೫ ಸೆಂ.ಮೀ. ಎತ್ತರಿಸಿ ಕಟ್ಟಬೇಕು. ದಿನಗಳೆದಂತೆ ತನ್ನಿಂದ ತಾನೆ ಸರಿಯಾದ ಎತ್ತರಕ್ಕೆ ಬರುತ್ತದೆ. ಏರಿಯ ಎತ್ತರವನ್ನು ಲಂಬವಾಗಿ ನಿರ್ಮಿಸದೆ ಇಳಿಜಾರಾಗಿ, ಇಳಿಜಾರು ಸಮ ಒಂದು ಪ್ರಮಾಣಕ್ಕೆ ಲಂಬ ಎರಡು ಪ್ರಮಾಣ ಇರುವಂತೆ ನಿರ್ಮಿಸಬೇಕು. ಏರಿಯ ಉದ್ದವನ್ನು ನೇರವಾಗಿ ನಿರ್ಮಿಸದೆ, ಅಲ್ಲಲ್ಲಿ ಡೊಂಕಾಗಿ ನಿರ್ಮಿಸಬೇಕು. ನಮ್ಮ ಹಳೆಯ ಕೆರೆಗಳಲ್ಲಿ ಇದನ್ನು ಕಾಣಬಹುದು. ಏರಿಯ ನೆತ್ತಿಯ ಭಾಗದ ಅಗಲ ಏರಿಯ ಎತ್ತರಕ್ಕೆ ತಕ್ಕ ಪ್ರಮಾಣದಲ್ಲಿರಬೇಕು ಸಣ್ಣ ಕೆರೆಗಳಲ್ಲಿ ಈ

ಅಗಲ ೧.೫ ಮೀಟರಿನಿಂದ ೨ ಮೀಟರ್‌ವರೆಗೆ, ಅಂದರೆ ಒಂದು ಎತ್ತಿನ ಗಾಡಿಯ ಸಂಚಾರಕ್ಕೆ ಅನುಕೂಲವಾಗುವಷ್ಟು ದೊಡ್ಡ ದೊಡ್ಡ ಕೆರೆಗಳಲ್ಲಿ ನೆತ್ತಿಯ ಅಗಲ ೩ ಮೀ. ನಿಂದ ೫ ಮೀ. ಇರುವುದುಂಟು. ಏರಿಯ ಒಳಮುಖ ನೀರಿನ ಸಂಪರ್ಕವಿರುವುದ ರಿಂದ ಮಣ್ಣು ಕೊಚ್ಚಿ ಹೋಗದಿರಲು ಹಾಗೂ ಮಣ್ಣು ನೀರನ್ನು ಹೀರದಿರಲೆಂದು ಸಾಮಾನ್ಯವಾಗಿ ಎಲ್ಲಾ ಮಧ್ಯಮ ಮತ್ತು ದೊಡ್ಡ ಗಾತ್ರದ ಕೆರೆಗಳಿಗೆ ಏರಿಯ ಒಳಮುಖವನ್ನು ಸ್ಥಳೀಯ ಕಲ್ಲುಗಳನ್ನು ಬಳಸಿ ಕಲ್ಲಿನ ಜೋಡಣೆಯಿಂದ ಮುಚ್ಚುವರು. ಗದಗ ಜಿಲ್ಲೆಯ ಹೆಚ್ಚಿನ ಕೆರೆಗಳಲ್ಲಿ ಕಲ್ಲಿನ ಜೋಡಣೆ ಕಾಣಬಹುದು. ಅನೇಕ ಕಡೆ ಏರಿಯ ಒಳಬದಿಗೂ ಕಲ್ಲಿನ ಜೋಡಣೆ ಮಾಡಿರುವುದುಂಟು ಹೆಚ್ಚಿನ ಕಡೆಗಳಲ್ಲಿ ಏರಿಯ ಭದ್ರತೆಗೆ ಮಣ್ಣು ಜಾರದಿರಲೆಂದು ಹುಲ್ಲು ಬೆಳೆಸುವರು. ಚಿಕ್ಕ ಪುಟ್ಟ ಗಿಡಗಂಟಿಗಳನ್ನು ಕೂಡ ಬೆಳೆಸಿದ ಉದಾಹರಣೆಗಳು ಗದಗ ಜಿಲ್ಲೆಯಲ್ಲಿ ಕಂಡುಬರುತ್ತವೆ.

ಕೆರೆಯ ಅತೀ ಮುಖ್ಯ ಭಾಗ ಕೆರೆಯ ಕಟ್ಟೆ ಅಥವಾ ಏರಿ. ಕೆರೆಯ ಏರಿ ಸಾಧಾರಣವಾಗಿ ಮಣ್ಣಿನದೇ ಆಗಿರುತ್ತದೆ; ಕಾರಣ ಮಣ್ಣು ಎಲ್ಲೆಡೆಯಾಗಿ ಸುಲಭವಾಗಿ ಸಿಗುತ್ತದೆ. ಹಾಗೂ ಮಣ್ಣಿನಿಂದ ನಿರ್ಮಿಸುವ ಕಾರ್ಯಕ್ಕೆ ಹೆಚ್ಚಿನ ನೈಪುಣ್ಯತೆಯ ಅಗತ್ಯವಿಲ್ಲ. ಕಟ್ಟೆ ಭದ್ರವಾಗಿರಬೇಕಾದರೆ ಅದರ ಅಡಿಯಲ್ಲಿ ಅಗಲ ಹೆಚ್ಚಾಗಿದ್ದು ಶಿರದಲ್ಲಿ ಕಡಿಮೆಯಾಗಿರುತ್ತದೆ. ಶಿರದಲ್ಲಿ ಕಟ್ಟೆಯ ಅಗಲ ಸಾಧಾರಣವಾಗಿ ಒಂದು ವಾಹನ ಪ್ರಯಾಣಕ್ಕೆ ಅನುಕೂಲವಾಗುವಷ್ಟು ಇರುತ್ತದೆ. ನಮ್ಮ ಹಿಂದಿನ ದೊಡ್ಡ ಕೆರೆಗಳಲ್ಲಿ ಈ ಭಾಗ ಬಹು ಅಗಲವಾಗಿರುತ್ತದೆ. ಬಹುಶಃ ಅಂಥ ಕಟ್ಟೆಗಳನ್ನು ನದಿಯನ್ನು ದಾಟಲು ಉಪಯೋಗಿಸುತ್ತಿದ್ದಿರಬೇಕು. ಮಳೆಗಾಲದಲ್ಲಿ ಜಲಾನಯನ ಪ್ರದೇಶಕ್ಕೆ ಬರುವ ನೀರಿನ ರಭಸ ಮತ್ತು ಆ ಪ್ರದೇಶದಲ್ಲಿರುವ ಗಾಳಿಯ ತೀವ್ರತೆಗಳು ಸೇರಿ ಭಾರಿ ಅಲೆಗಳು ಉಂಟಾಗುತ್ತವೆ. ಇದರಿಂದ ಕಟ್ಟೆ ಒಡೆಯಬಾರದೆಂದು ಕಟ್ಟೆಯ ಇಳಿಜಾರಿನ ಭಾಗದಲ್ಲಿ ದೊಡ್ಡ ಬಂಡೆಗಳನ್ನು ಜೋಡಿಸಲಾಗುತ್ತದೆ. ಇದನ್ನು 'ರಿವಿಟ್‌ಮೆಂಟ್'[೨೯] ಎಂದು ಕರೆಯಲಾಗುತ್ತದೆ.

ಕೆರೆಯ ಏರಿಯು ಒಡೆಯದಿರಲೆಂದು ಹೆಚ್ಚಿನ ಕಡೆ ಏರಿಯನ್ನು ಡೊಂಕು ಡೊಂಕಾಗಿ ನಿರ್ಮಿಸಲಾಗಿದೆ. ಏರಿಯ ಒಳಮೈಯನ್ನು ಸ್ಥಳೀಯವಾಗಿ ದೊರೆಯುವ ಕಾಡುಕಲ್ಲುಗಳಿಂದಲೇ ಕಟ್ಟಲಾಗಿದೆ. ಹೊರಮೈಯನ್ನು ಮಣ್ಣಿನಿಂದ ಕಟ್ಟಲಾಗಿದೆ. ಏರಿಯ ಕೌಶಲ್ಯವನ್ನು ಕುರ್ತಕೋಟೆಯ ಕಡಲಗೆರೆ, ಡಂಬಳ ಗೋಣಸಮುದ್ರ, ದಂಡಾಪೂರ ಕೆರೆಗಳಲ್ಲಿ ಕಾಣಬಹುದು. ದೊಡ್ಡ ದೊಡ್ಡ ಡ್ರಸ್ ಮಾಡದ ಕಲ್ಲುಗಳನ್ನು ಹೊಂದಿಸಿ ಗಾರೆಯನ್ನು ಬಳಸದೆ ಕಟ್ಟಲಾಗಿದೆ. ಜಿಲ್ಲೆಯ ಅನೇಕ ಕೆರೆಗಳು ಆಕರ್ಷಕವಾದ ಸ್ಥಳದಲ್ಲಿ ಕಟ್ಟಲ್ಪಟ್ಟಿವೆ. ಸೋಮಾಪೂರ ಕೆರೆ, ಚಿಂಚಲಿಯ ಕೆರೆ, ನರೆಗಲ್ಲ ಕೆರೆ, ಅಬ್ಬಿಗೇರಿ ಕೆರೆ, ಜಕ್ಕಲಿಯ ಕೆರೆಗಳನ್ನು ಹೆಸರಿಸಬಹುದು. ಸ್ವಾತಂತ್ರ್ಯ ನಂತರ ನಿರ್ಮಿಸಿದ ಅನೇಕ ಕೆರೆಗಳು ಕೂಡ ಆಕರ್ಷಕವಾದ ಪ್ರಕೃತಿಯ ಮಡಿಲಲ್ಲೇ ಕಟ್ಟಲಾಗಿದೆ. ಉದಾ: ನಾಗೇಂದ್ರಗಡ ಕೆರೆ, ಕುಂಟೋಜಿಯ ಕೆರೆ, ಶೆಟ್ಟಿಗೇರಿ ಕೆರೆ, ಕುಂದ್ರಳ್ಳಿ ಕೆರೆಗಳನ್ನು ಹೇಳಬಹುದು.

೫. ತೂಬು :

ಕೆರೆಯ ಮತ್ತೊಂದು ಪ್ರಮುಖ ಅಂಗವೆಂದರೆ ತೂಬು. ಕೆರೆಯಲ್ಲಿ ಶೇಖರವಾದ ನೀರನ್ನು ವ್ಯವಸ್ಥಿತವಾಗಿ ಕಾಲುವೆಗೆ ಹರಿದು ಬಿಡುವ ಸಾಧನವೇ ತೂಬು. ನೀರನ್ನು ಹಂಚುವಲ್ಲಿ ದುರುಪಯೋಗವಾಗದಂತೆ ತೂಬು ಮತ್ತು ಕಾಲುವೆ ತಡೆಯಬಲ್ಲವು. 'ತೂಬುಳ್ಳ ಕೆರೆ' ಎನ್ನುವ ಮಾತಿದೆ. ತೂಬಿಲ್ಲದ ಕೆರೆಗಳು ಕೂಡ ಉಂಟು. ಚಿಕ್ಕ ಕೆರೆ, ಕುಂಟೆ, ಕಟ್ಟೆ, ಒಡ್ಡುಗಳಿಗೆ ತೂಬು ಇರುವುದಿಲ್ಲ. ಒಡ್ಡಿನಲ್ಲಿ ಸೀಳು ಮಾಡಿ ಹೊಲಗಳಿಗೆ ನೀರನ್ನು ಹರಿಸುವರು. ಬೇಡವಾದಾಗ, ಸೀಳನ್ನು ಮುಚ್ಚುವಂತಹ ಕೆರೆಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದು.

ಹಿಂದಿನ ಕಾಲದಲ್ಲಿ ತೂಬನ್ನು ತೆರೆದು ಮುಚ್ಚಲು ಮರದ ಬಿರಡಿಯನ್ನು ಬಳಸುತ್ತಿದ್ದರು. ಈಗ ಉಕ್ಕಿನ ಬಾಗಿಲನ್ನು ತೂಬಿಗಾಗಿ ಬಳಸಿರವುದು ಕಂಡುಬರುತ್ತದೆ. ತೂಬು ಏರಿಯ ಮೇಲು ಪಾರ್ಶ್ವದಲ್ಲಿರುತ್ತದೆ. ತೂಬಿಗೆ ಹಾಗೂ ಕಾಲುವೆಗೂ ನಡುವೆ ಸುರಂಗ ಸಂಪರ್ಕ ಇರುತ್ತದೆ. ಮೊದಲಿಗೆ ಇದನ್ನು ಕಲ್ಲು ಕಟ್ಟಣೆಯಿಂದ ರಚಿಸುತ್ತಿದ್ದರು. ಈಗ ಕಾಂಕ್ರೀಟ್ ಕೊಳವೆಗಳ ಮೂಲಕ ಸಾಮಾನ್ಯವಾಗಿ ಒಂದು ಕೆರೆಗೆ ಒಂದು ಅಥವಾ ಎರಡು ಮತ್ತು ಮೂರು ತೂಬುಗಳು ಇರುತ್ತವೆ. ಉದಾ: ಶಿರಹಟ್ಟಿ ತಾಲೂಕಿನ ಶೆಟ್ಟಿಗೆರೆ ಕೆರೆಯಲ್ಲಿ ೩ ದೊಡ್ಡ ತೂಬುಗಳಿವೆ ಹಾಗೂ ಕಾಲುವೆಗಳಲ್ಲಿ ೨೦ ಸಣ್ಣ ತೂಬುಗಳಿವೆ. ಕೆರೆಯಿಂದ ತೂಬನ್ನು ಎತ್ತಿ ನೀರನ್ನು ಬಿಡುವ ವ್ಯಕ್ತಿಗೆ ನೀರುಗಂಟಿ ಎನ್ನುವರು. ಇವರು ಗ್ರಾಮದ ಗೌಡನ ಕೈ ಕೆಳಗೆ ಕೆಲಸ ಮಾಡುತ್ತಿದ್ದರು. ಆ ಕೆಲಸಕ್ಕೆ ಪ್ರತಿಫಲವಾಗಿ ಅವರಿಗೆ ಕೃಷಿ ಮಾಡಲು ಭೂಮಿಯನ್ನು ಬಿಟ್ಟು ಕೊಡುತ್ತಿದ್ದರು. ಹೀಗೆ ಗದಗ ಜಿಲ್ಲೆಯ ಕೆಲವು ಕೆರೆಗಳಲ್ಲಿ ನೀರಗಂಟಿಗಳು ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಆದರೆ ಅವರಿಗೆ ಭೂಮಿಯ ಬದಲಾಗಿ ವೇತನವನ್ನು ನೀಡುತ್ತಿದ್ದಾರೆ. ಉದಾ: ಜಂತ್ಲಿ ಶಿರೂರ, ಡಂಬಳ, ಶೆಟ್ಟಿಗೆರೆ, ಕುಂದ್ರಳ್ಳಿ, ಬಾಗೇವಾಡಿ, ಬಾಲೇಹೊಸೂರ, ಚಿಕ್ಕಹಂದಿಗೋಳ ಕೆರೆಗಳಲ್ಲಿ ಈಗಲೂ ನೀರಗಂಟಿಗಳು ಕೆಲಸ ನಿರ್ವಹಿಸುತ್ತಿದ್ದಾರೆ.

೬. ಕೋಡಿ :

ನಿರ್ದಿಷ್ಟ ಪ್ರಮಾಣದ ನೀರನ್ನು ಮಾತ್ರ ಹಿಡಿದಿಡುವಂತೆ ಕೆರೆ ಅಥವಾ ಜಲಾಶಯ ನಿರ್ಮಿತವಾಗಿರುತ್ತದೆ. ಮಿತಿಮೀರಿ ಜಲ ಸಂಗ್ರಹಣೆಯಾದರೆ ಅದು ಮಣ್ಣು ಕಟ್ಟೆಯ ಮೇಲೆ ಹರಿದು ಏರಿ ಒಡೆದು ಹೋಗಬಹುದು. ಆದ್ದರಿಂದ ಹೆಚ್ಚು ಬರುವ ನೀರು ಯೋಜಿತ ಸಂಗ್ರಹಣೆಗೆ ಮೀರದಂತೆ, ಕೆಳಕ್ಕೆ ಹರಿದು ಹೋಗುವಂತೆ ಬಿಡಲು ವ್ಯವಸ್ಥೆ ಯಾವಾಗಲೂ ಇದ್ದೇ ಇರುತ್ತದೆ. ಹೆಚ್ಚುವರಿ ನೀರು ಸಲೀಸಾಗಿ ಹರಿದು ಹೋಗುವ ಏರಿಯ ಭಾಗವೇ ಕೋಡಿ. ಕೆರೆ ತುಂಬಿ ಹೆಚ್ಚುವರಿಯಾದ ನೀರು ಹೊರಗೆ ಹೋಗಲು ಕೋಡಿಯನ್ನು ನಿರ್ಮಿಸುವರು. ಕೆರೆ ಒಡೆದು ಹೋಗದಿರಲು ಕೆರೆಯ ರಕ್ಷಣೆಗೆ ಕೋಡಿ ಅತ್ಯಗತ್ಯ. ಸರಣಿ ಕೆರೆಗಳ ನಿರ್ಮಿತಿಯಲ್ಲಿ ಮೇಲ್ಪಟ್ಟದ

ಕೆರೆಯಿಂದ ಕೆಳಮಟ್ಟದ ಕೆರೆಗೆ ಕೋಡಿಗಳ ಮೂಲಕ ನೀರು ಹರಿಬಿಡಲಾಗುವುದು. ಈ ತರಹದ ವ್ಯವಸ್ಥೆ ವೆಂಕಟಾಪುರ, ಸೋಮನಕಟ್ಟಿ, ಸೂಡಿಗಳಲ್ಲಿ ಕಾಣುತ್ತವೆ. ಕೋಡಿಯ ಮತ್ತೊಂದು ಉಪಯೋಗವೆಂದರೆ ಮಳೆಗಾಲದಲ್ಲಿ ಪ್ರವಾಹ ಬಂದಾಗ ತೇಲಿಬರುವ ಕಸ ಕಡ್ಡಿ, ಗಿಡಗಂಟಿ ಸುಲಭವಾಗಿ ಕೋಡಿಯ ಮೂಲಕ ಹೊರಗೆ ಹೋಗುತ್ತವೆ. ಕಲ್ಮಶವೆಲ್ಲ ಹೊರಗೆ ತಳ್ಳಲ್ಪಟ್ಟು ಕೆರೆ ಸ್ವಚ್ಛವಾಗಿ ಉಳಿಯುತ್ತದೆ. ಸಾಮಾನ್ಯವಾಗಿ ಒಂದು ಕೆರೆಗೆ ಒಂದೇ ಕೋಡಿ ಇರುತ್ತದೆ. ಎರಡು ಮೂರು ಕೋಡಿ ಇರುವ ಕೆರೆಗಳು ಕೂಡ ಇವೆ. ಉದಾ: ಆಂಧ್ರಪ್ರದೇಶದ ಪುರೋಮಾಮಿಲ್ಲ ಕೆರೆಗೆ ಐದು ಕೋಡಿಗಳಿವೆ.[೬೦]

ಕೋಡಿಯನ್ನು ಕೆರೆಯ ತಗ್ಗಿನ ಬದಿಯಲ್ಲಿ ೧ ಮೀ. ಎತ್ತರದವರೆಗೆ ಕಟ್ಟುವರು. ಏರಿಯ ಎತ್ತರಕ್ಕಿಂತ ಕಡಿಮೆ ಇರುತ್ತದೆ. ಕೋಡಿಯ ಉದ್ದ ಕೆರೆಗೆ ಅನುಗುಣವಾಗಿ ೮ ಮೀ. ನಿಂದ ೧೫ ಮೀ.ವರೆಗೆ ಉದ್ದಕ್ಕೆ ಕಟ್ಟುವರು. ಕೋಡಿಯ ಹೊರಭಾಗದಲ್ಲಿ ೨೫ ಮೀ. ನಿಂದ ೩೦ ಮೀ.ವರೆಗೆ ಉದ್ದಕ್ಕೆ ಕೋಡಿಯ ಅಗಲದಷ್ಟು ಸ್ಥಳೀಯವಾಗಿ ದೊರೆಯುವ ಕಲ್ಲುಗಳಿಂದ ಕಲ್ಲಿನ ಜಾಲವನ್ನು ನಿರ್ಮಿಸಿರುವರು. ಕೋಡಿಯ ನೀರು ಹರಿದು, ಮಣ್ಣು ಕೊಚ್ಚಿ ಹೋಗದಿರಲೆಂದು ಕೆರೆಯ ಆಸುಪಾಸು ಸುರಕ್ಷಿತವಾಗಿರೆಂದು ಕಲ್ಲಿನ ಜಾಲವನ್ನು ಕಟ್ಟುವರು. ವಿಜಯನಗರದ ಅರಸರು ಕೋಡಿಯನ್ನು ಕಟ್ಟುವಲ್ಲಿ ಪರಿಣಿತರಾಗಿದ್ದರು. ಉದಾ: ಅತೀ ಉದ್ದವಾದ ಕೋಡಿಗಳನ್ನು ಡಂಬಳ ಕೆರೆ, ಶೆಟ್ಟಿಗೆರೆ, ಚಿಕ್ಕಹಂದಿಗೋಳ ಕೆರೆಗಳಲ್ಲಿ ಕಾಣುತ್ತೇವೆ.

**೭. ಕಾಲುವೆ :**

'ಆಕಳಿನೊಂದಿಗೆ ಕರು, ಕೆರೆಯೊಂದಿಗೆ ಕಾಲುವೆ'[೬೧] ಎನ್ನುವ ಗಾದೆ ಯಂತೆ. ಕೆರೆಯಲ್ಲಿ ಸಂಗ್ರಹವಾದ ನೀರು, ತೂಬಿನ ಮೂಲಕ, ಮುಖ್ಯ ಕಾಲುವೆಗೆ ಹರಿದು ಅಡ್ಡಕಾಲುವೆಗಳ ಮೂಲಕ ಜಮೀನಿಗೆ ಹರಿಯುತ್ತದೆ. ಈ ಕಾಲುವೆಗಳನ್ನು ಸಿಮೆಂಟು ಗಚ್ಚು, ಗಾರೆಗಳಿಂದ ನಿರ್ಮಿಸಿರುತ್ತಾರೆ. ಎಷ್ಟು ತೂಬುಗಳಿರುತ್ತವೊ ಅಷ್ಟು ಕಾಲುವೆಗಳಿರುತ್ತವೆ. ಆಗಾಗ ಕಾಲುವೆಗಳು ಒಡೆದು ಹೂಳು ತುಂಬುವುದು ಸಾಮಾನ್ಯ. ರೈತರು ಅದನ್ನೆಲ್ಲಾ ಸರಿಮಾಡಿಕೊಂಡರೆ ಅವುಗಳನ್ನು ಮುಂದಿನ ಪೀಳಿಗೆಗೆ ಒಯ್ಯಬಹುದು. ಆದರೆ ಇವತ್ತು ಗ್ರಾಮೀಣದಲ್ಲಿದ್ದ ಸಮಷ್ಠಿ ಪ್ರಜ್ಞೆಯೇ ಮಾಯವಾಗಿ ಕೆರೆಗಳು ಹಾಳಾಗುವುದಕ್ಕೆ ಗ್ರಾಮೀಣ ಜನತೆಯೂ ಕೂಡ ಕಾರಣರಾಗಿದ್ದಾರೆ.

**೫.೨. ಕೆರೆಗಳ ನಿರ್ವಹಣೆ :**

ಗದಗ ಜಿಲ್ಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ನೆಲೆಯಾಗಿದ್ದು, ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದರೂ ಸಹ ಇಲ್ಲಿನ ಕೆರೆ ನೀರಾವರಿ ಚೌಕಟ್ಟು ಬಹುತೇಕ ಸ್ಥಳೀಯ ಸಮುದಾಯಗಳು ನಿರ್ಮಿಸಿದ ಮತ್ತು ನಿರ್ವಹಿಸಿದ ಕಾಮಗಾರಿಗಳಾಗಿವೆ. ದಕ್ಷಿಣ

ಭಾರತದ ಇತರೆಡೆಗಳಂತೆ ಕೃಷಿ ಗುಂಪುಗಳು ತಮ್ಮ ಬದುಕಿನ ಚಟುವಟಿಕೆಗಳಿಗೆ ಅಗತ್ಯವಾದ ನೀರಾವರಿ ಚೌಕಟ್ಟನ್ನು ರೂಪಿಸಿ ಅದಕ್ಕೆ ತಕ್ಕಂತೆ ಕೆರೆಗಳ ನಿರ್ವಹಣೆಗೆ ಸಂಬಂಧಿಸಿದಂತೆ ಕ್ರಮಗಳನ್ನು ರೂಪಿಸುವುದನ್ನು ಕಾಣಬಹುದು. ಇದಕ್ಕೆ ಬೇಕಾದ ಕೌಶಲ್ಯ ಮತ್ತು ಸಂಪನ್ಮೂಲಗಳನ್ನು ಸಹಜವಾಗಿ ಹೊಂದಿರುವುದು ಹಾಗೂ ಕ್ರೋಢೀಕರಿಸಿಕೊಂಡಿರುವುದು ಕಂಡುಬರುತ್ತದೆ. ಈ ಕಾರ್ಯಕ್ಕಾಗಿ ಹಲವು ಬಗೆಯ ಸವಲತ್ತುಗಳನ್ನು ಪಡೆದುದಲ್ಲದೆ ಸಾಮಾಜಿಕ ಪ್ರತಿಷ್ಠೆಯನ್ನು ಗಳಿಸಿಕೊಂಡರು. ನೀರಾವರಿ ನಿರ್ವಹಣೆ ಮತ್ತು ಕಾಮಗಾರಿ ಚಟುವಟಿಕೆಗಳು ಒಂದು ಪರಂಪರೆಯಾಗಿ ಬೆಳೆದು ಬಂದಿರುವುದು ಕಂಡುಬಂದಿದೆ.

**೫.೨.೧. ಕೆರೆಗಳ ನಿರ್ವಹಣೆಗೆ ಪ್ರಮುಖ ವ್ಯಕ್ತಿಗಳ ಪಾತ್ರ :**

ಕೆರೆಗಳ ನಿರ್ವಹಣೆಯಲ್ಲಿ ಕೆರೆ ಬಂಡಿಗಳು ಮುಖ್ಯಪಾತ್ರವನ್ನು ವಹಿಸಿದ್ದವೆಂದು ಶಾಸನಗಳ ಆಧಾರದಿಂದ ಹೇಳಬಹುದು. ಕೆರೆಯನ್ನು ಸುಸ್ಥಿತಿಯಲ್ಲಿಡಲು ಕೆರೆಯ ಹೂಳೆತ್ತಿ ಸಾಗಿಸಲು ಎತ್ತಿನ ಬಂಡಿಗಳನ್ನು ಬಳಸಲಾಗುತ್ತಿದ್ದು, ಅವುಗಳಿಗೆ ಕೆರೆ ಬಂಡಿಗಳೆಂದು ಕರೆಯಲಾಗಿದೆ. ಕೆರೆಬಂಡಿಗಳನ್ನು ನಿರ್ವಹಿಸುವವರಿಗೆ ಸಹ ದಾನ-ದತ್ತಿಗಳನ್ನು ನೀಡಿ ವ್ಯವಸ್ಥೆಯು ಸುಗಮವಾಗುವಂತೆ ನೋಡಿಕೊಳ್ಳುತ್ತಿದ್ದರು. ದಾನ ಪಡೆದವರು ನಿಯತವಾಗಿ ಕೆರೆಯಲ್ಲಿ ಸಂಗ್ರಹಗೊಂಡ ಹೂಳು, ಕಸ, ಕಲ್ಮಶಗಳನ್ನು ಎತ್ತಿ ಕೆರೆಗೆ ಮತ್ತು ತೂಬಿಗೆ ಯಾವುದೇ ವಿಧದ ಧಕ್ಕೆ ಉಂಟಾಗದಂತೆ ನೋಡಿಕೊಳ್ಳುವುದು ಅವರ ಕರ್ತವ್ಯವಾಗಿತ್ತು.[೨]

ಈ ನಿರ್ವಹಣೆಗೆ ಸಂಬಂಧಿಸಿದಂತೆ ಮುಖ್ಯವಾಗಿ 'ರಾಜನು' ಇದರ ಮೇಲಾಧಿಕಾರಿ ಯಾಗಿದ್ದನು. ಈತನ ಆಧೀನದಲ್ಲಿ.



ನೀರುಗಂಟಿಗಳ ಪಾತ್ರ ಇದರಲ್ಲಿ ಅತ್ಯಂತ ಮುಖ್ಯವಾದುದಾಗಿತ್ತು.[೩೩] ಪಾಳೆಗಾರರ ಕಾಲದಲ್ಲಿ ಕೆರೆಗಳ ನಿರ್ವಹಣೆಯನ್ನು ನೋಡಿಕೊಳ್ಳಲು ಕೆಲವು ಕೆರೆಗಳಿಗೆ ೩ ರಿಂದ ೬ ಜನ ನೀರುಗಂಟಿಗಳನ್ನು ನೇಮಿಸಿರುವುದು ಕಂಡುಬರುತ್ತದೆ. ಮಳೆಗಾಲದಲ್ಲಿ ಕೆರೆಯ ತೂಬನ್ನು ಮುಚ್ಚುವುದು, ಅದರ ಜವಾಬ್ದಾರಿಯನ್ನು ನೋಡಿಕೊಳ್ಳುವುದು ಹಾಗೂ ಕೆರೆಯಲ್ಲಿ ನೀರನ್ನು ಸಂಗ್ರಹಿಸುವುದು ನೀರಗಂಟಿಯ ಕಾರ್ಯವಾಗಿತ್ತು. ಮುಖ್ಯವಾಗಿ ಮಳೆಗಾಲ ಜೂನ್ ತಿಂಗಳಿನಿಂದ ಆರಂಭವಾದಾಗಿನಿಂದ ಸೆಪ್ಟೆಂಬರ್ ತಿಂಗಳವರೆಗೆ ಕೆರೆಯ ತೂಬನ್ನು ಮುಚ್ಚಿ ಅದರ ನಿರ್ವಹಣೆಯ ಕಾರ್ಯವನ್ನು ಮಾಡುತ್ತಿದ್ದನು.

ಕೆಲವು ಸ್ಥಳೀಯರು ಈ ಕೆರೆಗಳ ನಿರ್ವಹಣೆಯನ್ನು ಮಾಡುತ್ತಿದ್ದರು ಅವರು ಕರವನ್ನು ವಸೂಲಿ ಮಾಡುವುದರೊಂದಿಗೆ ಅದರ ನಿರ್ವಹಣೆ ಕಾರ್ಯ ಮಾಡುತ್ತಿದ್ದರು. ಕರವನ್ನು ಹಣ ಅಥವಾ ಧಾನ್ಯದ ರೂಪದಲ್ಲಿ ವಸೂಲಿ ಮಾಡುತ್ತಿದ್ದರು. ಇದರಲ್ಲಿ ಒಡ್ಡರು, ಉಪ್ಪಾರರು, ಕೆಲವು ಬಾರಿ ಮೀನುಗಾರರು ಈ ಉಸ್ತುವಾರಿಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು ಇವರು ಆ ಕೆರೆಯ ಹೂಳನ್ನು ರಿಪೇರಿ ಮಾಡಿಸುವುದು ಮುಂತಾದ ಕಾರ್ಯಮಾಡುತ್ತಿದ್ದರು.[೩೪]

ಕೆರೆಗಳ ನಿರ್ವಹಣೆಗೆ ಕೆಲವು ಅಧಿಕಾರಿಗಳ ವರ್ಗ ಇರುವುದನ್ನು ಗಮನಿಸಬಹುದು.

ಶಾನುಭೋಗ – ಲೆಕ್ಕಿಗ

ಗೌಡ – ಮುಖ್ಯಸ್ಥ

ಕಮ್ಮಾರ – ಕಬ್ಬಿಣದ ಕೆಲಸಗಾರ

ಬಡಗಿ – ಮರಗೆಲಸ ಮಾಡುವವನು.

ಅಗಸ – ಮಡಿವಾಳ

ಪಂಚಾಂಗಿ – ಪಂಚಾಂಗ ಹೇಳುವಾತ

ನಾಯಿಂದ – ಕ್ಷೌರಿಕ

ನೀರುಗಂಟಿ – ಕೆರೆಗಳ ಕಾವಲಿನಾಳು

ತಳಾರಿ – ಹಳ್ಳಿಯ ಕಾವಲಿನಾಳು.

ಕುಂಬಾರ – ಮಡಿಕೆ ಮಾಡುವವನು.

ಉಪ್ಪಾರ, ಒಡ್ಡರು – ಕೆರೆಗಳ ನಿರ್ಮಾಣ, ಕೋಟೆ ಕಟ್ಟುವವರು

ಮೀನುಗಾರರು – ಮೀನು ಹಿಡಿಯವುದು, ಕೆಲವು ಸಂದರ್ಭದಲ್ಲಿ ಕೆರೆಯ ಹೂಳನ್ನು ತೆಗೆಯುವವರಾಗಿ ದುರಸ್ತಿಕಾರ್ಯ ಮಾಡುತ್ತಿದ್ದರು.[೩೫]

ಮಳೆಗಾಲದಲ್ಲಿ ನೀರುಗಂಟಿಯು ಕೆರೆಯ ತೂಬನ್ನು ಮುಚ್ಚುವುದರ ಮುಖಾಂತರ ನೀರನ್ನು ಸಂಗ್ರಹಿಸುತ್ತಿದ್ದರು. ಜೂನ್ ತಿಂಗಳಿನಿಂದ ಸೆಪ್ಟಂಬರ್ ತಿಂಗಳವರೆಗೆ ತೂಬನ್ನು ಮುಚ್ಚಲಾಗುತ್ತಿತ್ತು.

ಇದರ ಜೊತೆಗೆ ನೀರಗಂಟಿಯು ನೀರು ಸೋರುತ್ತಿರುವದನ್ನು ತಡೆಗಟ್ಟುವದು ಒಡೆದು ಹೋದ ಒಡ್ಡುಗಳನ್ನು ರಿಪೇರಿ ಮಾಡುವದು, ತೂಬುಗಳಲ್ಲಿಯ ಹೂಳನ್ನು ಎತ್ತುವ, ಕೆರೆಯ ತಳದ ಹೂಳನ್ನು ಎತ್ತುವ, ಕಸಕಡ್ಡಿ ತೆಗೆಯುವ ಮುಂತಾದ ಉಸ್ತುವಾರಿ ಕಾರ್ಯಗಳನ್ನು ಮಾಡಿಸುವುದು ಹಾಗೂ ಕೋಡಿಯ ದುರಸ್ಥಿ ಮಾಡಿಸಬೇಕಾಗಿತ್ತು.

**೫.೨.೨. ಕೆರೆಗಳ ಸಂರಕ್ಷಣೆ :**

ಯಾವುದೇ ಕಾಮಗಾರಿಯು ನಿರ್ಧಿಷ್ಟ ಅವಧಿಗೆ ಮಾತ್ರ ಉಪಯುಕ್ತವಾಗಿದೆ. ಹಾಗಾಗಿ ಅದರ ಸೂಕ್ತ ಕ್ರಮವನ್ನು ಹಂತ ಹಂತವಾಗಿ ಮಾಡುತ್ತ ಬಂದು ದುರಸ್ತಿ ಕಾರ್ಯ ಮಾಡುತ್ತಾ ಬಂದಾಗ ಅದರ ಸಫಲತೆಯನ್ನು ಇನ್ನೂ ವಿಸ್ತರಿಸಬಹುದಾಗಿದೆ. ಕೆರೆಗಳನ್ನು ಗಮನಿಸಿದಾಗ ಕೆರೆ ಹೂಳಿನಿಂದ ತುಂಬಿ ಹೋಗುವುದು, ಏರಿಯು ಒಡೆದು ಹೋಗುವುದು, ಇಲ್ಲವೇ ನೀರು ನಿಲ್ಲದೇ ಇರುವುದು, ತೂಬುಗಳಲ್ಲಿ ಸೋರಿ ಹೋಗುವುದು ಹೀಗೆ ಹಲವು ಸಮಸ್ಯೆಗಳು ಸಂಭವಿಸುತ್ತವೆ. ಇದರಿಂದ ನೀರಾವರಿ ಕಾರ್ಯದ ಸೂಕ್ತ ರಕ್ಷಣೆ ಮಾಡುವುದು ಅತ್ಯಗತ್ಯ.[೩೬] ಕ್ರಿ.ಶ. ೧೮೭೨ರಲ್ಲಿ ಬ್ರಿಟಿಷ್ ಸಾಮ್ರಾಜ್ಞೆ ಎಲಿಜಬೆತ್ ರಾಣಿ ೧೪ ತಿಂಗಳ ಪರ್ಯಂತ ದುರಸ್ತಿ ಮಾಡಿದ ಫಲವಾಗಿ ಇವತ್ತಿಗೂ ಅದು ಸಂರಕ್ಷಣೆಯಿಂದ ಉಳಿದುಕೊಂಡಿದೆ.

**೫.೨.೩ ಕೆರೆಗಳ ಸಂರಕ್ಷಣಾ ಕ್ರಮಗಳು:**

೨. ಕೆರೆಗಳ ಅಂಗಳ ಹಾಗೂ ನಾಲೆಯ ತಳದಿಂದ ಕಾಲಕಾಲಕ್ಕೆ ಹೂಳು ತೆಗೆಯುವುದು.

೩. ಮಳೆಯಿಂದಾಗಲಿ ಇತರೆ ಕಾರಣಗಳಿಂದಾಗಲಿ ಮಣ್ಣು ಕಟ್ಟೆಗೆ ಎಲ್ಲಿಯಾದರೂ ಹಾನಿಯಾದಲ್ಲಿ ಸರಿಪಡಿಸುವುದು.

೪. ತೂಬು ಕೋಡಿಗಳಿಗೆ ಏನಾದರೂ ಹಾನಿಯಾಗಿದ್ದರೆ ಕಾಲಕಾಲಕ್ಕೆ ಅದನ್ನು ದುರಸ್ತಿ ಮಾಡುವುದು.

೫. ಜಲಾನಯನ ಪ್ರದೇಶ ಒತ್ತುವರಿಯಾಗದಂತೆ ಇಟ್ಟುಕೊಳ್ಳುವುದು.

೬. ಕೆರೆಯ ಆಳಕ್ಕೆ ಹರಿದು ಬರುವ ಹೂಳನ್ನು ತಡೆಯಲು ವ್ಯವಸ್ಥೆ ಮಾಡುವುದು.[೩೭]

ಪ್ರಾರಂಭದಲ್ಲಿ ಕೆರೆಯ ಸಂರಕ್ಷಣೆಯ ಕೆಲಸ ಗ್ರಾಮಗಳ ಸಮುದಾಯದಾಗಿತ್ತು. ಇದರಲ್ಲಿ ಹಳ್ಳಿಯ ಒಬ್ಬ ವ್ಯಕ್ತಿ ಸಂರಕ್ಷಣಾ ಕಾರ್ಯವನ್ನು ನಡೆಸುತ್ತಿದ್ದ ಅವನಿಗೆ 'ಬಿತ್ತುವಟ್ಟು' ಅಥವಾ 'ದಶವಂದವಾಗಿ' (ಕೆರೆಯ ನಿರ್ಮಾಣ ಹಾಗೂ ಸಂರಕ್ಷಣೆಯ ಸಲುವಾಗಿ ನೀಡಿದ ಭೂಮಿ) ನೀಡುತ್ತಿದ್ದರು. ಇವನು ದುರಸ್ತಿ ಕಾರ್ಯಗಳನ್ನು ನಡೆಸುತ್ತಿದ್ದ ಕೆಲವು ಸಂದರ್ಭಗಳಲ್ಲಿ ಕೆರೆ ಸಂರಕ್ಷಣೆಗಾಗಿ ಬಂಡೆಗಳನ್ನು ಕೊಡುತ್ತಿದ್ದರಿಂದ ಕೆರೆಗಳ ಮಣ್ಣನ್ನು (ಹೂಳನ್ನು) ಸಾಗಿಸಲು ಅನುವಾಗುತ್ತಿತ್ತು.[೩೮] ಸಂರಕ್ಷಣೆ ಹಾಗೂ ದುರಸ್ತಿ ಕಾರ್ಯಗಳಿಗೆ ನೀಡಲಾಗಿದ್ದ ಮಹತ್ವವನ್ನು ಸೂಚಿಸುವ ಅನೇಕ ಶಾಸನಗಳು ಗದಗ ಜಿಲ್ಲೆಯಲ್ಲಿ ಕಂಡುಬರುತ್ತವೆ. ಮುಖ್ಯವಾಗಿ ಕುರ್ತಕೋಟಿ[೩೯],

ಡಂಬಳ[೪೦], ಕೋಟುಮಚಗಿ[೪೧], ನರಗುಂದದ ದಂಡಾಪೂರ[೪೨] ಶಾಸನಗಳು ಕೆರೆಗಳ ಸಂರಕ್ಷಣೆಗೆ ಹಾಗೂ ದುರಸ್ತಿಗಳಿಗೆ ಕೆಲವು ಸ್ಥಳೀಯ ತೆರಿಗೆಗಳನ್ನು ನೀಡಿದ್ದನ್ನು ದಾಖಲೆ ಮಾಡಿದೆ. ಕುರ್ತಕೋಟಿಯ ಕ್ರಿ.ಶ. ೧೦೮೨ರ ೬ನೇ ವಿಕ್ರಮಾದಿತ್ಯನ ಶಾಸನದಲ್ಲಿ[೪೩] ಕಡಲಗೆರೆಯ ಕೆರೆಯ ಹಿತಕ್ಕಾಗಿ ಜುಲ್ಮಾನೆಗಳಿಂದ ಬರುವ ಹಣವನ್ನು ಕುರ್ತಕೋಟಿಯ ಅಗ್ರಹಾರದ ಮಹಾಜನರಿಗೆ ನೀಡಿದ ಬಗ್ಗೆ ಉಲ್ಲೇಖವಿದೆ. ಮುಂಡರಗಿ ತಾಲೂಕಿನ ಡಂಬಳ ಶಾಸನದಲ್ಲಿ[೪೪] ಗೋಣಸಮುದ್ರ ಎಂಬ ಸ್ಥಳೀಯ ಕೆರೆಯ ಅಂಗಳದಿಂದ ಹೂಳು ಎತ್ತಲು ಹಾಗೂ ತೂಬಿನ ಕಲ್ಲು ಮತ್ತು ಮರಗಳನ್ನು ದುರಸ್ತಿ ಮಾಡಲು ದೇವರಿಗೆಂದೇ ಕಂದಾಯವಿಲ್ಲದೇ ಬೆಟ್ಟದ ಭೂಮಿಯನ್ನು ಬಿಟ್ಟು ಉಳಿದ ಎಲ್ಲಾ ತೋಟಗಳಿಂದಲೂ ವಸೂಲಿಯಾಗುವ ಕಂದಾಯದ ಹಣವನ್ನು ಈ ಕೆರೆಗೆ ವಿನಿಯೋಗಿಸಿದರ ಬಗ್ಗೆ ಮೇಲಿನ ಶಾಸನ ಉಲ್ಲೇಖಿಸುತ್ತದೆ.

ಒಟ್ಟಾರೆ ಕೆರೆಗಳ ರಚನೆಯನ್ನು ಚಾರಿತ್ರಿಕವಾಗಿ ನೋಡಿದಾಗ ಸಿಂಧೂ ನಾಗರಿಕತೆಯಲ್ಲಿ ಗಮನಿಸಬಹುದು, ಹಾಗೆಯೇ ಜಾತಕ, ಶಾಸನಗಳಲ್ಲಿ ಇದರ ನಿರ್ಮಾಣದ ಬಗ್ಗೆ ಉಲ್ಲೇಖಗಳನ್ನು ಕಾಣಬಹುದು. ಅಷ್ಟೇ ಅಲ್ಲದೇ ಈ ಕೆರೆಗಳ ರಚನೆಗೆ ಯಾವ ಯಾವ ವಿಧಾನಗಳನ್ನು ಅನುಸರಿಸಿದರೆ ಸೂಕ್ತವಾದ ಭದ್ರತೆಯನ್ನು ಒದಗಿಸಲು ಸಾಧ್ಯ ಎಂಬುದನ್ನು ಅರಿತು ಈ ಕೆರೆಗಳ ನಿರ್ಮಾಣದಿಂದ ಮುಂದೆ ಆಗುವ ಅನುಕೂಲಗಳನ್ನು ಹಾಗೂ ರಕ್ಷಿಸುವ ಹೊಣೆಗಾರಿಕೆಯನ್ನು ಒಬ್ಬ ರಾಜನಿಂದ ಹಿಡಿದು ಜನಸಾಮಾನ್ಯರವರೆಗೂ ಸಹ ಜವಾಬ್ದಾರ ರಾಗಿದ್ದು ಎಲ್ಲರ ಪಾತ್ರವು ಸಹ ತುಂಬ ಮಹತ್ವದ್ದಾಗಿರುತ್ತಿತ್ತು ಎಂಬುದನ್ನು ತಿಳಿಯಬಹುದು.

**೫.೨.೪.ಕೆರೆ-ಬಾವಿಗಳ ದುರಸ್ತಿ ಮತ್ತು ನಿರ್ವಹಣೆ :**

ಪ್ರಾಚೀನ ಕಾಲದಿಂದಲೂ ನೀರಾವರಿ ಚೌಕಟ್ಟಿನಲ್ಲಿ ಕಾಮಗಾರಿಗಳು ನಿರ್ಮಾಣಕ್ಕೆ ನೀಡಿದ ಪ್ರಾಶಸ್ತ್ಯ ದುರಸ್ತಿ ಮತ್ತು ನಿರ್ವಹಣೆಗೆ ಸಹ ನೀಡಿರುವುದು ಕಂಡುಬಂದಿದೆ. ಕೆರೆಯನ್ನು ಯಾರೇ ಕಟ್ಟಿಸಲಿ ಅದರ ಯೋಗಕ್ಷೇಮದ ಹೊಣೆ ಇಡೀ ಊರಿನದು. ಅಥವಾ ಚಾವುಂಡಯ್ಯ ಎಂಬಾತ ಮಾಡಿಸಿದ ಕೆರೆಗೆ ಬಿಟ್ಟ ಭೂಮಿಯನ್ನು ಆ ಊರಿನ ಮಹಾಜನರು ಪಾಲಿಸುವರು ಎಂಬ ಶಾಸನದ ಮಾತು ಇದಕ್ಕೆ ಸಾಕ್ಷಿ. ಒಂದು ಊರಿನ ಕೆರೆಯ ನೀರನ್ನು ಇನ್ನೊಂದು ಊರಿನವರು ಬಳಸಬೇಕಾದರೆ ನಾಡಿನ ಎಲ್ಲಾ ಪ್ರಭುಗಾವುಂಡಗಳ ಅನುಮತಿ ಪಡೆಯಬೇಕಾಗುತ್ತಿತ್ತು. ಮೇಲಿಂದ ಮೇಲೆ ಕೆರೆಗಳ ದುರಸ್ತಿ ಮಾಡಿಸಬೇಕಾಗುತ್ತಿತ್ತು. ಇಂತಹ ಕೆಲಸದ ವೆಚ್ಚಕ್ಕಾಗಿ ಭೂಮಿಯನ್ನು ಬಿಡಲಾಗುತ್ತಿದ್ದು; ಇದಕ್ಕೆ 'ಬಿತ್ತುವಾಟ' ಎಂದು ಕರೆಯುತ್ತಿದ್ದರು. ಈ ದುರಸ್ತಿ ಕಾರ್ಯವನ್ನು ಶಾಸನಗಳು 'ಪಡಿಸಲಿಸು' ಎಂದು ಕರೆದಿವೆ. ಈ ಪಡಿಸಲಿಸುವ ಕ್ರೀಯೆಗೆ ಪಂಚಮ 'ಅಳಿದಾಯತನ' ಎಂದು ಕರೆದಿದ್ದಾನೆಂದು ಹೇಳಬಹುದು. ನೀರಾವರಿ ಒಣಬೇಸಾಯಗಳನ್ನು ಆಧರಿಸಿ ಆಯಾ ಭೂಮಿಯ ಮೇಲೆ ಸುಂಕವನ್ನು ವಿಧಿಸಲಾಗುತ್ತಿತ್ತು. ಊರಿನ ಜನತೆಯು ಉಪನಯನ, ಮದುವೆ

ಮೊದಲಾದ ಶುಭ ಕಾರ್ಯಗಳಿಂದ ಬರುವ ಹಣವನ್ನು ಪ್ರಾಯಶ್ಚಿತ ದಂಡರೂಪವಾಗಿ ಬರುವ ಹಣವನ್ನು ಕೆರೆಗೆ ಬಿಟ್ಟುಕೊಡುತ್ತಿದ್ದರು. ಶಾಸನಗಳಿಂದ ನಿರೂಪಿತವಾದ ಅಂಶಗಳಿಂದ ಕೆರಗಳನ್ನು ನಿರ್ಮಿಸುವ ಮತ್ತು ದುರಸ್ತಿ ಮೇಲ್ವಿಚಾರಣೆಗೆ ಬಹಳ ಮಹತ್ವ ನೀಡಿದ್ದಾರೆಂದು ತಿಳಿಯುತ್ತದೆ. ಕೆರೆಗಳಿಗಾಗಿ ಬಿಟ್ಟ ದಾನ-ದತ್ತಿಗಳ ಉಲ್ಲೇಖವು ಈ ಮಾತಿಗೆ ಸಾಕ್ಷಿಯಾಗಿದೆ.[೪೫] ಕೆರೆ, ಕಾಲುವೆ, ಅನ್ನ, ಸತ್ರ ಅರವಟ್ಟಿಗೆ, ಅಗ್ಗಿಷ್ಟಿಕೆ, ಅರಾಮಗಳ ನಿರ್ಮಾಣದಲ್ಲಿ ಪ್ರಾಚೀನ ಕರ್ನಾಟಕದ ಮಹಿಳೆಯರು ಮುಂದಿದ್ದರು. ಈ ಮಹಿಳೆಯರು ವಿಶೇಷವಾಗಿ ರಾಣಿಯರು, ಅಧಿಕಾರಿಣಿಯರು, ಶ್ರೀಮಂತ ಮನೆತನದ ಗೃಹಿಣಿಯರು ಅಥವಾ ಸನ್ಯಾಸಿಯರಾಗಿದ್ದರೆಂಬುದು ಸ್ಪಷ್ಟ. ಇದಕ್ಕೆ ಉದಾಹರಣೆ ಗದಗ ಜಿಲ್ಲೆಯ ಲಕ್ಕುಂಡಿಯ ಅತ್ತಿಮಬ್ಬೆ ಕೆರೆ, ಹೈತಾಪುರದ ಬಿಜ್ಜಳನ ಹೆಂಡತಿ ನಿರ್ಮಿಸಿದ ಕೆರೆ.

ಗದಗ ಜಿಲ್ಲೆಯಲ್ಲಿ ಪ್ರಮುಖವಾಗಿ ಕಂಡುಬರುವ ಕೆರೆಗಳೆಂದರೆ, ಮುಳಗುಂದದಲ್ಲಿ ಬರುವ ಬೆಳ್ಗೊಳ, ಪದಾರ್ಥಕೊಳ, ಕೋಡಿಹಳ್ಳ, ಎಲೆಶಿರೂರಿನ ಹಳ್ಳ, ಉತ್ತರ ದಿಕ್ಕಿನಲ್ಲಿರುವ ಕೊರಲ ಕಬ್ಬೆಕೆರೆ ಹಾಗೂ ನಾಗರಕೆರೆ, ಮಾಲಕೆರೆ, ಆಲಕೆರೆ, ಬಳ್ಳಕೆರೆಗಳು, ಕುರ್ತಕೋಟಿಯ ಕಡಲಗೆರೆಗಳು ಶಾಸನೋಕ್ತವಾಗಿವೆ. ಕುರ್ತಕೋಟಿಯ ಕಡಲ ಕೆರೆಯ ನೀರು ಆಕಾರ ಪಡೆದು ಕ್ಷೀರಸಾಗರದಂತೆ ಶೋಭಿಸುತ್ತಿತ್ತು ಇದರಲ್ಲಿಯ ಅಮೃತ ಜಲ ಕಾವೇರಿ ನದಿಗೆ ಸಮನಾದು ದೆಂದು ಕ್ರಿ.ಶ. ೧೦೮೭ರ ಶಾಸನವು ವರ್ಣಿಸಿದೆ.[೪೬] ಆರನೇ ವಿಕ್ರಮಾದಿತ್ಯನ ರಾಯಭಾರಿ ಈಶ್ವರಯ್ಯ ಕಟ್ಟಿಸಿದ ಕೆರೆಗೆ ಈಶ್ವರ ಸಮುದ್ರವೆಂದು ನರಗುಂದದ ಶಾಸನವು ಉಲ್ಲೇಖಿಸಿದೆ.[೪೭] ೪ನೇ ಸೋಮೇಶ್ವರ ಕ್ರಿ.ಶ. ೧೧೮೪ರ ಡಂಬಳ ಶಾಸನದಲ್ಲಿ[೪೮]ಗೋಣ ಸಮುದ್ರವೆಂದು ಹೇಳಿದ್ದು ಇದು ಡಂಬಳದ ದೊಡ್ಡ ಕೆರೆಯಾಗಿದೆ.

ಮುಂಡರಗಿ ತಾಲೂಕಿನ ಆಲೂರ ಶಾಸನದಲ್ಲಿ ಆರನೇ ವಿಕ್ರಮಾದಿತ್ಯನಿಗೆ ಸಂಬಂಧಿಸಿದ ಭೂಮಿ, ಚಿನ್ನ, ಮನೆ ನಿವೇಶನಗಳನ್ನು, ಛತ್ರ, ವಿದ್ಯಾಶಾಲೆಗಳ ಜೊತೆಯಲ್ಲಿ ಕೆರೆ ಮತ್ತು ಕೊಳದ ನಿರ್ವಹಣೆಗಾಗಿ ಮಹಾಜನರಿಗೆ ನೀಡಿರುವುದು ಕಂಡುಬಂದಿದೆ.[೪೯] ರೋಣ ತಾಲೂಕಿನ ನರೆಗಲ್ಲ ಶಾಸನದಲ್ಲಿ ಬಸರಿಗೆ ಇರುವ ದಾನ ಶಾಲೆಗೆ ಕೆರೆಯೊಂದನ್ನು ದಾನ ನೀಡಿರುವುದನ್ನು ಉಲ್ಲೇಖಿಸಲಾಗಿದೆ.[೫೦] ರೋಣ ತಾಲೂಕಿನ ಅಬ್ಬಿಗೇರಿ ಶಾಸನ ಬರಿಗೆಯ ವೇದಿದೇವ ನಾಯಕ ಎಂಬುವನು ಪೀಕೋಟ ನಿರ್ವಹಣೆಗಾಗಿ ಭೂಮಿಯನ್ನು ದಾನ ನೀಡಿರುವುದನ್ನು ಉಲ್ಲೇಖಿಸಿದೆ.[೫೧] ರೋಣ ತಾಲೂಕಿನ ಮಲ್ಲಾಪುರ ಶಾಸನ ನಾವಿದಿಗೆ ಕೆರೆಯ ನಿರ್ವಹಣಾ ಕಾರ್ಯಗಳಿಗಾಗಿ ಕರ್ನಾಡ ಜೋಗ ಗಾವುಂಡ ಭೂಮಿಯನ್ನು ದತ್ತಿ ನೀಡಿರುವುದನ್ನು ದಾಖಲಿಸಿದೆ.[೫೨] ರೋಣ ತಾಲೂಕಿನ ಯಾವಗಲ್ ಶಾಸನದಲ್ಲಿ ಗದಗ ಸೀಮೆಯ ಆಡಳಿತಾಧಿಕಾರಿ ಮುಂಗೋಜಿ ಪಂಡಿತ ಮತ್ತು ಸ್ಥಳೀಯ ಅಧಿಕಾರಿಗಳು ಮಾಲಿಕ್ ಸಾಹೇಬ ಆದೇಶದಂತೆ ಮುಂಗೋಜಿ ಪಂಡಿತ ದಾನ ಸೇವಾ ವಿಕೋಟದ ನಿರ್ವಹಣೆಗಾಗಿ ತೋಟವನ್ನು ದಾನವಾಗಿ ನೀಡಿರುವುದನ್ನು ದಾಖಲಿಸಿದೆ.[೫೩] ಮುಂಡರಗಿ ತಾಲೂಕಿನ ಬ್ಯಾಗಿನ ಕೆರೆಗೆ ಚಿಕ್ಕಣ್ಣ ಉಪಧ್ಯಾಯನ ಮಗ ಗೋಪಣ್ಣ ಮೂವತ್ತು

ಪ್ರತಾಪಗಳನ್ನು ವ್ಯಯಿಸಿ ಕಟ್ಟಿಸಿದ ತೂಬು ಎಂದು ಉಲ್ಲೇಖಿಸಿದೆ.[೫೪] ಮುಂಡರಗಿ ತಾಲೂಕಿನ ಚಯ್ಯನಗಿರಿ ಕೆರೆ ಶಾಸನದಲ್ಲಿ ಕೆರೆಯ ತೂಬನ್ನು ಮಾಸಣ್ಣಿಗಡೆ ಮಗ ಗೋಪಣ್ಣ ವಿಧಿವತ್ತಾಗಿ ನೆರವೇರಿಸಿದ್ದನ್ನು ಉಲ್ಲೇಖ ಕಂಡುಬಂದಿದೆ.[೫೫] ಮುಂಡರಗಿ ತಾಲೂಕಿನ ನಾಗರಹಳ್ಳಿ ಶಾಸನ ತುಂಗಭದ್ರಾ ನದಿಯ ದಂಡೆಯಲ್ಲಿ ಇರುವ ಭೂಮಿಯನ್ನು ದೇವಾಲಯಕ್ಕೆ ದತ್ತಿ ನೀಡಿರುವುದನ್ನು ಉಲ್ಲೇಖಿಸುತ್ತದೆ.[೫೬] ಇದನ್ನು ನೋಡಿದಾಗ ಆಗಿನ ನೀರಾವರಿ ವ್ಯವಸ್ಥೆಯು ನದಿ ನೀರಿನ ಬಳಕೆ ಕುರಿತಂತೆ ಪ್ರಸ್ತಾಪಿಸುವ ಈ ಶಾಸನದಂತೆ, ತುಂಗಭದ್ರ ದಂಡೆಯ ಭೂಮಿಯನ್ನು ಧಾರ್ಮಿಕ ಮಹೋನ್ನತ ಕಾರ್ಯದ ದೇವಾಲಯಕ್ಕೆ ದತ್ತಿ ನೀಡಿರುವುದನ್ನು ಗಮನಿಸಿದಾಗ ನದಿ ನೀರಿನ ಸಾಗುವಳಿ ಬಗ್ಗೆ ಮನವರಿಕೆಯಾಗುತ್ತದೆ. ಮುಂಡರಗಿ ತಾಲೂಕಿನ ಡಂಬಳ ಶಾಸನದಲ್ಲಿ[೫೭] ತೋಟಗಳಲ್ಲಿ 'ಪನ್ನಾಯ' ತೆರಿಗೆಯಿಂದ ಬರುವ ಆದಾಯವನ್ನು (ಸರ್ವಮಾನ್ಯ ದತ್ತಿಗಳನ್ನು ಹೊರತುಪಡಿಸಿ) ಸ್ಥಳೀಯರ ಗೋಣಸಮುದ್ರದ ಕೆರೆಯ ತೂಬಿನ ಹೂಳನ್ನು ತೆಗೆದು ಕಲ್ಲು ಮತ್ತು ಮರದ ತುಂಡನ್ನು ಬಳಸಿ, ತೂಬನ್ನು ದುರಸ್ತಿಗೊಳಿಸುವುದಕ್ಕಾಗಿ ಅದರ ಜವಾಬ್ದಾರಿಯನ್ನು ೧೬ ಜನ ಶೆಟ್ಟರಿಗೆ (ಅವರು ಸಹ ಕೆರೆಗೆ ದಾನ ನೀಡಿದ್ದವರು.) ವಹಿಸಲಾಗಿದ್ದಿತು ಎಂಬುವುದರ ಬಗ್ಗೆ ತಿಳಿಸುತ್ತದೆ. ರೋಣ ತಾಲೂಕಿನ ಹಿರೇಮಣ್ಣೂರ ಶಾಸನದಲ್ಲಿ[೫೮] ದಾಸಬೋವನ ಕೋರಿಕೆ ಮೇರೆಗೆ ಸೀಂದ ಕುಟುಂಬದ ಜೈನ ಶಾಲೆಯ ಅಧಿಸ್ಥಾಯಕ ಮಹಾಮಂಡಲೇಶ್ವರ ಚಾವುಂಡನು ಹಿರೇಮಣ್ಣೂರಿನ ಹಿರಿಯಕೆರೆಯ ನಿರ್ವಹಣೆಗಾಗಿ ನೀಡಿದ ದಾನವನ್ನು ನವೀಕರಿಸಿದ್ದನ್ನು ಕುರಿತಂತೆ ಪ್ರಸ್ತಾಪಿಸುತ್ತದೆ. ಆಗಿನ ಕಾಲದ ನೀರಾವರಿ ಪದ್ಧತಿಯ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಅಗತ್ಯವಾಗಿದ್ದ ತಾಂತ್ರಿಕ ಕೌಶಲ್ಯ ಹೊಂದಿದ್ದ ವೃತ್ತಿಪರ ಜನ ಸಮೂಹಗಳ ಕಾರ್ಯ ಚಟುವಟಿಕೆಗಳನ್ನು ಗಮನಿಸಿದಾಗ ಪಾರಂಪರಿಕ ತಂತ್ರಜ್ಞಾನ ಗುಣಲಕ್ಷಣಗಳನ್ನು ತಿಳಿಯಲು ಸಹಾಯಕವಾಗುತ್ತದೆ. ರೋಣ ತಾಲೂಕಿನ ಅಬ್ಬಿಗೇರಿ ಶಾಸನದಲ್ಲಿ[೫೯] ಅಬ್ಬಿಗೇರಿಯ ೮ ಜನ ಗಾವುಂಡರು ೬೦ ಕುಟುಂಬಗಳು ಮತ್ತು ಇತರರ ಕೋರಿಕೆಯ ಮೇರೆಗೆ ಆಚರಸನು ನೀಡಿದ್ದ ಭೂಮಿಯ ದತ್ತಿಯನ್ನು ನವೀಕರಿಸಿದ ಉಲ್ಲೇಖ ದೊರೆಯುತ್ತದೆ. ಕೆರೆಯನ್ನು ಆಶ್ರಯಿಸಿರುವ ಮುಖ್ಯಸ್ಥರು, ಗಾವುಂಡರು, ಅನೇಕ ಕುಟುಂಬಗಳು ಮತ್ತು ಇತರರು ಪ್ರತಿಪಾದಿಸಿದ ಅಗತ್ಯಗಳಿಗೆ ರಾಜ್ಯಾಡಳಿತ ಸ್ಪಂದಿಸಿದ ಬಗೆ ಮತ್ತು ಇಂತಹ ಕಾರ್ಯಗಳಲ್ಲಿ ಸ್ಥಳೀಯ ಮುಖಂಡತ್ವದ ಪಾತ್ರ ವೇದ್ಯವಾಗುತ್ತದೆ.

**೫.೨.೫ ಸರಣಿ ಕೆರೆಗಳು:**

ಪ್ರಾಚೀನ ಕಾಲದಲ್ಲಿ ನಿರ್ಮಾಣವಾದಂತಹ ಕೆರೆಗಳು ಅತ್ಯಂತ ಮಹತ್ವವನ್ನು ಪಡೆದು ಕೊಂಡಿದ್ದಂತಹ ಕೆರೆಗಳಾಗಿದ್ದವು ಈ ಕೆರೆಗಳು ಕೇವಲ ಹಳ್ಳದಿಂದ ಹರಿದು ಬರುತ್ತಿದ್ದಂತಹ ನೀರಿಗೆ ಮಾತ್ರ ಸೀಮಿತವಾಗಿರದೇ ಕೆಲವು ಮುಖ್ಯ ಸಣ್ಣ-ಪುಟ್ಟ ಕೆರೆಗಳಿಗೂ ಸಹ ಕೊಂಡಿಯಂತೆ ನಿರ್ಮಾಣವಾಗಿದ್ದವು. ಉದಾ: ರೋಣ ತಾಲೂಕಿನ ಸೋಮನಕಟ್ಟೆ, ಸವಡಿ, ಮಲ್ಲಾಪೂರ,

ಕೌಜಗೇರಿ, ಹಡಗಲಿ, ಗದಗ ತಾಲೂಕಿನ ಬಳಗಾನೂರ. ಮುಂಡರಗಿ ತಾಲೂಕಿನ ಹಳ್ಳಿಕೇರಿ, ವೆಂಕಟಾಪುರ, ಹೈತಾಪುರ.

ಹೀಗೆ ಪ್ರಾಚೀನ ಕಾಲದಲ್ಲಿ ನಿರ್ಮಿಸಿದಂತಹ ಕೆರೆಗಳು ಕೆಲವು ಬೇರೆ ಕೆರೆಗಳಿಗೆ ಸಹಾಯಕವಾಗಿದ್ದರೆ ಮತ್ತೆ ಕೆಲವು ಕೆರೆಗಳಿಂದ ಉಪಯುಕ್ತತೆ ಪಡೆದುಕೊಳ್ಳುವಂತಹ ಮಹತ್ವಾಕಾಂಕ್ಷೆಗಳಾಗಿದ್ದವು. ಸರಪಣಿ ಕೆರೆಗಳಿಂದ ಮುಖ್ಯವಾಗಿ ಆಗುತ್ತಿದ್ದ ಲಾಭ ಏನೆಂದರೆ ಒಂದು ಕೆರೆಗೆ ಅತ್ಯಂತ ಹೆಚ್ಚಿನ ನೀರು ಬಂದಂತಹ ಸಂದರ್ಭದಲ್ಲಿ ಆ ಕೆರೆಯ ರಕ್ಷಣೆ ಮುಂದಿನ ಕೆರೆಗೆ ನೀರು ಬಾರದೇ ಇದ್ದಂತಹ ಸಂದರ್ಭದಲ್ಲಿ ಮುಂದಿನ ಕೆರೆ ಉಪಯೋಗದ ದೃಷ್ಟಿಯಿಂದ ಇವುಗಳನ್ನು ಅನುಕೂಲವನ್ನು ಪಡೆಯುವ ಉದ್ದೇಶಕ್ಕಾಗಿ ಸರಪಳಿ ಕೆರೆಗಳನ್ನು ನಿರ್ಮಾಣ ಮಾಡಿರಬಹುದು. ಮಳೆ ಜಾಸ್ತಿ ಬಂದಾಗ ಕೆರೆ ಏರಿ ಒಡೆಯಬಾರದು ಎನ್ನುವ ದೃಷ್ಟಿಯಿಂದ ಈ ತರಹದ ಕೆರೆಗಳನ್ನು ನಿರ್ಮಾಣ ಮಾಡಿರಬಹುದು.

### ೫.೨.೬ ಕೆರೆಗಳ ನೀರಿನ ಹಂಚಿಕೆ ಮತ್ತು ಬಳಕೆ :

ನೀರಗಂಟಿಯ ಕೆಲಸ ಕೆರೆಯನ್ನು ನೋಡಿಕೊಳ್ಳುವುದು ಅಗತ್ಯವಾದರೆ ಕೆರೆಯ ತೂಬನ್ನು ಅದಕ್ಕಾಗಿ ಜೋಡಿಸಿದ್ದ ಬಂಡೆಗಳಿಂದ ಮುಚ್ಚುವುದು, ಚಳಿಗಾಲದಲ್ಲಿ ಆತ ಕೆರೆಯಲ್ಲಿ ನೀರನ್ನು ಉಳಿಸಲು ಏರಿಯ ಮೇಲೆ ಎಚ್ಚರದಿಂದ ನಿಗಾ ಇಡತಕ್ಕದ್ದು ಹಳ್ಳಿಯ ರೈತರಿಗೆ ಅವರ ಬೆಳೆಗೆ ಅಗತ್ಯವಾದ ನೀರನ್ನು ಹಂಚಿಕೆ ಮಾಡುವುದು ಅವನ ಕರ್ತವ್ಯ. ನೀರು ಕಡಿಮೆಯಾಗಿ ಹೋದಾಗ ತಾನು ನೀರನ್ನು ಕಳ್ಳತನದಲ್ಲಿ ವಿಲೇ ಮಾಡುತ್ತಿದ್ದ ಎಂಬ ಶಂಕೆ ಬಾರದಿರಲಿ ಎಂದು ವ್ಯವಸ್ಥಾಪಕರಿಗೆ ಲೆಕ್ಕ ಒಪ್ಪಿಸುತ್ತಿದ್ದ.[೫೯]

ಕೆರೆಯ ನೀರನ್ನು ತೂಬಿನಿಂದ ಬಿಡುವುದಕ್ಕೆ ಮುಂಚಿತವಾಗಿ ಕೆರೆಗೆ ಊರಿನ ಪಂಚಮರಿಂದ/ಗೌಡರಿಂದ ಬಾಗೀನ ಅರ್ಪಿಸಿ ದೇವರಿಗೆ ಪೂಜೆಯನ್ನು ಸಲ್ಲಿಸಿ ನೀರನ್ನು ಬಿಡುತ್ತಿದ್ದರು. ನೀರುಗಂಟಿಯು ರೈತರ ಜಮೀನುಗಳಿಗೆ ನೀರನ್ನು ಹಂಚಿಕೆ ಮತ್ತು ಬಳಕೆಯನ್ನು ಮಾಡುತ್ತಿದ್ದರು. ಡಂಬಳದ ಕೆರೆ ನೀರಿನ ಹಂಚಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ಸಂಗ್ರಹಿಸಿದಾಗ ಸಿಕ್ಕಂಥ ಮಾಹಿತಿ ಪ್ರಕಾರ.

'ತಾನೆಮಿ' ರೈತರ ಸಭೆಯಲ್ಲಿ ಪಂಚಮರು ಮತ್ತು ರೈತರು ಸೇರಿ ನಡೆಸಿದಂತಹ ಸಭೆಯ ನಿರ್ದೇಶನದಂತೆ ನೀರುಗಂಟಿ ಕೆರೆಯ ನೀರನ್ನು ಸರಬರಾಜು ಮಾಡಲು ಸೂಚನೆ ನೀಡುತ್ತಿದ್ದರು. ನೀರುಗಂಟಿಯು 'ಟೈಲೆ'[೬೦] ಎಂಬ ವಿಧಾನವನ್ನು ಅನುಸರಿಸಿ ನೀರನ್ನು ರೈತರ ಜಮೀನುಗಳಿಗೆ ಹಂಚಿಕೆ ಮಾಡುತ್ತಿದ್ದರು.

**'ಟೈಲೆ'** ಎಂದರೆ ನೀರುಗಂಟಿಯು ಅಕ್ಕಪಕ್ಕದಲ್ಲಿ ಇರುವಂತಹ ಜಮೀನುಗಳಿಗೆ ಮೊದಲನೆ ಹಂತದ (ಪ್ರಥಮ) ನೀರನ್ನು ಹಂಚಿಕೆ ಮಾಡದೇ ಆ ಕೆರೆಯ ಕೊನೆಯ ಹಂತದ ಜಮೀನುಗಳಿಗೆ

ನೀರನ್ನು ಸರಬರಾಜು ಮಾಡಿಕೊಂಡು ಬರುವುದಕ್ಕೆ ಟ್ಯೈಲೆ ಎಂದು ಕರೆಯುತ್ತಿದ್ದರು. ಕೆರೆಯಿಂದ ನೀರನ್ನು ಹೊರಗಡೆ ಬಿಡುವುದಕ್ಕಿಂತ ಮುಂಚಿತವಾಗಿ ಪಕ್ಕದಲ್ಲಿರುವ ದೇವರ ಪೂಜೆ ಸಲ್ಲಿಸಿ ಗಂಗಾ ಮಾತೆಗೆ ಬಾಗೀನ ಅರ್ಪಿಸಿದ ನಂತರ ತೂಬುಗಳಿಂದ ನೀರನ್ನು ಬಿಡುವಂತಹ ವ್ಯವಸ್ಥೆ ಅಸ್ತಿತ್ವದಲ್ಲಿತ್ತು.[೬೧]

ನೀರುಗಂಟಿಯು ನೀರನ್ನು ಕೆರೆಯಿಂದ ಕಾಲುವೆ ಮೂಲಕ ನೀರನ್ನು ಹರಿಸಿದಾಗ ರೈತರು ಸರದಿಯ ಪ್ರಕಾರ ತಮ್ಮ ಜಮೀನುಗಳಿಗೆ ನೀರನ್ನು ಹಾಯಿಸಿಕೊಳ್ಳುತ್ತಿದ್ದರು. ತಮ್ಮ ಸರದಿ ಮುಗಿದ ನಂತರ ತನ್ನ ಪಕ್ಕದ ಜಮೀನಿಗೆ ನೀರು ಹಾಯುವಂತೆ ವ್ಯವಸ್ಥೆಯನ್ನು ಕಲ್ಪಿಸುತ್ತಿದ್ದರು.

**೫.೨.೭. ವಿದೇಶಿ ಬರಹಗಾರರ ಕಂಡಂತೆ ಕೆರೆಗಳ ನಿರ್ವಹಣೆ:**

೧೮ನೇ ಶತಮಾನದ ಕೊನೆಯಲ್ಲಿ ಇಂತಹದೊಂದು ವ್ಯವಸ್ಥೆ ರೂಢಿಯಲ್ಲಿತ್ತು. ಎನ್ನುವುದು ಕ್ರಿ.ಶ. ೧೮೦೦ರಲ್ಲಿ ಮೈಸೂರಿನಲ್ಲಿ ಪ್ರವಾಸಮಾಡಿದ ಪ್ರಾನ್ಸಿಸ್ ಬುಕಾನನ್ನ ಅಭಿಪ್ರಾಯೋಕ್ತಿಗಳಿಂದ ತಿಳಿದುಬರುತ್ತದೆ.[೬೨] ಕೋಲಾರ ಸೀಮೆಯಲ್ಲಿ ನೀರಾವರಿ ಆಗುವುದು ಬಹುಮಟ್ಟಿಗೆ ಜಲಾಶಯಗಳಿಂದಲೇ. ಯಾವುದೇ ಶ್ರೀಮಂತ ವ್ಯಕ್ತಿಯು ಒಂದು ಜಲಾಶಯ ಅಥವಾ ಕೆರೆಯನ್ನು ಕಟ್ಟಿಸಿದಾಗ ಅವನಿಗೆ ಹಾಗೂ ಅವನ ಉತ್ತರಾಧಿಕಾರಿಗಳಿಗೆ ಕೆರೆಯ ನೀರು ಒದಗಿಸುವ ಭೂಮಿ ೧೦ನೇ ಒಂದು ಪಾಲನ್ನು ಕಂದಾಯವಿಲ್ಲದೇ ಕೊಡುವುದು ರೂಢಿಯಲ್ಲಿತ್ತು. ಅಲ್ಲದೇ ಹಾಗೆ ನೀರಾವರಿಯಾದ ಪ್ರತಿ ಖಂಡುಗ ಭೂಮಿಗೂ ನಿರ್ಮಾತೃ ಆರು ಸೇರು ರಾಗಿ ಬಿತ್ತನೇಯ ಭೂಮಿಯನ್ನು ಕಂದಾಯವಿಲ್ಲದೇ ಪಡೆಯುವ ಹಕ್ಕನ್ನು ಹೊಂದಿದ್ದ. ಪ್ರತಿ ೧೦೦೦ ಎಕರೆ ನೀರಾವರಿ ಭೂಮಿಗೆ ಸುಮಾರು ೧೪೭ ಎಕರೆ ಖುಷ್ಕಿ ಭೂಮಿಯಷ್ಟು ಆಗುತ್ತಿತ್ತು. ಆತ ಇವುಗಳನ್ನು ಅನುಭವಿಸುತ್ತಿದ್ದವರೆಗೂ ಕೆರೆಯ ದುರಸ್ತಿಗೆ ಅವನಿಗೆ ಕಡ್ಡಾಯವಾಗಿತ್ತು. ಕೆರೆಯು ಬಾರೀ ವಿಸ್ತಾರವಾಗಿದ್ದಲ್ಲಿ ಅದನ್ನು ಕಟ್ಟಿದಾತನಿಗೆ ಹಾಗೂ ಆತನ ಉತ್ತರಾಧಿಕಾರಿಗಳಿಗೆ ಕೆರೆಯಿಂದ ನೀರಾವರಿಯಾಗುವ ಭೂಮಿಯಲ್ಲಿ ಕಾಲಭಾಗ ಸಿಗುತ್ತಿತ್ತು. ಆದರೆ ಖುಷ್ಕಿ ಭೂಮಿ ಸಿಗುತ್ತಿರಲಿಲ್ಲ. ಮೂಲ ನಿಮಾತೃವಿನ ವಂಶ ನಿಂತು ಹೋದಲ್ಲಿ ಆ ಮಾನ್ಯದ ಭೂಮಿಯನ್ನು ಸರ್ಕಾರವೇ ವಹಿಸಿಕೊಳ್ಳುತ್ತಿತ್ತು. ಕೆರೆಯನ್ನು ದುರಸ್ತಿಯಲ್ಲಿ ಇಟ್ಟಿರುತ್ತಿತ್ತು.

**೫.೨.೮. ಕೆರೆಗಳ ನಿರ್ವಹಣೆಗೆ ಬಿಟ್ಟ ದಾನದತ್ತಿಗಳು :**

ಶಾಸನಗಳಲ್ಲಿ ಬಿತ್ತುವಟ್ಟು, ದಶವಂದ, ಕಟ್ಟುಕೊಡಿಗೆ ಈ ಶಬ್ದಗಳು ನಮಗೆ ಸಿಗುತ್ತವೆ. ಕೆರೆ ನಿರ್ಮಾಣ ಅದರ ಸಂರಕ್ಷಣೆ ಕೆಲಸ ಮಾಡಿದ್ದಕ್ಕಾಗಿ, ಕಟ್ಟಿದ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಭೂಮಿಯನ್ನು ದಾನವಿಯ್ಯೂವುದಕ್ಕೆ ಬಿತ್ತುವಟ್ಟು ಎಂದು ಅರ್ಥಮಾಡಲಾಗಿದೆ. ದಾನವಿತ್ತ ಭೂಮಿಯು ಯಾವಾಗಲೂ ಆ ಕೆರೆಯ ನೀರಿನಿಂದಲೇ ನೀರಾವರಿಯಾಗುತ್ತಿದ್ದ ಭೂಮಿ ೧೦ನೇಯ ಒಂದು ಪಾಲು ಭೂಮಿಯೇ

ಬಿತ್ತುವಟ್ಟು ಎಂದು ಕ್ರಿ.ಶ. ೯೯೩ರ ಸೋಮಸಮುದ್ರ ಶಾಸನ[೬೩] ತಿಳಿಸುತ್ತದೆ. ಬಿತ್ತುವಟ್ಟು ಎಂದರೆ ಕೆರೆಯ ಸಂರಕ್ಷಣೆಗಾಗಿ ಹುಟ್ಟುವಳಿಯ ಒಂದು ಭಾಗವನ್ನು ನೋಡುವುದ ಎಂದು ಅರ್ಥಮಾಡಲಾಗಿದೆ. ರೈಸ್ ಅವರ ಪ್ರಕಾರ ಬಿತ್ತು ಎಂದರೆ ಬೀಜ ಬಿತ್ತುವಿಕೆ ಅಥವಾ ಬೇಸಾಯದ ಮೇಲಿನ ವಟ್ಟು ಎಂದರೆ ಸೋಡಿ ಅಥವಾ ರಿಯಾಯಿತಿ ಎಂದಿರಬಹುದು. ಆದ್ದರಿಂದ ಬಿತ್ತವಟ್ಟ ಎಂದರೆ ಕೆರೆಯ ನಿರ್ಮಾಣ ಅಥವಾ ಸಂರಕ್ಷಣೆಯ ಕಾರ್ಯಕ್ಕೆ ಪ್ರತಿಫಲವಾಗಿ ಕೆರೆಯ ಕೆಳಗೆ ಕೊಂಚ ಭೂಮಿಯನ್ನು ಕಡಿಮೆ ಆದ ಕಂದಾಯದ ಮೇಲೆ ನೀಡುವುದು ಎಂದು ಅರ್ಥೈಸಬಹುದು. ಬಿತ್ತುವಟ್ಟದ ಹಾಗೆ ದಶವಂದವು ಕೆರೆಯ ದುರಸ್ತಿ ಅಥವಾ ನಿರ್ಮಾಣಕ್ಕಾಗಿ ನೀಡಲಾಗುವ ಭೂಮಿಯನ್ನು ಸೂಚಿಸಲು ಬಳಸುವ ಶಬ್ದ. ರೈಸ್ ಅವರ ಪ್ರಕಾರ ಒಬ್ಬಾತ ಕೆರೆಯನ್ನು ನಿರ್ಮಿಸಿದ ಅಥವಾ ದುರಸ್ತಿಮಾಡಿದ ಪ್ರತಿಫಲವಾಗಿ ಸಾಮಾನ್ಯ ಕಂದಾಯದ ಹತ್ತನೇಯ ಒಂದರಷ್ಟು ಕಂದಾಯಕ್ಕೆ ಭೂಮಿಯನ್ನು ಆತನಿಗೆ ನೀಡುವುದು.[೬೪] ಕೊಡಿಗೆ ಅಥವಾ ಕಟ್ಟುಕೊಡಿಗೆ ಇನ್ನೊಂದು ಸಾಮಾನ್ಯ ಬಳಕೆಯ ಶಬ್ದ ಬಿತ್ತುವಟ್ಟ, ಹಾಗೂ ದಶವಂದಗಳ ಹಾಗೆ ಇದು ಕೂಡ ಕೊಡುಗೆ ಅಥವಾ ಕೊಡಿಗೆ ಬಹುಮಾನ ಅಥವಾ ದಾನ, ಕೆರೆಯ ಜೀರ್ಣೋದ್ಧಾರ ಇಲ್ಲವೇ ನಿರ್ಮಾಣ ಅಥವಾ ಅದನ್ನು ಸುಸ್ಥಿತಿಯಲ್ಲಿ ರಕ್ಷಿಸಿದ ಸೇವೆಗಾಗಿ ನೀಡಲಾದ ಭೂಮಿದಾನ. ಕೊಡಿಗೆ ಭೂಮಿಗಳು ಮುಂದೆ ಇನಾಂ ಭೂಮಿಗಳೆಂದೆ ಪರಿಗಣಿತವಾದವು. ಅವು ಕಂದಾಯವಿಲ್ಲದೇ ಅಥವಾ ಅಲ್ಪ ಕಂದಾಯದ ಮೇಲೆ ನೀಡಲಾದ ದಾನ ಭೂಮಿಗಳು. ಕೆರೆಯ ದುರಸ್ತಿ ಕೈಗೊಂಡಿದ್ದಕ್ಕೆ ಕೆರೆ ಬಂದಿ ಹಾಗೂ ಕೆರೆ ಕೂಲಿಗೆ ಇನಾಂಗಳು ಇದ್ದುದು ಕಂಡುಬರುತ್ತದೆ.

**೫.೨.೯. ಕೆರೆಗಳು ಮತ್ತು ಸಮುದಾಯ :**

ಕೆರೆ ನೀರಾವರಿ ನಿರ್ವಹಣೆಯಲ್ಲಿ ಜನರ ಸಹಭಾಗಿತ್ವದ ಸಾಧ್ಯತೆಗಳನ್ನು ಗುರುತಿಸ ಬಹುದು. ದೊರೆಗಳು, ಶ್ರೀಮಂತ ಅಧಿಕಾರಿಗಳು, ವ್ಯಾಪಾರಿಗಳು, ದೇವಸ್ಥಾನದ ಅಧಿಕಾರಿಗಳು ಮುಂತಾದವರು ಕೆರೆಗಳನ್ನು ಕಟ್ಟಿಸುತ್ತಿದ್ದರು. ತಮ್ಮ ಶಕ್ತಿಯ ಅನುಸಾರ ಕೆರೆ ನಿರ್ಮಾಣ ಕಾರ್ಯದಲ್ಲಿ ಭಾಗಿಯಾಗಬೇಕಿತ್ತು. ಆದರೆ ಕೆರೆಗಳ ಸಂರಕ್ಷಣೆ ಸಂಪೂರ್ಣ ಬಳಕೆದಾರರ ಜವಾಬ್ದಾರಿಯಾಗಿತ್ತು. ಹೂಳೆತ್ತುವುದು, ಕಟ್ಟೆ ರಿಪೇರಿ ಮಾಡಿಸುವುದು ತೂಬು ಕೋಡಿಗಳ ದುರಸ್ತಿ, ಕೆರೆ ಪಾತ್ರ ಅಥವಾ ಜಲಾನಯನ ಪ್ರದೇಶದ ಒತ್ತುವಳಿ ಆಗದಂತೆ ನೋಡಿಕೊಳ್ಳುವುದು ಇತ್ಯಾದಿಗಳು ನೀರು ಬಳಕೆದಾರರೇ ಹೊಣೆ.[೬೫] ಕೌಟಿಲ್ಯನ ಅರ್ಥಶಾಸ್ತ್ರ ನೀರಿನ ತೆರಿಗೆ ಕುರಿತು ಹೀಗೆ ಹೇಳುತ್ತದೆ. ರಾಜನು ಭೂಮಿಗೆ ಒಡೆಯನಾಗಿರುವಂತೆ ನೀರಿಗೂ ಒಡೆಯನಾಗಿದ್ದರಿಂದ ನೀರಿನ ತೆರಿಗೆಯನ್ನು ಕೊಡಬೇಕು. ನಮ್ಮ ದೇಹ ಆಯಾಸ ಮತ್ತು ನಮ್ಮ ಧನ ವ್ಯಯದಿಂದ ನಿರ್ಮಿಸಿದ ಕೆರೆಯಿಂದ, ಕೊಡದಿಂದ ನೀರು ಹಾಕಿ ಬೆಳೆಸಿದ ಬೆಳೆಯಿಂದ ಐದನೇ ಒಂದು ಭಾಗವನ್ನು ನೀರಿಗೆ ತೆರಿಗೆಯಾಗಿ ರಾಜನಿಗೆ ಕೊಡಬೇಕು. ಹೆಗಲಿನಿಂದ ಹೊರುವ ಯಂತ್ರದಿಂದ ನೀರು ಹಾಕಿ ಬೆಳೆಸಿದ ಬೆಳೆಯಿಂದ ನಾಲ್ಕನೇ

ಒಂದು ಭಾಗವನ್ನು ಕೊಡಬೇಕು. ಏತ ಮೊದಲಾದವುಗಳಿಂದ ನೀರು ಹಾಯಿಸಿದ ಬೆಳೆಯಿಂದ ಮೂರನೇ ಒಂದು ಭಾಗವನ್ನು ಕೊಡಬೇಕು. ಕೆರೆಯ ನಿರ್ಮಾಣದಲ್ಲಿ ಪಾಲ್ಗೊಳ್ಳಲು ತಪ್ಪಿಸುವ ರೈತರು ಕಠಿಣ ಶಿಕ್ಷೆಗೆ ಗುರಿಯಾಗುತ್ತಿದ್ದರು.[೬೬] ಎಲ್ಲರೂ ಒಟ್ಟಿಗೆ ಸೇರಿ ನೀರಾವರಿಯನ್ನು ಮಾಡುವಾಗ ತನ್ನ ಅಂಶದ ಕೆಲಸವನ್ನು ಮಾಡಲು ತಪ್ಪಿಸುವವನ ಕೆಲಸದವರು ಎತ್ತುಗಳು ಕೆಲಸ ಮಾಡುವಂತೆ ರಾಜನು ಮಾಡಬೇಕು. ಅಷ್ಟು ಮಾತ್ರವಲ್ಲದೇ ನೀರಾವರಿಗೆ ತಗುಲಿದ ಖರ್ಚಿನಲ್ಲಿ ಪಾಲುದಾರನಾಗುತ್ತಾನೆ. ಆದರೆ ನಂತರ ಉಂಟಾಗುವ ಫಲದಲ್ಲಿ ಅವುಗಳಲ್ಲಿ ಪಾಲು ಸಿಗಲಾರದು.

ಕೆರೆ ಸಂರಕ್ಷಣೆ ಕುರಿತು ಕೌಟಿಲ್ಯನ ಅರ್ಥಶಾಸ್ತ್ರ ಈ ರೀತಿ ಹೇಳುತ್ತದೆ. ಕೆರೆ ಇತ್ಯಾದಿಗಳ ಕೆಳಗೆ ಬೇಸಾಯ ಮಾಡುವ ವ್ಯಕ್ತಿಗಳು ಅಥವಾ ಯಾವುದೇ ರೀತಿಯ ಕಂದಾಯ ಇಲ್ಲದೇ ಅಂತಹ ಭೂಮಿಯನ್ನು ಅನುಮತಿ ಪಡೆದ ವ್ಯಕ್ತಿಗಳು ಕೆರೆ ಇತ್ಯಾದಿಗಳನ್ನು ಒಳ್ಳೆಯ ದುರಸ್ತಿಯಲ್ಲಿಟ್ಟಿರಬೇಕು. ಇಲ್ಲವಾದರೆ ಅವರಿಗೆ ನಷ್ಟದ ಎರಡರಷ್ಟು ಜುಲ್ಮಾನೆಯ ಶಿಕ್ಷೆ ವಿಧಿಸಬೇಕು ಎಂದು ತಿಳಿಸುತ್ತದೆ. ಅಂದರೆ ಕೆರೆ ಸಂರಕ್ಷಣಾ ಕೆಲಸ ಅದರ ಲಾಭ ಪಡೆಯುವವರ ಅಥವಾ ನೀರು ಬಳಕೆದಾರರ ಜವಾಬ್ದಾರಿ ಎಂದಾಯಿತು. ಹೀಗೆ ಹಿಂದೆ ಕೆರೆ ಸಂರಕ್ಷಣೆ ಗ್ರಾಮ ಸಮುದಾಯದ ಹೊಣೆಗಾರಿಕೆ ಇತ್ತು. ಜಿ.ಎಸ್. ದೀಕ್ಷಿತ್ ಅವರ ಪ್ರಕಾರ ಮಧ್ಯ ಕಾಲದ ಕರ್ನಾಟಕದಲ್ಲಿ ಕೆರೆ ಸಂರಕ್ಷಣೆಯಲ್ಲಿ ಜನರ ಸಹಭಾಗಿತ್ವ ಕುರಿತು ಹೀಗೆ ಹೇಳುತ್ತಾರೆ. ಫಲಾನುಭವಿಗಳು ಆ ಸಮುದಾಯದ ಪ್ರಮುಖ ಭಾಗವಾಗಿದ್ದರು. ಅವರು ಈ ಕೆಲಸವನ್ನು ಹಳ್ಳಿಯ ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ತಂಡಕ್ಕೆ ವಹಿಸುತ್ತಿದ್ದರು. ಆತ ಅಥವಾ ಅವರು ಸಂರಕ್ಷಣಾ ಕಾರ್ಯವನ್ನು ನಡೆಸುವ ಸಲುವಾಗಿ ಅವರಿಗೆ ಕೆಲವು ಭೂಮಿಗಳನ್ನು ಬಿತ್ತುವಟ್ಟ ಅಥವಾ ದಶವಂದವಾಗಿ ನೀಡುತ್ತಿದ್ದರು ಇಲ್ಲವೇ ಕಂದಾಯದಲ್ಲಿ ರೀಯಾಯಿತಿ ನೀಡುತ್ತಿದ್ದರು. ಭಾರೀ ನೀರಾವರಿ ಕಾರ್ಯಗಳಲ್ಲಿ ದುರಸ್ತಿ ಕಾರ್ಯಗಳನ್ನು ನಡೆಸುವುದಕ್ಕಾಗಿ ಕೆಲವು ಸ್ಥಳೀಯ ತೆರಿಗೆಗಳ ಬಳಕೆಯ ಸೌಲಭ್ಯಗಳನ್ನು ಸ್ಥಳೀಯ ಸಂಸ್ಥೆಗಳಿಗೆ ಅಥವಾ ದೊರೆಗಳಿಗೆ ನೀಡುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಸಂರಕ್ಷಣೆಗಾಗಿ ಬಂಡಿಗಳನ್ನು, ಭೂಮಿಯನ್ನು ಕೊಡಲಾಗುತ್ತಿತ್ತು. ಬಂಡಿಗಳನ್ನು ಕೊಡುತ್ತಿದ್ದದ್ದು ಕೆರೆಯಿಂದ ಹೂಳೆತ್ತಲು ವಿಜಯನಗರದ ಆಡಳಿತಾವಧಿಯಲ್ಲಿ ಕೆರೆ ನಿರ್ವಹಣೆ ಕಾರ್ಯವನ್ನು ಸ್ಥಳೀಯರಿಗೆ ಬಿಟ್ಟು ಕೊಡಲಾಗುತ್ತಿತ್ತು.[೬೭] ಯಾರು ಇವುಗಳಿಂದ ಲಾಭ ಪಡೆಯುತ್ತಿದ್ದರೋ ಅವರೇ ಅದರ ಉಸ್ತುವಾರಿ ಕಾರ್ಯವನ್ನು ನೋಡಿಕೊಳ್ಳುತ್ತಿದ್ದರು. ಪ್ರಭುತ್ವ ಆದೇಶ ನಿರ್ದೇಶನಗಳನ್ನೇ ನೀಡುತ್ತಿತ್ತು. ಈ ಕಾರ್ಯವನ್ನು ಸ್ಥಳೀಯ ಹಳ್ಳಿ ಅಧಿಕಾರಿಗಳು, ದೇವಾಲಯದ ಧರ್ಮದರ್ಶಿಗಳು ಮತ್ತು ಇತರೆ ಪ್ರಮುಖರಿಂದ ನಡೆಸಲಾಗುತ್ತಿತ್ತು. ಇದರ ಜೊತೆಗೆ ಹಳ್ಳಿಯ ಸಮಿತಿಯ ಪಾತ್ರ ಅಪಾರವಾಗಿತ್ತು.

ಸಹಭಾಗಿತ್ವ ಒಂದು ಸಾಮಾಜಿಕ ಪರಿಸರದಲ್ಲಿ ಕಾರ್ಯರೂಪಕ್ಕೆ ಬರಬೇಕಾಗಿದೆ. ಆ ಪರಿಸರದಲ್ಲಿ ಚಾರಿತ್ರಿಕವಾಗಿ ರೂಪಗೊಂಡ ಸಂಸ್ಥೆಗಳು ಮತ್ತು ಮೌಲ್ಯಗಳು ಸಹಭಾಗಿತ್ವವನ್ನೇ

ಪ್ರಭಾವಿಸುತ್ತವೆ. ಇಂತಹ ಸಂಸ್ಥೆಗಳು ಮತ್ತು ಮೌಲ್ಯಗಳು ಆಧುನಿಕ ಸಹಭಾಗಿತ್ವವನ್ನು ಹೇಗೆ ಪ್ರಭಾವಿಸಬಹುದು ಎನ್ನುವುದರ ಕಿರುಪರಿಚಯ ಮುಂದೆ ಇದೆ. ಎರಡು ವಿಚಾರಗಳ ಕಡೆಗೆ ಗಮನಹರಿಸಲಾಗಿದೆ. ಒಂದು ನಮ್ಮಲ್ಲಿ ಕಾರ್ಯರೂಪಕ್ಕೆ ಬಂದ ಆಧುನಿಕರಣ, ಐದು ದಶಕಗಳ ಆಧುನಿಕರಣ ಸರ್ಕಾರದ ನೇತೃತ್ವದಲ್ಲಿ ನಡೆದ ಅಭಿವೃದ್ಧಿ ಪ್ರಕ್ರಿಯೆ ನಮ್ಮ ಸಾಂಪ್ರದಾಯಿಕ ಆರ್ಥಿಕ, ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಬಂಧಗಳನ್ನು ಮೂಲಭೂತವಾಗಿ ಬದಲಾಯಿಸದಿದ್ದರೂ ಗಾಢವಾಗಿ ಪ್ರಭಾವಿಸಿದೆ. ಹಿಂದೆ ಕೃಷಿಕರೆಲ್ಲರ ಎಷ್ಟೋ ಜಾತಿ ಮತ್ತು ಕುಟುಂಬಗಳು ಇಂದು ಕೃಷಿಕರಾಗಿದ್ದಾರೆ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ತಕ್ಕಮಟ್ಟಿನ ಮುಂದುವರಿಕೆ ಇದ್ದರೂ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರದಲ್ಲಿ ಗಣನೀಯವಾದ ಬದಲಾವಣೆಯನ್ನೇ ಗಮನಿಸಬೇಕಾಗಿದೆ. ಒಂದು ಕಾಲದಲ್ಲಿ ಗ್ರಾಮವೊಂದರ ಅಧಿಕಾರ ಕೇಂದ್ರ ಪಟೇಲ ಅಥವಾ ಗೌಡನಾದರೆ ಇಂದು ಆ ಸ್ಥಿತಿ ಉಳಿದಿಲ್ಲ. ಪಂಚಾಯತ್ ವ್ಯವಸ್ಥೆ ಜಾರಿಗೆ ಬರುವುದರೊಂದಿಗೆ ಒಂದು ಹಳ್ಳಿಯಲ್ಲಿ ಹಲವಾರು ಅಧಿಕಾರ ಕೇಂದ್ರಗಳು ರೂಪುಗೊಂಡಿವೆ.[೬೮] ಇದು ಒಳ್ಳೆಯದು ಕೆಟ್ಟದ್ದು ಎನ್ನುವ ತೀರ್ಮಾನಕ್ಕಿಂತ ಈ ವಾಸ್ತವಿಕತೆಯನ್ನು ಅರ್ಥ ಮಾಡಿಕೊಳ್ಳುವುದು ಇಂತಹ ಪರಿಸರದಲ್ಲಿ ಸಾಧ್ಯವಾಗಬಹುದಾದ ಸಂಘಟಿತ ಕಾರ್ಯಕ್ರಮಗಳ ಬಗ್ಗೆ ಆಲೋಚಿಸಲು ಸಾಧ್ಯ. ಜಾತಿ ನೆಲೆಯಲ್ಲಿ ರಾಜಕೀಯ ಸಂಘಟನೆ ಮತ್ತು ಆ ಮೂಲಕ ಸಮುದಾಯ ಸಂಪನ್ಮೂಲ ವಿತರಣೆಯ ನಿರ್ಣಯದಲ್ಲಿ ಪಾಲ್ಗೊಳ್ಳುವುದು ಇಂದು ಸಹಜವಾಗಿದೆ. ಇಂತಹ ವಾತಾವರಣದಲ್ಲಿ ಸಹಕಾರಿ ಸಂಘಟನೆಗಳು ರೂಪುಗೊಳ್ಳಬೇಕಾಗಿದೆ.

ಸಮುದಾಯ ಸಂಪನ್ಮೂಲಗಳ ವೆಚ್ಚ ಭರಿಸುವ ಕ್ರಮ ನಾವು ಬಳಸುವ ಪ್ರತಿಯೊಂದಕ್ಕೆ ವೆಚ್ಚವಿದೆ. ಯಾವುದು ಕೂಡ ಪುಗಸಟ್ಟೆಯಾಗಿ ಸಿಗುವುದಿಲ್ಲ. ಹಿಂದಿನ ಕಾಲದಲ್ಲಿ ಕೆರೆ ನೀರು ಬಳಸುವವರು ಅದರ ವೆಚ್ಚವನ್ನು ಭರಿಸುತ್ತಿದ್ದರು. ಕೆರೆ ಕಟ್ಟಿಸುವವರಿಗೆ ಅಥವಾ ಕೆರೆ ರಿಪೇರಿ ಮಾಡುವವರಿಗೆ ಭೂಮಿ ದಾನ ಕೊಡುವ ಅಥವಾ ಕಡಿಮೆ ಕಂದಾಯಕ್ಕೆ ಕೊಡುವ ಕ್ರಮವಿತ್ತು. ಕೆರೆ ರಿಪೇರಿ ಅಥವಾ ಹೂಳೆತ್ತುವುದಕ್ಕೆ ರೈತರಿಂದ ಹಣ ಅಥವಾ ಧಾನ್ಯ ಅಥವಾ ಶ್ರಮದ ರೂಪದಲ್ಲಿ ದೇಣಿಗೆ ಪಡೆಯುತ್ತಿದ್ದರು.[೬೯] ಹೀಗೆ ಹಿಂದೆ ಕೂಡ ಕೆರೆ ನೀರಾವರಿ ಪುಗಸಟ್ಟೆಯಾಗಿ ಬರುತ್ತಿರಲಿಲ್ಲ. ಇಂದು ಅದರಲ್ಲೂ ೧೯೪೭ರ ನಂತರ ಕೆರೆ ನಿರ್ಮಾಣ, ರಿಪೇರಿ ಇತ್ಯಾದಿಗಳನ್ನು ಸರಕಾರವೇ ಮಾಡಲು ಹೊರಟಿದೆ. ಇದರಿಂದಾಗಿ ಕೆರೆಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡು ಅವನತಿಯ ಹಾದಿ ಹಿಡಿದಿವೆ. ಏಕೆಂದರೆ ಇಂದಿನ ರೈತರು ಕೆರೆ ರಿಪೇರಿ ಅಥವಾ ಹೂಳೆತ್ತುವುದು ನಮ್ಮ ಜವಾಬ್ದಾರಿ ಅಲ್ಲ ಸರಕಾರದ ಜವಾಬ್ದಾರಿ ಎಂದು ಹೇಳುವುದುಂಟು. ಆದರೆ ಬೃಹತ್ ನೀರಾವರಿ ವ್ಯಾಪ್ತಿಯಲ್ಲಿ ಬರುವ ಕೆರೆ ನೀರಾವರಿಗೆ ರೈತರು ನಿಗದಿತ ತೆರಿಗೆ ಸಂದಾಯವನ್ನು ಮಾಡುತ್ತಿದ್ದಾರೆ.

ಖಾಸಗಿ ಸಂಪನ್ಮೂಲಗಳ ಬಳಕೆಯಲ್ಲಿ ಸಾಕಷ್ಟು ಜಾಗೃತಿಯನ್ನು ವಹಿಸುವಲ್ಲಿ ಎಲ್ಲರಲ್ಲೂ ಕಾಣುತ್ತೇವೆ. ಆದರೆ ಸಾರ್ವಜನಿಕ ಸಂಪನ್ಮೂಲ ಬಳಕೆಯಲ್ಲಿ ಅದೇ ನಿಯಮವನ್ನು ಪಾಲಿಸುವುದಿಲ್ಲ. ಅದು ಸಾರ್ವಜನಿಕ ಹಣ ಇರಬಹುದು, ಕೆರೆ ನೀರು ಇರಬಹುದು. ಸಮುದಾಯ ಅರಣ್ಯ ಇರಬಹುದು, ರಸ್ತೆ ಇರಬಹುದು, ವಿದ್ಯುತ್ ಇರಬಹುದು ಅಥವಾ ಇನ್ನಾವುದೇ ಸಾರ್ವಜನಿಕ ಆಸ್ತಿ ಇರಬಹುದು. ಅದು ಸಾರ್ವಜನಿಕ ಎಂದ ಕೂಡಲೇ ನಮ್ಮದಲ್ಲ ಎನ್ನುವ ಮನೋಭಾವನೆ ಬಂದಿದೆ. ಆದುದರಿಂದ ಅದನ್ನು ಹೇಗೆ ಬೇಕೆಂದಾಗ ಉಪಯೋಗಿಸುವುದು ನಮ್ಮ ಹಕ್ಕು ಎಂದು ತಿಳಿದುಕೊಂಡಂತಿದೆ. ತನ್ನ ಸ್ವಂತ ದುಡ್ಡಿನ ಬಗ್ಗೆ ನೂರುಬಾರಿ ಯೋಚಿಸಿ ಖರ್ಚು ಮಾಡುವರು. ಪಂಚಾಯತಿ ದುಡ್ಡು ಅಥವಾ ಇನ್ನಾವುದೇ ಸಾರ್ವಜನಿಕ ದುಡ್ಡಿನ ಪ್ರಶ್ನೆ ಬಂದರೆ ತುಂಬಾ ಧಾರಾಳವಾಗಿ ಖರ್ಚು ಮಾಡುವುದು ಸಾಮಾನ್ಯವಾಗಿದೆ. ಕೆರೆ ಸಂರಕ್ಷಣೆ ಮತ್ತು ನೀರು ಬಳಕೆಯಲ್ಲೂ ಇದೇ ರೀತಿಯ ಮನೋಭಾವನೆಯನ್ನು ಕಾಣಬಹುದು. ಅದು ಎಲ್ಲರ ಆಸ್ತಿ ಆದುದರಿಂದ ಯಾರ ಆಸ್ತಿನೂ ಅಲ್ಲ. ಕೆರೆ ಪಾತ್ರ ಒತ್ತುವರಿ, ಕೆರೆ ಜಲಾನಯನ ಪ್ರದೇಶದ ಒತ್ತುವರಿ, ಕೆರೆ ನೀರು ಬರುವ ಕಾಲುವೆ ಹಾನಿಯಾಗುವಂತೆ ತಮ್ಮ ಹೊಲದ ಕೆಲಸ ಮಾಡುವುದು ಈ ಸಾಲಿನಲ್ಲಿ ಬರುವಂತಹ ಸಂಗತಿಗಳು.

ಉದಾಹರಣೆ: ಡಂಬಳ ಕೆರೆ, ಜಂತ್ಲಿಶಿರೂರ ಕೆರೆ, ಪೇಠಾಲೂರ ಕೆರೆ, ಶಿರೋಳ ಕೆರೆ, ಚಿಕ್ಕಮಣ್ಣೂರ ಕೆರೆ, ಜಕ್ಕಲಿ ಕೆರೆ.

**೫.೨.೧೦. ಕೆರೆ ನಿರ್ಮಾಣದಲ್ಲಿ ಶಿಲ್ಪಿಗಳ ಪಾತ್ರ :**

ದೇವಸ್ಥಾನ ನಿರ್ಮಾಣವನ್ನು ಬಿಟ್ಟರೆ ಬೃಹತ್ ಗಾತ್ರದಲ್ಲಿ ನಡೆಯುತ್ತಿದ್ದ ಸಾಮೂಹಿಕ ನಿರ್ಮಾಣ ಕಾರ್ಯ ತಟಾಕಗಳ, ಕೆರೆಗಳ ನಿರ್ಮಾಣ. ಜನರ ಸೌಕರ್ಯಕ್ಕಾಗಿ ಬೆಳೆ ಬೇಸಾಯದ ಅಭಿವೃದ್ಧಿಗಾಗಿ ಪುಣ್ಯ ಕಾರ್ಯವೆಂದೇ ಭಾವಿಸಲಾಗಿತ್ತು. ಹೀಗೆ ರಚನೆಯಾಗಿರುವ ನೂರಾರು ಕೆರೆಗಳನ್ನು ನೋಡಿದರೆ ಹಿಂದಿನಂತೆಯೇ ನಮ್ಮ ಪ್ರಾಚೀನರು ಕೇವಲ ಮಳೆಯನ್ನು ನಂಬಿಕೊಂಡಿರುವುದು ಸರಿಯಲ್ಲವೆಂದು ತಿಳಿದುಕೊಂಡಿದ್ದರು. ಸಂಖ್ಯೆ ಮತ್ತು ಗಾತ್ರದಲ್ಲಿ ಈಗಿನ ನೀರಾವರಿ ಯೋಜನೆಗೆ ಹೋಲಿಸಿದಾಗ ಕಾರ್ಯವಂತೂ ನಡೆದಿತ್ತು. ಹಣವನ್ನು ಕೊಟ್ಟು ಕೆರೆಯನ್ನು ಕಟ್ಟಿಸಿದ ದಾನಿಗಳ ಹೆಸರುಗಳು ಗದಗ ಜಿಲ್ಲೆಯ ಶಾಸನದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ದಾನಿಯು ತನ್ನ ಹೆಸರನ್ನೇ ಕೆರೆಗೆ ಇಟ್ಟಿದ್ದಾನೆ. ಅಥವಾ ಕೆರೆಯ ಹೆಸರು ಕೆಲವೊಮ್ಮೆ ದಾನಿಗೆ ಆರೋಪಿತವಾಗಿದೆ. ಆದರೆ ಕೆರೆ ನಿರ್ಮಾಣವಾಗಬೇಕಾದರೆ ಬರಿ ಹಣ ಸಾಲದು ನಿವೇಶನದ ಆಯ್ಕೆ, ಕಟ್ಟೆಯ ನಿರ್ಮಾಣ, ಆ ಕೆರೆಗೆ ಬರಬಹುದಾದ ನೀರಿನ ಪ್ರಮಾಣ, ಅದಕ್ಕೆ ಸರಿಯಾದ ಕೋಡಿ, ತೂಬು-ಇತ್ಯಾದಿಗಳನ್ನು ನಿರ್ಮಿಸಬೇಕಾದರೆ ತಾಂತ್ರಿಕ ಪರಿಜ್ಞಾನವುಳ್ಳ ಪರಿಣಿತ ಶಿಲ್ಪಿಗಳು ಬೇಕಾಗುತ್ತದೆ.

ಗದಗ ಜಿಲ್ಲೆಯ ಮುಳಗುಂದ ಗ್ರಾಮದ ಕ್ರಿ.ಶ. ೧೧೨೫ನೇ ಶಾಸನವು ಹೆಗ್ಗೇರಿಯ ಕೆರೆಯನ್ನು ಕಲ್ಲೋಜನೆಂಬ ಕೆರೆಯ ತೂಬು ಮಾಡಿದ ಶಿಲ್ಪಿಯನ್ನು ಹೆಸರಿಸುತ್ತದೆ. ಕೆರ ನಿರ್ಮಾಣದ ಖರ್ಚಿನ ಕೆಲವು ವಿವರಗಳನ್ನು ನೀಡುತ್ತದೆ. ಕೆರೆಯ ಕೆಲಸಕ್ಕೆ '೧೦ ಗದ್ಯಾಣ' "ಕಸರುಗಲ್ಲಾದಿಯಾಗಿ ಕಲ್ಲೋಜನ ಕೆಲಸ"[೬೦] ಎಂಬ ಮಾತು ಬರುತ್ತದೆ. ಕಸರುಗಲ್ಲು ಎಂಬ ಮಾತನ್ನು ದೇವಸ್ಥಾನದ ಅಧಿಷ್ಠಾನ ಹಾಕುವ ಕ್ರಿಯೆ ಎಂಬ ಅರ್ಥದಲ್ಲಿ ಹೆಚ್ಚಾಗಿ ಬಳಸಿದ್ದರೂ ಕೂಡ ಕೆರೆ ನಿರ್ಮಾಣದ ವಿಷಯವನ್ನು ಕುರಿತು ಈ ಶಾಸನದಲ್ಲಿ ಇದು ಬಂದಿರುವುದರಿಂದ ಕೆರೆಯನ್ನೂ ಕೂಡ ಕೆಸರು ಕಲ್ಲನ್ನು ಇಟ್ಟು ಪ್ರಾರಂಭಿಸುತ್ತಿದ್ದರು ಎಂದು ತಿಳಿಯಬಹುದಾಗಿದೆ. ಇಲ್ಲಿ ಕೆಸರುಗಲ್ಲಾದಿಯಾಗಿ ಎಂದರೆ ಕೆರೆಯ ಪ್ರಾರಂಭದ ಕೆಲಸದಿಂದ ಕೆರೆಯ ಪೂರ್ಣ ನಿರ್ಮಾಣ ಕಾರ್ಯವನ್ನು ಕಲ್ಲೋಜನೇ ಮಾಡಿರುತ್ತಾನೆಂದು ತಿಳಿಯಬಹುದಾಗಿದೆ.[೬೧] ಮುಂಡರಗಿ ತಾಲೂಕಿನ ಚಾಗಿನಕೇರಿಯ ಕ್ರಿ.ಶ. ೧೪೦೪ರ ಶಾಸನದಲ್ಲಿ[೬೨] ತಿಪ್ಪೊಜನು ಎಂಬವನು ಕೆರೆಯ ಎರಡು ತೂಬುಗಳ ಮೇಲಿರುವ ಶಾಸನಗಳಲ್ಲಿ ಹೇಳುವಂತೆ ಕೆರೆಯ ತೂಬುಗಳನ್ನು ತಿಪೋಜನೆ ಕಟ್ಟಿದ್ದಾನೆ ಎಂಬ ಮಾಹಿತಿ ಇದೆ. ಅದಕ್ಕಾಗಿ ಈತನು ೩೦ ಪ್ರತಾಪ ವರಹಗಳನ್ನು ಪಡೆಯುತ್ತಾನೆ. ಮಾಸವೆಗ್ಗಡೆ ಚಿಕ್ಕಣ್ಣ ಉಪಾಧ್ಯಾಯರ ಮಕ್ಕಳು ಗೋಪಣ್ಣನು ವೈಶಾಖ ಶುದ್ಧ ಪಂಚಮಿ ಸೋಮವಾರದಂದು ತೂಬನ್ನು ಪ್ರತಿಷ್ಠೆ ಮಾಡಿ ಕೊಡುತ್ತಾರೆಂಬ ಮಾಹಿತಿ ಇದೆ.

ಕೆರೆಯ ನಿರ್ಮಾಣ ಕಾರ್ಯದಲ್ಲಿ ಮುಖ್ಯವಾಗಿ ಭೋವಿ ಮತ್ತು ಓಜರುಗಳು ಸೇರಿ ಕೆಲಸ ಮಾಡುತ್ತಿದ್ದರು. ಮಣ್ಣು ಕೆಲಸಕ್ಕೆ ಬೇರೆ, ಕಲ್ಲು ಕೆಲಸಕ್ಕೆ ಬೇರೆ ಜನ ಸೇರಿ ನಿರ್ಮಿಸುತ್ತಿದ್ದರು. ಕಲ್ಲು ವಡ್ಡರು ಏರಿಗೆ ಕಲ್ಲು ಕಟ್ಟುತ್ತಿದ್ದರು. ಮಣ್ಣು ವಡ್ಡರು ಮಣ್ಣಿನ ಕೆಲಸವನ್ನು ಮಾಡುತ್ತಿದ್ದರು. ಕಮ್ಮಾರರು ಅಥವಾ ಓಜರುಗಳು ತೂಬು ನಿಲ್ಲಿಸುವಲ್ಲಿ ಉತ್ಸುಕರಾಗಿದ್ದರು. ಮಣ್ಣು ವಡ್ಡರ ಹಾಗೂ ಕಲ್ಲುವಡ್ಡರ ಸಮೂಹ ಕೆಲಸದಲ್ಲಿ ತೊಡಗಿರುವಲ್ಲಿ ಆಯಾ ಗುಂಪಿನ ಪ್ರಧಾನ ವ್ಯಕ್ತಿಯೊಬ್ಬ ಆ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದನು. ಹಾಗೆಯೇ ತೂಬಿನ ಕಂಬವನ್ನು ನಿಲ್ಲಿಸುವ ಕೆಲಸವನ್ನು ಅದರಲ್ಲೂ ಪರಿಣಿತನಾದ ಓಜ ಅಥವಾ ಕಮ್ಮಾರ ಆಚಾರಿಗಳು ಮಾಡುತ್ತಿದ್ದರು. ಕೆಲವೊಮ್ಮೆ ಓಜರೇ ಪೂರ್ಣ ಕೆರೆಯ ರಚನೆಯ ಜವಾಬ್ದಾರಿಯನ್ನು ನಿರ್ವಹಿಸಿರುವಂತೆಯೂ ತಿಳಿಯುತ್ತದೆ. ಗೊತ್ತಾದ ದಿನದಂದೇ ಪೂರ್ತಿ ಮಾಡಿಕೊಡುತ್ತಿದ್ದರು. ಹೀಗೆ ಕೆರೆಯನ್ನು ಕಟ್ಟಿದವರಿಗೆ ಕಟ್ಟಿಸಿದವರಿಗೆ 'ಕೆರೆ ಕೊಡಗಿ' 'ಕಟ್ಟುಕೊಡಗಿ'ಯಾಗಿ ಅದೇ ಕೆರೆಯ ತೂಬಿನ ಬಳಿ ಭೂಮಿಯನ್ನು ಬಿಟ್ಟು ಕೊಡಲಾಗುತ್ತಿತ್ತು.[೬೩] ಕೆರೆಯ ತೂಬಿಗಾಗಿ ಕಲ್ಲನ್ನು ಸೂಕ್ತವಾಗಿ ಆರಿಸಿ, ಹಣ ಖರ್ಚು ಮಾಡಿ ಕಷ್ಟಪಟ್ಟು ತಂದು ಜೋಡಿಸುತ್ತಿದ್ದರು. ಒಂದು ಕಡೆ ಕೆರೆಯ ತೂಬಿನ ಈಗಿನ ಕಲ್ಲು ಇದಕ್ಕೆ ಮೊದಲು ಗುಡ್ಡದ ಮೇಲಿನ ದಕ್ಷಿಣ ಕೋಟೆಯ ಬಾಗಿಲ ಮೇಲೆ ಇದ್ದಿದ್ದಾಗಿ ಹೇಳಿದೆ. ವರ್ಷ ವರ್ಷವೂ ಕಟ್ಟಿದ ಕೆರೆ ಕಲ್ಲನ್ನು, ಮಣ್ಣನ್ನು, ಕಟ್ಟಿಸಿಕೊಂಡು ನಿಗಾ ನೋಡುತ್ತಿದ್ದರು. ಕೆರೆ ಕಟ್ಟುವ

ಸಂದರ್ಭದಲ್ಲಿಯೇ ಈ ರೀತಿಯ ವ್ಯವಸ್ಥೆಯನ್ನು ವಿಧಿಸಿ ಶಾಸನವನ್ನು ಮಾಡುತ್ತಿದ್ದರು. ಅನೇಕ ಕಡೆಗೆ ಹೊಸ ಕೆರೆಯನ್ನು ಮಾಡಿಸಿರುವುದಲ್ಲದೇ ಹಳೆಯ ಕೆರೆಗಳನ್ನೇ ದುರಸ್ತಿ ಮಾಡಿಸುತ್ತಿದ್ದರು.

**ಬಾವಿಗಳು :**

ಗದಗ ಜಿಲ್ಲೆಯ ನೀರಾವರಿ ಚೌಕಟ್ಟಿನಲ್ಲಿ ಬಾವಿಗಳು ಸಹ ಪೂರಕ ಪಾತ್ರವಹಿಸಿವೆ. ಜಿಲ್ಲೆಯಲ್ಲಿ ಲಭ್ಯವಿರುವ ಶಾಸನಗಳು ಬಾವಿಗಳ ನಿರ್ಮಾಣ, ಅವುಗಳ ನಿರ್ವಹಣೆಗಾಗಿ ದಾನಗಳನ್ನು ನೀಡಿರುವುದರ ಕುರಿತಂತೆ ಮಾಹಿತಿ ನೀಡುತ್ತವೆ. ಸೊರಟೂರು ಶಾಸನದಲ್ಲಿ ಪಗೆವರಗಂಡ ಧರ್ಮಶೆಟ್ಟಿಯಿಂದ ಬಾವಿ ನಿರ್ಮಾಣ ಕುರಿತಂತೆ ಉಲ್ಲೇಖಿಸುತ್ತದೆ. ಶಿರಹಟ್ಟಿ ತಾಲೂಕಿನ ಲಕ್ಷ್ಮೇಶರದ ಶಾಸನದಲ್ಲಿ ರಾಟಣದ ಬಾವಿಯಿಂದ ನೀರು ಪೂರೈಸಲು ಶಾಂತಿಶೆಟ್ಟಿ ಮೊದಲಾದ ೫೦೦ ವ್ಯಾಪಾರಿಗಳು ದಾನ ನೀಡಿರುವುದನ್ನು ದಾಖಲಿಸಿದೆ. ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ವ್ಯಾಪಾರಿಗಳು ದಾನ ನೀಡಿದ್ದನ್ನು ಗಮನಿಸಿದಾಗ ಪ್ರಾಯಶಃ ನೀರನ್ನು ಕೃಷಿಗಾಗಿ ಏತ ನೀರಾವರಿ ಮುಖಾಂತರ ಬಳಸುತ್ತಿರಬಹುದಾದ ಸಾಧ್ಯತೆಗಳನ್ನು ಅಲ್ಲಗೆಳೆಯಲಾಗುವುದಿಲ್ಲ.

**ಕಟ್ಟಡ ವಿನ್ಯಾಸ ಸೂತ್ರಗಳು:**

ಚಕ್ರಪಾಣಿ ಮಿಶ್ರನಿಂದ ರಚಿತವಾದ 'ವಿಶ್ವವಲ್ಲಭ' ಗ್ರಂಥದಲ್ಲಿ[೭೪] ಕೆರೆ, ಕಟ್ಟೆ, ಬಾವಿ, ಪುಷ್ಕರಣಿ ಇತ್ಯಾದಿಗಳನ್ನು ಕಟ್ಟಲು ಅನೇಕ ರೀತಿಯ ಆಕಾರಗಳನ್ನು ತಿಳಿಸಿರುತ್ತಾರೆ. ದುಂಡಾಕಾರ, ಚೌಕಾಕಾರ, ಅಧಿಕ ಕೋನಾಕೃತಿಯ ಆಕಾರ (ತ್ರಾಪಿಜ್ಯ) ಮತ್ತು ಆತಕಾರ, ಕಶ್ಯಪ ಕೃಷಿ ಸೂಕ್ತದಲ್ಲಿ ಕೆರೆ ಕಟ್ಟುವಾಗ ಗೋಲಾಕಾರ, ಆಯತಾಕಾರ, ಅರ್ಧಚಂದ್ರಾಕಾರ ಇವುಗಳನ್ನು ಆಯಾ ಸ್ಥಳಗಳ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯೇ ನಿರ್ಮಿಸಬೇಕೆಂದು ಉಲ್ಲೇಖಿಸುತ್ತದೆ.

ನರಗುಂದ ತಾಲೂಕಿನ ಸೋಮಾಪುರ ಶಾಸನದಲ್ಲಿ[೭೫] ರಾಜನ ರಾಯಭಾರಿಯೋಬ್ಬ ಅನೇಕ ಪುಷ್ಕರಣಿ, ಕೆರೆ, ದೇವಾಲಯದ ಜೊತೆಗೆ ಬಾವಿಯೋಂದನ್ನು ನಿರ್ಮಿಸಿ ಅವುಗಳ ನಿರ್ವಹಣೆಗೆ ಭೂಮಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.

ಒಟ್ಟಾರೆ ಕೆರೆ ಕಾಲುವೆಗಳು ಪ್ರಾಚೀನ ಕರ್ನಾಟಕದ ಪ್ರಮುಖ ಸಾಧನಗಳಾಗಿದ್ದು ನಾಡಿನ ಆರ್ಥಿಕ ವ್ಯವಸ್ಥೆಯ ಮೇಲೆ ನೇರ ಪರಿಣಾಮ ಬೀರುತ್ತಿದ್ದವು. ಒಂದಡೆ ಕೃಷಿ ಮತ್ತು ಇನ್ನೊಂದೆಡೆ ಸಮಾಜದ ಬಳಕೆಗೆ ಸಾಧನಗಳಾಗಿದ್ದ ಈ ಕೆರೆ ಕಾಲುವೆಗಳಿಗೆ ದ್ವಿಮುಖ ಮಹತ್ವವಿತ್ತು. ಇದೇ ಕಾರಣಕ್ಕಾಗಿ ಅಂದಿನ ಜನ ಕೆರೆ ಕಾಲುವೆಗಳ ನಿರ್ಮಾಣಕ್ಕೆ ಹೆಚ್ಚಾಗಿ ಹಾತೊರೆಯುತ್ತಿದ್ದರೆಂದು ತೋರುತ್ತದೆ. ಮುಖ್ಯವಾಗಿ ಒಂದು ದೇವಸ್ಥಾನದ ನಿರ್ಮಾಣಕ್ಕಾಗಿ ಇನ್ನೊಂದು ತಟಾಕ ನಿರ್ಮಾಣಕ್ಕಾಗಿ ಎಂಬ ಮಾತು ಸತ್ಯ. ಕೆರೆ ಕಾಲುವೆಗಳ ನಿರ್ಮಾಣದ ಹಿಂದೆ ನಮ್ಮ ಪ್ರಾಚೀನರು ಇರಿಸಿಕೊಂಡಿದ್ದ ಬಹುಮುಖ್ಯ ಧ್ಯೇಯ ಧೋರಣೆಗಳನ್ನು ನಾವು ಗುರುತಿಸಬಹುದು. ವ್ಯವಸಾಯ ಪ್ರಜ್ಞೆ, ಆರ್ಥಿಕ,

ಸಾಮಾಜಿಕ ಪ್ರಜ್ಞೆ, ಪರಿಸರ ಪ್ರಜ್ಞೆ ಅವರಲ್ಲಿದ್ದಿರಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ಪ್ರಾಚೀನರಿಂದ ನಾವು ಕಲಿಯಬೇಕಾದ ಪಾಠವೆಂದರೆ ಸಹಕಾರತ್ವ ನಿರ್ಧಯಯರಾಗಿ ಕಾಡನ್ನು ನಾಶಗೊಳಿಸಿ ಮಳೆಯನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದೇವೆ. ಈಗಲಾದರೂ ಪರಿಸರ ಸಂರಕ್ಷಣೆಯತ್ತ ಜನ ಗಮನಕೊಟ್ಟರೆ ಸಾಕು. ಫಲಕಾರಿಯಾದ ವಾತಾವರಣ ಪಡೆಯಲು ಸಾಧ್ಯ.

**ಟಿಪ್ಪಣಿಗಳು:**

೦೧. ಹೆಗಡೆ ರಾಜಾರಾಮ (ಸಂ)., ೨೦೦೨, **ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ**, ಪು. ೭.

೦೨. ಅದೇ.

೦೩. ಅದೇ, ಪು. ೧೪೩.

೦೪. ವಾಸುದೇವನ್ ಸಿ.ಎಸ್, ೨೦೦೧, **ಹಂಪಿ ಪರಿಸರದ ಕೆರೆಗಳು**, ಪು. ೮–೯.

೦೫. ಅದೇ, ಪು. ೨೦.

೦೬. ಧ್ರುವನಾರಾಯಣ ಎಂ, (ಅನು), ಕೊಟ್ರಯ್ಯ. ಸಿ.ಟಿ.ಎಂ, (ಮೂಲ) **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ**, ಪು. ೭೪.

೦೭. ನೀಲತ್ತಹಳ್ಳಿ ಕಸ್ತೂರಿ, (ಅನು)., ದೀಕ್ಷಿತ್ ಜಿ.ಎಸ್, ಕುಪ್ಪುಸ್ವಾಮಿ. ಜಿ.ಆರ್, ಮೋಹನ್ ಎಸ್.ಕೆ, (ಮೂಲ), ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ**, ಪು. ೧೦೪.

೦೮. ಅದೇ, ಪು ೧೦೪.

೦೯. ವಾಸುದೇವನ್ ಸಿ.ಎಸ್, ೨೦೦೧, **ಪೂರ್ವೋಕ್ತ**, ಪು ೨೨.

೧೦. ಅದೇ.

೧೧. ಅದೇ, ಪು ೭.

೧೨. ಅದೇ.

೧೩. ಅದೇ, ಪು ೮.

೧೪. ಗೋಪಾಲ ಆರ್., ೨೦೦೬, **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ಪು. ೧೩೬.

೧೫. SII Vol-XI,P-II, No. 46, Page No.127

೧೬. ಕಲಬುರ್ಗಿ ಎಂ.ಎಂ. **ಧಾರವಾಡ ಜಿಲ್ಲಾ ಶಾಸನಸೂಚಿ**, ಪು. ೯.

೧೭. SII Vol-XV, KI-V, No.12.

೧೮. SII Vol-XI,P-II, No. 46, Page No.127

೧೯. SII Vol-XV,No. 18, Page No.167

೨೦. SII Vol-XI,P-II, No. 46, Page No.127

೨೧. ಗೋಪಾಲ ಆರ್., ೨೦೦೬, **ಪೂರ್ವೋಕ್ತ**, ಪು:೧೩೬

೨೨. SII Vol-XI, No. 151, Page No.187

೨೩. SII Vol-XV, No. 59, Page No.

೨೪. SII Vol-XI, No. 15, Page No.

೨೫. SII Vol-XVIII, No. 25, Page No.

೨೬. ರಾಜಾರಾಮ ಹೆಗಡೆ, (ಸಂ), ೨೦೦೨, **ಪೂರ್ವೋಕ್ತ**, ಪು.೧೪೪

೨೭. ಕೊಟ್ರಯ್ಯ ಸಿ.ಟಿ.ಎಂ, **ಪೂರ್ವೋಕ್ತ**, ಪು. ೭೨.

೨೮. ಹನಮಂತಪ್ಪ. ಟಿ, ೨೦೧೧, **ಚಿರ್ತದುರ್ಗ ತಾಲೂಕಿನ ಐತಿಹಾಸಿಕ ಕೆರೆಗಳು ಮತ್ತು ಅವುಗಳ ನಿರ್ವಹಣೆ**, ಪು. ೩೭.

೨೯. ಅದೇ, ಪು. ೩೮.

೩೦. ಕೊಟ್ರಯ್ಯ ಸಿ.ಟಿ.ಎಂ, **ಪೂರ್ವೋಕ್ತ**, ಪು. ೧೪೭.

೩೧. ಅದೇ, ಪು. ೧೫೦.

೩೨. ನೀಲತ್ತಹಳ್ಳಿ ಕಸ್ತೂರಿ, (ಅನು)., ದೀಕ್ಷಿತ್ ಜಿ.ಎಸ್, ಕುಪ್ಪುಸ್ವಾಮಿ. ಜಿ.ಆರ್, ಮೋಹನ್ ಎಸ್.ಕೆ, (ಮೂಲ)., ೨೦೦೦, **ಪೂರ್ವೋಕ್ತ**, ಪು ೧೨೦.

೩೩. SII Vol-XI, P-II, No. 46.

೩೪. SII Vol-XV, P-I, No. 57.

೩೫. EI-XX, No.VI, AD-1153-54

೩೬. SII Vol-XVIII, No. 25, Page No. 178, AD-840.

೩೭. SII Vol-XI, P-I, No. 127

೩೮. SII Vol-XV, P-II, No. 57

೩೯. ಹೆಗಡೆ ರಾಜಾರಾಮ (ಸಂ)., ೨೦೦೨, **ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ**, ಪು. ೭.

೪೦. SII Vol-XI, P-II, No. 46

೪೧. EI-VI, No.12 & KI-V, No. 12

೪೨. ಕುಂಚೂರು ಬಸವರಾಜ., ೨೦೧೦, **ನಮ್ಮೂರ ಕೆರೆಗಳು**, ಪು. ೬೯.

೪೩. ಕಸ್ತೂರಿ ನಿಲತ್ತಹಳ್ಳಿ., (ಅನು)., ದಿಕ್ಷಿತ್ ಜಿ.ಎಸ್., ಕುಪ್ಪುಸ್ವಾಮಿ. ಜಿ. ಆರ್., ಮೋಹನ್ ಎಸ್.ಕೆ., (ಮೂಲ)., ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ**, ಪು. ೧೩.

೪೪. SII Vol-XV, P-I, No. 57

೪೫. SII Vol-XI, P-II, No. 151.

೪೬. SII Vol-XI, P-II, No. 38. AD 950

೪೭. SII Vol-XV, No. 162. Page No. 209.

೪೮. SII Vol-XI, No. 53.

೪೯. SII Vol-XV, No. 263.

೫೦. SII Vol-XV, No. 13.

೫೧. SII Vol-XV, No. 665.

೫೨. SII Vol-XI, No. 58.

೫೩. SII Vol-XV, P-I, No. 57.

೫೪. ಆರ್. ಗೋಪಾಲ, **ಪೂರ್ವೋಕ್ತ**, ಪು. ೧೩೮.

೫೫. SII Vol-XV, No. 238, Page No. 292.

೫೬. SII Vol-XV, No. 162, Page No. 209.

೫೭. ಹನುಮಂತಪ್ಪ. ಟಿ, ೨೦೧೧, **ಪೂರ್ವೋಕ್ತ**, ಪು. ೫೦.

೫೮. ಅದೇ, ಪು. ೫೧.

೫೯. ನೀಲತ್ತಹಳ್ಳಿ ಕಸ್ತೂರಿ, (ಕನ್ನಡ ಅನು), ದಿಕ್ಷಿತ್ ಜೆ.ಎಸ್., ಹಾಗೂ ಇತರರು, (ಆಂಗ್ಲ ಮೂಲ) ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ**, ಪು. ೧೨೪, ೧೨೫

೬೦. ಚಂದ್ರಪೂಜಾರಿ ಎಂ.., ೨೦೦೨, **ಸಮುದಾಯ ಮತ್ತು ಸಹಭಾಗಿತ್ವ**, ಪು. ೮೦.

೬೧. ಕೆ.ಎಸ್.ಕುಮಾರಸ್ವಾಮಿ., ೨೦೧೩, **ಶಿಲ್ಪಾಚಾರಿಯರ ಚರಿತೆ**, ಪು. ೧೦.

೬೨. ಚಂದ್ರಪೂಜಾರಿ ಎಂ, ೨೦೦೨, **ಪೂರ್ವೋಕ್ತ**, ಪು. ೮೦.

೬೩. ಅದೇ, ಪು. ೯೦.

೬೪. ಅದೇ, ಪು. ೯೧.

೬೫. ಅದೇ.

೬೬. ಕುಮಾರಸ್ವಾಮಿ ಕೆ.ಎಸ್., ೨೦೧೩, **ಪೂರ್ವೋಕ್ತ**, ಪು. ೧೦.

೬೭. ಅದೇ, ಪು. ೧೦.

೬೮. ಅದೇ, ಪು. ೧೩

೬೯. ಕುಪ್ಪುಸ್ವಾಮಿ ಜಿ.ಆರ್, **ಕರ್ನಾಟಕದಲ್ಲಿ ನೀರಾವರಿ ವ್ಯವಸ್ಥೆ–ಕಟ್ಟಡ ನಿರ್ಮಾಣ**, ಪು.

೭೦. ಕುಮಾರಸ್ವಾಮಿ ಕೆ.ಎಸ್, ೨೦೧೩, **ಪೂರ್ವೋಕ್ತ**, ಪು. ೧೪.

೭೧. ಅದೇ.

೭೨. ಎಚ್.ಎಸ್. ಉಷಾರಾಣಿ., ೨೦೦೧, **ಶಾಸನೋಕ್ತ ಕಲಾಕರ್ಮಿ ಸಂಭಾವನೆ–ಒಂದು ಆರ್ಥಿಕ ವಿಶ್ಲೇಷಣೆ,** 'ಇತಿಹಾಸ ದರ್ಶನ' ಸಂಪುಟ–೧೬ ಎಂ.ಜಿ. ನಾಗರಾಜ/ಪಿ.ವ್ಹಿ. ಕೃಷ್ಣಮೂರ್ತಿ(ಸಂ), ಪುಟ–೭೫.

೭೩. ಹರಿಹರ ಶ್ರೀನೀವಾಸರಾವ್., ೨೦೧೦, **ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ ತಂತ್ರಜ್ಞಾನ,** ಪು. ೬೫.

೭೪. ಅದೇ.

೭೫. SII Vol-XVIII, No. 89, AD-1080.

## ಅಧ್ಯಾಯ ಆರು

# ನಂಬಿಕೆ ಮತ್ತು ಆಚರಣೆಗಳು

೬.೧. ನಂಬಿಕೆಗಳು

೬.೨. ಆಚರಣೆಗಳು

೬

# ನಂಬಿಕೆ ಮತ್ತು ಆಚರಣೆಗಳು

ನಂಬಿಕೆ ಮತ್ತು ಆಚರಣೆಗಳು ಸಂಸ್ಕೃತಿಯ ಒಂದು ಭಾಗ. ಮನುಕುಲಕ್ಕೆ ಬಹುಮುಖ್ಯವಾದ ಸಂಸ್ಕೃತಿ ಬಹಳ ವ್ಯಾಪಕ ಅರ್ಥವನ್ನು ಒಳಗೊಂಡಿದೆ. ನ್ಯಾಯ, ನೀತಿ, ಸತ್ಯ, ಧರ್ಮ, ಪ್ರಮಾಣಿಕತೆ ಇವೆಲ್ಲವನ್ನು ಒಳಗೊಂಡಿರುವುದೇ ಸಂಸ್ಕೃತಿ. ಸಂಸ್ಕೃತಿಯಲ್ಲಿ ಸಂಗೀತ, ಸಾಹಿತ್ಯ, ಕಲೆ, ನಂಬಿಕೆ, ಸಂಪ್ರದಾಯ, ಜಾತ್ರೆ, ಉತ್ಸವ ಮೊದಲಾದವುಗಳು ಸಮಾವೇಶಗೊಂಡಿರುತ್ತವೆ. ಒಂದು ಜನಾಂಗದ ಸಂಸ್ಕೃತಿಯನ್ನು ತಿಳಿದುಕೊಳ್ಳುವಲ್ಲಿ ಈ ಎಲ್ಲಾ ಕ್ಷೇತ್ರಗಳು ನಿರ್ಧರಿತ ಅಂಶಗಳಾಗಿವೆ. ಸಂಸ್ಕೃತಿ ಎಂದೂ ನಿಂತ ನೀರಲ್ಲ ನಿರಂತರ ಬೆಳವಣಿಗೆಯೇ ಸಂಸ್ಕೃತಿಯ ವಿಶೇಷತೆ.[೧]

ಕೆರೆ-ಬಾವಿಗೆ ಸಂಬಂಧಿಸಿದ ಆಚರಣೆಗಳು ಕೆರೆ-ಬಾವಿಗಳು ಕಟ್ಟುವ ಪೂರ್ವದಿಂದಲೇ ಆರಂಭವಾಗುತ್ತವೆ. ಅಷ್ಟೇ ಯಾಕೆ ಮನೆ, ಗುಡಿ-ಗುಂಡಾರಗಳನ್ನು ಕಟ್ಟುವಾಗ, ಮದುವೆ ಮುಂಜಿ ಮುಂತಾದ ಕಾರ್ಯಗಳು ಪದ್ಧತಿಗನುಗುಣವಾಗಿ ಶುಭಮುಹೂರ್ತದಲ್ಲಿ ಪೂಜೆಯನ್ನು ಸಲ್ಲಿಸುವುದರ ಮೂಲಕ ಪ್ರಾರಂಭವಾಗುತ್ತವೆ. ಹೀಗಾಗಿ ಆಚರಣೆಗಳ ಪ್ರಾರಂಭ ಕೆಲವು ಕಟ್ಟುಪಾಡುಗಳಲ್ಲಿ ನೇರವೇರುತ್ತವೆ. ಗದಗ ಜಿಲ್ಲೆಯಲ್ಲಿ ಪ್ರಾಚೀನ ಕಾಲದಿಂದಲೂ ಮುಂದುವರೆದುಕೊಂಡು ಬಂದಿರುವ ವಿಶಿಷ್ಟವಾದ ನಂಬಿಕೆ, ಸಂಪ್ರದಾಯ, ಆಚರಣೆ ಹಾಗೂ ಉತ್ಸವಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಈ ಹಿನ್ನೆಲೆಯಲ್ಲಿ ಅವುಗಳ ಕುರಿತು ಅಧ್ಯಯನ ಆಗಬೇಕಿರುವುದು ಅವಶ್ಯಕ.

ನಮ್ಮ ರಾಜ್ಯದಲ್ಲಿ ೪೦ ಸಾವಿರ ಕೆರೆಗಳಿದ್ದರೆ, ಗದಗ ಜಿಲ್ಲೆಯಲ್ಲಿ ಸುಮಾರು ೨೪೫ ಕೆರೆಗಳಿವೆ. ಪ್ರತಿಯೊಂದು ಕೆರೆಯ ನಿರ್ಮಾಣದ ಹಿಂದೆ ಅದರದೇ ಆದ ಇತಿಹಾಸವಿದೆ. ಕೆರೆಗಳನ್ನು ಕಟ್ಟುವ ಉದ್ದೇಶ ಜೀವಸಂಕುಲವನ್ನು ರಕ್ಷಿಸುವುದಾಗಿದೆ. 'ನೀರು ನಿಂತರೆ ಹೊಲ ಹಾಳು, ಇಲ್ಲದಿದ್ದರೆ ಕೆರೆ ಹಾಳು' ಎಂಬ ಗಾದೆ ಮಾತಿದೆ. ಕೆರೆಯ ದಡದಲ್ಲಿ ದೇವರೊಂದನ್ನು ಪ್ರತಿಷ್ಠಾಪಿಸಿ ಆ ಪರಿಸರಕ್ಕೊಂದಿಷ್ಟು ಪಾವಿತ್ರತೆಯನ್ನು ಕಲ್ಪಿಸಿ ಪರಿಸರವನ್ನು ಕಾಪಾಡಿಕೊಂಡು ಬಂದ ನಮ್ಮ ಹಿರಿಯರು ಕೆರೆಗಳನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ. ಈ ತರಹದ ಕೆರೆಗಳನ್ನು ಗದಗ ಜಿಲ್ಲೆಯಲ್ಲಿ ಕೋಟುಮಚಗಿ, ಪೇಠಾಲೂರು, ಕುರ್ತಕೋಟೆ, ಇಟಗಿ ಮುಂತಾದ ಕಡೆಗಳಲ್ಲಿ

ಕಾಣುತ್ತೇವೆ. ಇಂದಿನ ಕೆರೆಗಳು ಹಿಂದೆ ಇದ್ದ ವ್ಯವಸ್ಥಿತವಾದ ಜವಾಬ್ದಾರಿಗಳು ಕೆರಗಳು ಪಡೆಯುತ್ತಿಲ್ಲ. ಯಾಕೆಂದರೆ ಅವುಗಳು ಹೂಳು ತುಂಬಿ ಜಲಕಳೆ ಬೆಳೆಯುತ್ತಿದ್ದು, ನೆಲಗಳ್ಳರು ಕೆರೆಗಳನ್ನು ಒತ್ತುವರಿ ಮಾಡಿಕೊಳ್ಳುತ್ತಿದ್ದಾರೆ. ಕೆರೆಗಳ ಆಯುಷ್ಯ ಕಡಿಮೆಯಾಗುತ್ತದೆ. ಹೂಳು ಮತ್ತು ಜಲಕಳೆಯನ್ನು ಮೇಲಿಂದ ಮೇಲೆ ತೆಗೆಯುತ್ತಿದ್ದರೆ ಅದರಿಂದ ನಮ್ಮ ಜಮೀನುಗಳಿಗೆ ಗೊಬ್ಬರದಕ್ಕುತ್ತದೆ. ಕೆರೆಯೂ ಜೀವದಾನ ಪಡೆಯುತ್ತದೆ. ಸರಕಾರ ಹಲವಾರು ಮೂಲಗಳಿಂದ ಕೆರೆಗಳ ಪುನರುಜ್ಜೀವನಕ್ಕಾಗಿ ಸಾಲ ಪಡೆಯುತ್ತದೆ. ಆ ಹಣ ಕೆರೆಗೆ ಬಳಕೆಯಾಗದೇ ಭ್ರಷ್ಟಾಚಾರಿಗಳ ಪಾಲಾಗುತ್ತಿದೆ. ದಾಖಲೆಗಳಲ್ಲಿ ಕೆರೆಯ ಪುನರುಜ್ಜೀವನವಾಗಿರುತ್ತದೆ. ಆದರೆ ಕೆರೆಯ ಹೂಳು-ಜಲಕಳೆ ಹಾಗೆಯೇ ಇರುತ್ತದೆ. ಇದು ನಮ್ಮ ಆಡಳಿತದ ಆಧುನಿಕ ದೊರೆಗಳ ಶೈಲಿಯಾಗಿದೆ.[೨]

ಮಾನವನು ಅನಾದಿ ಕಾಲದಿಂದಲೂ ನಂಬಿಕೆ ಮತ್ತು ತತ್ಸಂಬಂಧಿತವಾದ ಆಚರಣೆಗಳನ್ನು ನಡೆಸಿಕೊಂಡು ಬಂದಿರುವುದನ್ನು ಮನಗಾಣುತ್ತೇವೆ. ಕಾಲಕಾಲಕ್ಕೆ ಹೊಸ ಹೊಸ ನಂಬಿಕೆ ಮತ್ತು ಆಚರಣೆಗಳು ಪ್ರವೇಶ ಮಾಡುತ್ತಿರುತ್ತವೆ. ಇವೆಲ್ಲವೂ ಅವನ ಮಾನಸಿಕ ನೆಮ್ಮದಿಗಾಗಿ ಮಾಡಿಕೊಂಡಿರುವ ಚಿಕಿತ್ಸಕ ಸ್ವರೂಪದ ಸಾಧನಗಳನ್ನೆಬಹುದು. ನಂಬಿಕೆಯ ಭೌತಿಕ ರೂಪವೆ ಆಚರಣೆ.[೩] ಮಾನವನ ನಾಗರಿಕತೆಯ ಬೆಳವಣಿಗೆಯಲ್ಲಿ ಕೃಷಿ ಆಧಾರಿತ ಬದುಕು ಬಹು ಮಹತ್ವದ್ದು, ಈ ಹಂತದಲ್ಲಿ ಅವನು ತನ್ನ ನಂಬಿಕೆ ಮತ್ತು ಆಚರಣೆಗಳನ್ನು ಮುಂದುವರಿಸಿಕೊಂಡು ಬಂದಿರುತ್ತಾನೆ. ಅದೇ ರೀತಿ ಪ್ರಸ್ತುತ ಪರಿಸರದಲ್ಲಿ ರೂಢಿಯಲ್ಲಿರುವ ನಂಬಿಕೆ, ಆಚರಣೆಗಳನ್ನು ಇಡಿಯಾಗಿ ನೋಡುವ ಪ್ರಯತ್ನ ಮಾಡಲಾಗಿದೆ.

ನಮ್ಮ ದೈನಂದಿನ ಬದುಕಿನಲ್ಲಿ ಹಲವಾರು ರೀತಿಯ ನಂಬಿಕೆ, ಆಚರಣೆ ಹಾಗೂ ಕಟ್ಟುಪಾಡುಗಳನ್ನು ರೂಢಿಸಿಕೊಂಡು ಬಂದಿದ್ದೇವೆ. ನಾವು ಋತುಮಾನಕ್ಕೆ ತಕ್ಕಂತೆ ಆಹಾರ, ಪಾನೀಯ ಬಟ್ಟೆ ಹಾಗೂ ವಸತಿಗಳಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತೇವೆ. ಈ ವ್ಯವಸ್ಥೆಗಳಲ್ಲಿ ನಾವು ನಂಬಿಕೆಗಳನ್ನು ಇಟ್ಟುಕೊಂಡಿದ್ದೇವೆ. ಉದಾ : ದೇವರು ಇದ್ದಾನೋ ಇಲ್ಲವೋ ಎಂಬುದು ಗೊತ್ತಿಲ್ಲ. ಆದರೆ ನಾವು ದೇವರು ಇದ್ದಾನೋ ಅಂದರೆ ಇದ್ದಾನೆ, ಇಲ್ಲ ಅಂದರೆ ಇಲ್ಲ. ಹಾಗೆ ಎಲ್ಲದಕ್ಕೂ ನಂಬಿಕೆ ಮುಖ್ಯ. ನಂಬಿಕೆ ಇಲ್ಲದ ಜೀವನವಿಲ್ಲ, ಎಲ್ಲರೂ ಒಂದಲ್ಲಾ ಒಂದು ರೀತಿಯಿಂದ ನಂಬಿಕೆ ಇಟ್ಟುಕೊಂಡು ಜೀವನ ಸಾಗಿಸುತ್ತಿದ್ದೇವೆ. ಸಹಜವಾಗಿ ಎಷ್ಟೋ ಸಲ ನಾವು ಇನ್ನೊಬ್ಬರನ್ನು ನಂಬಿ ಮೋಸಹೋಗಿದ್ದೇವೆ. ಹಾಗಂತ ನಂಬದೇ ಇರಲು ಅಸಾಧ್ಯ, ಆದ್ದರಿಂದ ದಾಸರು 'ನಂಬಿ ಕೆಟ್ಟವರಿಲ್ಲವೋ' ಎಂದು ಹಾಡಿರುವುದು ಸತ್ಯವೆನಿಸುತ್ತದೆ.[೪]

ನಂಬಿಕೆಗಳು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿ ಬೆಳೆದು, ಉಳಿದುಕೊಂಡು ಬಂದಿವೆ. ಬೇರು ಜನಪದ ಸಂಸ್ಕೃತಿಯ ಉದಯದೊಂದಿಗೆ ನಂಬಿಕೆಗಳು ತಲೆ ಎತ್ತಿರುವುದು ಗಮನಾರ್ಹ. ಜನಪದರ ನಿತ್ಯ ಬದುಕಿಗೂ, ನಂಬಿಕೆಗಳಿಗೂ ನಿಕಟವಾದ ನಂಟಿದೆ.

ಪ್ರತ್ಯೇಕಿಸಲು ಅಸಾಧ್ಯವೆನ್ನುವಷ್ಟು ಗಾಢವಾಗಿ ಅವು ಒಂದನ್ನೊಂದು ತಬ್ಬಿ ನಿಂತಿವೆ. ಜನಪದರ ಆಂತರಿಕ ಮನೋಭಾವವನ್ನು ಹಾಗೂ ಅವರ ಮೂಲ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಪರಿಚಯಿಸುವ ಮುಖ್ಯ ಸಾಧನಗಳಲ್ಲಿ ನಂಬಿಕೆಗಳು ಪ್ರಮುಖ ಪಾತ್ರ ವಹಿಸುತ್ತವೆ.[೫] ಇಷ್ಟೆಲ್ಲಾ ಪ್ರಾಮುಖ್ಯತೆಯನ್ನು ಪಡೆದಿರುವ ನಂಬಿಕೆಗಳ ಉಗಮ, ವಿಕಾಸ ಹಾಗೂ ಪ್ರಾಚೀನತೆಯತ್ತಲೇ ಗಮನಹರಿಸಬೇಕಾಗುತ್ತದೆ. ಪ್ರಾಚೀನತೆಯ ದೃಷ್ಟಿಯಿಂದ ಈ ಅಭಿಪ್ರಾಯ ಸ್ವಲ್ಪ ಅತಿರೇಕದಂತೆ ತೋರಿಬಂದರೂ, ಉಗಮ ಮತ್ತು ವಿಕಾಸವನ್ನು ಗಮನಿಸಿದಾಗ ಅವೆರಡಕ್ಕೆ ಆಂತರಿಕ ಸಂಬಂಧವಿದೆ.[೬] ಮಾನವ ಒಂದಲ್ಲಾ ಒಂದು ರೀತಿಯಲ್ಲಿ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿದಾಗಲೇ ನಂಬಿಕೆಗಳು ಉಗಮಗೊಂಡವು. ಅವನ ಮಾನಸಿಕ ಸ್ಥಿತಿ ಬದಲುಗೊಂಡಂತೆ ನಂಬಿಕೆಗಳು ವಿಕಾಸಗೊಂಡವು. ಪುರಾತನ ಕಾಲದಿಂದ ನಾಗರಿಕತೆ, ಪ್ರೌಢಜ್ಞಾನ ಮತ್ತು ಸಂಸ್ಕೃತಿಯ ಹಂತವನ್ನು ಮುಟ್ಟುವವರೆಗೆ ಮಾನವನ ಅವಿರತ ಮುನ್ನಡೆಯ ಹಾದಿಯಲ್ಲಿ ಬೆಳೆದು ಬಂದ ನಂಬಿಕೆಗಳು ಅಂತರ್ಗತ ವಾಗಿರುವುದು ಕಂಡುಬರುತ್ತದೆ. ಕೆಲವೊಮ್ಮೆ ತಪ್ಪು ತಿಳುವಳಿಕೆ, ಅಜ್ಞಾನ ಮತ್ತು ಅಂಧಕಾರದಿಂದ. ಮಾನವನ ವಿಚಾರ ಶಕ್ತಿ ಕುಸಿದಿರುವಲ್ಲಿ ಮತ್ತು ಜ್ಞಾನ ಸಂಪತ್ತು ಕಿರಿದಾಗಿರುವಲ್ಲಿ ಇಂತಹ ನಂಬಿಕೆಗಳು ಮನೆ ಮಾಡುತ್ತವೆ.

ಸಾವಿರಾರು ವರ್ಷಗಳಿಂದ ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿ ಬಂದಿರುವ ಆಚಾರ-ವಿಚಾರ ಮತ್ತು ಪದ್ಧತಿಗಳು ಹಳ್ಳಿಗಳಲ್ಲಿ ಪ್ರಚಲಿತವಾಗಿವೆ. ಐತಿಹಾಸಿಕವಾಗಿ ಇವುಗಳನ್ನು ಗಮನಿಸಿದರೆ, ಬಹುತೇಕ ನಂಬಿಕೆಗಳು ಪ್ರಕೃತಿ ಮೂಲದಿಂದ ಹುಟ್ಟಿಕೊಂಡು ಬಂದಿವೆ. ಅಂತಹ ನಂಬಿಕೆಗಳನ್ನು ಹಲವು ಭಾಗಗಳಾಗಿ ವರ್ಗೀಕರಿಸಬಹುದಾಗಿದೆ. ಮೊದಲನೆಯದಾಗಿ ಮಾನವ ಶರೀರ ಮತ್ತು ಜನಪದ ವೈದ್ಯಕ್ಕೆ ಸಂಬಂಧಪಟ್ಟವು, ನಂತರ ಜೀವನ ಚಕ್ರ. ಹಾಗೆಯೇ ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳು ಈ ಮೊದಲಾದವುಗಳನ್ನು ಒಳಗೊಂಡಿರುತ್ತದೆ.[೭] ನಂಬಿಕೆಗಳು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿದೆ. ಅವರು ಪ್ರಾಣಿ, ಪಕ್ಷಿ ಎಲ್ಲವುಗಳ ಮೇಲೆ ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಅದರಂತೆ ಕೆರೆಯ ಬಗ್ಗೆಯೂ ಕೂಡ ಹಲವಾರು ರೀತಿಯಲ್ಲಿ ನಂಬಿಕೆಗಳು ಇವೆ. ಊರಿಗೊಂದು ಕೆರೆ, ನೀರಿಗೊಂದು ಬಾವಿ, ಎಂಬಂತೆ ಪ್ರತಿ ಹಳ್ಳಿಗೊಂದು ಕೆರೆ-ಬಾವಿಗಳು ಇವೆ.[೮] ಕೆರೆ ಗ್ರಾಮೀಣ ನೆಲೆಯ ಜನಪದರ ಜೀವಾಳ ಹಾಗೂ ಹಳ್ಳಿಯ ಸ್ವತ್ತು ಕೂಡ ಹೌದು. ಕೆರೆ ದೇವತೆಯಾದ ಹೊನ್ನಮ್ಮ ನಮ್ಮನ್ನು ಕಾಪಾಡುತ್ತಾಳೆ.[೯] ಆ ವರ್ಷ ಕೆರೆಗಳು ತುಂಬಿದರೆ ಹಳ್ಳಿಗರಿಗೆ ಹಿಗ್ಗೋ ಹಿಗ್ಗೂ! ಈ ವರ್ಷ ಸುಗ್ಗಿಯು ಸಮೃದ್ಧಿಯಾಗುತ್ತದೆ ಎಂಬ ಸಂತಸ. ಕೆರೆಗಳು ತುಂಬಿದರೆ ನಮಗೆ ಬರವಿಲ್ಲ, ಕೆರೆ ತುಂಬಿಲ್ಲಾ ಅಂದ್ರೆ ನಮಗೆ ಬರ ಬಂದಂಗೆ ಎಂಬುದೊಂದು ಜನಪದರ ಅನುಭವದ ನುಡಿ.

ಕೆರೆಗೆ ಸಂಬಂಧಿಸಿದ ನಂಬಿಕೆಗಳು ವೇದಗಳ ಕಾಲದಿಂದಲೂ ಇವೆ. ಅಗ್ನಿ ಪುರಾಣದ ೬೪ನೇ ಅಧ್ಯಾಯದಲ್ಲಿ ವರುಣದೇವನನ್ನು ಜಲದೇವನೆಂದೇ ವರ್ಣಿಸಲಾಗಿದೆ.[೧೦] ಅದುದರಿಂದ ಗಣೇಶನಂಥಹ ಮೂರ್ತಿಯನ್ನು ಮುಳಗಿಸುವುದರಿಂದ ಶುದ್ದವಾಗುತ್ತೇವೆ. ಇಂದು ಹಳ್ಳಿಗಳಲ್ಲಿ ಪ್ರತಿಯೊಂದು ಶುಭಕಾರ್ಯಗಳಲ್ಲಿ ಗಂಗಮ್ಮನಿಗೆ ಹೋಗಿ ಬರುವುದು ಆಚರಣೆಯಲ್ಲಿದೆ. ಹೆಚ್ಚಾಗಿ ಈ ಆಚರಣೆಗಳು ಶ್ರಾವಣ ಮಾಸದಲ್ಲಿ ನಡೆಯುತ್ತವೆ. ಹೀಗೆ ಮಾಡುವುದರಿಂದ ಮೂಲರೂಪಕ್ಕೆ ಧಕ್ಕೆ ಬರುವುದಿಲ್ಲ. ದೈವಗಳು ನೆಲೆಸಿ ಸರ್ವರಿಗೂ ಒಳ್ಳೆಯದನ್ನು ಮಾಡುತ್ತದೆ. ಮಳೆ ಬೆಳೆ ಚೆನ್ನಾಗಿ ಆಗಿ ಜೀವನ ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಇಂದಿಗೂ ನಮ್ಮ ಜನಪದರಲ್ಲಿ ಆಳವಾಗಿ ಬೇರೂರಿದೆ.

ಜನಪದ ನಂಬಿಕೆಗಳು ಪರಂಪರಾನುಗತವಾದ ಅಂಗೀಕೃತವಾದ ಒಂದು ಪರಿಕಲ್ಪನೆ, ಹೀಗೆ ಅಂಗೀಕೃತವಾಗುವಲ್ಲಿ ಪುನಾರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಗಳು ಜನಪದರ ಜೀವನಾನುಭವದ ಉತ್ಪನ್ನಗಳು. ಸೂಚನೆ, ನಿಯಮ, ವಿಧಿ ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನಲ್ಲಿ ಕಂಡುಬರುತ್ತವೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವು.[೧೧] ನಂಬಿಕೆ, ಸಂಪ್ರದಾಯ ಆಚರಣೆಗಳೊಂದಿಗೆ ಅಂತರ್‌ಸಂಬಂಧವನ್ನು ಹೊಂದಿದ್ದು, ಆ ಮೂಲಕ ಕ್ರಿಯಾರೂಪವನ್ನು ತಾಳುತ್ತದೆ. ಅದು ಜನಪದ ಪ್ರಕಾರಗಳ, ಗಾದೆ, ಜನಪದ ವೈದ್ಯ, ಜನಪದ ಕಲೆ, ಜನಪದ ಐತಿಹ್ಯ, ಜನಪದ ಪುರಾಣ, ಜನಪದ ಮಂತ್ರವಿದ್ಯೆ, ಜನಪದ ಧರ್ಮ ಇವುಗಳೊಂದಿಗೆ ಒಳಸಂಬಂಧವನ್ನು ಹೊಂದಿದ್ದು ಸಂಕೀರ್ಣ ಸ್ವರೂಪದ್ದಾಗಿದೆ.

**ವ್ಯಾಖ್ಯೆಗಳು:**

ಆರ್.ಎಸ್.ಬಾಗ್ಸ್‌ರವರ ಪ್ರಕಾರ– ನಂಬಿಕೆಗಳು ಪುನರಾವೃತವಾಗುವ, ಸಾಮೂಹಿಕ ವೀಕ್ಷಣೆಯ ಫಲವಾಗಿ ಮಾಡುವ ಭೂತ, ವರ್ತಮಾನ, ಭವಿಷತ್ತುಗಳೊಂದಿಗೆ ಕಾರ್ಯಕಾರಣ ಸಂಬಂಧ ಉಳ್ಳದ್ದಾಗಿರುವ ಸಂಪ್ರದಾಯಿಕ ಭಾವನೆ ಎಂದಿದ್ದಾರೆ.

ಮರಿಯಾ ಲೀಚ್‌ರವರ ಪ್ರಕಾರ– ಪುನರಾವೃತವಾಗುವ ಸಾಮೂಹಿಕ ವೀಕ್ಷಣೆಯ ಫಲವಾಗಿ ಮಾಡುವ ಭೂತ, ವರ್ತಮಾನ, ಭವಿಷತ್ತುಗಳೊಂದಿಗೆ ಕಾರ್ಯಕಾರಣ ಸಂಬಂಧ ಹೊಂದಿರುವ ಸಂಪ್ರದಾಯಿಕ ಸ್ವೀಕೃತ ಪರಿಕಲ್ಪನೆಯೇ ಜನಪದ ನಂಬಿಕೆ. ದೇಜಗೌಅವರ ಪ್ರಕಾರ– ದೇಶ ಕಾಲಗಳ ಹಿನ್ನೆಲೆಯಲ್ಲಿ ಪರಂಪರಾಗತವಾದ ಜ್ಞಾನ, ದೀರ್ಘಾನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರೀಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ.[೧೨]

**ನಂಬಿಕೆಗಳ ಉಗಮ:**

ಪ್ರಕೃತಿಯ ರಹಸ್ಯವನ್ನು ಭೇದಿಸಲು ಆದಿಮಾನವನು ಪ್ರಯತ್ನಿಸಿದ. ಅದರ ಫಲವಾಗಿ ಶಕ್ತಿ ಭಯ, ಆತಂಕ, ಭೀತಿ ಹುಟ್ಟಿಕೊಂಡವು. ವೇದಗಳ ಕಾಲದಲ್ಲಿ ಜಾತಿ, ಧರ್ಮ ಅಸ್ತಿತ್ವಕ್ಕೆ ಬಂದುವು. ಈ ದೃಷ್ಟಿಯಿಂದ ಜನಪದ ನಂಬಿಕೆಗಳನ್ನು ೧.ಧಾರ್ಮಿಕ ನಂಬಿಕೆಗಳು ೨.ಸಾಂಸ್ಕೃತಿಕ ನಂಬಿಕೆಗಳು ೩. ವೈಯಕ್ತಿಕ ನಂಬಿಕೆಗಳೆಂದು ಮೂರು ವಿಧಗಳಾಗಿ ವಿಭಾಗಿಸಬಹುದು.

**೧. ಧಾರ್ಮಿಕ ನಂಬಿಕೆಗಳು:**

ಮಾನವ ಮನಸ್ಸಿನ ಭಯ ಮತ್ತು ಆತಂಕಗಳು ಧಾರ್ಮಿಕ ನಂಬಿಕೆಗಳಿಗೆ ಮೂಲ. ಇಂತಹ ಸಂದರ್ಭಗಳಲ್ಲಿ ಶಕ್ತಿಯ ರೂಪವಾಗಿ ಹುಟ್ಟಿಕೊಂಡವುಗಳೇ ದೇವರು ಮತ್ತು ದೆವ್ವಗಳು. ಆಗ ದೇವರ ಸ್ವರೂಪ, ಕಾರ್ಯಗಳಿಗೆ ಸಂಬಂಧಿಸಿದಂತೆ ಅನೇಕ ನಂಬಿಕೆಗಳನ್ನು ಹುಟ್ಟುಹಾಕಿದ. ಅಮೂರ್ತ ದೇವರನ್ನು ವಾಸ್ತವ ಜಗತ್ತಿನ ವಸ್ತು ವಿಷಯಗಳೊಂದಿಗೆ ಸಮೀಕರಿಸಿ ಪೂಜಿಸತೊಡಗಿದ. ಉದಾ: ತೆಂಗಿನಕಾಯಿಯನ್ನು ಕಾಲಿನಿಂದ ತುಳಿಯಬಾರದು. ಅದು ಮುಕ್ಕಣ್ಣ. ಬೀಸುವ ಕಲ್ಲನ್ನು ತುಳಿಯಬಾರದು ಅದು ಲಕ್ಷ್ಮೀ.

ಲೌಕಿಕ ಕ್ರಿಯೆಯೊಂದನ್ನು ಸಮರ್ಪಕವಾಗಿ ಮಾಡಲು ಅಥವಾ ನಿಷೇಧಿಸಲು ಅದಕ್ಕೆ ಧಾರ್ಮಿಕ ಚೌಕಟ್ಟನ್ನು ಒದಗಿಸುವುದುಂಟು. ಉದಾ: ಕಾಲನ್ನು ತೊಳೆಯುವಾಗ ಹಿಮ್ಮಡಿ ಪೂರ್ತಿ ನೆನೆಯಬೇಕು, ಇಲ್ಲದಿದ್ದರೆ ಶನಿ ಹಿಡಿದುಕೊಳ್ಳುತ್ತದೆ. ಸಂಜೆ ಹೊತ್ತಲ್ಲಿ ಕಸಗುಡಿಸಿ ಹೊರಹಾಕಬಾರದು, ಲಕ್ಷ್ಮಿ ಹೊರಟು ಹೋಗುತ್ತಾಳೆ. ಮೊದಲನೆಯದರಲ್ಲಿ ಲೌಕಿಕ ಉದ್ದೇಶ ಕಾಲನ್ನು ತೊಳೆದುಕೊಳ್ಳಬೇಕು ಎನ್ನುವುದು. ಎರಡನೆಯದರಲ್ಲಿ ಕತ್ತಲೆಯಲ್ಲಿ ಕಸದೊಂದಿಗೆ ವಸ್ತುಗಳೂ ಹೋಗಬಹುದು ಎನ್ನುವುದು ಕಾರಣವಾಗುತ್ತದೆ.[೧೩]

**೨. ಸಾಂಸ್ಕೃತಿಕ ನಂಬಿಕೆಗಳು:**

ಹುಟ್ಟಿನ ಬಗೆಗೆ ಕುತೂಹಲ, ಸಾವಿನ ಕುರಿತು ಭಯ, ತನ್ನ ಬದುಕನ್ನು ರೂಪಿಸಿದ ಋತುಮಾನಗಳ ಚಲನೆಗಳು ಅನೇಕ ಜೀವನಾವರ್ತನ ಹಾಗೂ ವಾರ್ಷಿಕಾವರ್ತನ ನಂಬಿಕೆಗಳನ್ನು ರೂಪಿಸಿದೆ.

ತೆಂಗಿನಕಾಯಿ ತಿಂದರೆ ಮದುವೆಯಲ್ಲಿ ಮಳೆ ಬರುತ್ತದೆ.

ಆರತಿಯ ದೀಪ ಆರಿದರೆ ಅಪಶಕುನ.

ಉತ್ತರಾಯಣದಲ್ಲಿ ಸತ್ತರೆ ಸ್ವರ್ಗ.

ಆಷಾಢದಲ್ಲಿ ಅತ್ತೆ-ಸೊಸೆ ಒಂದೇ ಬಾಗಿಲಲ್ಲಿ ಓಡಾಡಬಾರದು.

**೩. ವೈಯಕ್ತಿಕ ನಂಬಿಕೆಗಳು:**

ವೈಯಕ್ತಿಕ ನಂಬಿಕೆಗಳು ಮೊದಲಿಗೆ ವ್ಯಕ್ತಿಯೊಬ್ಬನ ಉತ್ಪನ್ನವಾಗಿದ್ದು. ಮುಂದೆ ಸಾಮಾಜೀಕರಣದ ಕಾಕತಾಳೀಯ ಸಂಬಂಧವನ್ನು ಕಂಡುಕೊಂಡು ಒಂದು ಸಂಖ್ಯೆ, ದಿನ, ಉಂಗುರ, ಒಂದು ಬಣ್ಣಗಳ ವೈಯಕ್ತಿಕ ನಂಬಿಕೆಯಾಗಿ ಮಾರ್ಪಡುತ್ತದೆ.

ಉದಾ:

೧. ಶನಿವಾರ ಹೊಸ ಬಟ್ಟೆ ಉಡಬಾರದು.

೨. ೫ ಮೂಲೆ ಮನೆ ಹೊಂದಿದ್ದರೆ ಅಶುಭ.

೩. ಮಂಗಳವಾರ, ಶುಕ್ರವಾರ ಮದುಮಗಳು ತಾಯಿಯ ಮನೆಯಿಂದ ಹೊರಡಬಾರದು.[೧೪]

೪. ವೀರಭದ್ರ ದೇವರ ಸಂಪ್ರದಾಯಸ್ಥರಿಗೆ ಕಪ್ಪುಬಣ್ಣ ಅಶುಭ.

ಜಾನಪದ ಬದುಕಲ್ಲಿ 'ಜಲ' ಎನ್ನುವುದು ಉತ್ತೇಜಕ ಹಾಗೂ ಸಮೃದ್ಧಿಯ ಸಂಕೇತವಾಗಿದ್ದಂತೆ ಜೀವಹತಿಯ ಪ್ರತಿನಿಧಿಯಾಗಿಯೂ ಕೆಲಸ ಮಾಡಿದೆ. ಜನಪದರಿಗೆ ಗಂಗೆ ತಾಯಿ, ಮಾತೆ, ಅಮ್ಮನಾಗಿ ಪೂಜೆಗೊಳ್ಳುತ್ತಾಳೆ. ಅವಳು ಪ್ರಕೃತಿಯ ಸ್ವರೂಪಳು. ಕೃಷಿ ಹಾಗೂ ಕೃಷಿಯ ಉಪವೃತ್ತಿಯನ್ನು ಆಧರಿಸಿದ ಸಮುದಾಯಗಳಲ್ಲಿ, ಹೆಣ್ಣು ಸೃಷ್ಟಿಯ ಸಂಕೇತ. ಗಂಗೆ ಇವರ ಆರಾಧ್ಯ ದೇವತೆ. ಇಂದಿಗೂ ಎಲ್ಲಾ ಗ್ರಾಮದೇವತೆಗಳು ಜಲರೂಪಿಯಾಗಿದ್ದು ಜಲಮೂಲದೊಂದಿಗೆ ನೇರ ಸಂಬಂಧಹೊಂದಿವೆ. ಎಲ್ಲಾ ಜನಪದ ಹಾಗೂ ಬುಡಕಟ್ಟು ಸೃಷ್ಟಿ ಪುರಾಣಗಳು ಸೃಷ್ಟಿಯ ಮೂಲಧಾತುವೇ ನೀರು ಎಂದು ಹೇಳುತ್ತವೆ. ಜಗತ್ತಿನ ಎಲ್ಲಾ ಪ್ರಾಚೀನ ಸಂಸ್ಕೃತಿಗಳು ಕೃಷಿ ಮೂಲವಾದಂತವು ನದಿ, ಮಳೆ, ಅಂತರಜಲದಂತಹ ಪ್ರಕೃತಿಯ ಅಂಶಗಳು ಇವುಗಳ ವಿಕಾಸದ ಹಾದಿಯಲ್ಲಿ ಅವಶ್ಯವಾಗಿದ್ದವು. ನೀರು ಕೇವಲ ಪ್ರಾಕೃತಿಕ ಪದಾರ್ಥವಾಗಿರದೇ ಜೀವ ಜಲದ ಪೋಷಣೆ ಹಾಗೂ ಸಂವರ್ಧನೆಗೆ ಕಾರಣವಾಗಿತ್ತು. ನೀರಿನ ಬಹೂಪಯೋಗಿ ಶಕ್ತಿ ಸಾಧ್ಯತೆಗೂ ಮಾನವ ಸಮಾಜ ವಿಕಾಸಕ್ಕೂ ನೇರ ಸಂಬಂಧವಿದೆ. ನೀರು ತನ್ನ ಪ್ರಾಕೃತ್ರಿಕ ರೂಪಗಳಾದ ನದಿ, ಕೆರೆ, ಬಾವಿ, ಝರಿ, ಸಮುದ್ರ, ಮಳೆಗಳ ಮೂಲಕ ಫಲವಂತಿಕೆಯ ಸ್ವರೂಪವನ್ನು ಪೋಷಣೆಯ ಸ್ವರೂಪವನ್ನು ಪಡೆದುಕೊಂಡಿದೆ. ಜನ ಸಮುದಾಯಗಳು ಧಾರ್ಮಿಕ ಹಾಗೂ ಸಾಮಾಜಿಕ ನೆಲೆಗಳಲ್ಲಿ ಪವಿತ್ರ-ಅಪವಿತ್ರ, ಶುಭ-ಅಶುಭ, ಸೂತಕ-ಶುದ್ಧೀಕರಣ ಇತ್ಯಾದಿಯಾಗಿ ಬಿಂಬಿತವಾಗಿವೆ.[೧೫]

ಕೆರೆಯ ಬಗೆಗೆ ಇರುವ ಭಾರತದ ಅತ್ಯಂತ ಪ್ರಾಚೀನವಾದ ಉಲ್ಲೇಖವು ಸಂಖ್ಯಾಯನ ಗೃಹ್ಯಸೂತ್ರದಲ್ಲಿದೆ. ವೈದಿಕ ಆಚರಣೆಗಳನ್ನು ನಡೆಸಿ ಋಗ್ವೇದದ ಮಂತ್ರಗಳನ್ನು ಉಚ್ಚರಿಸಿ ಮಳೆಯ ಅಧಿದೇವತೆಯಾದ ವರುಣನನ್ನು ಮತ್ತು ಇತರ ದೇವತೆಗಳನ್ನು ಸ್ತುತಿಸಿದ ನಂತರದಲ್ಲಿ ಕೊಳ ಮತ್ತು ಬಾವಿಗಳನ್ನು ಉಪಯೋಗಿಸಬೇಕು.[೧೬] ಅಗ್ನಿ ಪುರಾಣವು ಸಹ ಈ ಅಭಿಪ್ರಾಯವನ್ನು

ಅನುಮೋದಿಸುತ್ತದೆ. ಹಾಗೂ ಕೆಲವು ವಿಧಿ ಮತ್ತು ಆಚರಣೆಗಳನ್ನು ಕುರಿತ ಮಾಹಿತಿಗಳನ್ನು ನೀಡುತ್ತದೆ. ಅದರಂತೆ ಕೆರೆ, ಬಾವಿ ಮುಂತಾದ ಜಲಕ್ಕೆ ಸಂಬಂಧಿಸಿದ ರಚನೆಗಳನ್ನು ಕೈಗೆತ್ತಿಕೊಂಡಾಗ, ಅಂತಹ ಜಾಗದಲ್ಲಿ ಎಂಟು ಮಡಕೆಗಳಲ್ಲಿ ಎಂಟು ಬಗೆಯ ನೀರನ್ನು ತುಂಬಿಸಿ, ಎಂಟು ದಿಕ್ಕುಗಳಲ್ಲಿ ಅವುಗಳನ್ನು ಸ್ಥಾಪಿಸಬೇಕು. ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ಮಳೆಯ ಅಧಿದೇವತೆ ವರುಣ ಮೂರ್ತಿಯನ್ನು ಊರಿನಲ್ಲಿ ಮೆರವಣಿಗೆ ಮಾಡಿ ನಂತರ ಕೊಳದ ನೀರಿನಲ್ಲಿ ಮುಳುಗಿಸಬೇಕು.[೧೭] (ಸ್ಥಾಪಿಸಬೇಕು) ಈ ರೀತಿಯಾಗಿ ವಿಧಿಗಳನ್ನು ಆಚರಿಸಿದವನಿಗೆ ಅಶ್ವಮೇಧ ಯಾಗವನ್ನು ಮಾಡಿದ ಫಲವು ಲಭಿಸುತ್ತದೆ ಎಂಬ ನಂಬಿಕೆಗಳಿವೆ.

ಮಳೆಯ ಮೂಲಕ ಬರುವ ನೀರು ಮೊದಲಿಗೆ ಹೊಳೆ-ಹಳ್ಳಗಳಲ್ಲಿ ತುಂಬಿ ಹರಿಯುತ್ತಿದೆ. ಭಾರತೀಯರಿಗೆ ಪ್ರತಿಯೊಂದು ಹೊಳೆ-ಹಳ್ಳಗಳು ಪವಿತ್ರವಾದವುಗಳಾಗಿವೆ. ಹರಿಯುವ ಹೊಳೆ-ಹಳ್ಳಗಳು ಶೀಲ ಹಾಗೂ ಪರಿಶುದ್ಧತೆಯ ಸಂಕೇತವಾಗಿವೆ. ಅವುಗಳಲ್ಲಿ ಸ್ನಾನ ಮಾಡಿದರೆ ಪುಣ್ಯ ಬರುವುದೆಂದು ನಂಬಲಾಗಿದೆ. 'ಗಂಗಾ ಸ್ನಾನ, ತುಂಗಾ ಪಾನ' ಎಂಬ ಗಾದೆ ಆಯಾ ನದಿಗಳ ಮಹತ್ವವನ್ನು ಸೂಚಿತ್ತದೆ. ಹೊಳೆ-ಹಳ್ಳಗಳು ತುಂಬಿ ಹರಿದಾಗ ಗಂಗಾದೇವಿಯನ್ನು ಪೂಜಿಸಿ ಬಾಗೀನ ಅರ್ಪಿಸುವ ಪರಂಪರೆ ಹಿಂದಿನಿಂದಲೂ ನಡೆದು ಬಂದಿದೆ. ಪ್ರತಿಯೊಂದು ನದಿಯ ಹಿಂದೆ ಐತಿಹ್ಯ-ನಂಬಿಕೆ, ಕಥೆಗಳಿವೆ. ನದಿಯು ಗುಪ್ತಗಾಮಿನಿಯಾಗಿ ಹರಿಯುತ್ತದೆ. ಎಲ್ಲೋ ಹುಟ್ಟಿ ಎಷ್ಟೋ ಮೈಲುಗಳವರೆಗೆ ಅಂಕು-ಡೊಂಕಾಗಿ ಹರಿದು ಸಮುದ್ರ ಸೇರುತ್ತದೆ. ಆಧುನಿಕ ಕಾಲದಲ್ಲಿ ಅಣೆಕಟ್ಟುಗಳನ್ನು ಕಟ್ಟಿ ನೀರು ಸಂಗ್ರಹಿಸಿ ಕಾಲುವೆಗಳ ಮೂಲಕ ಹರಿಸಿ ನೀರಾವರಿ ಕೃಷಿ ಮಾಡಲಾಗುತ್ತಿದೆ. ಈಗೀಗ ನದಿಗಳು ತುಂಬಿ ಹರಿದುದೇ ಕಡಿಮೆ. ನದಿ ನೀರು ರಾಜಗಾಂಭೀರ್ಯದಿಂದ ನಿಧಾನವಾಗಿ ಪ್ರವಹಿಸುತ್ತದೆ. ಹಳ್ಳದ ನೀರು ಬೇಗ ಬಂದು ಬೇಗ ಇಳಿಯುತ್ತದೆ. ಹೊಳೆ-ಹಳ್ಳಗಳು ನೀರು ಬಹುಪಯೋಗಿಯಾಗಿದೆ.[೧೮]

. ಕೆರೆ-ಬಾವಿಗಳು ಜನರ ಸಂಸ್ಕೃತಿಗೆ ವಿಶಿಷ್ಟವಾದುವುಗಳಾಗಿವೆ. ಬಯಲುಸೀಮೆಯವರು ಬದುಕಿಗೆ ಕೆರೆ-ಬಾವಿಗಳು ಜೀವಜಲವಾಗಿವೆ. ಅವು ಅವರಿಗೆ ಪವಿತ್ರವಾಗಿವೆ. ಅವುಗಳೊಂದಿಗೆ ಅವರು ಭಾವನಾತ್ಮಕ ಸಂಬಂಧ ಹೊಂದಿರುವರು.

ಕೆರೆಯಂ ಕಟ್ಟಿಸು ಬಾವಿಯಂ ಸವೆಸು
ದೇವಗಾರಮಂ ಮಾಡಿಸು.[೧೯]

ಇದು ಶಾಸನವೊಂದರ ಮೊದಲ ಸಾಲು. ಆಗಿನ ಕಾಲದ ದೊರೆ ಪಾಲಿಸಬೇಕಾದ ಕರ್ತವ್ಯಗಳಲ್ಲಿ ಕೆರೆ-ಬಾವಿಗಳಿಗೆ ಮೊದಲು ಆದ್ಯತೆ ನೀಡಲಾಗಿದೆ. ಇದು ಅಂದಿನ ಕಾಲದ ಆಚರಣೆಗಳಲ್ಲಿ ಕೆರೆ-ಬಾವಿಗಳಿಗೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮಹತ್ವವನ್ನು ಅತ್ಯಂತ

ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ. ಕೆರೆ ಕಟ್ಟಿಸಿ ಜನರಿಗೆ ಅನುಕೂಲ ಮಾಡಿಕೊಡುವುದು ಪುಣ್ಯಕಾರ್ಯವಾಗಿದ್ದು ಅದನ್ನು ದಾನವಾಗಿ ಕಟ್ಟಿಸಿ ಕೊಡಲಾಗುತ್ತಿತ್ತು. ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತರಾಗುವವರೋ ಅವರು ಅಶ್ವಮೇಧ ಯಾಗದ ಫಲವನ್ನು ಪಡೆಯುತ್ತಾರೆ ಎಂಬ ನಂಬಿಕೆಯನ್ನು ಮಹಾಭಾರತ ತಿಳಿಸುತ್ತದೆ.[೨೦]

ಹಿಂದಿನ ಕಾಲದ ದೊರೆಗಳು, ಊರಿನ ಪ್ರಮುಖರು, ಹಣವುಳ್ಳವರು, ಪರೋಪಕಾರಿಗಳು ಜನರ ಹಿತಕ್ಕಾಗಿ ಕೆರೆಗಳನ್ನು ಕಟ್ಟಿಸುತ್ತಿದ್ದರು. ಇಂತಹ ಎಷ್ಟೋ ಕೆರೆಗಳು ಪ್ರಸ್ತುತ ಜಿಲ್ಲೆಯಲ್ಲಿ ಕಂಡುಬರುತ್ತವೆ. ಅಲ್ಲಮಪ್ರಭು ತಮ್ಮ ಒಂದು ವಚನದಲ್ಲಿ ಈ ರೀತಿ ಹೇಳಿದ್ದಾರೆ,

ತನುವೆಂಬ ಏರಿಗೆ ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ
ಕೆರೆಯ ಕಟ್ಟಬಲ್ಲವನಾರನೂ ಕಾಣೆ
ನಾ ಕಟ್ಟಿದ ಕೆರೆ ಸ್ಥಿರವಾಗಿತ್ತು ಗುಹೇಶ್ವರ.[೨೧]

ಎಂದು ಭೂಮಿಯ ಮೇಲಿನ ಕೆರೆಯೊಂದಿಗೆ ಮನದೊಳಗೆ ಕೆರೆಕಟ್ಟುವ ವಿಚಾರವನ್ನು ಶರೀರಕ್ಕೆ ಹೋಲಿಸಿ ಅರ್ಥಪೂರ್ಣವಾಗಿ ಹೇಳಿದ್ದಾರೆ. ಕೆರೆಗಳ ನಿರ್ಮಾಣದ ಇತಿಹಾಸ ಬಹಳ ದೀರ್ಘ ಹಾಗೂ ರೋಚಕವಾದುದಾಗಿದೆ.

ನೀರಿಗೆ ಬಲಿ ಕೊಡುವ ಆಚರಣೆಯು ಕೇವಲ ಭಾರತಕ್ಕೆ ಮಾತ್ರ ಸೀಮಿತವಲ್ಲ. ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ನೀರಿಗೆ (ಕೆರೆಗೆ ಹಾರ)ಬಲಿ ಕೊಡುವ ವಿಧಿಗಳು ಆಚರಣೆಯಲ್ಲಿ ಇದ್ದದನ್ನು ಜಾನಪದ ವಿದ್ವಂಶರು ದಾಖಲಿಸಿದ್ದಾರೆ. ಈ ನೆಲೆಯಲ್ಲಿ ಬಲಿಯ ಆಚರಣೆಯನ್ನು ಕುರಿತು ಆಲೋಚಿಸಿದರೆ ತೆರೆದುಕೊಳ್ಳುವ ಸಂಗತಿಗಳು ಬೆರಗು ಹುಟ್ಟಿಸುತ್ತವೆ. ಬಲಿ ಆಚರಣೆಯನ್ನು ನೀರು ಮತ್ತು ಮನುಷ್ಯನ ಮೂಲ ಪ್ರವೃತ್ತಿಗಳ ಸಂದರ್ಭದಲ್ಲಿ ಇಟ್ಟು ಚರ್ಚಿಸಬೇಕಾದ ಅಗತ್ಯವಿದೆ. ಪ್ರಕೃತಿಯ ವಿಲಕ್ಷಣ ಗುಣ ಧರ್ಮಗಳನ್ನು ನೀರಿನಷ್ಟು ಸಮರ್ಥವಾಗಿ ಪ್ರತಿಫಲಿಸುವ ಮತ್ತೊಂದು ವಸ್ತುವನ್ನು ನಾವು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಈ ಕಥಾನಕಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಕಂಡು ಬಂದ ಸಾಮಾನ್ಯ ಅಂಶಗಳನ್ನು ಹೀಗೆ ಗುರುತಿಸಬಹುದು.

೧. ಊರಿನ ಉಪಕಾರಕ್ಕಾಗಿ ಕೆರೆ/ಬಾವಿ/ಕುಂಟೆ/ಕೋಟೆ ಕಟ್ಟಿಸುವುದು.

೨. ಗಂಗೆಯ ಅತೃಪ್ತಿ(ಕೆರೆ ಕಟ್ಟಿಸಿದರೂ ಕೆರೆಗೆ ನೀರು ಬರುವುದಿಲ್ಲ ಅಥವಾ ನೀರು ಬಂದರೆ ಕಟ್ಟು ನಿಲ್ಲುವುದಿಲ್ಲ.

೩. ಕಟ್ಟು ಕಟ್ಟಿಸಿದವನ ಮನೆಯ ಹೆಣ್ಣೊಂದು ಗಂಗೆಪೂಜೆಗೆ(ಕಟ್ಟಡಕ್ಕೆ) ಬಲಿ ಹೋಗುವುದು.(ಈ ಬಲಿಗಳಲ್ಲಿ ಹೆಚ್ಚು ಸೊಸೆಯರು, ಹೊನ್ನಮ್ಮ, ಚೆನ್ನಮ್ಮ, ಕೆಂಚಮ್ಮಳು ಕಥೆಯಲ್ಲಿ ಮಾತ್ರ ಮನೆಯ ಹೆಣ್ಣುಮಕ್ಕಳು ಬಲಿ ಹೋಗಿದ್ದಾರೆ.)

೪. ಹೆಣ್ಣಿನ ಬಲಿಯ ನಂತರ ನೀರು ಬರುತ್ತೆ/ಕಟ್ಟು ಅಥವಾ ಕಟ್ಟಡ ನಿಲ್ಲುತ್ತೆ

೫. ಬಲಿಯಾದ ಹೆಣ್ಣು ಒಂದು ಶಕ್ತಿಯಾಗಿ ದೇವತೆಯಾಗಿ ಆ ಕೆರೆ ಅಥವಾ ಕಟ್ಟಡದಲ್ಲಿ ನೆಲೆಸುವುದು.

ಕೆರೆಗೆ ಹಾರದಂತಹ ಆಶಯದ ಕಥನಗೀತೆಗಳು ಗದಗ ಜಿಲ್ಲೆಯ ಡಂಬಳ, ಡೋಣಿ, ಗದಗ ಭಾಗಗಳಲ್ಲಿ ಕಂಡುಬಂದಿವೆ. ಪ್ರತಿಯೊಂದು ಭಾಗದಲ್ಲಿಯೂ ಇಂಥ ಒಂದು ಘಟನೆ ನಡೆಯಿತೇನೋ ಎನ್ನವಷ್ಟರ ಮಟ್ಟಿಗೆ ಪ್ರಾದೇಶಿಕ ಸಂವೇದನೆಗಳನ್ನು ಕಟ್ಟಿಕೊಡುತ್ತವೆ. ಕೆರೆಗೆ ಹಾರದ ಕಥನದಲ್ಲಿ ಕಟ್ಟಿಸಿದ ಕೆರೆಗೆ ನೀರು ಬರದೆ ಮಲ್ಲನ ಗೌಡ ಹೊತ್ತಿಗೆ ತೆಗೆಸಿ ಕಾರಣ ಕೇಳಿದಾಗ ಹಿರಿ ಸೊಸೆಯನ್ನು ಬಲಿ ಕೊಡಬೇಕು ಎನ್ನುವ ಪರಿಹಾರ ನುಡಿಯುತ್ತದೆ. ಆದರೆ ಹಿರಿ ಸೊಸೆ ಬದಲು ಕಿರಿಸೊಸೆ ಭಾಗೀರಥಿಯನ್ನು ಬಲಿ ಕೊಡುತ್ತಾರೆ.[೨] ಕಾಕತಾಳೀಯವಾಗಿ ಭಾಗೀರಥಿ ಎನ್ನುವುದು ಗಂಗೆಯ ಇನ್ನೊಂದು ಹೆಸರು.

ಒಟ್ಟಿನಲ್ಲಿ ಐತಿಹ್ಯಗಳಲ್ಲಿ ಎರಡು ವಿಧದ ಪ್ರಕ್ರಯೆಗಳು ನಡೆಯುತ್ತವೆ. ಚಾರಿತ್ರಿಕ ಐತಿಹ್ಯ ಎಂದು ನಾವು ಯಾವುದನ್ನು ಕರೆಯುತ್ತೇವೆಯೋ ಅಲ್ಲಿ ಚಾರಿತ್ರಿಕ ಅಂಶ ಮಸುಕಾಗಿದ್ದು, ಕಾಲ್ಪನಿಕ ಅಂಶವೇ ಪ್ರಧಾನವಾಗಿರುತ್ತದೆ. ಇದು ನೇರವಾಗಿ ಚರಿತ್ರೆಗೆ ಸಂಬಂಧಿಸಿದ್ದು ಎಂದಾದರೂ ಅಲ್ಲಿ ಸಿಗುವ ಚಾರಿತ್ರಿಕ ಅಂಶ ತೀರ ಕಡಿಮೇ. ಚರಿತ್ರೆಯ ಬಹುತೇಕ ಅಂಶ ವಿರೂಪಗೊಂಡಿರುವುದೇ ಇಲ್ಲಿ ಕಂಡುಬರುತ್ತದೆ. ಇದಕ್ಕೆ ಪ್ರತಿಯಾಗಿ ಚರಿತ್ರೆಗೂ ಐತಿಹ್ಯಕ್ಕೂ ಏನೇನೂ ಸಂಬಂಧವಿಲ್ಲ ಎಂದು ಕಂಡುಬರುವ ಐತಿಹ್ಯಗಳಲ್ಲಿ ಚರಿತ್ರಕಾರರಿಗೆ, ವಿಜ್ಞಾನಿಗಳಿಗೆ, ಸಮಾಜ ವಿಜ್ಞಾನಿಗಳಿಗೆ ಬೇರೆಡೆ ದೊರಕದ ಅಮೂಲ್ಯ ಆಧಾರಗಳು ಅಡಗಿರುತ್ತವೆ. ಇಂದು ಜನರಲ್ಲಿ ಪ್ರಚಲಿತವಿರುವ ಅನೇಕ ನಂಬಿಕೆ, ಆಚಾರ, ವಿಚಾರಗಳ ಹಿನ್ನಲೆಯನ್ನು ನಮಗೆ ಯಾವ ಚರಿತ್ರೆಯ ಪುಸ್ತಕಗಳೂ ತಿಳಿಸಲಾರವು. ಆದರೆ ಐತಿಹ್ಯಗಳು ಅಂತಹ ಪ್ರಮುಖ ಕೆಲಸ ಮಾಡುತ್ತವೆ. ಅವು ತಮ್ಮದೇ ಆದ ರೀತಿಯಲ್ಲಿ ಸಾಮಾಜಿಕ ಕಟ್ಟುಪಾಡುಗಳನ್ನು ಉಳಿಸಿಕೊಂಡು ಬರುತ್ತವೆ.[೨೩]

ಜನಪದ ಗದ್ಯಕತೆಗಳಲ್ಲಿ 'ಐತಿಹ್ಯ' ಒಂದು ಮುಖ್ಯವಾದ ಪ್ರಕಾರ. ರೂಪದಲ್ಲಿ ತೀರಾ ಸರಳವಾಗಿದ್ದು ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ ಅಥವಾ ಘಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕತೆಗಳನ್ನು 'ಐತಿಯ್ಯ' ಎನ್ನುತ್ತವೆ. 'ಐತಿಹ್ಯ' ವೂ 'ಇತಿಹಾಸ' ವೂ ಒಂದೇ ಮೂಲದ ಪದಗಳು. ಇತಿಹಾಸಕ್ಕೆ ಈಗಿನ ಚರಿತ್ರೆ ಎಂಬ ಪದ ಸಂವಾದಿಯಾಗಿದೆ. ಇತಿಹಾಸ ವಾಸ್ತವಾಂಶಗಳನ್ನು

ನಿರೂಪಿಸುತ್ತದೆ. ಇಲ್ಲಿ ಕಲ್ಪನೆಗೆ ಎಡೆಯಿಲ್ಲ. ಐತಿಹ್ಯಗಳನ್ನು ನಿಜವಗಿ ನಡೆದುವೆಂದೇ ನಂಬಿ ಜನಪದರೂ ನಿರೂಪಿಸುತ್ತಾರಾದರೂ ಇವುಗಳಿಗೆ ಯಾವುದೇ ಲಿಖಿತ ಆಧಾರಗಳು ಇರುವುದಿಲ್ಲ. ಇವು ಕಂಠಸ್ಥ ಸಂಪ್ರದಾಯದಲ್ಲಿ ಬೆಳೆಯುತ್ತ ಬಂದಿವೆ. ಇತಿಹಾಸ, ಒಂದು ಘಟನೆ ಖಚಿತವಾಗಿ ನಡೆದದ್ದು ಎಂಬುದನ್ನು ಆಧಾರಗಳಿಂದ ಸ್ಪಷ್ಟವಾಗಿ ತಿಳಿಸುತ್ತದೆ. ಆದರೆ ಐತಿಹ್ಯದಲ್ಲಿ ನಿರೂಪಿತವಾಗುವ ವಿಷಯಗಳೆಲ್ಲವೂ ನಿಜವೆಂದೇ ಹೇಳುವುದಕ್ಕೆ ಗಟ್ಟಿಯಾದ ಆಧಾರಗಳು ಸಿಗುವುದಿಲ್ಲ. ಎಲ್ಲ ಐತಿಹ್ಯಗಳಲ್ಲಿ ಸತ್ಯಾಂಶ ಹಾಗೂ ಕಾಲ್ಪನಿಕ ಎಂಬುದನ್ನು ವಿಶ್ಲೇಷಣೆಯಿಂದ ಕಂಡುಕೊಳ್ಳಬಹುದು.[೨೯]

ಐತಿಹ್ಯದಲ್ಲಿ ಕತೆಗೆ ಕಾರಣವಾದ ವಸ್ತು ಮೊದಲೇ ವಾಸ್ತವ ಪ್ರಪಂಚದಲ್ಲಿ ನಡೆದಿರುತ್ತದೆ ಅಥವಾ ಹಾಗೆಂದು ಜನಪದರು ಭಾವಿಸುತ್ತಾರೆ. ಯಾವುದೋ ಒಂದು ನಿರ್ದಿಷ್ಟತೆಗೆ ಇಡೀ ಕತೆ ಬದ್ಧವಾಗಿರುತ್ತದೆ. ಐತಿಹ್ಯಗಳ ಕ್ರಿಯೆ ವಾಸ್ತವ ಪ್ರಪಂಚಕ್ಕೆ ಸಂಬಂಧಿಸುವುದರಿಂದ ಇದು ಕೇಳುವವರಿಗೆ ತೀರಾ ಹತ್ತಿರ ಮತ್ತು ಅದರ ಪರಿಣಾಮ ನೇರ, ಗಾಢತರ, ಭಾವನಾತ್ಮಕ.

ವ್ಯಕ್ತಿ, ಘಟನೆ, ಸ್ಥಳ, ಚರಿತ್ರೆ, ಸಂಸ್ಕೃತಿ, ಸಮಾಜ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ.

ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಶಿರಹಟ್ಟಿ ಗ್ರಾಮವನ್ನು ಸ್ಥಾಪಿಸಿದನೆಂದೂ, ಲಕ್ಕುಂಡಿಯಲ್ಲಿ ನಲೆಸಿದ್ದನೆಂದೂ ಇಲ್ಲಿನ ಐತಿಹ್ಯಗಳು ತಿಳಿಸುತ್ತವೆ. ಮಾನವ ನಾಗರಿಕತೆಯಲ್ಲಿ ಅಲೆಮಾರಿ ಜೀವನವನ್ನು ಮರೆತು ಒಂದಡೆ ನೆಲೆನಿಂತು ಕೃಷಿ, ಪಶುಸಂಗೋಪನೆಯ ಕಾಲವನ್ನು ಇತಿಹಾಸಕಾರರು ದ್ವಾಪರಯುಗದೊಡನೆ ಹೆಣೆಯುತ್ತಾರೆ. ಕುರುಕ್ಷೇತ್ರದಲ್ಲಿನ ಬ್ರಹ್ಮಸರೋವರ, ಜ್ಯೋತಿಸರೋವರಗಳನ್ನು ಸೌಂದರ್ಯದಲ್ಲಿ ಹೋಲುವ 'ಭೀಷ್ಮಕೆರೆ' ಇಂದಿಗೂ ಗದಗಿನ ಆಕರ್ಷಣೆಗಳಲ್ಲಿ ಒಂದಾಗಿದೆ. ಇಂದು ಗದಗಿನಲ್ಲಿ 'ಭೀಷ್ಮಕೆರೆ' ಇರುವ ಪ್ರದೇಶದಲ್ಲಿ ಮಹಾಭಾರತದ ಮಹಾನಾಯಕರಾದ ಭೀಷ್ಮಾಚಾರ್ಯರು ಯಜ್ಞಮಾಡುತ್ತಿದ್ದರೆಂದು ಹೇಳಲಾಗಿದೆ. ರೋಣವು ದ್ರೋಣಾಚಾರ್ಯರಿಗೆ ಸಂಬಂಧಪಟ್ಟದ್ದೆಂದೂ, ದ್ರೋಣ ಎಂಬ ಪದವೇ 'ರೋಣ'ವಾಯಿತೆಂದು, ಇಲ್ಲಿ ದ್ರೋಣನಿಗೆ ದೇವಾಲಯವನ್ನು ಕಟ್ಟಲಾಗಿದೆ. ೧೦೫ ಮಹಾಜನರನ್ನು ಹೊಂದಿದ್ದ ಅಗ್ರಹಾರವೂ ಆಗಿತ್ತೆಂದೂ ಜನ ತಿಳಿಸುವುದುಂಟು. ರೋಣದಲ್ಲಿ ಪುರಾಣ ಪ್ರಸಿದ್ಧ ದ್ರೋಣಾಚಾರ್ಯರ ಗುಡಿಯ ಬಳಿಯ ಸಭಾಗೃಹ ಮತ್ತು ಅಭ್ಯಾಸಗೃಹಗಳು ಕಂಡುಬಂದಿವೆ.[೨೫]

ಇಂದಿನ ಗದುಗಿಗೆ ಮೊದಲು ಕೃತಪುರವೆಂದೂ ಹೆಸರಿತ್ತು. ಈ ಕೃತಪುರದಲ್ಲಿ ಲಕ್ಷಕುಂಡಲಿ ಹಾಕಿ ಯಾಗ ಮಾಡಿದ ಸ್ಥಳವನ್ನು ಲಕ್ಕುಂಡಿ ಅಥವಾ ಲೋಹಖಂಡಪುರ ಎಂದೂ ಕರೆಯುತ್ತಾರೆ. ಗದಗಿನಲ್ಲಿ ಜನಮೇಜಯ ಮಹಾರಾಜನು ಸರ್ಪಯಾಗ ಮಾಡಿದಾಗ ಅದರ ಭಸ್ಮವನ್ನು ಶೇಖರಿಸಿದ ಸ್ಥಳಕ್ಕೆ ಹಾಳದಿಬ್ಬವೆಂದೂ ಕರೆಯುತ್ತಾರೆ. ಒಂದು ಕೋಟಿ(ಹಲವು) ಯಜ್ಞಮಾಡಿದ ಸ್ಥಳ 'ಕುರ್ತುಕೋಟಿ'

ಎನಿಸಿಕೊಂಡಿದ್ದು ಈ ಯಜ್ಞದ ವೇಳೆಯಲ್ಲಿ ಹುಂಡಿಗಳನ್ನು ಶೇಖರಿಸಿದ ಸ್ಥಳವೇ ಈಗಿನ 'ಅಸುಂಡಿ'. ಕಾಯಿಪಲ್ಯ ಮುಂತಾದವುಗಳನ್ನು ಇಡಲು ಕಟ್ಟಿದ ಸ್ಥಳ 'ಜಿಂಕದಕಟ್ಟಿ'. ಬೆಟ್ಟದೋಪಾದಿಯಲ್ಲಿ ಯಜ್ಞಸಾಮಾಗ್ರಗಳನ್ನು ಸಂಗ್ರಹಿಸಿದ ಸ್ಥಳವೆ 'ಬೆಟಗೇರಿ'. ಸಾವಿರಾರು ಪ್ರಜೆಗಳು(ನರರು) ಇದ್ದ ಸ್ಥಳವೇ 'ನರಸಾಪುರ'. ಯಜ್ಞ ಕಾಲದಲ್ಲಿ ಜನರು ಊಟಮಾಡಿದ ಪತ್ರಾವಳಿ ಇತ್ಯಾದಿಗಳನ್ನು ಚೆಲ್ಲಿದ ಸ್ಥಳ 'ಮಲ್ಲಸಮುದ್ರ'. ಯಜ್ಞದಲ್ಲಿ ಬೆಳ್ಳಿಯ ಕೊಪ್ಪರಿಗೆಯಲ್ಲಿ ಹಾಲು ಕಾಯಿಸಿದ ಸ್ಥಳ 'ಬೆನ್ನಿಕೋಪ್ಪ' ನಾಗಾರ್ಜುನರೆಂಬ ರಾಕ್ಷಸರು ವಾಸಮಾಡಿದ ಸ್ಥಳ 'ನಾಗಾವಿ'. ಶ್ರೀ ವೀರನಾರಾಯಣನು ನಾಗಾರ್ಜುನುರ ಸಂಹಾರ ಮಾಡಿದ ಮೇಲೆ ಅವರ ಕಳಸ ಬಿದ್ದ ಸ್ಥಳ 'ಕಳಸಾಪುರ'. ನಾಗಾರ್ಜುನರ ಧಡ ಬಿದ್ದ ಸ್ಥಳ 'ಬೆಳದಡಿ'. ಶಿಬಿಚಕ್ರವರ್ತಿಯು ಕಪೋತ ಪಕ್ಷಿಗೆ ಆಶ್ರಯ ಕೊಟ್ಟು, ರಕ್ಷಣೆಗಾಗಿ ತನ್ನ ದೇಹಚ ಮಾಂಸವನ್ನು ಕೊಟ್ಟ ಸ್ಥಳ 'ಕಪೋತಗುಡ್ಡ' ಅಥವಾ ಕಪ್ಪತ್ತಗುಡ್ಡ.[೨೬] ಹೀಗೆ ವ್ಯಕ್ತಿ ಮತ್ತು ಸ್ಥಳವನ್ನಾಧರಿಸಿದ ಐತಿಹ್ಯಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ.

ಸ್ಥಳನಾಮಗಳಿಗೆ ಸಂಬಂಧಿಸಿದ ಐತಿಹ್ಯಗಳ ಹಿನ್ನೆಲೆಯಲ್ಲೂ ಶುದ್ಧ ಕಲ್ಪನೆಯೇ ಇರಬಹುದು. ಈ ಹೆಸರುಗಳ ವೈಜ್ಞಾನಿಕ ನಿಷ್ಪತ್ತಿ, ನಿಜಕಾರಣಗಳು ಬೇರೆಯೇ ಇರಬಹುದು. ಗದಗ ಶಬ್ದದ ಜನಜನಿತವಾದ ಐತಿಹ್ಯ ಮತ್ತಷ್ಟು ಸ್ವಾರಸ್ಯವಾಗಿದೆ. ಈಗಿರುವ ತೋಂಟದಾರ್ಯ ಸ್ವಾಮಿಗಳ ಮಠವು ಆಗ ನಿಬಿಡ ಅರಣ್ಯಮಧ್ಯದಲ್ಲಿತ್ತು. ಆ ಸುತ್ತಮುತ್ತಲಿನ ಪ್ರದೇಶವು ಡಂಬಳ ಸಂಸ್ಥಾನಿಕರ ಆಧಿಪತ್ಯಕೊಳಪಟ್ಟಿತ್ತು. ಒಮ್ಮೆ ಸಂಸ್ಥಾನಿಕರು ಬೇಟೆಗೆ ಹೊರಟು ಶ್ರೀಗಳ ಮಠದ ಮುಂದೆ ಹಾಯ್ದುಹೋಗುತ್ತಿರುವಾಗ ಆ ಮಠದ ಬಾಗಿಲನ್ನು ಹೆಬ್ಬುಲಿಯೊಂದು ಕುಳಿತು ಕಾಯುತ್ತಿತ್ತು. ಕುತೂಹಲಕಾರಿಗಳಾದ ಸಂಸ್ಥಾನಿಕರು ಈ ಮಠದ ಬಳಿ ಬಂದಾಗಲೂ ಅವರಿಗೆ ಅದರಿಂದ ಅಪಾಯ ಉಂಟಾಗದಿದ್ದುರಿಂದ ಇದು ತಪಸ್ವಸಿಗಳ ತಾಣವಿರಬೇಕೆಂದು ಭಾವಿಸಿ ಧೈರ್ಯದಿಂದ ಮಠದೊಳಗೆ ಪ್ರವೇಶಿಸಿ ಧ್ಯಾನಸಕ್ತರಾಗಿದ್ದ ತಪಸ್ವಿಗಳಿಗೆ ನಮಿಸಿ ಸಂಸ್ಥಾನಿಕರು 'ಪೂಜ್ಯರೇ, ಎಲ್ಲವೂ ಕ್ಷೇಮವೇ; ಆದರೆ ನನಗೆ ಸಂತತಿಯಿಲ್ಲ ಆ ಕೊರತೆಯನ್ನು ನೀಗಿಸಿ ಅನುಗ್ರಹಿಸಬೇಕು' ಎಂದು ಬೇಡಿಕೊಂಡರು. ಆಗ ತಪಸ್ವಿಗಳು "ನಿನ್ನ ಬಯಕೆ ಈಡೇರುವುದು" ಎಂದೂ ಆಶೀರ್ವದಿಸಿದರು. ಅಲ್ಪ ಕಾಲದಲ್ಲೆ ಸಂಸ್ಥಾನಿಕರು ಅವರ ಆಶೀರ್ವಾದದ ಫಲ ಪಡೆದರು. ಕೂಡಲೆ ಮಠಕ್ಕೆ ವಿಸ್ತರಿಸಿದ್ದ ತಮ್ಮ ಹೊಲವನ್ನು ದಾನವಾಗಿ ಮಠಕ್ಕೆ ಕೊಟ್ಟರಂತೆ. ಕಾಲಾಂತರದಲ್ಲಿ ಆ ತಪಸ್ವಿಗಳು ಸಮಾಧಿಸ್ಥರಾದರು. ಆಗ ಅವರ ಗದ್ದುಗೆಗೆ(ವಂದಿಸಲು)ಅಮವ್ಯಾಸೆ, ಹುಣ್ಣಿಮೆ, ತಿಥಿ ದಿನಗಳಲ್ಲಿ ಸಂಸ್ಥಾನಿಕರು ಮತ್ತು ಸುತ್ತಮುತ್ತಲಿನ ಜನಸಮೂಹವು ನಡೆದುಕೊಳ್ಳಲು ಪ್ರಾರಂಭಿಸಿದರು. ಆಗ ತಾವು 'ಗದ್ದುಗೆಗೆ ಹೋಗುತ್ತೇವೆ ಎಂಬುದಾಗಿ ಹೇಳಲಾಗಿ ಈ ಸ್ಥಳಕ್ಕೆ 'ಗದಗು' ಎಂಬ ಹೆಸರು ಬಂದಿತ್ತೆಂದು ಐತಿಹ್ಯದಿಂದ ತಿಳಿದುಬರುತ್ತದೆ.[೨೭]

ಚಾರಿತ್ರಿಕ ವ್ಯಕ್ತಿಗಳನ್ನು, ಘಟನೆಗಳನ್ನು ಕುರಿತು ಐತಿಹ್ಯಗಳು ಚಾರಿತ್ರಿಕ ಐತಿಹ್ಯಗಳೆನಿಸಿಕೊಳ್ಳುತ್ತವೆ. ವ್ಯಕ್ತಿ ಜೀವನದ ಸ್ವಾರಸ್ಯಗಳು, ಸಾಧನೆಗಳು, ಕೆಲವು ಸಾಮಾಜಿಕ ದುರಂತಗಳು, ಭೌಗೋಳಿಕ ವೈಪರೀತ್ಯ ಮುಂತಾದ ವಿಷಯಗಳ ಬಗೆಗೆ ಜನಪದರಲ್ಲಿ ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ. ಇಂತಹ ವಿಷಯಗಳ ನೇರ ಪರಿಚಯ ಅವರಿಗೆ ಇರುವುದಿಲ್ಲ. ಯಾರಿಂದಲೋ ಕೇಳಿದ ಸಂಗತಿಯನ್ನು ಇಲ್ಲಿ ನಿರೂಪಿಸುತ್ತಾರೆ. ಇಲ್ಲಿ ಒಂದು ಸತ್ಯಾಂಶ ಇದ್ದೇ ಇರುವುದಾದರೂ ಹೇಳಿದ ಎಲ್ಲ ವಿಷಯಗಳೂ ಸತ್ಯವೆನ್ನುವ ಹಾಗಿಲ್ಲ. ಒಬ್ಬರಿಂದ ಮತ್ತೊಬ್ಬರಿಗೆ ವಿಷಯ ಹರಡುವಷ್ಟರಲ್ಲಿ ಹಾಗೂ ಕಾಲವ್ಯತ್ಯಾಸದೊಡನೆ ನಡೆದ ಸಂಗತಿಗಳು ಅನೇಕ ಪ್ರಕ್ಷೇಪಗಳನ್ನು ಕಲ್ಪನೆಗಳನ್ನೂ ಒಳಗೊಂಡು ಮತ್ತಷ್ಟು ಸ್ವಾರಸ್ಯಕರವಾಗುತ್ತವೆ. ಉದಾ: ಡಂಬಳದ ಕೆರಿ ಕೆಂಚವ್ವ, ಗದಗಿನ ಕೋನೇರಿ ಹೊಂಡದ ಐತಿಹ್ಯಗಳಲ್ಲಿ ಇಂತಹ ಪ್ರಸಂಗಗಳನ್ನು ನೋಡಬಹುದು.

ಕಲ್ಲನಕೇರಿ ಮಲ್ಲನಗೌಡ ಕೆರೆ ಕಟ್ಟಿಸಿದ "ಕೆರೆಗೆ ಹಾರ", ಮದಗದ ಕೆಂಚಮ್ಮ ಕೆರೆಗೆ ಹಾರವಾದ 'ಮದಗದ ಕೆರೆ' ಹಾಡುಗಳು ಪ್ರಸಿದ್ಧವಾಗಿವೆ. ಈ ಹಾಡುಗಳಲ್ಲಿ ಬರುವ ಭಾಗೀರಥಿ ಮತ್ತು ಕೆಂಚಮ್ಮ ಜನರ ಒಳಿತಿಗಾಗಿ, ಲೋಕಕಲ್ಯಾಣಾರ್ಥವಾಗಿ ತಮ್ಮ ಅಮೂಲ್ಯ ಜೀವನವನ್ನು ಕೆರೆಗಾಗಿ ಸಮರ್ಪಿಸಿಕೊಂಡಿದ್ದಾರೆ. ಅವರ ತ್ಯಾಗ-ಬಲಿದಾನಗಳು ಪ್ರಶಂಸನೀಯ. ಆ ಕುರಿತು ಹಾಡುಗಳು ಗದಗ ಜಿಲ್ಲೆಯ ಡಂಬಳ, ಗದಗ, ಸೊರಟೂರು, ಡೋಣಿಗಳಲ್ಲಿ ಪ್ರಸಿದ್ಧವಾಗಿವೆ. ಕೆರೆಗೆ ಆತ್ಮಾರ್ಪಣೆ ಮಾಡಿಕೊಂಡು ಆ ಸೊಸೆಯಂದಿರು ವಿವಿಧ ಸಂದರ್ಭ-ಸನ್ನಿವೇಶಗಳು ಒತ್ತಡದಿಂದ ತಂದೆ-ತಾಯಿ, ಪತಿ-ಮಕ್ಕಳು, ಬಂಧು-ಬಳಗ ತನ್ನ ಪ್ರೀತಿಯ ಎಲ್ಲ ವ್ಯಕ್ತಿಗಳನ್ನು ತೊರೆದು ಆತ್ಮಸಂತೋಷದಿಂದ ನೀರಿನ ಪಾಲಾಗುವರು. ಅವರು ನೀರು ಬಾರದ ಕೆರೆಯಲ್ಲಿ ನೀರು ತಂದರು. ಒಡೆದು ಹೋಗಬಹುದಾದ ಕೆರೆಯನ್ನು ಉಳಿಸಿದರು. ಜನಮನದಲ್ಲಿ ಇಂದಿಗೂ ಪ್ರಾತ:ಸ್ಮರಣೀಯರಾದರು. ವಿಶಿಷ್ಟ ಆಶಯದ ಹಿನ್ನೆಲೆಯಲ್ಲಿ ಈ ಸಂಗತಿಗಳು ಬಹುಮಟ್ಟಿಗೆ ಕಾಲ್ಪನಿಕ ಕಥೆಗಳಾಗಿರದೆ ನಿಜವಾಗಿಯೂ ನಡೆದು ಘಟನೆಗಳೇ ಆಗಿರುವುವು ಎಂಬುದಕ್ಕೆ ಸಾಕಷ್ಟು ಆಧಾರಗಳು ಸಿಗುತ್ತದೆ.[೨೮]

ತ್ಯಾಗ ಬಲಿದಾನಗಳ ಕಥೆಗಳಾಗಿ ಈಗಾಗಲೇ ಪ್ರಚಲಿತವಾಗಿರುವ ಕೆರೆ ಹೊನ್ನಮ್ಮ, ಬಾನಾವತಿ ದೊರೆ, ಕೆರೆಗೆ ಹಾರ, ಮಲಪುರಿ, ಅಣಜಿ ಹೊನ್ನಮ್ಮ, ಒಡ್ಡರ ಭೋಯಿ ಮುಂತಾದ ಲಾವಣಿಗಳು ನೀರಿನ ಮೂಲ ಹಾಗೂ ಅದರ ಸಮೃದ್ಧಿಯ ಜೊತೆಗೆ ನರಬಲಿ ಸಂಬಂಧಿಸಿದ ವಿಚಾರಗಳನ್ನು ತಿಳಿಸುತ್ತದೆ. ಸ್ತ್ರೀ ಬಲಿಯ ಹಿಂದಿರುವ ಉದ್ದೇಶ ಪುರುಷ ಸ್ವಾರ್ಥದ ವಿವರಗಳೊಂದಿಗೆ ಪುರುಷ ಹಾಗೂ ಪ್ರಕೃತಿಯ ನಡುವಣ ನಿರಂತರ ಹೋರಾಟವನ್ನೇ ಕಟ್ಟಿಕೊಡುತ್ತದೆ. ಹೀಗೆ ಮನೆತನದ ಗೌರವಕ್ಕೆ ಊರ ಒಳಿತಿಗೆ ಜಲಮೂಲಕ್ಕೆ ಬಲಿಯಾಗುವ ಹೆಣ್ಣನ್ನು ದೇವತೆಯಾಗಿಸುವ ಕ್ರಮದಲ್ಲಿಯೇ

ಪ್ರಕೃತಿಯ ಮೇಲಿನ ಮನುಷ್ಯನ ಅಸಹಜ ಅತಿಕ್ರಮಣವನ್ನು ಪ್ರತಿಭಟಿಸುವ ನೆಲೆಗಳನ್ನು ಕಾಣಬಹುದು ಕೆರೆ, ಬಾವಿ ತೋಡುವ ಮೂಲಕ ಪ್ರಕೃತಿಯ ಮೇಲೆ ನಿಯಂತ್ರಣ ಸಾಧಿಸಿ ಹೊರಡುವ ಮನುಷ್ಯ ಅಹಂಕಾರವನ್ನು ಪ್ರಕೃತಿಯು ನೀರು ಬರದಿರುವ ಮೂಲಕ, ಬತ್ತುವ ಮೂಲಕ, ಅಥವಾ ಕಟ್ಟಿದ ಕಟ್ಟೆ ಒಡೆದು ಹಾಗೂ ಹರಿದು ಹೋಗುವ ಮೂಲಕ ಪ್ರತಿಭಟಿಸುತ್ತದೆ. ನೀರು ಮತ್ತು ಮನುಷ್ಯನ ನಡುವಿನ ಈ ಹೋರಾಟವೇ ವಿಸ್ಮಯವಾದದ್ದು. ನೀರು ನೀರಾಗಿದ್ದಾಗ ಅಥವಾ ಸ್ತ್ರೀ ಪ್ರಧಾನವಾಗಿದ್ದಾಗ ಸಂಘರ್ಷ ಹಾಗೂ ಬಲಿದಾನದ ಕುರುಹುಗಳು ಕಾಣುವುದಿಲ್ಲ. ನೀರು ಹೆಣ್ಣಾಗಿ ಉಪಭೋಗದ ವಸ್ತುವಾಗಿ ಪುರಷಾಧಿಕಾರದ ನಿಯಂತ್ರಣದ ವ್ಯಾಪ್ತಿಗೆ ಬಂದಾಗ ಅಲ್ಲಿ ಸಂಘರ್ಷ ಕಾಣುತ್ತದೆ. ಇದಕ್ಕೆ ಉದಾಹರಣೆ ಗದಗ ಜಿಲ್ಲೆಯ ಹತ್ತಿರದಲ್ಲಿರುವ ಸವದತ್ತಿ ಯಲ್ಲಮ್ಮ ಹಾಗೂ ಜಮದಗ್ನಿ ನಿದರ್ಶನ ಉತ್ತಮವಾಗಿದೆ. ನೀರನ್ನು ಎಲ್ಲಾ ಸಂಸ್ಕೃತಿಗಳು ಮಾತೃದೇವತೆಯಾಗಿ ಸ್ವೀಕರಿಸಿವೆ. ಜೋಗತಿ ಹಾಡಿನಲ್ಲಿ ಕಾಣುವ 'ನೀರಾಗಿರುವ ಜಗಜೋಳಿತೆಮ್ಮ' 'ನದಿಗೊಮ್ಮೆ ಹಡ್ಡಲಗಿ ತುಂಬಿದಿ' ಎನ್ನುವ ಸಾಲುಗಳು ನೀರಿಗೂ ಯಲ್ಲಮ್ಮನಿಗೂ ಇರುವ ಸಂಬಂಧಗಳನ್ನು ಸೂಚಿಸುತ್ತವೆ. ಪುರುಷನ ಅಹಂಕಾರ ಹಾಗೂ ನಿಯಂತ್ರಣದ ಹಪಾಹಪಿಯಲ್ಲಿ ಪ್ರತಿಭಟಿಸುವುದು, ಪುರುಷ ಮತ್ತೆ ಮತ್ತೆ ಅದರ ನಿಯಂತ್ರಣಕ್ಕೆ ಹಾತೊರೆಯುವುದು ತನ್ನ ಯಶಸ್ಸಿಗೆ ಹೆಣ್ಣನ್ನೇ ಬಲಿಯಾಗಿ ನೀಡುವುದು, ಅದನ್ನು ಲೋಕಕಲ್ಯಾಣ ಹಾಗೂ ತ್ಯಾಗದ ಹೆಸರಿನಲ್ಲಿ ಸಮರ್ಥಿಸಿಕೊಳ್ಳುವ ಸಂಗತಿಗಳು ಎಲ್ಲವೂ ಒಂದು ಮಾನವ ಚರಿತ್ರೆಯ ಕಥನವನ್ನು ಕಟ್ಟಿಕೊಡುವಂತಹವು.

ಕೆರೆ ಹೊನ್ನಮ್ಮ, ಬಾನಾವತಿ ದೊರೆ, ಕೆರೆಗೆ ಹಾರ, ಮಲಪುರಿ, ಅಣಜಿ ಹೊನ್ನಮ್ಮ, ಒಡ್ಡರ ಭೋಯಿ ಇತ್ಯಾದಿ ಲಾವಣಿಗಳಲ್ಲಿ ಪ್ರಕೃತಿ ಪುರುಷರ ಸಂಘರ್ಷದ ನೆಲೆಗಳನ್ನೇ ಕಾಣುತ್ತವೆ. ಬಾಯಾರಿ ಬಂದ ಮೂಡಲ ದೇಶದ ಒಡ್ಡರಿಗೆ ಕೆರೆ ಹೊನ್ನಮ್ಮ ಮಜ್ಜಿಗೆ ನೀಡುತ್ತಾಳೆ. ಪ್ರತಿಯಾಗಿ ಒಡ್ಡರು ಕೆರೆ ಕಡಿದು ತಮ್ಮ ಋಣ ಮುಟ್ಟಿಸು ಮಾತನ್ನು ಮಳತೆ ಮಲ್ಲೇಗೌಡರ ಮುಂದೆ ಪ್ರಸ್ತಾಪಿಸುತ್ತಾಳೆ. ಒಪ್ಪಂದಂತೆ ಅಡ್ಡ ಆರುಮಾರು, ಉದ್ದ ಒಂಭತ್ತು ಮಾರು, ಹನ್ನೆರಡು ಆಳುದ್ದ ಕೆರೆಯನ್ನು ತೋಡುತ್ತಾರೆ. ಜಲ ಬರುವದಿಲ್ಲ ಒಡ್ಡಗೌಡನ ಹೆಂಡತಿಯನ್ನು ಕೆರೆ ಆಹುತಿ ಕೇಳುತ್ತದೆ. ಹೆದರಿದ ಒಡ್ಡ ಪರಾರಿಯಾಗುತ್ತಾನೆ. ಆಗ ಗೌಡರು ಜೋತಿಷ್ಯ ಕೇಳಲು, ಗೌಡರ ಕಿರುಬೆರಳು ಆಹುತಿ ಕೊಟ್ಟರೆ ಕೆರೆ ತುಂಬ ಬರುತ್ತದೆ ಎನ್ನುವ ಉತ್ತರ ಬರುತ್ತದೆ. ಗೌಡರು ಇದಕ್ಕೆ ಒಪ್ಪುವದಿಲ್ಲ ಕೊನೆಗೆ ಕಿರು ಬೆರಳಿನ ಬದಲಾಗಿ ಹಿರಿಯ ಸೊಸೆ ದೊಡ್ಡ ಹೊನ್ನಮ್ಮನನ್ನೇ ಕೆರೆಗೆ ಹಾರವಾಗಿಸುತ್ತಾರೆ. ಕೆರೆಯಲ್ಲಿ ನೀರು ಬರುತ್ತದೆ. ಬೆರಳು ನೀಡುವ ಹಾಗೂ ನಿರಾಕರಿಸುವ ಸಂಕಥನ ಕನ್ನಡ ಸಂಸ್ಕೃತಿಯಲ್ಲಿ ಅಂತಹ ಚರ್ಚೆಗೆ ಒಳಗಾಗಿಲ್ಲ. ಪುರುಷನ ಬೆರಳಿಗಿರುವ ಮಹತ್ವ, ಅಂದರೆ ಕೊನೆಯ ಬೆರಳಾದ ಕಿರು ಬೆರಳು ಅಥವಾ ಹೆಬ್ಬೆರಳು ಇವುಗಳಿಗಿರುವ ಬೆಲೆ ಒಂದು ಹೆಣ್ಣಿಗಿಲ್ಲವೇ ಅಷ್ಟು ನಿಕೃಷ್ಟವೇ ಹೆಣ್ಣು ? ಹೆಚ್ಚಿನ ಸಂದರ್ಭದಲ್ಲಿ ತ್ಯಾಗ ಬಲಿದಾನಗಳ ಪ್ರತೀಕವಾಗಿಯೇ ಹೆಣ್ಣು

ಗಂಡು ಬರುತ್ತಾರೆ. ಇಲ್ಲಿ ಬಲಿಯಾಗುವ ಹೆಣ್ಣುಗಳೆಲ್ಲವೂ ಪರರ ಮಕ್ಕಳು ಅಂದರೆ ಸೊಸೆಯಂದಿರು ಸ್ವತಃ ಗೌಡನ ಕರಳು ಕುಡಿಗಳಲ್ಲ ಎಂಬುದು ಗಮನಾರ್ಹ.[೨೯]

ಕೈಗೊಳ್ಳುವ ಕೆಲಸ ಬಹುಕಾಲ ಉಳಿಯಬೇಕೆಂಬ ಆಶಯದಿಂದ ಶಾಂತಿ ಮಾಡುವ ಉಪಕ್ರಮ ಬೆಳೆದು ಬಂದಿದೆ. ಅವುಗಳಲ್ಲಿ ಪ್ರಾಣಿಬಲಿ, ನರಬಲಿ ಪದ್ಧತಿಯು ಒಂದು. ಹೊಸದಾದ ಸೇತುವೆಯನ್ನು, ಕಟ್ಟಡವನ್ನು, ಅಣೆಕಟ್ಟನ್ನು ಕಟ್ಟಿಸಬೇಕಾದಾಗ ಆ ನಿವೇಶನದಲ್ಲಿ ನೆಲೆಸಿರುವ ಶಕ್ತಿಯಿಂದ ಸ್ಥಳವನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಮತ್ತು ಕಟ್ಟಲಿರುವ ವಾಸ್ತುವಿಗೆ ಯಾವ ವಿಧವಾದ ತೊಂದರೆಯೂ ಆಗದಂತೆ ಕಾಪಾಡಲು ಬಲಿಗಳನ್ನು ನೀಡಲಾಗುತ್ತಿತ್ತು. ಇದರ ಜೊತೆಗೆ ನರಬಲಿಯಾದ ವ್ಯಕ್ತಿಯು ಆತ್ಮಶಕ್ತಿ, ಆ ಜಾಗದಲ್ಲಿ ನೆಲೆಸಿ ಅದನ್ನು ರಕ್ಷಿಸುವುದೆಂಬ ನಂಬಿಕೆಯೂ ಇರುತ್ತಿತ್ತು. ಕೆಲವು ಬಾರಿ ಜನಾಂಗದ ಕುಲದೇವತೆಗೆ ಬಲಿಕೊಡುವುದರ ಮೂಲಕ ಅದನ್ನು ಅಲ್ಲಿ ನೆಲೆಸಿ ರಕ್ಷಸುವಂತೆ ಪ್ರಸನ್ನಗೊಳಿಸುವ ಪ್ರಯತ್ನ ಇಂತಹ ಉದ್ದೇಶಗಳಲ್ಲಿ ಕಾಣಬರುತ್ತವೆ. ಹಲವಾರು ಪ್ರಾಚೀನ ಅವಶೇಷಗಳನ್ನು ಅಗೆದಾಗ ಸಿಗುವ ಅಸ್ತಿಪಂಜರಗಳು ಇಂತಹ ಬಲಿಗಳಿಗೆ ಸಾಕ್ಷಿಯಾಗಿ ನಿಂತಿವೆ. ಇಂದಿಗೂ ಕೂಡ ಹೊಸಕಟ್ಟಡಗಳನ್ನು ಕಟ್ಟುವಾಗ ಈಶಾನ್ಯ ಮೂಲೆಯಲ್ಲಿ ವಾಸ್ತುಪುರುಷನಿಗೆ ನರಬಲಿಯ ಬದಲಿ ಸ್ವರೂಪಗಳನ್ನು ಅರ್ಪಿಸಿಯೇ ಕಾರ್ಯಾರಂಭ ಮಾಡುವ ವಾಡಿಕೆ ಉಳಿದು ಬಂದಿದೆ. ಕೆರೆ, ಅಣೆಕಟ್ಟು, ಸೇತುವೆಗಳನ್ನು ಕಟ್ಟಿದಾಗ ಅವು ಸುಭದ್ರವಾಗಿ ನಿಲ್ಲಲೆಂದು ನರಬಲಿ ನೀಡಿದರೆಂದು ಇಂದಿಗೂ ಪತ್ರಿಕೆಗಳಲ್ಲಿ ಆಗಾಗ್ಗೆ ವರದಿಯಾಗುತ್ತಲೇ ಇರುತ್ತವೆ. ಕಟ್ಟಡ, ಕೆರೆ–ಬಾವಿ, ಅಣೆಕಟ್ಟುಗಳನ್ನು ನಿರ್ಮಿಸುವಾಗ ಪಶುಬಲಿ, ನರಬಲಿ, ಶಿಸುಬಲಿ ನೀಡುವುದರ ಜೊತೆಗೆ ನಿಧಿಯನ್ನು ಇಡುವ ಪದ್ಧತಿಯೂ ಇತ್ತು.[೩೦] ಹೀಗೆ ಗದಗ ಜಿಲ್ಲೆಯಲ್ಲಿ ಕೆರೆ–ಬಾವಿಗಳ ನಿರ್ಮಾಣ ಹಂತದ ಆಚರಣೆಗಳನ್ನು ಗುರುತಿಸಬಹುದು.

ಜನಪದ ಸಂಸ್ಕೃತಿಯಲ್ಲಿ ಕೆರೆ ಕಟ್ಟೆ ಕಟ್ಟಿಸುವುದು ಸ್ವಜನ ಅನ್ನದಾನ ಹಾಗೂ ಸ್ವಾವಲಂಬಿತನದ ಮೂಲವಾಗಿಯೇ ಕಂಡುಬರುತ್ತದೆ. ಸಮುದಾಯದ ಉಪಯೋಗಕ್ಕಾಗಿ ಪುಣ್ಯ ಕಾರ್ಯದ ಭಾಗವಾಗಿ ಇವುಗಳ ನಿರ್ಮಾಣ ನಡೆದಿದೆ. ಇಂದಿನ ಮಾರುಕಟ್ಟೆ ಆಧಾರಿತ ನೀರಾವರಿ ಕಲ್ಪನೆ ಅವರಿಗೆ ಇರಲಿಲ್ಲ. ಆದರೂ ಸಾರ್ವಜನಿಕ ಬಳಕೆ ಹಾಗೂ ಸಂಪನ್ಮೂಲದ ಅಭಿವೃದ್ಧಿಗಾಗಿ ಇಂತಹ ಕಾರ್ಯಗಳು ನಡೆದಿದ್ದು ಕಾಣಬರುತ್ತದೆ. ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಉತ್ಪಾದಿಸಲು ವಿಜಯನಗರದ ಅರಸರು ಭೂಮಿಯನ್ನು ಕೃಷಿಗೆ ಒಳಪಡಿಸಿದರು. ಇವುಗಳಿಗೆ ನೀರನ್ನು ಪೂರೈಸಲು ಕೃತಕ ಜಲಸಂಗ್ರಹಗಳಾದ ಕೆರೆ ಹಾಗೂ ಭಾವಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಿಸಿದ್ದನ್ನು ಕಾಣಬಹುದು.

**ಬಾವಿಗಳಿಗೆ ಇರುವ ನಂಬಿಕೆಗಳು :**

ನಮ್ಮ ಭೂಮಿಯ ಒಡಲಲ್ಲಿ ಅನೇಕ ಅಮೂಲ್ಯ ವಸ್ತುಗಳು ಅಡಕವಾಗಿವೆ. ವಜ್ರ,

ಬಂಗಾರ, ಕಬ್ಬಿಣ ಮುಂತಾದ ನಾನಾ ರೀತಿಯ ಖನಿಜಗಳು ಭೂಗರ್ಭದಲ್ಲಿವೆ. ಅದರಂತೆ ಭೂಗರ್ಭದಲ್ಲಿ ಜಲವೂ ಇದೆ. ಹಿಂದಿನಿಂದಲೂ ಭೂಗರ್ಭ ಜಲ ಅಥವಾ ಅಂತರ್ಜಲದ ಬಳಕೆಯಿದೆ. ಆದರೆ ಆ ನೀರು ಇಂಥ ಕಡೆಗೆ ಇಷ್ಟೇ ಇದೆಯೆಂದು ಹೇಳಲು ಬರುವಂತಿಲ್ಲ. ಬಾವಿ ತೋಡಿದರೂ ಕೆಲವೊಮ್ಮೆ ನೀರು ಸಿಗಲಿಕ್ಕಿಲ್ಲ. ಅದಕ್ಕಾಗಿಯೇ ಕುದುರೆ ನೆಲೆ, ಹೆಣ್ಣಿನ ಮೂಲ, ನೀರಿನ ನೆಲೆ ಕಂಡು ಹಿಡಿಯುವುದು ಸಾಧ್ಯವಿಲ್ಲ ಎಂದು ಜನರ ಮಾತಿದೆ. ಅಂತರ್ಜಲದ ಲಭ್ಯತೆ ಬಗೆಗೆ ಖಚಿತವಾಗಿ ಹೇಳುವುದು ಕಷ್ಟ. ನೀರು ಲಭ್ಯವಾದರೂ ಅದು ಸಿಹಿಯೋ ಅಥವಾ ಸೌಳು(ಕಹಿ) ಆಗಿರುತ್ತದೆ. ಇದರಿಂದಾಗಿಯೇ ಸಿಹಿ ನೀರಿನ ಬಾವಿ ಅಥವಾ ಕುಡಿಯುವ ನೀರಿನ ಬಾವಿ, ಸೌಳು ಬಾವಿ ಅಥವಾ ಬಳಸುವ ನೀರಿನ ಗುಣಧರ್ಮವನ್ನು ಗುರುತಿಸಿದ್ದಾರೆ.[೬೧]

ಬಯಲುಸೀಮೆಯವರು ಹೊಳೆ-ಹಳ್ಳಗಳನ್ನು ನೆಚ್ಚಿಕೊಂಡು, ಮಳೆ ಅಭಾವವಿದ್ದಾಗ ಅನಿವಾರ್ಯವಾಗಿ ಅಂತರ್ಜಲದ ಮೊರೆ ಹೋಗುತ್ತಾರೆ. ಅಂತರ್ಜಲ ಎಲ್ಲೆಂದರಲ್ಲಿ ಲಭ್ಯವಾಗುವುದಿಲ್ಲ. ಅದಕ್ಕಾಗಿ ಕೆಲವೊಂದು ನಂಬಿಕೆಗಳಿಗೆ ಶರಣಾಗಿದ್ದಾರೆ. ಜ್ಯೋತಿಷದ ಮೇಲೆ ನಂಬಿಕೆಯಿದ್ದವರು ಪಂಚಾಂಗ ಕೇಳುತ್ತಾರೆ. ಬಾವಿ ತೋಡಿಸುವವನು ಕೈ ನೋಡಿ ನೀರಿನ ನೆಲೆ ಹೇಳುತ್ತಾರೆ. ಹೊಲದ ನಕ್ಷೆಯನ್ನು ನೋಡಿ ಅನುಭವಿಕರು ನೀರಿನ ಸೆಲೆಯ ಬಗೆಗೆ ಹೇಳುವುದುಂಟು. ದೈವಿಶಕ್ತಿಯುಳ್ಳವರು ನೀರಿನ ಲಭ್ಯತೆ ಬಗೆಗೆ ಹೇಳುವುದುಂಟು. ಕಾಲು ಮುಂದಾಗಿ ಯಾರು ಹುಟ್ಟಿರುತ್ತಾರೋ ಅಂಥವರಿಗೆ ಭೂಮಿಯೊಳಗಿನ ನೀರು ಭೂಮಿಯ ಮೇಲೆ ಹರಿದಂತೆ ಕಾಣುವುದಂತೆ. ಮತ್ತೆ ಕೆಲವರಿಗೆ ಮೈಮೇಲೆ ದೇವರು ಬಂದು ಹೊಲದ ತುಂಬಾ ಕುಣಿಯುತ್ತಾ ಒಂದೆಡೆ ನಿಂತು ಆ ಬೆತ್ತವನ್ನು ಹಿಡಿದು ಹೊಲದ ತುಂಬೆಲ್ಲ ತಿರುಗಾಡಿ ಒಂದೆಡೆ ನಿಂತು ಆ ಬೆತ್ತವನ್ನು ನೆಲದಲ್ಲಿ ನೆಡುತ್ತಾರೆ. ಅದು ತನ್ನಷ್ಟಕ್ಕೆ ತಾನೇ ಮೇಲಕ್ಕೆದ್ದರೆ ಅಲ್ಲಿ ನೀರಿರುವುದಂತೆ. ನೀರು ಹೇಳುವವ ಜುಟ್ಟುಳ್ಳ ತೆಂಗಿನಕಾಯನ್ನು ಕೈಯಲ್ಲಿ ಮೇಲು ಮಾಡಿ ಹಿಡಿದುಕೊಂಡು ಹೊಲದ ತುಂಬಾ ತಿರುಗುತ್ತಾರೆ. ಆ ಕಾಯಿ ಕೈಯಲ್ಲಿ ತನ್ನಿಂದ ತಾನೇ ಮೇಲಕ್ಕೇಳಿದರೆ ಅಲ್ಲಿ ನೀರಿದೆಯೆಂದು ನಂಬುತ್ತಾರೆ.[೨೩]

ಇನ್ನೊಂದು ಪ್ರಮುಖವಾದ ವಿಧಾನವೆಂದರೆ ಬೇವಿನ ಕಡ್ಡಿಯದು. ಮೂರು ಟಿಸಿಲುಗಳುಳ್ಳ ಬೇವಿನ ಟೊಂಗೆಯಲ್ಲಿ ಎರಡು ಟಿಸಿಲುಗಳನ್ನು ಎರಡು ಕೈಗಳಲ್ಲಿ ಹಿಡಿದು ಇನ್ನೊಂದು ಟಿಸಿಲನ್ನು ಎದೆಯ ಕಡೆಗೆ ಬರುವಂತೆ ಹಿಡಿದುಕೊಳ್ಳುತ್ತಾರೆ. ಹೊಲದಲ್ಲಿ ತಮ್ಮ ನಂಬುಗೆಗೆ ಅನುಸಾರವಾಗಿ ತಿರುಗುತ್ತಾರೆ. ಎಲ್ಲಿ ಅಂತರ್ಜಲವಿರುತ್ತದೆಯೋ ಅಲ್ಲಿ ಮೂರನೆಯ ಟಿಸಿಲು ಮೇಲಕ್ಕೆ ಅಥವಾ ಕೆಳಕ್ಕೆ ಚಲಿಸುವುದಂತೆ. ಇದಕ್ಕೆ ಡೌಜಿಂಗ ಪದ್ಧತಿಯೆನ್ನವರು. ಇದು ಹೆಚ್ಚು ಪ್ರಚಾರದಲ್ಲಿದೆ. ಇದರ ಬಗೆಗೆ ಜನರಿಗೆ ನಂಬುಗೆಯು ಹೆಚ್ಚಾಗಿದೆ. ನಮ್ಮ ಹಿರಿಯರು ಹೆಚ್ಚಾಗಿ ಈ ಭೂ ಸಸ್ಯ ಶಾಸ್ತ್ರವನ್ನೇ ನಂಬಿ ಇವುಗಳ ಆಧಾರದ ಮೇಲೆಯೇ ಬಾವಿಗಳನ್ನು ತೋಡುತ್ತಿದ್ದರು. ಗಿಡಮೂಲಿಕೆಗಳಿಂದ

ನೀರಿನ ಆಳ, ಪ್ರಮಾಣ ಮುಂತಾದವುಗಳನ್ನು ಹೇಳುವ ಪದ್ಧತಿ ಬಹಳ ಕಾಲದಿಂದಲೂ ರೂಢಿಯಲ್ಲಿದೆ. ಇದರ ಬಗ್ಗೆ ಅನೇಕ ಹಳೆಯ ಗ್ರಂಥಗಳಿವೆ. "ವಾಪಿ ಕೂಡಾದಿ ಶಾಸ್ತ್ರ" ಎಂದು ಇದನ್ನು ಕರೆಯುವರು. ಗಿಡಗಳಿದ್ದಲ್ಲಿ ನೀರು ಇರುವುದು ನಿಶ್ಚಿತ. ಹಾಗೆಯೇ ನೀರಿದ್ದಲ್ಲಿ ಗಿಡಗಳು ಹೀಗೆ ಬೆಳೆಯುತ್ತವೆ ಎಂಬುದು ಗೊತ್ತಿರುವ ವಿಷಯವೇ. ಅಂದರೆ ನೀರಿಗೂ ಗಿಡಗಳಿಗೂ ಒಂದಕ್ಕೊಂದು ಪೂರಕ ಸಂಬಂಧವಿದೆ. ಆಳವಾಗಿ ಬೇರೂರಿರುವ ಗಿಡಗಳ ಸುತ್ತಲೂ ಬೇರು ಹರಡುವ ಗಿಡಗಳು ಹೀಗೆ ಯಾವ ತರಹದ ಗಿಡವಿದ್ದಲ್ಲಿ ಎಷ್ಟೋ ಆಳದಲ್ಲಿ ನೀರು ಬರುವುದು ಎಂಬವುದನ್ನು ಗಿಡಗಳು ಗುಣಧರ್ಮವನ್ನು ನೋಡಿ ಹೇಳಲಾಗುವುದು. ಹೆಚ್ಚಾಗಿ ಬೇವಿನ ಮತ್ತು ಬನ್ನಿಗಿಡಗಳಿದ್ದಲ್ಲಿ ನೀರಿರುವುದೆಂಬ ನಂಬಿಕೆಯಿದೆ.[೨೪]

ತೋಡಿದ ಬಾವಿಗೆ ಜಲವೆ ಸಾಕ್ಷಿ, ನೀವಾದರೇನು ನಾವಾದರೇನು ಬಾವಿಯಲ್ಲಿ ನೀರು ಬಂದರೆ ಸರಿ, ಎಂಬ ನುಡಿಗಟ್ಟುಗಳು ಬಾವಿಯ ಬಗೆಗಿವೆ. ನೀರಿಲ್ಲದ ಬಾವಿಗೆ ಹಾಳುಬಾವಿ ಯೆಂದು ಕರೆಯುತ್ತಾರೆ.[೨೫] ಸೇದುವ ಬಾವಿಯ ನೀರು ಒಳಗಿಂದೊಳಗೆ ಹುಟ್ಟಿಕೊಳ್ಳುವುದಿಲ್ಲ. ಮೇಲ್ಮೈ ನೀರು ಮತ್ತು ಭೂಗರ್ಭದ ನೀರಿಗೂ ಮಳೆಯ ನೀರೇ ಆಧಾರ. ಪೂರ್ವಜರ ಕಾಲದಲ್ಲಿ ಹತ್ತಿಪ್ಪತ್ತು ಅಡಿಗಳಿಗೆ ಬಾವಿಯಲ್ಲಿ ನೀರು ಬರುತ್ತಿತ್ತು. ಇತ್ತೀಚಿನ ಭೂಗರ್ಭವನ್ನು ೩೦೦-೭೦೦ ಅಡಿಗಳವರೆಗೂ ಕೊರೆದರೂ ನೀರು ಸಿಗುವುದು ಕಷ್ಟಸಾಧ್ಯವಾಗಿದೆ. ಸಾಕಷ್ಟು ಮಳೆ ಬಂದರೆ ಮಾತ್ರ ಅಂತರ್ಜಲ ವೃದ್ಧಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಅಂತರ್ಜಲದ ನೀರು ಬಳಕೆ ಅತಿಯಾಗಿರುವುದರಿಂದ ತೆರೆದ ಬಾವಿಗಳ ನೀರು ಬತ್ತಿಹೋಗುತ್ತಿವೆ.

ಗದಗ ಜಿಲ್ಲೆಯಲ್ಲಿ ಪ್ರತಿಯೊಂದು ಗ್ರಾಮದವರು ಸರ್ವೇಸಾಮಾನ್ಯವಾಗಿ ಜನನ, ನಾಮಕರಣ, ಮೈ ನೆರೆದಾಗ, ಮದುವೆ, ತಿಥಿ ಮುಂತಾದ ಸಂದರ್ಭಗಳಲ್ಲಿ ಕೆರೆ ಬಾವಿಗಳಲ್ಲಿ ನೀರಿದ್ದರೆ ಗಂಗೆ ಪೂಜೆ ಮಾಡಿಕೊಂಡು ಬರುವುದು ರೂಢಿಯಲ್ಲಿದೆ. ಯುಗಾದಿ, ದಸರಾ, ದೀಪಾವಳಿ ಮುಂತಾದ ಹಬ್ಬಗಳಲ್ಲಿ ಕೆರೆ-ಬಾವಿಗಳೊಂದಿಗಿನ ಆಚರಣೆಗಳು ಕಂಡುಬರುವುವು. ಆದರೆ ಬಿತ್ತುವಾಗ ಕೆರೆಯ ಮೇಲಿರುವ ಕನ್ನೀರಮ್ಮ, ಕೆಂಚಮ್ಮ, ಹೊನ್ನಮ್ಮ, ಗುಂಡಲಿಂಗ, ಈಶ್ವರ ಗುಡಿಗಳಿಗೆ ಪೂಜೆ ಮಾಡಿ, ಬಿತ್ತುವ ಕಾರ್ಯವನ್ನು ಆರಂಭಿಸುತ್ತಾರೆ. ಫಸಲನ್ನು ಕೊಯ್ಯುವಾಗ ಜೋಳ, ಭತ್ತಗಳಿದ್ದರೆ ಕನ್ನೀರಮ್ಮನ ಅಥವಾ ಕೆಂಚಮ್ಮನ ಗುಡಿಗೆ ಹೋಗಿ ಐದು ಮುಷ್ಟಿ ಪ್ರಮಾಣದಲ್ಲಿ ಧಾನ್ಯವನ್ನು ಗುಂಪುಗಳಾಗಿಟ್ಟು ಆಕೆಗೆ ಅರ್ಪಿಸಿ ನಂತರ ಬೆಳೆಯನ್ನು ಕೊಯ್ದು, ಕಣ ಮಾಡಿ ತುಂಬುತ್ತಾರೆ. ಇಂತಹ ಆಚರಣೆಗಳು ಜಂತಲಿಶಿರೂರು, ಪೇಠಾಲೂರು, ಡಂಬಳ, ಡೋಣಿ, ಶಿರಹಟ್ಟಿ, ರೋಣ ಪ್ರದೇಶಗಳಲ್ಲಿ ಹೊಲಕ್ಕೆ ಬಿತ್ತಲು ಹೋಗುವಾಗ ಕೆರೆ ದಂಡೆಯಲ್ಲಿರುವ ದೇವಸ್ಥಾನಗಳಿಗೆ ಮೊದಲಿಗೆ ನೀಧಿ ಹಾಕಿ ಮುಂದೆ ಸಾಗುತ್ತಾರೆ. ಇಂತಹ ಆಚರಣೆಗಳು ಪ್ರಮುಖ ದೇವಸ್ಥಾಗಳಲ್ಲಿ ನಡೆಯುವುದು ಸರ್ವೇ ಸಾಮಾನ್ಯವಾಗಿವೆ.[೨೮]

ಯಾವುದೇ ಉತ್ಸವಗಳು ಪ್ರಾಚೀನ ಎನಿಸಿಕೊಳ್ಳಬಹುದಷ್ಟೆ ಹೊರತು ಐತಿಹಾಸಿಕ ಆಗುವುದು ಕಷ್ಟ. ಕನ್ನಡ ಸಾಹಿತ್ಯ ಪರಿಷತ್ ಪ್ರಕಟಿಸಿರುವ ಕನ್ನಡ ನಿಘಂಟಿನ ಒಂದನೇ ಸಂಪುಟದಲ್ಲಿ ಉತ್ಸವಕ್ಕೆ ಸಂಬಂಧಿಸಿದ ಹಬ್ಬ, ಜಾತ್ರೆ, ಸಮಾರಂಭ, ಸಂಭ್ರಮ, ಸಡಗರ, ಸಂತೋಷ, ಉತ್ಸಾಹ, ಮೆರವಣಿಗೆ ಇತ್ಯಾದಿಗಳಿಗೆ ಅರ್ಥಗಳನ್ನು ನೀಡಲಾಗಿದೆ. ಸಾಮಾನ್ಯವಾಗಿ ಉತ್ಸವ ಎಂದೊಡನೆ ಕೇಳಿದವರು ನೆನೆಪು ಮಾಡಿಕೊಳ್ಳುವುದು ದೇವರಿಗೆ ಸಂಬಂಧಿಸಿದ ಉತ್ಸವಗಳನ್ನು ಮಾತ್ರ. ದೇವರುಗಳಿಗೆ ಸಂಬಂಧಿಸಿದ ಉತ್ಸವಗಳು ಸಾರ್ವತ್ರಿಕ ಸ್ವರೂಪ ಪಡೆಯುವುದಿಲ್ಲ. ಅವು ನಿರಂತರವೂ ಅಲ್ಲ, ಯಾವುದೋ ಸಂದರ್ಭದಲ್ಲಿ ಆಚರಣೆಗೊಂಡು ಇಲ್ಲವಾಗಿ ಬಿಡುತ್ತವೆ. ಸ್ವಾತಂತ್ರ್ಯೋತ್ಸವ ಅಥವಾ ಗಣರಾಜ್ಯೋತ್ಸವ ಸಾರ್ವತ್ರಿಕವಾದರೂ, ಇವುಗಳ ಆಚರಣೆ ಆಯ್ದ ಕೆಲವು ನಾಯಕರು, ಅಧಿಕಾರಿಗಳು, ಶಾಲಾ-ಕಾಲೇಜುಗಳು ಹಾಗೂ ಸಂಘ ಸಂಸ್ಥೆಗಳನ್ನು ಮಾತ್ರ ಒಳಗೊಳ್ಳುತ್ತದೆ. ಇಡಿ ಜನಸಮುದಾಯ ಭಾಗವಹಿಸಿ ಸಂಭ್ರಮಪಡುವ ಉತ್ಸವ ಆಗುವುದಿಲ್ಲ. ಇಡೀ ಗ್ರಾಮ ಅಥವಾ ಸಮುದಾಯವನ್ನೇ ಒಳಗೊಂಡಂತೆ ಆಚರಿಸಲ್ಪಡುವ ಉತ್ಸವಗಳು ಸಾರ್ವತ್ರಿಕವಾಗುತ್ತವೆ. ನಿರಂತರವಾಗಿ ನಿರ್ಧರಿತ ದಿನದಂದು ಆಚರಿಸಲ್ಪಡುತ್ತವೆ. ಪ್ರಾಚೀನ ಕಾಲದಲ್ಲಿ ಕರ್ನಾಟಕದ ಜನತೆಯು ಯಾವುದೇ ರಾಜಕೀಯ ಅಥವಾ ಸಾಮಾಜಿಕ ಉತ್ಸವಗಳನ್ನು ಆಚರಿಸುತ್ತಿದ್ದ ದಾಖಲೆಗಳು ಇಲ್ಲವಾದರೂ ದೇವಾಲಯಗಳ ಮೂಲಕ ಹಲವು ಉತ್ಸವಗಳನ್ನು ಆಚರಿಸುತ್ತಿದ್ದ ದಾಖಲೆಗಳು ಶಾಸನಗಳ ಮೂಲಕ ದೊರೆತಿವೆ.

ದೇವಸ್ಥಾನದಲ್ಲಿ ನಿತ್ಯ ಪೂಜೆಯಲ್ಲದೆ ಕೆಲವು ನಿರ್ದಿಷ್ಟ ದಿನಗಳಂದು ವಿಶೇಷ ಪೂಜೆಗಳು ನಡೆಯುತ್ತವೆ. ಭಕ್ತಾದಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ನಡೆಸುವ ವಿಶೇಷ ಪೂಜೆ ಅಥವಾ ಉತ್ಸವಗಳಲ್ಲದೇ ವರ್ಷದ ಕೆಲವು ನಿರ್ದಿಷ್ಟ ದಿನಗಳಂದು ಶಾಶ್ವತವಾಗಿ ವಿಶೇಷ ಪೂಜೆಗಳು ನಡೆದುಕೊಂಡು ಬಂದಿರುತ್ತವೆ.[೨೯]

ಮದುವೆ ಆಚರಣೆಗಳಲ್ಲಿ ನೀರಿನ ಶಾಸ್ತ್ರಗಳೇ ಪ್ರಮುಖ ಅಂಶಗಳಾಗಿವೆ. ಆದರೆ ಮದುವೆಯ ನಂತರ ವಧೂ ವರರು ಮಂಗಳವಾದ್ಯ ಸಹಿತವಾಗಿ ನೀರಿನ ಮೂಲವೊಂದಕ್ಕೆ ತೆರಳಿ ಪೂಜೆ ಸಲ್ಲಿಸುವ ಆಚರಣೆಯು ಒಂದು ಅಪೂರ್ವ ಆಶಯವನ್ನು ಒಳಗೊಂಡಿರುವಂಥ ಶಾಸ್ತ್ರವಾಗಿದೆ. ಈ ಆಚರಣೆಯಲ್ಲಿ ದಂಪತಿಗಳು ಬಾವಿಯ ದಡದಲ್ಲಿ ಏಳು ಬಗೆಯ ಧಾನ್ಯಗಳನ್ನು ಮೊಳಕೆ ಬಿಡಿಸುವ ಶಾಸ್ತ್ರವನ್ನು ನಡೆಸುತ್ತಾರೆ. ಇದು ಫಲವಂತಿಕೆಯನ್ನು ಪ್ರಾರ್ಥಿಸುವ ಸಾಂಕೇತಿಕ ವಿಧಿಯಾಗಿದೆ. ಮನೆಯ ಹಿರಿಯರು ಪ್ರತಿನಿತ್ಯ ಈ ಧಾನ್ಯಕ್ಕೆ ನೀರು ಎರೆದು ಕಾಯುತ್ತಾರೆ. ವಧೂ ವರರು ಬಿತ್ತಿದ ಧಾನ್ಯಗಳಲ್ಲಿ ಮೊಳಕೆ ಚೆನ್ನಾಗಿ ಮೂಡಿದರೆ ಅವರ ಮೂಲಕವಾಗಿ ವಂಶೋದ್ಧಾರವಾಗುವುದೆಂದು ಭಾವಿಸುತ್ತಾರೆ.[೩೩] ಈ ಬಾವಿ ಪೂಜೆಯು ಫಲವಂತಿಕೆಯ ಪಂಥದ ವಿಧಿಗಳಲ್ಲಿ ಒಂದಾಗಿರುವುದನ್ನು ಗುರುತಿಸಬಹುದು.

ಈ ನಂಬಿಕೆಗಳು ಅವೈಜ್ಞಾನಿಕವಾದದ್ದು, ಇಂಥ ನೀರಿನಲ್ಲಿ ಸ್ನಾನ ಮಾಡಿದರೆ ಪಾಪ ಪರಿಹಾರವಾಗುವ ಬದಲು ನೀವೇ ಪಾಪಕ್ಕೆ ಗುರಿಯಾಗಬೇಕು ಎನ್ನುವ ಎಚ್ಚರಿಕೆಯನ್ನು ವೈಯಕ್ತಿಕ ಶುಚಿತ್ವದ ನೆಲೆಯಲ್ಲಿ ನಮ್ಮ ವಿಜ್ಞಾನ ತಿಳಿಸುತ್ತದೆ. ಇದು ಮೂಢನಂಬಿಕೆ ಎಂದು ವಾದಿಸಬಹುದು. ಆದರೆ ದೇವರು ಗುಡಿಯ ಮುಂದಿನ ಕೆರೆಯಲ್ಲಿ ಅಥವಾ ಬಾವಿಯಲ್ಲಿ ಸ್ನಾನ ಮಾಡಿ ತೀರ್ಥವನ್ನು ಸೇವಿಸುವುದರ ಮೂಲಕ ಪ್ರಾಯಶ್ಚಿತ್ತ ಪ್ರಾಪ್ತಿಯಾಗುತ್ತದೆ. ಪಾಪ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಒಂದು ಮಾದರಿ ಈ ಜಿಲ್ಲೆಯ ಯಳವತ್ತಿ ಗುಂಡಲಿಂಗನ ಬಾವಿ, ಶಿಂಗಟಾಲೂರು ವೀರಭದ್ರ ದೇವರ ಮುಂದಿನ ನದಿಯಲ್ಲಿ ಜರುಗುವ ಉದಾರಹಣೆಗಳು ಕಂಡುಬರುತ್ತವೆ.

ಕಂಡುಗದಷ್ಟು ಪಾಪ ಮಾಡಿದ್ದರೂ ಗಂಗೆಯಲ್ಲಿ ಒಂದು ಸಾರಿ ಮುಳುಗಿದರೆ ಪಾಪ ಪರಿಹಾರವಾಗುತ್ತೆ ಅಂತ ಜನ ಆಡಿಕೊಳ್ಳುವುದನ್ನು ಕೇಳಿದ್ದೇವೆ. ಈ ನಂಬಿಕೆಯ ಹಿಂದೆ, ಪವಿತ್ರಗೊಳ್ಳುವ ಪ್ರಾಯಶ್ಚಿತ್ತದ ಆಶಯವು ಕೆಲಸ ಮಾಡುತ್ತದೆ. ಈ ನಂಬಿಕೆಯನ್ನು ಮೂಢನಂಬಿಕೆ ಅಂತ ತೀರ್ಮಾನಿಸುವಾಗ ನಾವು ಪರಿಗಣಿಸುವುದು ಮಲೀನಗೊಂಡ ಕೊಳ ಅಥವಾ ನದಿಯನ್ನು ಗಮನದಲ್ಲಿಟ್ಟುಕೊಂಡು ಹೇಳಿರುತ್ತೇವೆ. ಈ ನಂಬಿಕೆಯನ್ನು ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿವರಿಸಿಕೊಂಡಾಗ ನಮ್ಮ ದೇಶದಲ್ಲಿ ನೀರಿನ ಮಲೀನತೆ ಆಧುನಿಕ ಪ್ರಕ್ರಿಯೆಗಳ ಆರಂಭದೊಂದಿಗೆ ಮೊದಲಾಯಿತು. ವಸಾಹತುಶಾಹಿ ಆಡಳಿತಕ್ಕಿಂತ ಹಿಂದಿನ ಭಾರತದಲ್ಲಿ ಕೆರೆಯನ್ನು (ಕೊಳಗ) ವರ್ಷಕ್ಕೆ ಒಂದೆರಡು ಬಾರಿ ಹೂಳೆತ್ತಿ ಶುದ್ಧ ಮಾಡುತ್ತಿದ್ದರು. ಕೈಗಾರಿಕೆಗಳು ಇರಲಿಲ್ಲವಾದ್ದರಿಂದ ನದಿಗಳು, ಕೆರೆಗಳು ಮಲೀನವಾಗುವ ಸಾಧ್ಯತೆ ಇರಲಿಲ್ಲ. ಇಂತಹ ಕೆರೆಗಳಲ್ಲಿ ಸ್ನಾನ ಮಾಡುವುದರಿಂದ ಯಾವುದೇ ರೋಗಗಳ ಭಯವಿಲ್ಲದ ಸಂದರ್ಭದಲ್ಲಿ ಈ ನಂಬಿಕೆಯನ್ನು ಮೌಢ್ಯ, ಅವೈಜ್ಞಾನಿಕ ಎಂದು ಕರೆಯಬಹುದೇ?

ಕೆರೆಯ ನೀರಲ್ಲಿ ಮುಳುಗುವುದರಿಂದ ಪ್ರಾಯಶ್ಚಿತ್ತ ಹಾಗೂ ಪರಿಶುದ್ಧತೆಯನ್ನು ಗಳಿಸಬಹುದು ಎಂದು ಗಾಢವಾಗಿ ನಂಬುವ ಮನುಷ್ಯ ಇಂದಿನ ಮಲೀನತೆಯನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳುವ ಒತ್ತಡವೇ, ತೀರ್ಥ ಕೊಳಕಾಗಿದ್ದರೂ ಅಸಹ್ಯಪಡದೆ ಸ್ನಾನ ಮಾಡು, ಕುಡಿ ಎನ್ನುವ ನಂಬಿಕೆಯನ್ನು ಸೃಷ್ಟಿಸುತ್ತದೆ. ಕೆರೆಯ ನೀರಲ್ಲಿ ಸ್ನಾನ ಮಾಡಬೇಕು ಎನ್ನುವ ನಂಬಿಕೆ ಇಲ್ಲಿಂದ ಹೊತ್ತ ನೀರು ಕೊಳಕಾಗಿದ್ದರೂ ಅಸಹ್ಯಪಡದೆ ಸ್ನಾನ ಮಾಡಬೇಕು ಎಂದು ಮಾರ್ಪಾಡಾಗಿದೆ. ಈ ಮಾರ್ಪಾಟಿನ ಒಳರಚನೆಯಲ್ಲಿ ಎಂಥ ಚಾರಿತ್ರಿಕ ಹಾಗೂ ಧಾರ್ಮಿಕ ಅನಿವಾರ್ಯಗಳು ಹುದುಗಿರುತ್ತವೆ ಎನ್ನವುದನ್ನು ವಿವರಿಸಲು ಸಾಧ್ಯವಾಗಿದೆ.

ಉದಾ : ಗಜೇಂದ್ರಗಢದ ಪುಷ್ಕರಣಿಗಳು, ವರವಿಯ ಅಂಬಲಿ ಹೊಂಡ, ಹೊಳಲ್ಲಮ್ಮನ ಹೊಂಡಗಳು, ಲಕ್ಕುಂಡಿಯ ಪುಷ್ಕರಣಿಗಳು,

ಗಜೇಂದ್ರಗಡದ ಪುಷ್ಕರಣಿಯು ಕಾಲಕಾಲೇಶ್ವರ ಸನ್ನಿಧಿಗೂ ೧ ಕಿ.ಮೀ ಅಂತರದಲ್ಲಿ ಪಶ್ಚಿಮಾಭಿಮುಖವಾಗಿರುವ ಪುಣ್ಯ ಸ್ನಾನದ ಪುಷ್ಕರಣಿಯಲ್ಲಿ ಸ್ನಾನ ಮಾಡುವುದರಿಂದ ದೈನಂದಿನ ಬದುಕಿನಲ್ಲಿ ಮಾಡಿರುವ ಪಾಪ, ಕರ್ಮಗಳು ತೊಳೆದು ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ಭಕ್ತರದ್ದು. ಹೀಗಾಗಿಯೇ ಶ್ರೀ ಕ್ಷೇತ್ರದ ದರ್ಶನಕ್ಕೆ ಬರುವ ಭಕ್ತರು ಸುಕ್ಷೇತ್ರ ಪ್ರವೇಶಿಸುತ್ತಿದ್ದಂತೆಯೇ ಪುಣ್ಯ ಸ್ನಾನದ ಪುಷ್ಕರಣಿಯಲ್ಲಿ ಸ್ನಾನ ಮಾಡಿ ಕಾಲಕಾಲೇಶ್ವರನ ಸನ್ನಿಧಿಗೆ ತೆರಳಿ ಪೂಜೆ ಸಲ್ಲಿಸುತ್ತಾರೆ. ಇಂಥ ಪುಷ್ಕರಣಿ ನಿರಂತರ ಬರದ ಮಧ್ಯೆಯು ಭರ್ತಿಯಾಗಿರುವುದು ಕ್ಷೇತ್ರದ ಹಿರಿಮೆಯ ಪ್ರತೀಕದಂತಿದೆ.

ಈ ಪುಷ್ಕರಣಿಯಲ್ಲಿ ಜಲವನ್ನು ಭಕ್ತರು ಪುಣ್ಯ ತೀರ್ಥ ಎಂದು ಸೇವಿಸುತ್ತಾರೆ. ಮತ್ತೆ ಕೆಲ ಭಕ್ತರು ಪುಷ್ಕರಣಿಯ ನೀರನ್ನು ಬಾಟಲಿಗಳಲ್ಲಿ ಸಂಗ್ರಹಿಸಿಕೊಂಡು ಹೋಗುತ್ತಾರೆ. ಹೀಗೆ ಸಂಗ್ರಹಿಸಿಕೊಂಡು ಹೋಗುವ ಪುಣ್ಯ ತೀರ್ಥವನ್ನು ಮನೆಯಲ್ಲಿ ನಿತ್ಯದ ಸ್ನಾನದ ನಂತರ ಸೇವಿಸುತ್ತಾರೆ ಎನ್ನಲಾಗುತ್ತದೆ.

ಹೊಸದಾಗಿ ವಿವಾಹ ಬಂಧನಕ್ಕೆ ಒಳಗಾದ ಜೋಡಿಗಳು ಕ್ಷೇತ್ರಕ್ಕೆ ಭೇಟಿ ನೀಡಿದ ಬಳಿಕ ಬಾಸಿಂಗಗಳನ್ನು ಪುಣ್ಯ ತೀರ್ಥದ ಪುಷ್ಕರಣಿಯಲ್ಲಿ ತೇಲಿ ಬಿಡುತ್ತಾರೆ. ಇದರಿಂದ ಸಾಂಸಾರಿಕ ಬದುಕು ಸುಖಿಯಾಗಿರುತ್ತದೆ ಎಂಬ ನಂಬಿಕೆಯೂ ಚಾಲ್ತಿಯಲ್ಲಿದೆ.

ಪ್ರಾಚೀನ ಕಾಲದ ನಿಸರ್ಗ ರಮಣೀಯ ಗುಹೆ ಎಂದೇ ಪ್ರಸಿದ್ಧಿ ಪಡೆದ ಆಗಸ್ತ್ಯತೀರ್ಥ ಆಗಸ್ತ್ಯ ಋಷಿಗಳ ಆಶ್ರಮ ಪೂರ್ವ ದಿಕ್ಕಿನ ಹೊರವಲಯದಲ್ಲಿದೆ. ಯಜ್ಞ, ಜಪತಪ ಮಾಡಿದ ಪುಣ್ಯ ಕ್ಷೇತ್ರವಿದು. ಇಲ್ಲಿ ಎರಡು ಬೃಹದಾಕಾರದ ಜಾತ್ರೆ ನಡೆಯುತ್ತದೆ. ಗ್ರಾಮೀಣ ಸೊಗಡಿನ ವೈಭವ ಎದ್ದು ಕಾಣುತ್ತದೆ. ಊರಿನ ಜನರು ಚಕ್ಕಡಿಗಳಲ್ಲಿ ತಮ್ಮ ಕುಟುಂಬ ಪರಿವಾರದೊಂದಿಗೆ ಬಂದು ಪೂಜೆ, ಪುನಸ್ಕಾರಗಳನ್ನು ಶ್ರದ್ಧಾ ಭಕ್ತಿಗಳಿಂದ ಸಲ್ಲಿಸಿ ತಮ್ಮ ಸಂತಸದ ಸಂಭ್ರಮಗಳನ್ನು ಹಂಚಿಕೊಳ್ಳುವರು. ಮನೆಯಿಂದ ತಂದ ವಿವಿಧ ಆಹಾರ, ತಿಂಡಿ, ತಿನಿಸುಗಳನ್ನು ತಿಂದು ಸಂತಸಪಡುವರು. ಇಂತಹ ಆಚರಣೆಗಳು ಲಕ್ಷ್ಮೇಶ್ವರದ ಆಗಸ್ತ್ಯತೀರ್ಥದ ಬಳಿಯಲ್ಲಿ ಕಂಡುಬರುತ್ತವೆ.

ಕಪ್ಪತಗುಡ್ಡದ ಆಲದ ಕೆರೆಯಲ್ಲಿ ಬಹಳ ಹಳೆಯ ಕಾಲದ ಮರವಿದ್ದು, ಅದರ ನೀರು ಕುಡಿದರೆ ಚರ್ಮರೋಗ ಹೋಗುತ್ತದೆ ಎಂಬ ನಂಬಿಕೆ ಇದೆ. ಮಂಜಿನ ಡೋಣಿಯಲ್ಲಿ ೧೨ ತಿಂಗಳು ನೀರು ಇರುತ್ತದೆ. ಇಲ್ಲಿಯ ನೀರು ಮಂಜಿಗಿಂತ ತಂಪಾಗಿರುವುದರಿಂದ ಮಂಜಿನ ಡೋಣಿ ಎಂಬ ಹೆಸರು ಬಂದಿದೆ. ಗಂಗಿಬಾವಿ ೫೬ ಅಡಿ ಆಳವಿದ್ದು ೯೮ ಪಾವಟಿಗೆಗಳನ್ನು ಒಳಗೊಂಡಿದೆ. ಈ ಗಂಗಿ ಬಾವಿ ನೀರು ಪವಿತ್ರವೆಂದು ಪರಿಗಣಿಸಲ್ಪಟ್ಟಿದ್ದು, ಸ್ನಾನ ಮಡಿದರೆ ರೋಗ-ರುಜಿನಗಳು ಮಾಯವಾಗುತ್ತವೆ.

ಮಾನವನ ಜನನದಿಂದ ಮರಣದರೆಗೂ ನೀರು ಬೇಕೇಬೇಕು. ನೀರಿಲ್ಲದ ಜೀವಪಿಲ್ಲ; ಜನಾಂಗವಿಲ್ಲ. ನೀರಿನ ಬಗೆಗೆ ವಿವಿಧ ಆಚರಣೆಗಳನ್ನು ಹೊಂದಿದ್ದಾರೆ. ಮಗೆ ಹುಟ್ಟಿದಾಗ ಅದಕ್ಕೆ ಎಣ್ಣೆ ಹಚ್ಚಿ ಬೆಚ್ಚಗಿನ ನೀರಿನಿಂದ ಎರೆಯುತ್ತಾರೆ. ಮಗುವಿನ ತಾಯಿ ಬಾಣಂತಿಗೂ ಮಜ್ಜನವಿರುತ್ತದೆ.

ಹೆಣ್ಣು ಹುಡಗಿ ಋತಿಮತಿಯಾದಾದ ಮುತ್ತೈದೆಯರು ಸ್ನಾನ ಮಾಡಿಸುವ ಪದ್ಧತಿಯಿದೆ. ಮದುವೆ ಸಂದಂರ್ಭದಲ್ಲಿ ಅರಿಷಣ ಹಚ್ಚಿದ ನಂತರ ಮದು ಮಕ್ಕಳನ್ನು ಸ್ನಾನ ಮಾಡಿಸುತ್ತಾರೆ. ಈ ಕಾರ್ಯಕ್ಕೆ 'ಅರಿಷಣ ನೀರು' ಎನ್ನುವರು. ಹೆಣ್ಣನ್ನು ಧಾರೆಯೆರೆದು ಕೊಡುವಾಗ ಪವಿತ್ರವಾದ ನೀರು ಬೇಕೇಬೇಕು. ಅಕ್ಷತೆ ಮುಗಿದ ಮೇಲೆ ಮದುಮಕ್ಕಳ 'ಕಾಲು ತೊಳೆಯುವ' ಸಂಪ್ರದಾಯವಿದೆ. ಹೆಣ್ಣಿನ ಕಡೆಯವರು ಮಸಿಯೂಟ ಮತ್ತು ಉಡಗರೆಗಳನ್ನು ಗಂಡಿಗೆ ಕೊಡಲು ಬರುವಾಗ ಮುತ್ತೈದೆ ಪೂರ್ಣಕುಂಭ ಹೊತ್ತು ಬರುತ್ತಾಳೆ. ಹೀಗೆ ವಿವಿಧ ಜನಾಂಗಗಳಲ್ಲಿ ವಿವಿಧ ರೀತಿಯಲ್ಲಿ ಜಲ ಬಳಕೆಯ ಆಚರಣೆಗಳಿವೆ.

ದೇವರ ಪೂಜೆಗೆ, ಇಷ್ಟಲಿಂಗ ಪೂಜೆಗೆ, ಶಿಲಾಮೂರ್ತಿಗಳಿಗೆಮಡಿನೀರಿನ ಮಜ್ಜನವಾಗುತ್ತದೆ. ಜಂಗಮನನ್ನು ಮನೆಗೆ ಕರೆಯಿಸಿ ಆತನ ಪಾದ ಪೂಜೆ ಮಾಡಿದ ನಂತರ ಆ ಪಾದೋದಕವನ್ನು ಮನೆಯ ಸಂದು-ಗೊಂದುಗಳಲ್ಲಿ ಚಿಮುಕಿಸುತ್ತಾರೆ. ಇದರಿಂದ ಹುಳು-ಹುಪ್ಪಡಿಗಳು ಬರುವುದಿಲ್ಲವೆಂಬ ನಂಬಿಕೆಯಿದೆ. ಹಿಂದಿನ ಕಾಲದಲ್ಲಿ ಮನೆಗೆ ಬಂದ ಅತಿಥಿಗಳಿಗೆ 'ಬೆಲ್ಲ-ನೀರು' ಕೊಡುವ ಸಂಪ್ರದಾಯವಿತ್ತು. ಸಾಯುವ ಸಂದರ್ಭದಲ್ಲಿ ಸಂಬಂಧಿಕರು ಸಾಯುವವರ ಬಾಯಲ್ಲಿ ನೀರು ಹಾಕುವ ರೂಢಿಯಿದೆ. ಸತ್ತ ಮೇಲೆ ಹೆಣದ ಮೈ ತೊಳೆದು ಶೃಂಗರಿಸುತ್ತಾರೆ. ಬ್ರಾಹ್ಮಣರಲ್ಲಿ ಸತ್ತ ವ್ಯಕ್ತಿಗೆ ಅಗ್ನಿಸ್ಪರ್ಶ ಕೊಡುವ ಮುನ್ನ ಪ್ರೇತೋದಕ ಗಡಿಗೆ ಹೊತ್ತು ಮಂತ್ರಾಗ್ನಿ ಹೇಳುತ್ತ ಎಡಗಡೆಯಿಂದ ಪ್ರದಕ್ಷಿಣಿ ಹಾಕಿ ಗಡಿಗೆಯನ್ನು ಹೆಗಲಿನ ಹಿಂಭಾಗದಿಂದ ಕೈಬಿಡುತ್ತಾರೆ. ದನ-ಕರುಗಳು ಬೆದರಿದಾಗ ಅಥವಾ ಮೇವು ತಿನ್ನದೇ ನಿಂತಿದ್ದರೆ ತಾಂಬ್ರದ ತಂಬಿಗೆಯಲ್ಲಿ ಮೌನವಾಗಿ ಹೋಗಿ ನೀರು ತಂದು ಜಂಗಮರಿಂದ ಮಂತ್ರಿಸಿ ಆ ನೀರನ್ನು ದನ-ಕರುಗಳಿಗೆ ಸಿಂಪಡಿಸುತ್ತಾರೆ. ಇದರಿಂದ ಅವು ಆರಾಮವಾಗುವಾಗುವೆಂಬ ನಂಬಿಕೆಯಿದೆ. ಇಂಥ ಎಷ್ಟೋ ನಂಬಿಕೆ-ಆಚರಣೆಗಳು ನಮ್ಮಲ್ಲಿವೆ. ಇವುಗಳ ಬಗೆಗೆ ಅಧ್ಯಯನ ನಡೆಯಬೇಕಾಗಿದೆ. ಎಲ್ಲಕ್ಕೂ ಮುಖ್ಯವಾಗಿ ಪ್ರಕೃತಿ ನೀಡಿದ ಅಮೂಲ್ಯವಾದ ನೀರನ್ನು ಅಪವ್ಯಯಗೊಳಿಸದೆ ಹಿತ-ಮಿತವಾಗಿ ಬಳಸಬೇಕಾಗಿದೆ. ಮಳೆಯ ನೀರನ್ನು ಸಂಗ್ರಹಿಸ ವಿವಿಧ ವಿಧಾನಗಳನ್ನು ಅಳವಡಿಸಿಕೊಂಡು ನಮ್ಮ ಜಲಸಂಸ್ಕೃತಿಯನ್ನು ರಕ್ಷಿಸಬೇಕಾದ ಅಗತ್ಯವಿದೆ.[೩೦]

**ಆಚರಣೆಗಳಲ್ಲಿ ಬೇರೆ ಬೇರೆಯಾದ ನೀರಿನ ರೂಪಗಳು:**

**ಗಂಗಮ್ಮ :**

ಜನಪದ ಸ್ಮೃತಿಯಲ್ಲಿ ಗಂಗೆ ಕೇವಲ ನೀರನ್ನು ಸಂಕೇತಿಸುವ ಜಲದೇವತೆಯಲ್ಲ, ನಿಸರ್ಗದ

ಪ್ರತೀಕ. ಮೇಲಾಗಿ ನೀರು ಸ್ತ್ರೀರೂಪಿ, ಕೃಷಿಗೆ ಸಂಬಂಧಿಸಿದ ಅಸಂಖ್ಯ ಜನಪದ ದೇವತೆಗಳಲ್ಲಿ ಹೆಚ್ಚಿನವರು ಹೆಣ್ಣುಗಳೇ. ಈ ಎಲ್ಲಾ ದೇವರುಗಳ ಆದಿದೇವತೆ ಗಂಗೆ. ಗ್ರಾಮಾಂತರ ಪ್ರದೇಶದಲ್ಲಿ ಕಂಡುಬರುವ ನೂರಾರು ಮಾರಿ, ಮದ್ದೂರಿ, ಚೌಡಿ, ದುರ್ಗಿ ಮುಂತಾದ ದೇವತೆಗಳು ಪೂಜೆಗಳು ಆರಂಭಗೊಳ್ಳವುದೇ ಗಂಗೆ ಪೂಜೆಯಿಂದ. ಈ ಆಚರಣೆಯಲ್ಲಿ ಗ್ರಾಮದೇವತೆಗಳನ್ನು ಸಮೀಪದ ಜಲಮೂಲವೊಂದರ ಬಳಿ ಕರೆದೊಯ್ದು ಪೂಜೆ ಸಲ್ಲಿಸುವರು.[೩೪]

**ಕರಗ :**

ಕರಗವು ಹಸಿಮಣ್ಣಿನಿಂದ ಮಾಡಿದ ಗಡಿಗೆ. ಇದು ಬೆಂಕಿಗಿರಲಿ, ಬಿಸಿಲಿಗೂ ಒಣಗಲಾರದು ಎನ್ನುವುದು ನಿಯಮ. ಇದು ಅತ್ಯಂತ ಶಕ್ತಿಯುತ ದೇವತೆ, ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ಕಂಡುಬರುವ ಕರಗವು ಮಾತೃದೇವತೆಯ ಪಂಥದ ಬಲಿಷ್ಠ ಗುರುತುಗಳು. ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಕರಗ ಉತ್ಸವಗಳು ಪ್ರತಿವರ್ಷ ನಡೆಯುತ್ತವೆ.[೩೫]

**ಕಳಸ :**

ಕುಂಭ ಕಳಸವು ನೀರನ್ನು ತುಂಬಿಕೊಂಡಿರುವ ತಾಮ್ರದ ಸಣ್ಣ ಪಾತ್ರೆ. ಇದರ ಮೇಲೆ ಎಲೆ ಜೋಡಿಸಿ ತೆಂಗಿನಕಾಯಿ ಇಟ್ಟು ಪೂಜಿಸುವುದು ವಾಡಿಕೆ. ಕಳಸವು ಜಲ ಮತ್ತು ಅಗ್ನಿ ಪರಂಪರೆಯ ಸಮನ್ವಯದ ಸಂಕೇತವಾಗಿ ತೋರುತ್ತದೆ. ಕುಂಭ– ಜಲಸಹಿತವಾಗಿಯೇ ಗರ್ಭದ ಮತ್ತು ಸೃಷ್ಟಿಯ ಸಂಕೇತವಾಗಿದೆ. ಕಳಸವನ್ನು ಮದುವೆ, ಪೂಜೆ ಮತ್ತು ಇನ್ನಿತರ ಯಾವುದೇ ಶುಭಕಾರ್ಯದ ಸಂದರ್ಭದಲ್ಲಿ ಇಟ್ಟು ಪೂಜಿಸುವುದು ರೂಢಿಯಾಗಿದೆ.

**ಗಡಗೆ/ಮಡಿಕೆ/ಹರಿವೆ :**

ಶುಭ ಕಾರ್ಯದಲ್ಲಿ ಮಾತ್ರವಲ್ಲದೆ ಸಾವು, ತಿಥಿ, ಜಾತ್ರೆ ಮುಂತಾದ ಎಲ್ಲಾ ಕಾರ್ಯಗಳಲ್ಲಿ ದೇವರನ್ನು ಕಲ್ಪಿಸುವ ಸಲುವಾಗಿ ಬಳಸದ ಹೊಸ ಗಡಗೆಗಳನ್ನು ಜಲಮೂಲಕ್ಕೆ ತೆಗೆದುಕೊಂಡು ಹೋಗಿ ತೊಳೆದು ನೀರು ತುಂಬಿ ದೇವರೆಂದು ತಂದು ಪೂಜಿಸುವ ಪದ್ಧತಿಗಳು ಎಲ್ಲ ಗ್ರಾಮಗಳಲ್ಲಿ ನಡೆಯುತ್ತವೆ. ಸಾಮಾನ್ಯವಾಗಿ ಶೂದ್ರರು ಮತ್ತು ಕೆಳವರ್ಗ ದವರು ಮಾತ್ರ ದೇವರನ್ನು ಕಲ್ಪಿಸುವ ಈ ಪದ್ಧತಿಗಳನ್ನು ಬಳಸುತ್ತಾರೆ.

ಹೀಗೆ ಈ ನಂಬಿಕೆ ಆಚರಣೆ ಪ್ರಸ್ತುತ ೨೧ನೆಯ ಶತಮಾನದಲ್ಲಿಯೂ ರೂಢಿಯಲ್ಲಿದ್ದು, ಮುಂದುವರೆದಿರುವುದು ಗಮನಾರ್ಹ ಸಂಗತಿ. ಇದರಿಂದ ಒಂದು ವಿಷಯ ಸ್ಪಷ್ಟ. ಅದೇನೆಂದರೆ ಯಾವುದೇ ನಂಬಿಕೆ ಅಥವಾ ಆಚರಣೆ ಇತ್ತೆಂದು ರಾತ್ರೋರಾತ್ರಿ ಬರುವುದಿಲ್ಲ, ಅವುಗಳಿಗೆ ನೂರಾರು ವರ್ಷಗಳ ಪಾರಂಪರಿಕ ಹಿನ್ನೆಲೆ ಇರುವುದು ಸ್ಪಷ್ಟವಾಗುತ್ತದೆ. ವ್ಯಕ್ತಿಯು ಮರಣಾನಂತರವೂ ಅದೃಶ್ಯ ಸ್ಥಿತಿಯಲ್ಲದ್ದು, ಬದುಕಿರುತ್ತಾನೆ ಎಂಬ ನಂಬಿಕೆ ಅವರದು. ಇದಕ್ಕೆ ಪೋಷಕವಾಗಿ ಪಿತೃಕರ್ಮದ ಆಚರಣೆಯು ನಮ್ಮಲ್ಲಿದೆ.

**ಟಿಪ್ಪಣಿಗಳು:**

೧. ಸೀತಾಪುರ ಜಯಲಕ್ಷ್ಮಿ., ೨೦೦೯, **ನಂಬಿಕೆ ಮತ್ತು ಆಚರಣೆ**, ಸಿ. ಮಹದೇವ(ಸಂ)., ತೊಣ್ಣೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು. ೧೮೬.

೨. ನಾಯಕ್ ಡಿ. ಬಿ. (ಸಂ)., ೨೦೦೫, **ಜಾನಪದ ಲೇಖನಗಳು**, ಪು. ೧೨೨.

೩. ಸೋಮೇಶ ಎಂ., ೨೦೧೧, **ಡಣಾಯಣಕನ ಕೆರೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೪೫.

೪. ಕೂಡ್ಲೂರು ವೆಂಕಟಪ್ಪ., ೨೦೦೭, **ಸ್ಥಳನಾಮ ವೀರರು**, ಪು. ೧೭.

೫. ಅದೇ.

೬. ಅದೇ.

೭. ಕೂಡ್ಲೂರು ವೆಂಕಟಪ್ಪ., ೨೦೦೭, **ಪೂರ್ವೋಕ್ತ**, ಪು. ೧೭.

೮. ಸೋಮೇಶ ಎಂ., ೨೦೧೧, **ಪೂರ್ವೋಕ್ತ**, ಪು. ೪೫.

೯. ಅದೇ, ಪು. ೪೬.

೧೦. ಅದೇ.

೧೧. ನಾವಡ. ಎ. ವಿ., ೧೯೯೯, **ಜನಪದ ನಂಬಿಕೆಗಳ ತಾತ್ವಿಕತೆ**, ಎಂ.ಬಿ. ನೇಗಿನಾಳ (ಪ್ರಸಂ), ಬಿ.ಪಿ.ಪಾಟಿಲ(ಸಂ)., 'ಜಾನಪದ ಸಾಹಿತ್ಯ ದರ್ಶನ', ಭಾಗ–೨೩, ಪು. ೧೬.

೧೨. ಅದೇ.

೧೩. ಅದೇ. ಪು. ೧೭.

೧೪. ಅದೇ. ಪು. ೧೮

೧೫. ಅದೇ ಪು. ೧೧೯.

೧೬. ನಾಯಕ್ ಡಿ. ಬಿ. (ಸಂ)., ೨೦೦೫, **ಪೂರ್ವೋಕ್ತ**, ಪು. ೧೧೮.

೧೭. ಅದೇ. ಪು. ೧೧೯.

೧೮. ಅದೇ ಪು. ೧೨೧.

೧೯. ಅದೇ ಪು. ೧೨೨.

೨೦. ಅದೇ.

೨೧. ಅದೇ.

೨೨. ನಾರಾಯಣಸ್ವಾಮಿ ಕೆ. ವೈ., ೨೦೧೦, **ನೀರ ದೀವಿಗೆ**, ಪು. ೧೪೦.

೨೩. ಸಂದ್ಯಾರೆಡ್ಡಿ. ಕೆ ಆರ್., ಐತಿಹ್ಯಗಳ ಐತಿಹಾಸಿಕ ವಿಶ್ಲೇಷಣೆ ಲಕ್ಷ್ಮಣ್ ತೆಲಗಾವಿ(ಸಂ) ಹರತಿಸಿರಿ, ೧೯೮೭, ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ. ಹಿರಿಯೂರು(ತಾ) ಪು. ೮೦೩

೨೪. ಅದೇ. ಪು. ೮೦೦.

೨೫. ಜ್ಯೋತಿಬಾಯಿ, ಗದಗ ಜಿಲ್ಲೆಯ ಐತಿಹ್ಯಗಳು, ಪು. ೪೦೩.

೨೬. ಅದೇ.

೨೭. ಅದೇ. ಪು. ೪೦೬.

೨೮. ನಾಯಕ್ ಡಿ. ಬಿ. (ಸಂ)., ೨೦೦೫, **ಪೂರ್ವೋಕ್ತ**, ಪು. ೧೨೧.

೨೯. ಬಡಿಗೇರ ವೀರೇಶ., ೨೦೧೦, **ಲಾವಣಿ ಸಾಹಿತ್ಯದಲ್ಲಿ ನೀರಾವರಿ ವ್ಯವಸ್ಥೆ**, ಪು. ೨೮

೩೦. ನಾರಾಯಣಸ್ವಾಮಿ ಕೆ. ವೈ., ೨೦೧೦, **ಪೂರ್ವೋಕ್ತ**, ಪು. ೧೮೦.

೩೧. ನಾಯಕ್ ಡಿ. ಬಿ. (ಸಂ)., ೨೦೦೫, **ಪೂರ್ವೋಕ್ತ**, ಪು. ೧೨೨.

೩೨. ಸೋಮೇಶ ಎಂ., ೨೦೧೧, **ಪೂರ್ವೋಕ್ತ**, ಪು. ೩೬.

೩೩. ನಾರಾಯಣಸ್ವಾಮಿ ಕೆ. ವೈ., ೨೦೧೦, **ಪೂರ್ವೋಕ್ತ** ಪು. ೧೮೦.

೩೪. ಅದೇ.

೩೫. ಅದೇ.

# ೭

# ಸಮಾರೋಪ

ಒಂದು ಪ್ರದೇಶದ ಸಂಸ್ಕೃತಿಯ ವಿವೇಚನೆ ಸೂಕ್ಷ್ಮ ಹಾಗೂ ಸಮಗ್ರವಾಗಿರಬೇಕು. ಗ್ರಾಮ, ಹೋಬಳಿ, ತಾಲೂಕು ಹಾಗೂ ಜಿಲ್ಲೆಗಳ ಮಟ್ಟದಲ್ಲಿ ನಡೆಯುತ್ತಿರುವ ಸ್ಥಳೀಯ ಸಂಶೋಧನೆಗಳು ಚರಿತ್ರೆ ಅಧ್ಯಯನಗಳಲ್ಲಿ ಮಹತ್ವದ ಹೆಜ್ಜೆ ಗುರುತುಗಳು. ಸ್ಥಳೀಯ ಅಧ್ಯಯನವು ರಾಜಕೀಯ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳ ದಾಖಲೆ ಹಾಗೂ ಅವುಗಳ ವಿಮರ್ಶಾತ್ಮಕವಲ್ಲದೆ ವಿಶ್ಲೇಷಣಾತ್ಮಕ ಅಧ್ಯಯನವಾಗುವುದು.

"ಗದಗ ಜಿಲ್ಲೆಯ ಕೆರೆ-ಬಾವಿಗಳ ಚಾರಿತ್ರಿಕ ಅಧ್ಯಯನ" ಎಂಬ ಶೀರ್ಷಿಕೆಯ ಪ್ರಸ್ತುತ ಮಹಾಪ್ರಬಂಧದಲ್ಲಿ ಗದಗ ಜಿಲ್ಲೆಯ ಕೆರೆ-ಬಾವಿಗಳ ಚರಿತ್ರೆ ಮತ್ತು ಸಾಂಸ್ಕೃತಿಕ ಸಂಬಂಧವನ್ನು ಸಮಗ್ರವಾಗಿ ದಾಖಲಿಸಿ ವಿಶ್ಲೇಷಿಸುವ ಪ್ರಯತ್ನವಿದು.

ನೀರು ವಿಶ್ವದಲ್ಲಿರುವ ಸಕಲ ಜೀವರಾಶಿಗಳಿಗೆ ಆಧಾರ ಇದು. ದೈನಂದಿನ ಚಟುವಟಿಕೆಗಳಲ್ಲಿ ಮುಖ್ಯವಾದದ್ದು. ಮನುಷ್ಯ ಭೂಮಿಯ ಮೇಲೆ ಕಾಣಿಸಿಕೊಂಡ ದಿನದಿಂದ ಅವನು ನೀರಿನ ಜೊತೆ ನಿಕಟ ಸಂಬಂಧವನ್ನು ಹೊಂದಿದ್ದಾನೆ. ಕೆರೆ, ಕುಂಟೆ, ಬಾವಿ, ಕಟ್ಟೆ ಮತ್ತು ನದಿಗಳು ಮಾನವನ ಅಗತ್ಯಕ್ಕೆ ನೀರನ್ನು ಒದಗಿಸುವ ಪ್ರಾಥಮಿಕ ಮೂಲಗಳಾಗಿವೆ. ಆದರೂ ಭೂಮಿಯಲ್ಲಿ ನೀರು ಕಡಿಮೆ ಪ್ರಮಾಣವಿದ್ದು, ಮಳೆಯ ಅಭಾವದಿಂದ ಈ ಸಮಸ್ಯೆ ಇನ್ನೂ ಹೆಚ್ಚುತ್ತದೆ. ಈ ಸಮಸ್ಯೆಯನ್ನು ಹೋಗಲಾಡಿಸಲು ಇರುವ ಮುಖ್ಯ ಸಾಧನವೆಂದರೆ ಜಲವನ್ನು ಸಂಗ್ರಹಣೆ ಮಾಡುವುದು. ಈ ಆಧಾರದ ಮೇಲೆ ಜಿಲ್ಲೆಯ ವಿವಿಧ ಕಾಲಘಟ್ಟಗಳಲ್ಲಿನ ಕೆರೆ-ಬಾವಿಗಳ ನೀರಾವರಿಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಲಾಗಿದೆ.

ಗದಗ ಜಿಲ್ಲೆಯನ್ನು ಭೌಗೋಳಿಕವಾಗಿ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದ್ದು, ಜಿಲ್ಲೆಯು ಕರ್ನಾಟಕ ರಾಜ್ಯದ ಉತ್ತರ ಮೈದಾನ ಪ್ರದೇಶದಲ್ಲಿದೆ. ಗದಗ ಹಿಂದೆ ಮುಂಬೈ ಪ್ರಾಂತಕ್ಕೆ ಸೇರಿಕೊಂಡಿತ್ತು. ೧೯೯೭ರಂದು ಗದಗ ಜಿಲ್ಲೆಯಾಗಿ ಪ್ರತ್ಯೇಕಿಸಲಾಯಿತು. ಜಿಲ್ಲೆಯನ್ನು ಐದು ತಾಲೂಕುಗಳಾಗಿ ವಿಂಗಡಿಸಿ ಆಡಳಿತವನ್ನು ನಡೆಸಲಾಗುತ್ತದೆ. ಈ ಜಿಲ್ಲೆಯಲ್ಲಿ

ಜಲಸಂಪನ್ಮೂಲಗಳು ವಿರಳವಾಗಿದ್ದು, ತುಂಗಭದ್ರ ಮತ್ತು ಮಲಪ್ರಭಾ ನದಿಗಳು ದಕ್ಷಿಣ ಮತ್ತು ಉತ್ತರದ ಗಡಿಗುಂಟ ಹರಿಯುತ್ತಿದ್ದು, ಕೃಷಿ ಚಟುವಟಿಕೆಗಳನ್ನು ಕೈಗೂಳ್ಳಲು ಸಹಕಾರಿಯಾಗಿವೆ. ಹಾಗೆಯೇ ರಾಷ್ಟ್ರಕೂಟರು, ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ವಿಜಯನಗರದ ಅರಸರು, ಬಹುಮನಿ ಸುಲ್ತಾನರು ಮತ್ತು ಬ್ರಿಟಿಷರು ಈ ಜಿಲ್ಲೆಯಲ್ಲಿ ಆಡಳಿತವನ್ನು ನಡೆಸಿದ್ದಾರೆ. ಜಿಲ್ಲೆಯಲ್ಲಿ ಕೃಷಿ ನೀರಾವರಿಗೆ ಆದ್ಯತೆ ನೀಡಿ ಹಲವಾರು ಕೆರೆ-ಬಾವಿಗಳನ್ನು ನಿರ್ಮಿಸಿದ್ದಾರೆ. ಅರಸರಲ್ಲದೆ ಸಾಮಂತರು, ಶ್ರೀಮಂತರು ಇನ್ನೂ ಮುಂತಾದವರು ಕೆರೆ-ಬಾವಿಗಳ ನೀರಾವರಿಗೆ ಅಂದು ಹೆಚ್ಚಿನ ಆದ್ಯತೆಯನ್ನು ನೀಡಿದ್ದರು.

ಗದಗ ಜಿಲ್ಲೆಯು ಮಳೆಯಾಧಾರಿತ ಕೃಷಿ ಪ್ರದೇಶವಾಗಿದ್ದು, ಕೆರೆ-ಬಾವಿಗಳನ್ನು ನಿರ್ಮಿಸಿ ನೀರನ್ನು ಸಂಗ್ರಹಿಸಿತ್ತಿದ್ದುದ್ದನ್ನು ಕಾಣಬಹುದು. ಮಳೆಯಾಧಾರಿತ ಕೆರೆಗಳು ಮತ್ತು ನದಿ ನೀರನ್ನು ಆಧರಿಸಿದ ಕೆರೆಗಳಾಗಿ ನೋಡಬಹುದು. ಮಳೆ ನೀರು ಮತ್ತು ನದಿ ನೀರನ್ನು ಕೆರೆಗಳಿಗೆ ತುಂಬಿಸಿಕೊಂಡು ಅಂತರ್ಜಲ ಮಟ್ಟವನ್ನು ಹೆಚ್ಚಿಸುವ ಪ್ರಯತ್ನವನ್ನು ಪ್ರಾಚೀನರು ಅನುಸರಿಸುತ್ತಿದ್ದರು. ಇದರಿಂದ ಬಾವಿ ಮತ್ತು ಕೊಳವೆ ಬಾವಿಗಳಲ್ಲಿ ಇಂದಿಗೂ ನೀರು ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಪ್ರಾಚೀನ ಕಾಲದಿಂದ ಪ್ರಸ್ತುತ ಕಾಲದ ಕೆರೆಗಳ ಬಗ್ಗೆ ಪರಾಮರ್ಶಿಸಲಾಗಿದೆ. ಜಿಲ್ಲೆಯಲ್ಲಿ ಪ್ರಾಚೀನ ಕಾಲದ ಕೆರೆಗಳು ಇಂದಿಗೂ ಸುಸ್ಥಿತಿಯಲ್ಲಿದ್ದು ಅವುಗಳ ಅಸ್ತಿತ್ವವನ್ನು ಉಳಿಸಿಕೊಂಡು ಹೋಗುವ ಕಾರ್ಯ ಜರೂರಾಗಬೇಕಿದೆ.

ಈ ಜಿಲ್ಲೆಯ ಕೆರೆ-ಬಾವಿಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೮೧೪ರ ರಾಷ್ಟ್ರಕೂಟರ ಕಾಲದ ದಂಡಾಪೂರ ಶಾಸನದಿಂದ ಹಿಡಿದು ಬ್ರಿಟಿಷರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ-ಬಾವಿಗಳ ಬಗ್ಗೆ ಆಕರಗಳು ದೊರೆಯುತ್ತವೆ. ಜಿಲ್ಲೆಯನ್ನು ಆಳಿದ ರಾಜರು, ಸಾಮಂತರು, ಮಾಂಡಲಿಕರು ಮೊದಲಾದವರು ಕೆರೆಗಳನ್ನು ನಿರ್ಮಿಸಿ ಕೆರೆ-ಬಾವಿಗಳ ನಿರ್ಮಾಣ ಅವುಗಳ ದುರಸ್ತಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ಆ ಕಾಲದಲ್ಲಿ ಕೆರೆ-ಬಾವಿಗಳ ನಿರ್ಮಾಣ ವ್ಯಕ್ತಿಗೆ ಪ್ರತಿಷ್ಠೆಯನ್ನು ಹೆಚ್ಚಿಸಿದ್ದಲ್ಲದೆ ಕೊಡುಗೆಯ ರೂಪದಲ್ಲಿ ಭೂಮಿ, ಹಣ ದೊರಕುತ್ತಿತ್ತು. ಹಾಗೆಯೇ ಕೆರೆ-ಬಾವಿಗಳ ನಿರ್ಮಾಣ ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ನಂಬಿಕೆಯ ಮೇಲೆ ಬೆಳೆದುಬಂದಿರುವ ಜೊತೆಗೆ ಸಮಾಜದ ಅಭಿವೃದ್ಧಿಗಾಗಿ ಹೆಚ್ಚಿನ ಆದ್ಯತೆಯನ್ನು ನೀಡಲಾಗಿತ್ತು.

ಗದಗ ಜಿಲ್ಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವ ನೆಲೆಯಾಗಿತ್ತು. ಹಾಗೇಯೆ ಇತಿಹಾಸ ಕಾಲದಲ್ಲಿ ಇದು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಜಿಲ್ಲೆಯಲ್ಲಿ ರೈತ ಗುಂಪುಗಳು ಕೃಷಿಗೆ, ಕೃಷಿ ಚಟುವಟಿಕೆಗಳಿಗೆ ಅಗತ್ಯವಾದ ನೀರಾವರಿ ಪದ್ಧತಿಯನ್ನು ಹಂತ ಹಂತವಾಗಿ ಸ್ಥಾಪಿಸಿಕೊಂಡರು. ಈ ನಿಟ್ಟಿನಲ್ಲಿ ಗ್ರಾಮೀಣ ಪ್ರದೇಶದ ರೈತ ಗುಂಪುಗಳು ಹಾಗೂ

ಗ್ರಾಮ ಮುಖಂಡರು ಸಣ್ಣ ಪ್ರಮಾಣದ ನೀರಾವರಿ ಕಾಮಗಾರಿಗಳನ್ನು ನಿರ್ಮಿಸಿ, ಹಲವು ಬಗೆಯ ವಿಶೇಷ ಸವಲತ್ತುಗಳನ್ನು ಹಾಗೂ ಸಾಮಾಜಿಕ ಪ್ರತಿಷ್ಠೆ ಗಳಿಸಿಕೊಂಡರು. ಕೆರೆ, ಕಟ್ಟೆ, ಕೊಳ, ಕುಂಟೆ, ಡೋಣಿ, ಬಾವಿಗಳ ನಿರ್ಮಾಣ, ದುರಸ್ತಿಯಂತಹ ಎಲ್ಲಾ ಜವಾಬ್ದಾರಿಗಳನ್ನು ಸ್ಥಳೀಯರೇ ನಿರ್ವಹಿಸುತ್ತಿದ್ದುದು ಒಂದು ದೊಡ್ಡ ಪರಂಪರೆಯಾಗಿ ಬೆಳೆದು ಬಂದಿರುವುದು ಗಮನಾರ್ಹ. ಪ್ರಾಚೀನ ಕಾಲದಲ್ಲಿ ವಿದ್ವಾಂಸರ ನೆಲೆಗಳಿಗಾಗಿ ಹಳ್ಳಿಗಳನ್ನು ಕಟ್ಟುವುದು; ಅಲ್ಲಿ ಕೆರೆ-ಬಾವಿಗಳನ್ನು ನಿರ್ಮಿಸುವುದು ಆ ಕಾಲದ ಪ್ರಧಾನ ಲಕ್ಷಣ. ಅಗ್ರಹಾರ, ಛತ್ರ, ಕೆರೆ, ಬಾವಿ, ದೇವಾಲಯ ಈ ಕಾರ್ಯಗಳು ಪರಸ್ಪರ ಸಂಬಂಧಿಸಿದ್ದವು. ಕೆರೆ ನಿರ್ಮಾಣದ ಜೊತೆಯಲ್ಲಿ ಕೃತಜ್ಞತೆಯ ರೂಪವಾಗಿ ಒಂದು ಗುಡಿಯನ್ನು ಕೆರೆಯ ಹತ್ತಿರ ಕಟ್ಟಲಾಗುತ್ತಿತ್ತು. ಕೆರೆ ದುರಸ್ತಿ, ನಿರ್ವಹಣೆಗಳಿಗೆ ದೇವಾಲಯದ ನಿಧಿಯೂ ಲಭ್ಯವಾಗುತ್ತಿತ್ತು. ದೇವಾಲಯಗಳಿಗೆ ಬಿಟ್ಟ ಭೂಮಿ ದಾನ, ದತ್ತಿಗಳು ನೀರಾವರಿ ಚೌಕಟ್ಟಿನಲ್ಲಿ ಬಹುಮುಖ್ಯ ಪಾತ್ರವಹಿಸಿದ್ದವು. ಗದಗ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಕಾಲದ ಅನೇಕ ಶಾಸನಗಳು ಕೆರೆ-ಬಾವಿಗಳಿಗೆ ಸಂಬಂಧಿಸಿದಂತೆ ಉಲ್ಲೇಖಿಸುತ್ತವೆಯಾದರೂ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೆಚ್ಚಿನ ಪ್ರಮಾಣದ ಶಾಸನಗಳು ಕೆರೆ-ಬಾವಿಗಳನ್ನು ಕುರಿತಂತೆ ಉಲ್ಲೇಖಿಸಿವೆ. ಇವುಗಳಿಂದ ಹತ್ತನೆಯ ಶತಮಾನದ ಕೊನೆಯ ಭಾಗದಿಂದ ಹದಿನಾಲ್ಕನೆಯ ಶತಮಾನದ (ನಾಲ್ಕು ದಶಕಗಳು ಅಂದರೆ ೩೫೦ ವರ್ಷಗಳು)ವರೆಗಿನ ಕಾಲ ಕೆರೆಗಳ ಸ್ವರ್ಣಯುಗವಾಗಿತ್ತು ಎಂಬುದು ಸ್ಪಷ್ಟವಾಗುವುದು.

ಕೆರೆಗಳ ಸ್ವರೂಪ ಮತ್ತು ರಚನೆಯ ದೃಷ್ಟಿಯಿಂದ ಗದಗ ಜಿಲ್ಲೆಯ ಎಲ್ಲಾ ಕೆರೆಗಳು ಒಂದೇ ತೆರನಾಗಿ ಕಂಡುಬರುವುದಿಲ್ಲ. ಬಹುತೇಕ ಕೆರೆಗಳು ಅರ್ಧಚಂದ್ರಾಕೃತಿ, ಆಯತಾಕೃತಿ, ವೃತ್ತಾಕಾರ, ಚೌಕಾಕಾರದ ಕೆರೆಗಳಾಗಿವೆ. ಗುಡ್ಡ, ದಿನ್ನೆ ಮತ್ತು ಕಾಡುಗಳ ಹತ್ತಿರವೇ ನಿರ್ಮಿಸಿರುವುದರಿಂದ ಉತ್ತಮ ಜಲಾನಯನ ಪ್ರದೇಶ ಹೊಂದಿವೆ. ಎಲ್ಲಾ ಕೆರೆಗಳು ಜಲಾನಯನ ಪ್ರದೇಶದಲ್ಲಿ ಬೀಳುವ ವಾರ್ಷಿಕ ಸರಾಸರಿ ಮಳೆ ಪ್ರಮಾಣವು ಕೂಡ ಜಾಸ್ತಿ ಇದೆ. ಕೆರೆಗಳನ್ನು ಸರಣಿ ವ್ಯವಸ್ಥೆಯಲ್ಲಿ ನಿರ್ಮಿಸಿರುವುದು ಅಂದಿನ ತಾಂತ್ರಿಕತೆಗೆ ಹಿಡಿದ ಕೈಗನ್ನಡಿ.

ಕೆರೆಯ ಏರಿಯು ಒಡೆಯದಿರಲೆಂದು ಹೆಚ್ಚಿನ ಕಡೆ ಏರಿಯನ್ನು ಅಂಕು ಡೊಂಕಾಗಿ ನಿರ್ಮಿಸುವುದು ಹಿಂದಿನಿಂದಲೂ ರೂಢಿಯಲ್ಲಿರುವ ಕ್ರಮ. ಏರಿಯ ಒಳಮೈಯನ್ನು ಸ್ಥಳೀಯವಾಗಿ ದೊರೆಯುವ ಕಾಡುಕಲ್ಲುಗಳಿಂದಲೇ ಕಟ್ಟಲಾಗಿದೆ. ಹೊರಮೈಯನ್ನು ಮಣ್ಣಿನಿಂದ ಕಟ್ಟಲಾಗಿದೆ. ಏರಿಯ ಕೌಶಲ್ಯವನ್ನು ಕುರ್ತಕೋಟಿಯ ಕಡಲಗೆರೆ, ಡಂಬಳ ಗೋಣಸಮುದ್ರ, ದಂಡಾಪೂರ ಕೆರೆಗಳಲ್ಲಿ ಕಾಣಬಹುದು. ದೊಡ್ಡ ದೊಡ್ಡ ಪಾಲಿಶ್ ಮಾಡದ ಕಲ್ಲುಗಳನ್ನು ಹೊಂದಿಸಿ ಗಾರೆಯನ್ನು ಬಳಸದೆ ಕಟ್ಟಲಾಗಿದೆ. ಜಿಲ್ಲೆಯ ಅನೇಕ ಕೆರೆಗಳು ಆಕರ್ಷಕವಾದ ಸ್ಥಳದಲ್ಲಿ ಕಟ್ಟಲ್ಪಟ್ಟಿವೆ. ಅವುಗಳಲ್ಲಿ ಸೋಮಾಪೂರ ಕೆರೆ, ಚಿಂಚಲಿಯ ಕೆರೆ, ನರೆಗಲ್ಲ ಕೆರೆ, ಅಬ್ಬಿಗೇರಿ ಕೆರೆ, ಜಕ್ಕಲಿಯ ಕೆರೆಗಳನ್ನು

ಹೆಸರಿಸಬಹುದು. ಸ್ವಾತಂತ್ರ್ಯಾನಂತರ ನಿರ್ಮಿಸಿದ ಅನೇಕ ಕೆರೆಗಳು ಕೂಡ ಪ್ರಕೃತಿಯ ಮಡಿಲಲ್ಲೇ ಇವೆ. ಉದಾ: ನಾಗೇಂದ್ರಗಡ ಕೆರೆ, ಕುಂಟೋಜಿಯ ಕೆರೆ, ಶೆಟ್ಟಿಗೇರಿ ಕೆರೆ, ಕುಂದ್ರಳ್ಳಿ ಕೆರೆಗಳನ್ನು ಹೇಳಬಹುದು.

ಸಾಮಾನ್ಯವಾಗಿ ಎರಡು ತೂಬು, ಎರಡು ಕಾಲುವೆ, ಒಂದು ಕೋಡಿ ರಚನೆಯುಳ್ಳ ಕೆರೆಗಳು ಹೆಚ್ಚು. ಆದರೆ ಡಂಬಳದ ಕೆರೆಯಲ್ಲಿ ಮೂರು ತೂಬು, ಮೂರು ಕಾಲುವೆಗಳನ್ನು ಕಾಣಬಹುದು. ಕೆರೆಯ ಏರಿಯ ಬದಿ ಕೆರೆಯ ದಂಡೆಯ ಮೇಲೆ ದೇವಾಲಯಗಳನ್ನು ಕಟ್ಟಿರುವುದನ್ನು ಕಾಣಬಹುದು. ದೇವಾಲಯ ಇಲ್ಲದ ಕಡೆ ಆಲ, ಅರಳಿ, ಬನ್ನಿ, ಬೇವಿನ ಮರಗಳ ಬುಡದಲ್ಲಿ ಕಟ್ಟೆಕಟ್ಟಿ ಹೆಣ್ಣು ದೇವತೆ ಇಲ್ಲವೆ ನಾಗನ ಪ್ರತಿಮೆ ಮತ್ತು ಈಶ್ವರ ಶಿಲ್ಪಗಳನ್ನು ನಿಲ್ಲಿಸಿರುವುದನ್ನು ಕಾಣಬಹುದು. ಕೆಲವು ಊರುಗಳಲ್ಲಿರುವ ಕೆರೆ ಮತ್ತು ದೇವಾಲಯಗಳು ನಮ್ಮ ಗ್ರಾಮೀಣ ಸಂಸ್ಕೃತಿಯ ಪ್ರತೀಕವಾಗಿ ಬೆಳೆದು ಬಂದಿವೆ.

'ಕೆರೆ ಇದ್ದಲ್ಲಿ ಕೊಕ್ಕರೆ' ಎನ್ನುವ ಮಾತಿದೆ. ಗದಗ ಜಿಲ್ಲೆಯ ಪ್ರದೇಶದ ಕೆರೆಗಳಲ್ಲಿ ಕೊಕ್ಕರೆಯ ಹಿಂಡನ್ನು ಕಾಣಬಹುದು. ಮಾಗಡಿ ಕೆರೆಗೆ ವಲಸೆ ಬರುವ 'ರಾಜಹಂಸ', ಗೋಣಸಮುದ್ರ ಕೆರೆಯ ಪಿನ್‌ಟ್‌ಲ್ ಬಾತು, ಮುಂಡವಾಡ ಕೆರೆಯ ಬಾತು, ಕಪ್ಪತಗುಡ್ಡದ ಆಲದ ಕೆರೆಗೆ ಬರುವ ಮುನಿಯ ಹಕ್ಕಿ ನವಿಲು, ನೀರು ಕಾಗೆ, ಗಂಡುಮುಳಗ ಗೀಜುಗ ಮತ್ತು ಬಾನಾಡಿಯಂತಹ ಹಲವು ಜಾತಿಯ ಹಕ್ಕಿಗಳನ್ನು ಕಾಣಬಹುದು. ಪ್ರಸ್ತುತ ಸಂದರ್ಭದಲ್ಲಿ ಕೆರೆಗಳ ಅವನತಿಯಿಂದಾಗಿ ಹೆಚ್ಚಿನ ಕೆರೆಗಳಲ್ಲಿ ಪಕ್ಷಿಗಳ ಕಲರವ ಅಡಗಿಹೋಗಿದೆ.

ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ವಿಜಯನಗರ, ಮುಸ್ಲಿಮರು, ಘೋರ್ಪಡೆ, ಮರಾಠ ಮತ್ತು ಬ್ರಿಟಿಷರು ಮತ್ತು ಸ್ವಾತಂತ್ರ್ಯಾನಂತರದ ಕಾಲದಲ್ಲಿನ ಬಾವಿಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ. ಈ ಬಾವಿಗಳ ವಾಸ್ತುಶೈಲಿ ಮತ್ತು ಅಲಂಕಾರಗಳನ್ನು ಗಮನಿಸಿದಾಗ ಬಾವಿಗಳ ರಚನೆ ಕಾಲದಿಂದ ಕಾಲಕ್ಕೆ ಬದಲಾಗಿ ಹೆಚ್ಚು ಅಲಂಕಾರಗೊಂಡದ್ದು ಕಂಡುಬರುತ್ತದೆ. ಬಾವಿಗಳು ಕೇವಲ ಸ್ನಾನಕ್ಕಾಗಿ, ಗದ್ದೆ, ಹೊಲ, ತೋಟಗಳಿಗೆ ನೀರುಣಿಸುವುದಕ್ಕಾಗಿ ಉಪಯೋಗವಾಗದೆ, ಅವು ಭಕ್ತಿಯನ್ನು ವ್ಯಕ್ತಪಡಿಸುವ, ವಿಶ್ರಾಂತಿ ಪಡೆಯುವ ಸ್ಥಳವಾಗಿ ಪರಿವರ್ತನೆಯಾದದ್ದು ಬಾವಿಗಳಲ್ಲಿ ಕಟ್ಟಿರುವ ಗುಡಿಗಳು ಮತ್ತು ಮೊಗಸಾಲೆಗಳಿಂದ ಗೊತ್ತಾಗುತ್ತದೆ. ಬಾವಿಯ ಪ್ರವೇಶ, ಬಾಗಿಲುಗಳ ಮೇಲೆ ಮತ್ತು ಮೊಗಸಾಲೆಗಳ ಮೇಲಿರುವ ಬಾಲ್ಕನಿ ಮತ್ತು ಗೋಪುರಗಳು ಬಾವಿಗೆ ಬರುವ ಜನರು ಅವುಗಳ ಮೇಲೆ ನಿಂತು ಸುತ್ತಲಿನ ನಿಸರ್ಗ ಸೌಂದರ್ಯವನ್ನು ಆಸ್ವಾದಿಸಲು ಸಹಕಾರಿಯಾಗಿವೆ. ಬಾವಿಗಳಲ್ಲಿ ಇಳಿಯಲು ಕೇವಲ ಮೆಟ್ಟಿಲುಗಳಿದ್ದರೆ ಆಯಾಸವಾಗಬಹುದೆಂದು ಮಧ್ಯದಲ್ಲಿ ನಿಲ್ಲಲು ಮತ್ತು ಕುಳಿತುಕೊಳ್ಳಲು ಗೂಡುಗಳನ್ನು ಕಟ್ಟಿರುವುದು

ಬಾವಿಯ ರಚನಾಕಾರರ ಕೌಶಲ್ಯವನ್ನು ತೋರಿಸುತ್ತದೆ. ಕೆಲವೊಂದು ಬಾವಿಗಳಲ್ಲಿ ಮೆಟ್ಟಿಲುಗಳು ಒಂದೇ ಸಮನೆ ಹೋಗದೆ ಎಡಕ್ಕೆ, ಬಲಕ್ಕೆ ತಿರುಗಿ ದಿಕ್ಕುಗಳನ್ನು ಬದಲಾಯಿಸುವುದನ್ನು ಗಮನಿಸಿದರೆ ಇದು ಸಹ ಬಾವಿಯನ್ನು ಇಳಿದು ಹತ್ತುವವರಿಗೆ ಆಯಾಸವಾಗಬಾರದೆಂದು ತೋರುತ್ತದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಟ್ಟಿದ ಲಕ್ಕುಂಡಿಯ ಮಾಣಿಕೇಶ್ವರ ಕುಂಡ, ಸಿದ್ಧರ ಬಾವಿ ಮತ್ತು ಕನ್ನಾರ ಬಾವಿಗಳ ತಳಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿಯೇ ಕೊರೆದು ಮೇಲಿನ ಭಾಗವನ್ನು ಗ್ರಾನೈಟ್ ಕಲ್ಲುಗಳಿಂದ ಕಟ್ಟಿದ್ದಾರೆ. ಮಾಣಿಕೇಶ್ವರ ಪುಷ್ಕರಣಿಯನ್ನು ಅನೇಕ ಅಂತಸ್ತುಗಳಲ್ಲಿ ಕಟ್ಟಲಾಗಿದ್ದು, ಮಧ್ಯದಲ್ಲಿ ನಿಲ್ಲಲು ಸ್ಥಳಾವಕಾಶವನ್ನು ಮಾಡಿರುತ್ತಾರೆ. ಮೂರನೆಯ ಮತ್ತು ನಾಲ್ಕನೆಯ ಅಂತಸ್ತುಗಳಲ್ಲಿ ಪೂರ್ವ, ಪಶ್ಚಿಮ ಮತ್ತು ಉತ್ತರದ ಬದಿಗಳಲ್ಲಿ ಎರಡೆರಡು ಗೂಡುಗಳಿವೆ. ಇವುಗಳನ್ನು ಪದರುಗಲ್ಲಿನಿಂದ ಕಟ್ಟಿದ್ದು, ಚಿಕ್ಕ ದೇವಾಲಯಗಳಂತೆ ಕಾಣುತ್ತವೆ.

ಕ್ರಿ.ಶ. ೧೧೬೦ರಲ್ಲಿ ನಿರ್ಮಾಣವಾದ ಸೂಡಿಯ ನಾಗರಬಾವಿಯ ವಾಸ್ತುಶೈಲಿಯನ್ನು ಗಮನಿಸಿದಾಗ ಒಂದು ದೇವಸ್ಥಾನವನ್ನು ನೋಡಿದ ಅನುಭವವಾಗುತ್ತದೆ. ಬಾವಿಯ ದಾರಿ ಮತ್ತು ಬಾವಿಯ ಮೂರು ಬದಿಗಳಲ್ಲಿ ದೇವಸ್ಥಾನಗಳಲ್ಲಿರುವ ಗೋಡೆಗಳಂತೆಯೇ ಅಲಂಕಾರವುಳ್ಳ ಗೋಡೆಯಿದೆ. ಈ ಗೋಡೆಯು ಜಗತಿ, ಪದ್ಮ, ತ್ರಿಪಟ್ಟ ಕುಮುದ, ಕಪೋತ, ಪದ್ಮಗಳಿಂದ ಕೂಡಿದ ಅಧಿಷ್ಠಾನವನ್ನೊಳಗೊಂಡಿದೆ. ಬಾವಿಯ ನಾಲ್ಕು ಮೂಲೆಗಳಲ್ಲಿ ಮೆಟ್ಟಿಲುಗಳನ್ನು ಕಟ್ಟಿ ಬಾವಿಯಲ್ಲಿ ಈಜಾಡಿ ವಿಶ್ರಾಂತಿ ಪಡೆಯಲು ವ್ಯವಸ್ಥೆ ಮಾಡಿದ್ದಾರೆ. ಬಾವಿಯ ಗೋಡೆಯಲ್ಲಿರುವ ನಡುನಿಲ್ಲೆಡೆ ಎತ್ತರದ ಮಟ್ಟದಲ್ಲಿರುವುದರಿಂದ ಈ ವ್ಯವಸ್ಥೆ ಮಾಡಿರಬಹುದು.

೧೨ನೇ ಶತಮಾನದಲ್ಲಿ ಕಟ್ಟಿದ ಲಕ್ಷ್ಮೇಶ್ವರದ ಬಾವಿಯು ಸರಳವಾಗಿದ್ದರೂ ಇಲ್ಲಿ ಬಾವಿಯನ್ನು ಕಟ್ಟಲು ತೋರಿದ ಕಲಾಕೌಶಲ್ಯ ವಿಶಿಷ್ಟವಾಗಿದೆ. ಬಾವಿಯು ಆಳವಾಗಿದ್ದರಿಂದಲೋ ಏನೋ ಗೋಡೆಗಳನ್ನು ಎತ್ತರವಾಗಿ ಕಟ್ಟಿದ್ದಾರೆ. ಈ ಗೋಡೆಯನ್ನು ಬಲಪಡಿಸಲು ಗೋಡೆಗಳ ಮಧ್ಯದಲ್ಲಿ ಅಡ್ಡ ತೊಲೆಗಳನ್ನು ಸೇರಿಸಿದ್ದಾರೆ. ಇಲ್ಲಿರುವ ಹಜ್ರತ್ ಮಲ್ಲಿಕ್ ಗುಮ್ಮಟ ಬಾವಿ, ಲಕ್ಷ್ಮೀಲಿಂಗನ ಬಾವಿ, ದೇಸಾಯಿ ಬಾವಿಗಳು ಆಳವಾಗಿವೆ. ಇವನ್ನು ಸಹ ಬಲಪಡಿಸಲು ಅಡ್ಡ ತೊಲೆಗಳನ್ನು ಗೋಡೆಗಳಲ್ಲಿ ಸೇರಿಸಿದ್ದಾರೆ. ಆಳವಾದ ಈ ಬಾವಿಗಳಿಗೆ ಇಳಿಯಲು ಒಂದೇ ಸಮನೆ ಮಟ್ಟಿಲುಗಳಿದ್ದರೆ, ಇಳಿಯುವವರಿಗೆ ತೊಂದರೆಯಾಗಬಹುದು. ಮೆಟ್ಟಿಲುಗಳು ಬೇರೆ ಬೇರೆ ದಿಕ್ಕುಗಳಿಗೆ ತಿರುಗಿಕೊಂಡು ಬಾವಿಗೆ ಸೇರಿವೆ. ಇಲ್ಲಿಯೂ ನೀರು ಮೇಲೆತ್ತುವ ಜಗಲಿಗಳು, ಕಲ್ಲಿನ ಕಾಲುವೆಗಳು ಕಂಡುಬರುತ್ತವೆ.

ಘೋರ್ಪಡೆ ಮನೆತನದ ಮಾಲೋಜಿರಾಯನು ಗಜೇಂದ್ರಗಡದಲ್ಲಿ ನಿರ್ಮಿಸಿದ ಮಾಲೋಜಿ ಬಾವಿಯೂ ಕಲಾತ್ಮಕವಾಗಿದೆ. ಇಲ್ಲಿ ಸಹ ನೀರೆತ್ತುವ ಜಗಲಿಯು ಪ್ರಮುಖವಾಗಿ ಕಾಣುತ್ತದೆ. ಅದರ ಮೇಲೆ ಕೈಸಾಲೆಯಿದೆ. ಅದರ ಸಂಕೇತವಾಗಿ ಅಗಲವಾದ ಕಂಠದ ಮೇಲೆ ಹಡೆಯುಳ್ಳ

ಸರ್ಪ, ಸರ್ಪದ ಮುಂದೆ ಕುಳಿತು ಪುಂಗಿಯೂದುತ್ತಿರುವ ಮನುಷ್ಯ, ಪುಂಗಿಯೂದುತ್ತ ಸರ್ಪವನ್ನು ಬೆನ್ನಟ್ಟಿರುವ ಮನುಷ್ಯನ ಶಿಲ್ಪಗಳಿವೆ. ಒಟ್ಟಾರೆ ಈ ಜಿಲ್ಲೆಯ ಹೆಚ್ಚಿನ ಬಾವಿಗಳ ತಳಭಾಗವನ್ನು ನೈಸರ್ಗಿಕ ಕಲ್ಲಿನಲ್ಲಿಯೇ ಕೊರೆದು ಮೇಲಿನ ಭಾಗವನ್ನು ಕಲ್ಲು, ಗ್ರಾನೈಟ್‌ನಿಂದ ಕಟ್ಟಿದ್ದಾರೆ. ಈ ಎಲ್ಲಾ ಬಾವಿಗಳ ವಾಸ್ತುಶೈಲಿ, ಅಲಂಕಾರಕ್ಕಾಗಿ ಕೆತ್ತಿದ ಶಿಲ್ಪಗಳನ್ನು ಗಮನಿಸಿದಾಗ ಹಿಂದೆ ಅರಸರು ಮತ್ತು ಇತರ ಜನರು ದೇವಸ್ಥಾನಗಳನ್ನು ಕಟ್ಟಿಸಲು ತೋರಿದ ಆಸಕ್ತಿಯನ್ನು ಬಾವಿಗಳನ್ನು ಕಟ್ಟಿಸುವುದರಲ್ಲಿಯೂ ತೋರಿದ್ದಾರೆಂದು ಹೇಳಬಹುದು.

೧೯೫೫ರ ನಂತರ ಜಿಲ್ಲೆಯಲ್ಲಿ ಯಾವುದೇ ಹೊಸ ಕೆರೆಗಳು ನಿರ್ಮಾಣವಾಗಿಲ್ಲ. ಇರುವ ಕೆರೆಗಳ ದುರಸ್ತಿ, ಜೀರ್ಣೋದ್ಧಾರವೇ ಸರ್ಕಾರದ ಆದ್ಯಗಮನವಾಗಿತ್ತು. ಕೆರೆಗಳ ನಿರ್ಮಾಣವನ್ನು ಲೋಕೋಪಯೋಗಿ ಇಲಾಖೆಗೆ ವಹಿಸಲಾಗಿತ್ತು. ಈ ಸಮಯದಲ್ಲಿ ಕೆರೆಗಳ ಅಭಿವೃದ್ಧಿ ಆಗಿಲ್ಲ ಎನ್ನಬಹುದು.  ಲೋಕೋಪಯೋಗಿ ಇಲಾಖೆಯಿಂದ ನೀರಾವರಿ ಇಲಾಖೆಯೆಂದು ಪ್ರತ್ಯೇಕ ಇಲಾಖೆಯಾಗಿ ಮಾಡಲಾಯಿತು. ಜಿಲ್ಲೆಯಲ್ಲಿ ಪ್ರಸ್ತುತ ಸಣ್ಣ ನೀರಾವರಿ ಇಲಾಖೆಗೆ ಸಂಬಂಧಿಸಿದ ೨೯ ಕೆರೆಗಳು ಕಂಡುಬರುತ್ತವೆ. ಉಳಿದ ಕೆರೆಗಳು ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗೆ ಸಂಬಂಧಿಸಿದವುಗಳಾಗಿವೆ. ಇವುಗಳ ನಿರ್ವಹಣೆ, ಜೀರ್ಣೋದ್ಧಾರ ಮತ್ತು ಸಂರಕ್ಷಣೆಯ ಕಾರ್ಯಗಳು ಈ ಇಲಾಖೆಗೆ ಒಳಪಟ್ಟಿದೆ.

ಇತ್ತೀಚೆಗೆ ಕೆರೆಗಳಲ್ಲಿ ಹೂಳು ತುಂಬಿದ್ದು, ಆ ಕೆರೆಗಳಲ್ಲಿ ನಿರ್ದಿಷ್ಟ ಪ್ರಮಾಣದ ನೀರನ್ನು ಶೇಖರಿಸಲು ಸಾಧ್ಯವಾಗುತ್ತಿಲ್ಲ, ಜೊತೆಗೆ ಕೆರೆಗಳನ್ನು ಒತ್ತುವರಿ ಮಾಡಿ ಕೆರೆಗಳು ತಮ್ಮ ವಿಸ್ತೀರ್ಣ ಕಳೆದುಕೊಂಡಿರುವುದನ್ನು ನೋಡಬಹುದು. ಇದರಿಂದ ಕೆರೆಗಳು ವಿನಾಶದ ಅಂಚಿಗೆ ತಳ್ಳಲ್ಪಟ್ಟಿವೆ. ಆದ್ದರಿಂದ ಕೆರೆಗಳಲ್ಲಿನ ಹೂಳನ್ನು ತೆಗೆಸಿ ಕೆರೆ ಒತ್ತುವರಿಯನ್ನು ಬಿಡಿಸಿ ಹೆಚ್ಚಿನ ನೀರು ಸಂಗ್ರಹಿಸಲು ಸಂಬಂಧಪಟ್ಟ ಇಲಾಖೆಗಳು ಅಗತ್ಯ ಕ್ರಮವನ್ನು ಕೈಗೊಳ್ಳಬೇಕು. ಕ್ರಮ ಕೈಗೊಳ್ಳದಿದ್ದರೆ ಕೆರೆಗಳು ಮಾಯವಾಗುವ ಸಂಭವವೇ ಹೆಚ್ಚು. ಹೊಸ ಕೆರೆಗಳ ನಿರ್ಮಾಣ ಅಸಾಧ್ಯವಾಗಿರುವುದರಿಂದ ಇರುವ ಕೆರೆಗಳ ಸಂರಕ್ಷಣೆ ಪುನಶ್ಚೇತನವೇ ನಮ್ಮ ಮುಂದಿನ ಉದ್ದೇಶವಾಗಬೇಕು.

ಜಿಲ್ಲೆಯಲ್ಲಿ ಕೆರೆಗಳು ಸರಣಿ ವ್ಯವಸ್ಥೆಯನ್ನು ಹೊಂದಿವೆ. ಅಂದರೆ ಒಂದು ಕೆರೆ ತುಂಬಿದ ನಂತರ ಅದರ ಕೋಡಿಯ ಮೂಲಕ ನೀರು ಹೊರ ಬಂದು ಅದರ ಕೆಳಗಿನ ಕೆರೆ ತುಂಬಲು ಮತ್ತೆ ಆ ಕೆರೆಯಿಂದ ಹೊರ ಬಂದ ನೀರು ಮತ್ತೊಂದು ಕೆರೆಯನ್ನು ಸೇರುತ್ತದೆ. ಕೆರೆ–ಬಾವಿಗಳ ನೀರಾವರಿ ಪದ್ಧತಿಯು ಬಹಳ ಹಿಂದಿನಿಂದಲೂ ವ್ಯವಸ್ಥಿತವಾಗಿ ಇಂದಿನವರೆಗೂ ಅದರ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಕೆರೆ–ಬಾವಿಗಳ ಸಂರಕ್ಷಣೆ ನಮ್ಮ ಮುಂದಿನ ತಲೆಮಾರಿನವರಿಗೆ ಬಿಟ್ಟುಹೋಗುವ ಕೊಡುಗೆಯೆಂದೇ ಹೇಳಬಹುದು.

ಕೆರೆಗಳನ್ನು ಕುರಿತಂತೆ ಕೆಲವು ನಂಬಿಕೆ ಮತ್ತು ಆಚರಣೆಗಳು ಅನಾದಿಕಾಲದಿಂದಲೂ ಇವೆ. ಒಂದು ಕೆರೆಯನ್ನು ನಿರ್ಮಿಸುವ ಕಾಲದಲ್ಲಿ ಆದ ಅಡಚಣೆಗಳನ್ನು ನಿವಾರಿಸಲು, ನರಬಲಿ, ಪ್ರಾಣಿಬಲಿಗಳನ್ನು ನೀಡಿರುವುದು ಜನಪದ ಕಥೆಯಾಗಿ ಹೊರಹೊಮ್ಮಿವೆ. ಡೋಣಿಯ ಆಲದ ಕೆರೆಯ ದಂಡೆಯಲ್ಲಿ ಬಹಳ ಹಳೆಯ ಕಾಲದ ಮರವಿದ್ದು. ಅದರ ನೀರು ಕುಡಿದರೆ ಚರ್ಮರೋಗ ಹೋಗುತ್ತಿತ್ತು. ಮಂಜಿನ ಡೋಣಿಯಲ್ಲಿ ೧೨ ತಿಂಗಳು ನೀರು ಇರುತ್ತದೆ ಮತ್ತು ಇಲ್ಲಿಯ ನೀರು ಮಂಜಿಗಿಂತ ತಂಪಾಗಿರುವುದರಿಂದ ಮಂಜಿನ ಡೋಣಿಯಾಗಿ ರೂಢಿಯಲ್ಲಿ ಬಂತು. ಗಂಗಿಬಾವಿಯ ನೀರು ಪವಿತ್ರವೆಂದು ಪರಿಗಣಿಸಲ್ಪಟ್ಟಿದ್ದು, ಇಲ್ಲಿ ಸ್ನಾನ ಮಾಡಿದರೆ ರೋಗರುಜಿನಗಳು ಮಾಯವಾಗುತ್ತವೆ. ಈ ಜಲವನ್ನು ಒಯ್ದು ಹೊಲಗಳಿಗೆ ಚಿಮುಕಿಸಿದ್ದಲ್ಲಿ ಬೆಳೆ ಹುಲುಸಾಗಿ ಬರುವುದೆಂಬ ನಂಬಿಕೆ ಇದೆ. ಪ್ರತಿವರ್ಷ ಶ್ರಾವಣಮಾಸದಲ್ಲಿ ಮಲ್ಲಯ್ಯನ ಲಗ್ನ ನೆರವೇರುತ್ತದೆ. ಈ ಸಮಯದಲ್ಲಿ ಗಂಗಿಬಾವಿಯ ನೀರು ಅದೃಶ್ಯವಾಗುತ್ತದೆ ಎಂಬ ಸಂಗತಿ ಪ್ರಚಲಿತದಲ್ಲಿದೆ. ಬೆಕ್ಕಿನಕೊಳದಲ್ಲಿ ಹೆಚ್ಚಾಗಿ ಅಡವಿ ಬೆಕ್ಕುಗಳು ಕಂಡುಬರುತ್ತವೆ. ಹಗಲು ನೀರು ಸಿಗುವುದಿಲ್ಲ ಎನ್ನುವ ಕಾರಣಕ್ಕಾಗಿ ಹಗಲು ಬತ್ತಿಕೆರೆ ಎಂದು ಕರೆಸಿಕೊಳ್ಳುತ್ತದೆ.

ಯುಗಾದಿ, ದಸರಾ, ದೀಪಾವಳಿ ಮುಂತಾದ ಹಬ್ಬಗಳಲ್ಲಿ ಕೆರೆ-ಬಾವಿಗಳೊಂದಿಗಿನ ಆಚರಣೆಗಳು ಕಂಡುಬರುವವು. ಆದರೆ ಬಿತ್ತುವಾಗ ಕೆರೆಯ ಮೇಲಿರುವ ಕನ್ನೀರಮ್ಮ, ಕೆಂಚಮ್ಮ, ಹೊನ್ನಮ್ಮ, ಗುಂಡಲಿಂಗ, ಈಶ್ವರ ಗುಡಿಗಳಿಗೆ ಪೂಜೆ ಮಾಡಿ, ಬಿತ್ತುವ ಕಾರ್ಯವನ್ನು ಆರಂಭಿಸುತ್ತಾರೆ. ಫಸಲನ್ನು ಕೊಯ್ಯುವಾಗ ಜೋಳ, ಭತ್ತಗಳಿದ್ದರೆ ಕನ್ನೀರಮ್ಮನ ಅಥವಾ ಕೆಂಚಮ್ಮನ ಗುಡಿಗೆ ಹೋಗಿ ಐದು ಮುಷ್ಠಿ ಪ್ರಮಾಣದಲ್ಲಿ ಧಾನ್ಯವನ್ನು ಗುಂಪುಗಳಾಗಿಟ್ಟು ಅರ್ಪಿಸಿ ನಂತರ ಬೆಳೆಯನ್ನು ಕೊಯ್ದು, ಕಣ ಮಾಡಿ ತುಂಬುತ್ತಾರೆ. ಇಂತಹ ಆಚರಣೆಗಳು ಜಂತಲಿಶಿರೂರು, ಪೇಠಾಲೂರು, ಡಂಬಳ, ಡೋಣಿ, ಶಿರಹಟ್ಟಿ, ರೋಣ ಪ್ರದೇಶಗಳಲ್ಲಿ ಜರುಗುತ್ತವೆ. ಹೊಲಕ್ಕೆ ಬಿತ್ತಲು ಹೋಗುವಾಗ ಕೆರೆ ದಂಡೆಯಲ್ಲಿರುವ ದೇವಸ್ಥಾನಗಳಿಗೆ ಮೊದಲಿಗೆ ನಿಧಿ ಹಾಕಿ ಮುಂದೆ ಸಾಗುತ್ತಾರೆ. ಇಂತಹ ಆಚರಣೆಗಳು ಪ್ರಮುಖ ದೇವಸ್ಥಾನಗಳಲ್ಲಿ ನಡೆಯುವುದು ಸರ್ವೇಸಾಮಾನ್ಯವಾಗಿದೆ.

ಯಾವುದೇ ಉತ್ಸವಗಳು ಪ್ರಾಚೀನ ಎನಿಸಿಕೊಳ್ಳಬಹುದಷ್ಟೆ ಹೊರತು ಐತಿಹಾಸಿಕ ಆಗುವುದು ಕಷ್ಟ. ಸಾಮಾನ್ಯವಾಗಿ ಉತ್ಸವ ಎಂದೊಡನೆ ಕೇಳಿದವರು ನೆನೆಪು ಮಾಡಿಕೊಳ್ಳುವುದು ದೇವರಿಗೆ ಸಂಬಂಧಿಸಿದ ಉತ್ಸವಗಳನ್ನು ಮಾತ್ರ. ದೇವರುಗಳಿಗೆ ಸಂಬಂಧಿಸಿದ ಉತ್ಸವಗಳು ಸಾರ್ವತ್ರಿಕ ಸ್ವರೂಪ ಪಡೆಯುವುದಿಲ್ಲ. ಅವು ನಿರಂತರವೂ ಅಲ್ಲ, ಯಾವುದೋ ಸಂದರ್ಭದಲ್ಲಿ ಆಚರಣೆಗೊಂಡು ಇಲ್ಲವಾಗಿ ಬಿಡುತ್ತವೆ. ಪ್ರಾಚೀನ ಕಾಲದಲ್ಲಿ ಕರ್ನಾಟಕದ ಜನತೆಯು ಯಾವುದೇ ರಾಜಕೀಯ ಅಥವಾ ಸಾಮಾಜಿಕ ಉತ್ಸವಗಳನ್ನು ಆಚರಿಸುತ್ತಿದ್ದ ದಾಖಲೆಗಳು ಇಲ್ಲವಾದರೂ ದೇವಾಲಯಗಳ ಮೂಲಕ ಆಚರಿಸುತ್ತಿದ್ದ ದಾಖಲೆಗಳು ಶಾಸನಗಳ ಮೂಲಕ ದೊರೆತಿವೆ. ದೇವಸ್ಥಾನದಲ್ಲಿ ನಿತ್ಯ

ಪೂಜೆಯಲ್ಲದೆ ಕೆಲವು ನಿರ್ದಿಷ್ಟ ದಿನಗಳಂದು ವಿಶೇಷ ಪೂಜೆಗಳು ನಡೆಯುತ್ತವೆ. ಭಕ್ತಾದಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ನಡೆಸುವ ವಿಶೇಷ ಪೂಜೆ ಅಥವಾ ಉತ್ಸವಗಳಲ್ಲದೇ ವರ್ಷದ ಕೆಲವು ನಿರ್ದಿಷ್ಟ ದಿನಗಳಂದು ಶಾಶ್ವತವಾಗಿ ವಿಶೇಷ ಪೂಜೆಗಳು ನಡೆದುಕೊಂಡು ಬಂದಿವೆ.

ಮದುವೆ ಆಚರಣೆಗಳಲ್ಲಿ ನೀರಿನ ಶಾಸ್ತ್ರಗಳೇ ಪ್ರಮುಖ ಅಂಶಗಳಾಗಿವೆ. ಮದುವೆಯ ನಂತರ ವಧೂ ವರರು ಮಂಗಳವಾದ್ಯ ಸಹಿತವಾಗಿ ನೀರಿನ ಮೂಲವೊಂದಕ್ಕೆ ತೆರಳಿ ಪೂಜೆ ಸಲ್ಲಿಸುವ ಆಚರಣೆಯು ಒಂದು ಅಪೂರ್ವ ಆಶಯವನ್ನು ಒಳಗೊಂಡಿರುವಂಥ ಶಾಸ್ತ್ರವಾಗಿದೆ. ಈ ಆಚರಣೆಯಲ್ಲಿ ದಂಪತಿಗಳು ಬಾವಿಯ ದಡದಲ್ಲಿ ಏಳು ಬಗೆಯ ಧಾನ್ಯಗಳನ್ನು ಮೊಳಕೆ ಬಿಡಿಸುವ ಶಾಸ್ತ್ರವನ್ನು ನಡೆಸುತ್ತಾರೆ. ಇದು ಫಲವಂತಿಕೆಯನ್ನು ಪ್ರಾರ್ಥಿಸುವ ಸಾಂಕೇತಿಕ ವಿಧಿ. ಮನೆಯ ಹಿರಿಯರು ಪ್ರತಿನಿತ್ಯ ಈ ಧಾನ್ಯಕ್ಕೆ ನೀರೆರೆದು ಕಾಯುತ್ತಾರೆ. ವಧೂ ವರರು ಬಿತ್ತಿದ ಧಾನ್ಯಗಳಲ್ಲಿ ಮೊಳಕೆ ಚೆನ್ನಾಗಿ ಮೂಡಿದರೆ ಅವರ ಮೂಲಕವಾಗಿ ವಂಶೋದ್ಧಾರವಾಗುವುದೆಂದು ಭಾವಿಸುತ್ತಾರೆ. ಈ ಬಾವಿ ಪೂಜೆಯು ಫಲವಂತಿಕೆಯ ಪಂಥದ ವಿಧಿಗಳಲ್ಲಿ ಒಂದಾಗಿರುವುದನ್ನು ಗುರುತಿಸಬಹುದು.

ಪ್ರಸ್ತುತ ದಿನಗಳಲ್ಲಿ ಅನೇಕ ಕೆರೆ–ಬಾವಿಗಳು ಅನೇಕ ರೀತಿಯಲ್ಲಿ ಕಸಕಡ್ಡಿಗಳಿಂದ, ಚರಂಡಿ ನೀರಿನ ಒಳಹರಿವಿನಿಂದ ಕಶ್ಮಲಗೊಂಡಿವೆ. ಇಂತಹ ನೀರಿನಲ್ಲಿ ಸ್ನಾನ ಮಾಡಿದರೆ ಪಾಪ ಪರಿಹಾರವಾಗುವ ಬದಲು ನಾವೇ ಪಾಪಕ್ಕೆ ಗುರಿಯಾಗಬೇಕು ಎನ್ನುವ ಎಚ್ಚರಿಕೆಯನ್ನು ವೈಯಕ್ತಿಕ ಶುಚಿತ್ವದ ನೆಲೆಯಲ್ಲಿ ನಮ್ಮ ವಿಜ್ಞಾನ ತಿಳಿಸುತ್ತದೆ. ಇದು ಮೂಢನಂಬಿಕೆ ಎಂದು ವಾದಿಸಬಹುದು. ಆದರೆ ದೇವರು ಗುಡಿಯ ಮುಂದಿನ ಕೆರೆಯಲ್ಲಿ ಅಥವಾ ಬಾವಿಯಲ್ಲಿ ಸ್ನಾನ ಮಾಡಿ ತೀರ್ಥವನ್ನು ಸೇವಿಸುವುದರ ಮೂಲಕ ಪ್ರಾಯಶ್ಚಿತ್ತ ಪ್ರಾಪ್ತಿಯಾಗುತ್ತದೆ. ಪಾಪ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಒಂದು ಮಾದರಿ ಈ ಜಿಲ್ಲೆಯ ಯಳವತ್ತಿ ಗುಂಡಲಿಂಗನ ಬಾವಿ, ಶಿಂಗಟಾಲೂರು ವೀರಭದ್ರ ದೇವರ ಮುಂದಿನ ನದಿಯಲ್ಲಿ ಜರುಗುವ ಆಚರಣೆಗಳು ಉದಾರಹಣೆ ಕಂಡುಬರುತ್ತವೆ.

ಖಂಡುಗದಷ್ಟು ಪಾಪ ಮಾಡಿದ್ದರೂ ಗಂಗೆಯಲ್ಲಿ ಒಂದು ಸಾರಿ ಮುಳುಗಿದರೆ ಪಾಪ ಪರಿಹಾರವಾಗುತ್ತೆ ಎಂದು ಜನ ಆಡಿಕೊಳ್ಳುವುದನ್ನು ಕೇಳಿದ್ದೇವೆ. ಈ ನಂಬಿಕೆಯ ಹಿಂದೆ, ಪವಿತ್ರಗೊಳ್ಳುವ ಪ್ರಾಯಶ್ಚಿತ್ತದ ಆಶಯವು ಕೆಲಸ ಮಾಡುತ್ತದೆ. ಈ ನಂಬಿಕೆಯನ್ನು ಮೂಢನಂಬಿಕೆ ಅಂತ ತೀರ್ಮಾನಿಸುವಾಗ ನಾವು ಪರಿಗಣಿಸುವುದು ಮಲಿನಗೊಂಡ ಕೊಳ ಅಥವಾ ನದಿಯನ್ನು ಗಮನದಲ್ಲಿಟ್ಟುಕೊಂಡು ಹೇಳಿರುತ್ತೇವೆ. ಈ ನಂಬಿಕೆಯನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕವಾಗಿ ವಿವರಿಸಿಕೊಂಡಾಗ ನಮ್ಮ ದೇಶದಲ್ಲಿ ನೀರಿನ ಮಲೀನತೆ ಆಧುನಿಕ ಪ್ರಕ್ರಿಯೆಗಳ ಆರಂಭದೊಂದಿಗೆ ಮೊದಲಾಯಿತು. ವಸಾಹತುಶಾಹಿ ಆಡಳಿತಕ್ಕಿಂತ ಹಿಂದಿನ ಭಾರತದಲ್ಲಿ ಕೆರೆಯನ್ನು (ಕೊಳಗ) ವರ್ಷಕ್ಕೆ ಒಂದೆರಡು ಬಾರಿ ಹೂಳೆತ್ತಿ ಶುದ್ಧ ಮಾಡುತ್ತಿದ್ದರು. ಕೈಗಾರಿಕೆಗಳು ಇರಲಿಲ್ಲವಾದ್ದರಿಂದ

ನದಿಗಳು, ಕೆರೆಗಳು ಮಲೀನವಾಗುವ ಸಾಧ್ಯತೆ ಇರಲಿಲ್ಲ. ಇಂತಹ ಕೆರೆಗಳಲ್ಲಿ ಸ್ನಾನ ಮಾಡುವುದರಿಂದ ಯಾವುದೇ ರೋಗಗಳ ಭಯವಿಲ್ಲದ ಸಂದರ್ಭದಲ್ಲಿ ಈ ನಂಬಿಕೆಯನ್ನು ಮೌಢ್ಯ, ಅವೈಜ್ಞಾನಿಕ ಎಂದು ಕರೆಯಬಹುದೇ?

ಕೆರೆಯ ನೀರಲ್ಲಿ ಮುಳುಗುವುದರಿಂದ ಪ್ರಾಯಶ್ಚಿತ್ತ ಹಾಗೂ ಪರಿಶುದ್ಧತೆಯನ್ನು ಗಳಿಸಬಹುದು ಎಂದು ಗಾಢವಾಗಿ ನಂಬುವ ಮನುಷ್ಯ, ಇಂದಿನ ಮಲೀನತೆಯನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳುವ ಒತ್ತಡವೇ, ತೀರ್ಥ ಕೊಳಕಾಗಿದ್ದರೂ ಅಸಹ್ಯಪಡದೆ ಸ್ನಾನ ಮಾಡು, ಕುಡಿ ಎನ್ನುವ ನಂಬಿಕೆಯನ್ನು ಸೃಷ್ಟಿಸುತ್ತದೆ. ಕೆರೆಯ ನೀರಲ್ಲಿ ಸ್ನಾನ ಮಾಡಬೇಕು ಎನ್ನುವ ನಂಬಿಕೆ ಇಲ್ಲಿಂದ ಹೊತ್ತ ನೀರು ಕೊಳಕಾಗಿದ್ದರೂ ಅಸಹ್ಯಪಡದೆ ಸ್ನಾನ ಮಾಡಬೇಕು ಎಂದು ಮಾರ್ಪಾಡಾಗಿದೆ. ಈ ಮಾರ್ಪಾಟಿನ ಒಳರಚನೆಯಲ್ಲಿ ಎಂಥ ಚಾರಿತ್ರಿಕ ಹಾಗೂ ಧಾರ್ಮಿಕ ಅನಿವಾರ್ಯಗಳು ಹುದುಗಿರುತ್ತವೆ ಎನ್ನುವುದನ್ನು ವಿವರಿಸಲು ಸಾಧ್ಯವಾಗಿದೆ. ಉದಾ : ಗಜೇಂದ್ರಗಢದ ಪುಷ್ಕರಣಿಗಳು, ವರವಿಯ ಅಂಬಲಿ ಹೊಂಡ, ಹೊಳಲ್ಲಮ್ಮನ ಹೊಂಡಗಳು, ಲಕ್ಕುಂಡಿಯ ಪುಷ್ಕರಣಿಗಳು,

ಗಜೇಂದ್ರಗಡದ ಪುಷ್ಕರಣಿಯು ಕಾಲಕಾಲೇಶ್ವರ ಸನ್ನಿಧಿಗೂ ೧ ಕಿ.ಮೀ ಅಂತರದಲ್ಲಿ ಪಶ್ಚಿಮಾಭಿಮುಖವಾಗಿರುವ ಪುಣ್ಯ ಸ್ನಾನದ ಪುಷ್ಕರಣಿಯಲ್ಲಿ ಸ್ನಾನ ಮಾಡುವುದರಿಂದ ದೈನಂದಿನ ಬದುಕಿನಲ್ಲಿ ಮಾಡಿರುವ ಪಾಪ, ಕರ್ಮಗಳು ತೊಳೆದು ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ಭಕ್ತರದ್ದು. ಹೀಗಾಗಿಯೇ ಶ್ರೀಕ್ಷೇತ್ರದ ದರ್ಶನಕ್ಕೆ ಬರುವ ಭಕ್ತರು ಕ್ಷೇತ್ರ ಪ್ರವೇಶಿಸುತ್ತಿದ್ದಂತೆಯೇ ಪುಣ್ಯ ಸ್ನಾನದ ಪುಷ್ಕರಣಿಯಲ್ಲಿ ಸ್ನಾನ ಮಾಡಿ ಕಾಲಕಾಲೇಶ್ವರನ ಸನ್ನಿಧಿಗೆ ತೆರಳಿ ಪೂಜೆ ಸಲ್ಲಿಸುತ್ತಾರೆ. ಇಂಥ ಪುಷ್ಕರಣಿ ನಿರಂತರ ಬರದ ಮಧ್ಯೆಯು ಭರ್ತಿಯಾಗಿರುವುದು ಕ್ಷೇತ್ರದ ಹಿರಿಮೆಯ ಪ್ರತೀಕದಂತಿದೆ.

ಈ ಪುಷ್ಕರಣಿಯಲ್ಲಿ ಜಲವನ್ನು ಭಕ್ತರು ಪುಣ್ಯ ತೀರ್ಥ ಎಂದು ಸೇವಿಸುತ್ತಾರೆ. ಮತ್ತೆ ಕೆಲ ಭಕ್ತರು ಪುಷ್ಕರಣಿಯ ನೀರನ್ನು ಬಾಟಲಿಗಳಲ್ಲಿ ಸಂಗ್ರಹಿಸಿಕೊಂಡು ಹೋಗುತ್ತಾರೆ. ಹೀಗೆ ಸಂಗ್ರಹಿಸಿಕೊಂಡು ಹೋಗುವ ಪುಣ್ಯ ತೀರ್ಥವನ್ನು ಮನೆಯಲ್ಲಿ ನಿತ್ಯವೂ ಸ್ನಾನದ ನಂತರ ಸೇವಿಸುತ್ತಾರೆ ಎನ್ನಲಾಗುತ್ತದೆ.

ಹೊಸದಾಗಿ ವಿವಾಹ ಬಂಧನಕ್ಕೆ ಒಳಗಾದ ಜೋಡಿಗಳು ಕ್ಷೇತ್ರಕ್ಕೆ ಭೇಟಿ ನೀಡಿದ ಬಳಿಕ ಬಾಸಿಂಗಗಳನ್ನು ಪುಣ್ಯ ತೀರ್ಥದ ಪುಷ್ಕರಣಿಯಲ್ಲಿ ತೇಲಿ ಬಿಡುತ್ತಾರೆ. ಇದರಿಂದ ಸಾಂಸಾರಿಕ ಬದುಕು ಸುಖಿಯಾಗಿರುತ್ತದೆ ಎಂಬ ನಂಬಿಕೆಯೂ ಚಾಲ್ತಿಯಲ್ಲಿದೆ.

ರಾಜ್ಯದ ಇತರ ಕೆರೆಗಳಿಗಿಂತ ಈ ಜಿಲ್ಲೆಯ ಕೆರೆ-ಬಾವಿಗಳ ಸ್ಥಿತಿ ಏನೂ ಭಿನ್ನವಾಗಿಲ್ಲ. ಸುಸ್ಥಿತಿಯಲ್ಲಿರುವ ಕೆರೆ-ಬಾವಿಗಳು ಬೆರಳೆಣಿಕೆಯಲ್ಲಿವೆ. ಜಿಲ್ಲೆಯ ಕೆರೆಗಳನ್ನು ಪುನಶ್ಚೇತನಗೊಳಿಸಿ ತುಂಗಭದ್ರೆಯಿಂದ ನೀರು ತುಂಬಿಸುವ ಯೋಜನೆ ಸಾಕಾರಗೊಳಿಸಬೇಕಾಗಿದೆ.

ಜಿಲ್ಲೆಯಲ್ಲಿ ಪರಂಪರಾಗತವಾಗಿ ಬೆಳೆದುಬಂದಿರುವ ಕೆರೆ-ಬಾವಿಗಳ ನೀರಾವರಿ ಚೌಕಟ್ಟು ಹಿಂದಿಗಿಂತಲೂ ಇಂದು ಪ್ರಸ್ತುತವೆನಿಸುತ್ತದೆ. ಜಿಲ್ಲೆಯ ಸ್ವಾಭಾವಿಕ ಲಕ್ಷಣಗಳ ಹಿನ್ನೆಲೆಯಲ್ಲಿ ಜೀವ ಸಂಕುಲದ ಅಗತ್ಯಗಳಿಗೆ ಮೂಲಾಧಾರವಾದ ನೀರನ್ನು ಪಡೆಯುವ, ಸಂರಕ್ಷಿಸುವ, ಬಳಸಿಕೊಳ್ಳುವ ಪಾರಂಪರಿಕ ಜ್ಞಾನ ಇಂದಿನ ನೀತಿ ನಿರೂಪಕರಿಗೆ ಮತ್ತು ಜನ ಸಮುದಾಯಕ್ಕೆ ದಾರಿದೀಪವಾಗಲಿದೆ.

ಒಟ್ಟಿನಲ್ಲಿ ಕೆರೆ-ಬಾವಿ, ಪುಷ್ಕರಣಿ ಮುಂತಾದ ನೀರಾವರಿ ರಚನೆಗಳು ನಮ್ಮ ಪೂರ್ವಜರು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ, ಕಾರಣಗಳಿಗಾಗಿ ನಿರ್ಮಿಸಿದ್ದರೂ ಅವುಗಳ ಪ್ರಯೋಜನವನ್ನು ಅಂದಿನ ಜನರು ಪಡೆದಿರುವುದಂತೂ ಸತ್ಯ. ನಮ್ಮ ಪೂರ್ವಜರು ತಮ್ಮ ಅನುಭವದ ನೆಲೆಯಲ್ಲಿ ಅದಕ್ಕನುಗುಣವಾಗಿ ನೀರಾವರಿ ರಚನೆಗಳನ್ನು ಮಾಡುತ್ತಿದ್ದರು. ಆದರೆ ಇಂದು ಅವರ ತಂತ್ರಜ್ಞಾನವನ್ನು ನಾವು ಅರಿಯದೆ ಹೊಸದಾದ ತಂತ್ರಜ್ಞಾನಕ್ಕೆ ಮೊರೆಹೋಗಿ ಪಾರಂಪರಿಕವಾಗಿ ಬಂದಿರುವ ತಂತ್ರಜ್ಞಾನವನ್ನು ಅಲಕ್ಷ್ಯ ಮಾಡಿದ್ದೇವೆ. ಅಂದಿನ ತಂತ್ರಜ್ಞಾನವನ್ನು ನಾವು ಇಂದಿನ ವ್ಯವಸ್ಥೆಯಲ್ಲಿ ಅಳವಡಿಸಿಕೊಂಡು ನಮ್ಮ ಆರ್ಥಿಕ ಜೀವನವನ್ನು ಸುಧಾರಿಸಿಕೊಳ್ಳುವುದರ ಜೊತೆಗೆ ನಮ್ಮ ಪರಿಸರವನ್ನು ರಕ್ಷಿಸಿಕೊಳ್ಳಬಹುದಾಗಿದೆ.

೧.೧. **ಪ್ರಾಥಮಿಕ ಆಕರಗಳು:**

ಆನ್ಯುಯಲ್ ರಿಪೋರ್ಟ್ಸ್ ಆನ್ ಇಂಡಿಯನ್ ಎಪಿಗ್ರಾಫಿ

ಆನ್ಯುವಲ್ ರಿಪೋರ್ಟ್ಸ್ ಆನ್ ಸೌಥ ಇಂಡಿಯನ್ ಎಪಿಗ್ರಾಫಿ

ಎಪಿಗ್ರಾಫಿಯ ಕರ್ನಾಟಿಕ(ಹಳೆಯ) ಸಂ. I ರಿಂದ X

ಎಪಿಗ್ರಾಫಿಯ ಕರ್ನಾಟಿಕ(ಹೊಸ) ಸಂಪುಟಗಳು

ಎಪಿಗ್ರಾಫಿಯ ಇಂಡಿಕಾ ಸಂಪುಟಗಳು

ಇಂಡಿಯನ್ ಆಂಟಿಕ್ವೆರಿ

ಕರ್ನಾಟಕ ಇನ್ಸ್‌ಕ್ರಿಪ್ಸನ್ಸ್, ಸಂ.

ಸೌಥ ಇಂಡಿಯಾ ಇನ್ಸ್‌ಕ್ರಿಪ್ಸನ್ಸ್, ಸಂ.

೧.೨. **ಆನುಷಂಗಿಕ ಆಕರಗಳು:**

**ಕನ್ನಡ ಗ್ರಂಥಗಳು**


ಅರಸನಾಳ ಮತ್ತು ಸಾಲೋಣಿಮಠ., ೨೦೧೦, **ಬೆಳ್ವಲದ ಬೆಳಕು,** ಗದಗ ಜಿಲ್ಲೆಯ ೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಸ್ಮರಣ ಸಂಚಿಕೆ., ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಅರ್ಕಸಾಲಿ ವೃಷಭೇಂದ್ರಚಾರ್ಯ., ೨೦೧೦, **ಮಳೆರಾಜ ಪರಂಪರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅಣ್ಣಿಗೇರಿ ಎ.ಎಂ., ೧೯೭೫, **ಮುಂಡರಗಿ ತಾಲೂಕಿನ ಪ್ರಾಚೀನ ಚರಿತ್ರೆ,** ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂ-೬೦,ಸಂಚಿಕೆ ೦೧, ಬೆಂಗಳೂರು.

ಕಲಬುರ್ಗಿ ಎಂ.ಎಂ., ೧೯೯೯, **ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು,** ಭಾಗ-೧,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕನವಳ್ಳಿ ಸದಾನಂದ ಹಾಗೂ ಕೆರಿಮನಿ.ಸಿ.ವ್ಹಿ., ೧೯೭೨, **ಪುಲಿಗೆರೆ** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಕಲಬುರ್ಗಿ ಎಂ.ಎಂ. (ಸಂ)., ೧೯೭೫, **ಧಾರವಾಡ ಜಿಲ್ಲೆ ಶಾಸನ ಸೂಚಿ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

| | | |
|---|---|---|
| ಕಟ್ಟಿ ವೆಂಕಟರಂಗೋ., | ೧೯೮೩, | **ಧಾರವಾಡ, ಬೆಳಗಾವಿ, ಬಿಜಾಪುರ, ಕನಡಾ ಜಿಲ್ಲೆಗಳ ಗ್ಯಾಜಿಟೀಯರ್,** ಎಷಿಯನ್ ಎಜ್ಯುಕೇಶನ್ ಸರ್ವಿಸಸ್, ನವದೆಹಲಿ. |
| ಕಾಮತ್ ಸೂರ್ಯನಾಥ., | ೧೯೮೮, | **ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಭಾಗ-೧,** ಕರ್ನಾಟಕ ಸರ್ಕಾರ, ಬೆಂಗಳೂರು |
| ಕಿದಿಯೂರ ಎಚ್.ಆರ್., | ೧೯೭೫, | **ನಮ್ಮ ಗದಗ ಬೆಟಗೇರಿ,** ನಿರ್ದೇಶಕರು, ಪ್ರಸಾರಾಂಗ, ಗದಗ. |
| ಕೆರಿಮನಿ ಸಿ.ವಿ., | ೨೦೧೦, | **ಗದಗ ಜಿಲ್ಲಾ ಒಂದು ಅಧ್ಯಯನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. |
| ಕುಂಚೂರ. ಬಸವರಾಜ., | ೨೦೦೯. | **ನಮ್ಮೂರ ಕೆರೆಗಳು,** ಪ್ರಕಾಶಕರು, ಶ್ರೀಚಕ್ರ ಪ್ರಕಾಶನ ಕುಂಚೂರು, ಹರಪನಹಳ್ಳಿ ತಾಲೂಕು, ಡಾವಣಗೇರಿ ಜಿಲ್ಲಾ, |
| ಕುಲಕರ್ಣಿ ಶಂಕರರಾವ್ ಕೃಷ್ಣಾಜಿ(ಸಂ)., | ೧೯೯೮ | **ಶ್ರೀ ಕ್ರತುಪುರಮಾಹಾತ್ಮ್ಯಮ್,** ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯವರ್ಯ (ಕನ್ನಡ ಅನು) ಬಳಗಾನೂರು ಕಂಪೌಂಡ ಡಂಬಳ ನಾಕಾದ ಹತ್ತಿರ, ಗದಗ. |
| ಕೊಟ್ರಯ್ಯ ಸಿ.ಟಿ.ಎಂ., | ೨೦೦೬, | **ವಿಜಯನಗರ ಕಾಲದ ತುಂಗಭದ್ರಾ ನದಿಯ ಅಣೆಕಟ್ಟುಗಳು,** ಹಂಪಿ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಗಾಯಕವಾಡ ವಿಠಲರಾವ್., (ಕನ್ನಡ ಅನು) ರಾಮಚಂದ್ರರಾವ್ ಡೇರೆ, (ಮೂಲ) | ೨೦೧೨, | **ಶಿಖರ ಸಿಂಗಣಾಪುರದ ಶ್ರೀ ಶಂಭು ಮಹಾದೇವ,** ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ. |

ಗೋಪಾಲ್‌ರಾವ್ ಎಚ್.ಎಸ್., ೧೯೯೩ **ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ, ನಿರ್ದೇಶನಾಲಯ, ಮೈಸೂರು.

ಗೋಪಾಲರಾವ್ ಎಚ್.ಎಸ್., ೨೦೧೦, **ನಮ್ಮದಿದು ಇತಿಹಾಸ,** ಅಭಿನವ ಪ್ರಕಾಶನ, ಬೆಂಗಳೂರು.

ಗೋಪಾಲ್ ಆರ್ (ಸಂ)., ೨೦೦೬, **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಗೋವಿಂದಯ್ಯ. ಟಿ., ೧೯೯೪, **ಕರ್ನಾಟಕ ನೀರಾವರಿ ಅರ್ಥಶಾಸ್ತ್ರ,** ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು.

ಗೋವಿಂದಯ್ಯ.ಟಿ., ೨೦೦೪, **ಅಂತರ್ಜಲ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು,

ಚಂದ್ರಶೇಖರ್ ಟಿ.ಆರ್., (ಸಂ) ೧೯೯೯, **ಜಿಲ್ಲಾ ಅಭಿವೃದ್ಧಿ ಅಧ್ಯಯನ ಗದಗ,** ಕನ್ನಡ ವಿಶ್ವವಿದ್ಯಾಲಯ ಹಂಪಿ.

ಚಂದ್ರಪೂಜಾರಿ ಎಂ (ಸಂ)., ೨೦೦೨, **ಸಮುದಾಯ ಮತ್ತು ಸಹಭಾಗಿತ್ವ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೦೪, ಜನಾಯೋಜನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿದಾನಂದಮೂರ್ತಿ. ಎಂ., ೧೯೭೯, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸ್ವಪ್ನ ಬುಕ್ ಹೌಸ್, ಬೆಂಗಳೂರು.

ಚಿದಾನಂದಮೂರ್ತಿ ಎಂ, ೧೯೯೩, **ಹೊಸತು ಹೊಸತು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಜಯಮ್ಮ ಕೆರಿಯಣ್ಣ. ಎಚ್., ೨೦೧೦, **ಶಾಸನಗಳಲ್ಲಿ ದಾನದತ್ತಿಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

| | | |
|---|---|---|
| ಜೈನಕೇರಿ ಜಯದೇವಪ್ಪ., | ೨೦೦೯, | **ಕರ್ನಾಟಕ ಶಿಲ್ಪ–ಸಂಸ್ಕೃತಿ,** ಶಾಂತಲಾ ಪ್ರಕಾಶನ, ಶಿವಮೊಗ್ಗ. |
| ಜೋಶಿ ಎಸ್.ಕೆ., | ೨೦೦೭–೦೮, | **ಕರ್ನಾಟಕದ ಕೋಟೆ–ಕೊತ್ತಲಗಳು,** ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ. |
| ತೆಲಗಾವಿ ಲಕ್ಷ್ಮಣ್., | ೨೦೦೪, | **ಮೌರ್ಯ ಮತ್ತು ಶಾತವಾಹನಯುಗ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ದಿವಾಕರ್ ಆರ್.ಆರ್. | ೨೦೦೬, | **ಕರ್ನಾಟಕ ಪರಂಪರೆ,** ಸಂ–೨, ಮಧ್ಯಕಾಲ ಮತ್ತು ಆಧುನಿಕ ಕಾಲ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು. |
| ದಿಬ್ಬದ ಶಾಂತಿನಾಥ, | ೧೯೯೫ | **ಶಾಸನಗಳಲ್ಲಿ ಕೆರೆ ಕಾಲುವೆಗಳು,** ಸಂ–೫, ಕರ್ನಾಟಕ ಭಾರತಿ, ಧಾರವಾಡ. |
| ದುರ್ಗದಮಠ ಎಂ.ಬಿ., ಮತ್ತು ಒಡೆಯರ್ ಎಂ.ಕೆ., | ೧೯೯೦ | **ಭೂ ಅಂತರ್ಜಲ ವೈಜ್ಞಾನಿಕ ಅರಿವು** ಕನ್ನಡಭಾರತಿ, ಸಂ–೩, ಸಂ–೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಧ್ರುವನಾರಾಯಣ (ಅನು)., ಕೊಟ್ರಯ್ಯ ಸಿ.ಟಿ.ಎಂ, (ಮೂಲ) | ೨೦೦೧, | **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ದೇವರಕೊಂಡಾರೆಡ್ಡಿ (ಸಂ)., | ೨೦೦೬, | **ಹಂಪಿ ಸಂಪುಟ,** (ಕಲೆ, ಕ್ರೀಡೆ ಮತ್ತು ಕೌಶಲ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ನರಹರಿ ಈ.ಡಿ., | ೧೯೯೯, | **ನೀರು,** ಕಲಾ ಕುಟೀರ ಪ್ರಕಾಶನ, ಕಾಸರಗೋಡು. |

ನರಗುಂದ ಎಂ.ಎಂ (ಪ್ರಸಂ)., ೨೦೧೨. **ನೂರು ಹಣತೆಗಳು**, ಸ.ಹಿ.ಪ್ರಾ.ಶಾಲೆ, ಶತಮಾನೋತ್ಸವದ ಸ್ಮರಣ ಸಂಚಿಕೆ, ನರಗುಂದ.

ನಾಗರಾಜ ಡಿ ಎಂ., ೨೦೧೨, **ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಶಾಸನಗಳ; ಸಾಂಸ್ಕೃತಿಕ ಅಧ್ಯಯನ**, ಗೌತಮ ಪ್ರಕಾಶನ, ಮೈಸೂರು.

ನಾರಾಯಣ ಕೆ.ವಿ., ೧೯೯೯, **ಸ್ಥಳನಾಮಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗರಾಜ. ಟಿ.ವಿ., ೨೦೦೮, **ಮೈಸೂರು ಸಂಸ್ಥಾನದಲ್ಲಿ ನೀರಾವರಿ**, ಜನನಿ ಪ್ರಕಾಶನ, ಬೆಂಗಳೂರು.

ನಾಗಯ್ಯ ಜೆ.ಎಂ., ೧೯೯೨, **ಆರನೇಯ ವಿಕ್ರಮಾದಿತ್ಯನ ಶಾಸನಗಳು**, ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

ನಾಗಭೂಷಣಯ್ಯ. ಎಚ್.ಎಸ್., ೧೯೯೪, **ಅಂರ್ತಜಲ ಸಮಸ್ಯೆಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಾಗರಾಜ. ಎಂ.ಜೆ., ೧೯೯೯, **ಸಾಂಸ್ಕೃತಿಕ ವೀರಭದ್ರಸ್ವಾಮಿ**, ಶ್ರೀ ಮದ್ವಿರಶೈವ ಸದ್ಬೋದನ ಸಂಸ್ಥೆ, ಬಾಳೆಹೊನ್ನೂರ,

ನೀಲತ್ತಹಳ್ಳಿ ಕಸ್ತೂರಿ., (ಅನು) ದಿಕ್ಷತ್ ಜಿ.ಎಸ್ ಹಾಗೂ ಇತರರು.,(ಮೂಲ) ೨೦೦೦, **ಕರ್ನಾಟಕದಲ್ಲಿ ಕೆರೆ ನೀರಾವರಿ**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಮಶಿವಮೂರ್ತಿ ಡಿ.ವಿ., ೧೯೯೯, **ಕನ್ನಡ ಶಾಸನ ಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪಂಚಮುಖಿ ಆರ್.ಎಸ್., ೧೯೪೨, **ಕರ್ನಾಟಕ ಅರಸು ಮನೆತನಗಳು**, ಸಂಶೋಧನಾ ಮಂಡಲ, ಧಾರವಾಡ.

| | | |
|---|---|---|
| ಪವಾರ ತುಕಾರಾಮ., | ೨೦೧೦, | **ಲಕ್ಕುಂಡಿ ಶಿಲ್ಪಕಲಾ ಸಂಸ್ಕೃತಿ,** ವಿದ್ಯಾನಿಧಿ ಪ್ರಕಾಶನ, ಗದಗ. |
| ಪಾಟೀಲ ವಿನೋದ., | ೨೦೦೬, | **ಕರ್ನಾಟಕದ ಪ್ರಾಚೀನ ಬಾವಿಗಳು,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| ಪಾಟೀಲ ಬಿ. ಪಿ., | ೧೯೯೬, | **ಗ್ರಾಮ ದೇವತೆಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಪಾಟೀಲ ಬಿ.ಪಿ (ಸಂ) ನೇಗಿನಾಳ ಎಂ.ಬಿ. (ಪ್ರಸಂ)., | ೧೯೯೯, | **ಜನಪದ ಸಾಹಿತ್ಯ ದರ್ಶನ,** ಭಾಗ–೨೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಪಾವಟೆ ಚೆನ್ನಕ್ಕ., | ೨೦೦೩, | **ಕೆರೆ ಗ್ರಾಮನಾಮ ವಿವೇಚನೆ,** ಶಾಸನ ಸಂಜೀವಿನಿ, ಚೆನ್ನಗಂಗಾ ಪ್ರಕಾಶನ, ಧಾರವಾಡ. |
| ಪಾವಟೆ ಚೆನ್ನಕ್ಕ., | ೨೦೦೩, | **ಶಾಸನ ಸಂಜೀವಿನಿ,** ಚೆನ್ನಗಂಗಾ ಪ್ರಕಾಶನ, ಧಾರವಾಡ. |
| ಪೂಜಾರಹಳ್ಳಿ ವಿರೂಪಾಕ್ಷ., | ೨೦೦೮, | **ಚರಿತ್ರೆ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಪೂಜಾರಹಳ್ಳಿ ವಿರೂಪಾಕ್ಷ., | ೨೦೦೧, | **ಜಲಸಂಬಂಧಿ ಚಳುವಳಿಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಬಡಿಗೇರ ವಾಸುದೇವ., | ೨೦೧೨, | **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಭಟ್‌ಸೂರಿ ಕೆ.ಜಿ., | ೨೦೦೯, | **ಕರ್ನಾಟಕ ಶಾಸನ ಸಂಶೋಧನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಭಟ್‌ಸೂರಿ ಕೆ.ಜಿ., | ೨೦೦೬, | **ಶಾಸನ ಅಧ್ಯಯನ,** ಸಂಪುಟ–೩, ಸಂಚಿಕೆ–೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |

| | | |
|---|---|---|
| ಭಟ್.ಎಸ್.ಆರ್., | ೧೯೮೪, | **ಪ್ರಾಚೀನ ಭಾರತದಲ್ಲಿ ಜನಜೀವನ,** ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು. |
| ಬಾಲಸುಬ್ರಮಣ್ಯ, ಸಿ.ಎಸ್.ವಾಸುದೇವನ್ ಹಾಗೂ ಶ್ರೀ ರಮೇಶ ನಾಯಕ., | ೨೦೦೭, | **ಕರ್ನಾಟಕ ದೇವಾಲಯ ಕೋಶ, ಗದಗ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಮಹಾಬಲರಾವ್ ಬಿ., | ೧೯೭೭, | **ಗದಗ-ಬೆಟಗೇರಿ,** ಆಯ್.ಬಿ.ಎಚ್, ಪ್ರಕಾಶನ, ಬೆಂಗಳೂರು. |
| ಮುದೇನೂರು ನಿಂಗಪ್ಪ., | ೨೦೦೫, | **ಸಂಸ್ಕೃತಿ ದರ್ಶನ,** ಸೂರ್ಯ ಪ್ರಕಾಶನ, ಚಿತ್ರದುರ್ಗ. |
| ಮುದೇನೂರು ಶಂಕ್ರಪ್ಪ., | ೨೦೦೮, | **ಗಜೇಂದ್ರಗಡ ನಡೆದು ಬಂದ ದಾರಿ,** ಕನ್ನಡ ಪ್ರಕಾಶನ, ಬೆಂಗಳೂರು. |
| ಮುಮ್ಮಿಗಟ್ಟಿ ಎಸ್. ಸುಮಂಗಲ., | ೨೦೧೧, | **ನಮ್ಮ ಭೂಮಿ ನಮ್ಮ ಪರಿಸರ,** ನವಕರ್ನಾಟಕ ಪ್ರಕಾಶನ, ಬೆಂಗಳೂರು. |
| ಮುನಿರಾಜಪ್ಪ (ಸಂ)., | ೨೦೦೯, | **ಕರ್ನಾಟಕ ಕೆರೆ ನೀರಾವರಿ ಅಧ್ಯಯನ,** ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗ, ಕನಕಪುರ. |
| ಮೂರ್ತಿ ಎನ್.ಎನ್., | ೧೯೭೬, | **ನೀರಾವರಿ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. |
| ಮೋಹನ ಕೃಷ್ಣ ರೈ.ಕೆ (ಸಂ)., | ೨೦೦೮, | **ಚರಿತ್ರೆ ಅಧ್ಯಯನ,** ಸಂಪುಟ-೩ ಸಂಚಿಕೆ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| | ೨೦೦೪, | **ಪ್ರಭುತ್ವ ಮತ್ತು ಜನತೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಯಾಳವಾರ ಸೋಮನಾಥ., | ೨೦೦೫, | **ಪುಲಿಗೇರಿ ಆದಯ್ಯ,** ಪ್ರಕಾಶಕರು, ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೋಡ. |

ರಘುನಾಥ ಶಾಲಿನಿ (ಸಂ) ೨೦೦೧ **ಜಾನಪದ ಸಾಹಿತ್ಯ ದರ್ಶನ,**
ಇಮ್ರಾಪುರ ಸೋಮಶೇಖರ (ಪ್ರಸಂ) ಭಾಗ-೨೪, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ರಾಜಪ್ಪ ಟಿ.ಎಸ್(ಸಂ)., ೧೯೭೪, **ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ರಾಜಾರಾಮ ಹೆಗಡೆ (ಸಂ)., ೨೦೦೨, **ಕೆರೆ ನೀರಾವರಿ ನಿರ್ವಹಣೆ-ಚಾರಿತ್ರಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ರಾಮಕೃಷ್ಣ ಜಿ (ಸಂ)., ೨೦೧೧, **ಹೊಸತು,** ಮಾಸ ಪತ್ರಿಕೆ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರವೈಟ್ ಲಿಮಿಟೆಡ್, ಬೆಂಗಳೂರು.

ರಿತ್ತಿ ಶ್ರೀನಿವಾಸ (ಸಂ)., ೨೦೦೦, **ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ರಿತ್ತಿ ಶ್ರೀನಿವಾಸ., ೧೯೬೯, **ಮುಳಗುಂದ ನಾಡು,** (ಉಪನ್ಯಾಸ ಗ್ರಂಥಮಾಲೆ-೮೭) ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಲಲಿತಾಂಬ. ಎನ್. ಆರ್., ೨೦೧೧. **ಮಧ್ಯಕಾಲೀನ ಕರ್ನಾಟಕ ಸಮಾಜಿಕ ಸಂಚಲನ,** ಡಾ. ಎಂ. ಭೈರೇಗೌಡ, ಮುದ್ದಶ್ರೀ ಗ್ರಂಥಮಾಲೆ, ಬೆಂಗಳೂರು,

ಲಿಂಗದಹಳ್ಳಿ ಹಾಲಪ್ಪ., ೨೦೧೧, **ಮುಂಬಯಿ ಕರ್ನಾಟಕ ಸಂಸ್ಕೃತಿ ಮತ್ತು ಜನಾಂಗ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವಸ್ತ್ರದ ಚಂದ್ರಶೇಖರ್ ಹಾಗೂ ಅರ್ಜುನ ಗೂಳಸಂಗಿ., ೨೦೦೮, **ಕೃತಪುರ,** ಗದಗ ಜಿಲ್ಲಾ ೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಗದಗ.

| | | |
|---|---|---|
| ವಸುಕಿ ಕೆ.ಜಿ., | ೧೯೯೭, | **ಕರ್ನಾಟಕದಲ್ಲಿ ಆರ್ಥಿಕತೆ,** ವೆಂಕಟರಡ್ಡಿ ಎಂ, (ಸಂ), **ಕರ್ನಾಟಕದಲ್ಲಿ ನೀರಾವರಿ ಅಭಿವೃದ್ಧಿ ಸಮಸ್ಯೆಗಳು ಹಾಗೂ ಸಂಧಿಗ್ದತೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ವಾಸುದೇವನ್ ಸಿ.ಎಸ್., | ೨೦೦೧, | **ಹಂಪಿ ಪರಿಸದರ ಕೆರೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ವೆಂಕಟರಾವ್ ಡಿ., | ೨೦೧೩, | **ಕೃಷಿ ಬೆಳವಣಿಗೆ,** ವಿದ್ಯಾನಿಧಿ ಪ್ರಕಾಸನ, ಗದಗ. |
| ವೆಂಕಟರತ್ನ ಎಂ.ವ್ಹಿ., | ೧೯೯೮, | **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,** ಮೈಸೂರು ವಿ.ವಿ. ಮೈಸೂರು. |
| ವೆಂಕಟರಾವ್ ಡಿ., | ೨೦೧೩, | **ಕೃಷಿ ಬೆಳವಣಿಗೆ,** ವಿದ್ಯಾನಿಧಿ ಪ್ರಕಾಸನ, ಗದಗ. |
| ಶಿವಾನಂದಯ್ಯಶಾಸ್ತ್ರಿ ಶಂಕಿನಮಠ., | ೨೦೧೨, | **ಶ್ರೀಹೊಳಲಮ್ಮದೇವಿ ಚರಿತ್ರಾಮೃತ,** ಅಂಬಿಕಾ ಪ್ರಕಾಶನ, ಗದಗ. |
| ಶಿವತಾರಕ್ ಕೆ.ಬಿ., | ೨೦೦೧, | **ಕರ್ನಾಟಕದ ಪುರಾತತ್ವೀಯ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಶ್ರೀಕಾಂತ್ ಎಂ.ಪಿ., | ೨೦೦೮, | **ಬಾವಿ ಬಾವಿಗೂ ಅಂತರ,** ಆಯ್.ಬಿ.ಎಚ್, ಪ್ರಕಾಶನ, ಬೆಂಗಳೂರು. |
| ಶ್ರೀಕಾಂತ ಎಂ.ಪಿ., | ೨೦೦೯, | **ಅಂತರ್ಜಲ ಅನ್ವೇಷಣೇಯ ವಿಧಾನಗಳು,** ಕೋಮಲ್ ಎಂಟರ್ ಪ್ರೈಸಿಸ್, ರಾಮರಾವ್ ಲೆಔಟ್, ಬೆಂಗಳೂರು. |
| ಶ್ರೀನಿವಾಸ ಎಲ್., | ೨೦೧೦, | **ಹಂಪಿ ಪರಿಸರದ ಆದಿಮಾನವನ ನೆಲೆಗಳು,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. |

ಶ್ರೀಧರ., ೨೦೦೮, **ತುಮಕೂರು ಪರಿಸರದ ಐತಿಹಾಸಿಕ ಕೆರೆಗಳ ಒಂದು ಅವಲೋಕನ**, ಯುವ ಸಂಶೋಧನೆ, ಸುವರ್ಣ ಕರ್ನಾಟಕ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶ್ರೀಕಾಂತ ಎನ್. ಪಿ., ೨೦೦೪, **ಅಂತರ್ಜಲದ ವೈಜ್ಞಾನಿಕ ಅರಿವು**, ಆಯ್.ಬಿ.ಎಚ್. ಪ್ರಕಾಶನ, ಬೆಂಗಳೂರು.

ಶ್ರೀನಿವಾಸ ಎಲ್., ೨೦೧೦, **ಹಂಪಿ ಪರಿಸರದ ಆದಿಮಾನವನ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಶೇಷನಾರಾಯಣ., ೨೦೦೬, **ನಮ್ಮ ನದಿಗಳು ಮತ್ತು ಸಮಸ್ಯೆಗಳು**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಸತ್ಯನಾಥ.ಟಿ.ಎನ್., ೧೯೭೯, **ನರಬಲಿ ಒಂದು ಸಾಂಸ್ಕೃತಿಕ ಅಧ್ಯಯನ**, ಸಂಸ್ಕೃತಿ ವಿಕಾಸ ಮಾಲೆ, ಬೆಂಗಳೂರು.

ಸಿದ್ದರಾಮಯ್ಯ ಬಿ.ಎಸ್., ೨೦೦೯, **ಸಾಯುವ ಕೃಷಿ– ಒಂದು ಅವಲೋಕನ**, ಸ್ವಪ್ನಾ ಬುಕ್ ಹೌಸ್, ಬೆಂಗಳೂರು.

ಸಿದ್ದರಾಮಯ್ಯ. ಬಿ.ಎಸ್. ಮತ್ತು ಉಷಾಕಿರಣ., ೨೦೦೯, **ಸಾವಯವ ಕೃಷಿ ಒಂದು ಅವಲೋಕನ**, ಸ್ವಪ್ನ ಬುಕ್ ಹೌಸ್, ಬೆಂಗಳೂರು,

ಸಿದ್ಧಾಂತಿ. ಕೆ.ಎ. (ಪ್ರಸಂ)., ೨೦೦೯, **ಕುರ್ತಕೋಟಿ ಕೇಸರಿ**, ಪ್ರಕಾಶಕರು, ಶ್ರೀ ಉಗ್ರ ನರಸಿಂಹ ಸ್ವಾಮಿ ದೇವಸ್ಥಾನ ಜೀರ್ಣೋದ್ಧಾರ ಸಮಿತಿ, ಕುರ್ತಕೋಟಿ.

ಸೋಸಲೆ ಎನ್. ಚಿನ್ನಸ್ವಾಮಿ (ಸಂ)., ೨೦೧೦, **ಸಮಕಾಲೀನ ಕರ್ನಾಟಕ**, ಚರಿತ್ರೆ ಸಂ–೬ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

| | | |
|---|---|---|
| ಸೋಮೇಶ. ಎಂ., | ೨೦೧೧, | **ಧಣಾಯಕನ ಕೆರೆ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, |
| ಸಂಗಮೇಶ ತಮ್ಮನಗೌಡರ., | ೨೦೧೧. | **ಗ್ರಾಮನಾಮ ಸಂಸ್ಕೃತಿ,** ನೀಲಾ ಪ್ರಕಾಶನ ಗುಜಮಾಗಡಿ, |
| ಹರಿಹರ ಶ್ರೀನಿವಾಸ ರಾವ್., | ೨೦೧೦. | **ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ ತಂತ್ರಜ್ಞಾನ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, |
| ಹರಿದಾಸ ಎಂ.ಎಚ್., | ೧೯೯೮, | **ಲಕ್ಕುಂಡಿ; ಕೆಲೆಯ ಬೆಲೆ,** ವಿಕ್ರಮ ಪ್ರಕಾಶನ, ಗದಗ. |
| ಹಾಜವಗೋಳ ಧನವಂತ., | ೨೦೦೪, | **ಮುಳಗುಂದನಾಡು,** ಒಂದು ಅಧ್ಯಯನ ಮಾಧವಿ ಪ್ರಕಾಶನ, ಧಾರವಾಡ. |
| ಹಾವನೂರ ಶ್ರೀನಿವಾಸ., | ೨೦೦೮, | **ಮಧ್ಯಕಾಲೀನ ಕರ್ನಾಟಕ,** ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು. |
| ಹೊಸಪಾಳ್ಯ. ಮಲ್ಲಿಕಾರ್ಜುನ., | ೨೦೦೮, | **ಕೃಷಿ ಆಚರಣೆ,** ಕನ್ನಡ ಪುಸ್ತಕ ಪ್ರಾಧಿಕಾರ, ಸಂ. ೫, ಬೆಂಗಳೂರು. |


### ೧.೩. ಲೇಖನಗಳು :


| | | |
|---|---|---|
| ಅಣ್ಣೇಗೇರಿ ಎ.ಎಂ., | ೧೯೭೫, | **ಮುಂಡರಗಿ ತಾಲೂಕಿನ ಪ್ರಾಚೀನ ಚರಿತ್ರೆ** ಕ.ಸಾ.ಪ. ಸಂಪುಟ–೬೦, ಸಂಚಿಕೆ–೧, ಬೆಂಗಳೂರು. |
| ಉಷಾರಾಣಿ, ಎಚ್.ಎಸ್., | ೧೯೯೨, | **ಹೊಯ್ಸಳರ ಕಾಲದ ಕೆರೆ ನೀರಾವರಿ ಒಂದು ವಿಶ್ಲೇಷಣೆ,** ಇತಿಹಾಸ ದರ್ಶನ ಸಂ–೧೮, ನಾಗರಾಜ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ)., ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು. |

ಉಷಾರಾಣಿ, ಎಚ್.ಎಸ್., ೨೦೦೫, **ಮುಮ್ಮಡಿ ಕೃಷ್ಣರಾಜರ ಕಾಲದ ಕೆರೆಗಳು,** ಇತಿಹಾಸ ದರ್ಶನ, ಸಂ-೨೦, ನಾಗರಾಜ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ)., ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

ಕೃಷ್ಣಮೂರ್ತಿ ಪಿ.ವ್ಹಿ., ೨೦೦೬, **ಬೆಂಗಳೂರು ಜಿಲ್ಲಾ ಪರಿಸರದ ಶಾಸನೋಕ್ತ ಕೆರೆಗಳು** ಇತಿಹಾಸ ದರ್ಶನ, ಸಂಪುಟ-೨೧, ನಾಗರಾಜ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ)., ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

ಕೊಪ್ಪ ಎಸ್.ಕೆ., ೧೯೮೦, **ಗದಗ-ಬೆಟಗೇರಿಯ ಶಾಸನಗಳು** ಕನ್ನಡ ಭಾರತಿ, ಸಂ-೩ ಸಂ-೧೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಗುಬ್ಬಣ್ಣವರ ಸೇವಾನಂದ., ೧೯೯೫, **ನರಗುಂದ ನವಲಗುಂದ ರೈತ ಹೋರಾಟ,** ಅಕ್ಷಯ ಪ್ರಕಾಶನ, ಧಾರವಾಡ,

ಪಾಟೀಲ, ಎಸ್.ಎಸ್. **ಶಾಸನಗಳಲ್ಲಿ ಕಂಡಂತೆ ವಿಜಯನಗರ ಪಟ್ಟಣದ ನೀರಿನ ವ್ಯವಸ್ಥೆ,** ವಿಜಯನಗರ ಅಧ್ಯಯನ ಸಂ-೪, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು.

ಪಾಟೀಲ ವಿನೋದಾ., ೨೦೦೧ **ಸಂತೆಬೆನ್ನೂರ ಕೊಳ, (ಪುಷ್ಕರಣಿ),** ವಿಜಯನಗರ ಅಧ್ಯಯನ ಸಂ-೪, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು.

| | | |
|---|---|---|
| ಬಸವರಾಧ್ಯ ಎನ್., | ೧೯೭೮, | **ಕೆರೆಯ ಪದ್ಮರಸ**, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂ–೬೨, ಸಂಚಿಕೆ–೧, ಬೆಂಗಳೂರು. |
| ಭವಾನಿಶಂಕರ, ಎಸ್., | ೨೦೦೨, | **ಕೆರೆಗಳ ಜಲಸಂಪನ್ಮೂಲಗಳು ಮತ್ತು ಜನರು ಪಾಲ್ಗೊಳ್ಳುವಿಕೆ**, ವಿಶೇಷ ಸಂಚಿಕೆ, ಹೊಸತು ಪತ್ರಿಕೆ, ಬೆಂಗಳೂರು. |
| ಮಲಶೆಟ್ಟಿ ಬಸವರಾಜ., | ೧೯೬೪, | **ಕೆರೆಗೆ ಹಾರ** ಆಶಯದ ಜಾನಪದ ಹಾಡುಗಳು, ಕರ್ನಾಟಕ ಭಾರತೀ ಸಂಪುಟ–೬, ಸಂಚಿಕೆ–೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.. |
| ಮುಂದಿನಮನಿ ಪಿ.ಎಸ್., | ೧೯೯೧, | **ಕರ್ನಾಟಕದಲ್ಲಿ ನೀರಾವರಿ ಪ್ರಗತಿ** ಕರ್ನಾಟಕ ಭಾರತಿ, ಸಂ–೧೫ ಸಂಚಿಕೆ–೩೪, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಮೇಲಿನಮನಿ ಹನಮಂತ., | ೨೦೦೬, | **ಹಂಪಿಯ ಶಾಸನೋಕ್ತ ಬಾವಿಗಳು**, ಇತಿಹಾಸ ದರ್ಶನ, ಸಂ–೨೧, ನಾಗರಾಜ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ)., ಕನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು. |
| ಮೋಹನ ಎಸ್.ಕೆ., | ೧೯೯೨, | **ಕರ್ನಾಟಕದ ಕೆಲ ಪುರಾತನ ಕೆರೆಗಳು** ಇತಿಹಾಸ ದರ್ಶನ ಸಂ–೭, ನಾಗರಾಜ ಎಂ.ಜಿ. ಮತ್ತು ಕೃಷ್ಣಮೂರ್ತಿಪಿ.ವಿ.(ಸಂ)., ಕನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು. |

